ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೫೯

ಶ್ರೀ ವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

ಭಾಗ—೪

(೫೪—೬೨ ಅಧ್ಯಾಯಗಳು)



ಮಹಾವಿದ್ವಾನ್, ವಿದ್ವನ್ಮಣಿ,

ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ,

ಅನುವಾದಕ.

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೭

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೯

ಶ್ರೀ ವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

ಭಾಗ—೪

(೫೪—೭೨ ಅಧ್ಯಾಯಗಳು)



ಮಹಾವಿದ್ವಾನ್, ವಿದ್ವನ್ಮಣಿ,

ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ,

ಅನುವಾದಕ.

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೭

# ಪರಿಚಯ

ಜ್ಯೋತಿಷವೆಂಬ ವೇದಾಂಗನಿರೂಪಣೆಯೇ ಈ ಸಂಪುಟದ ಆರಂಭವು. ಜ್ಯೋತಿಶ್ಶಾಸ್ತ್ರದಲ್ಲಿ ಗಣಿತ, ಜಾತಕ, ಸಂಹಿತೆ ಎಂಬುದಾಗಿ ಮೂರು ಭಾಗಗಳಿವೆ. ಅವೆಲ್ಲವನ್ನೂ ಮೂರು ಅಧ್ಯಾಯಗಳಲ್ಲಿ ಕ್ರಮವಾಗಿ ನಿರೂಪಿಸಿದೆ. ವೈದಿಕ ಹಾಗೂ ಲೌಕಿಕಕಾರ್ಯಗಳನ್ನು ಸೂಕ್ತರೀತಿಯಿಂದ ನಿರ್ವಹಿಸಲು ಕಾಲಜ್ಞಾನವು ಅತ್ಯವಶ್ಯಕವು. ಕರ್ತವ್ಯಕರ್ಮಗಳನ್ನು ವಿಹಿತಕಾಲದಲ್ಲಿ ಮಾಡದಿದ್ದರೂ ಅಕಾಲದಲ್ಲಿ ಮಾಡಿದರೂ ಅನರ್ಥವಾಗುವುದು. ಹೀಗೆ ಯೋಗ್ಯಾಯೋಗ್ಯ ಸಮಯವಿವೇಚನೆಯು ಮಾನವನ ನಡೆನುಡಿಗಳಿಗೆಲ್ಲಾ ಮೂಲವು. ಇಂತಹ ವಿವೇಚನೆಯನ್ನು ತಿಳಿಸುವುದೇ ಜ್ಯೋತಿಶ್ಶಾಸ್ತ್ರವು. ಆದುದರಿಂದಲೇ ಅದು ವೇದಾಂಗಗಳಲ್ಲಿ ಪರಿಗಣಿತವಾಗಿದೆ. ಜ್ಯೋತಿಶ್ಶಾಸ್ತ್ರದಲ್ಲಿ ತಿಳಿಯಬೇಕಾದ ಅಂಶಗಳನ್ನೆಲ್ಲಾ ಈ ಗ್ರಂಥದಲ್ಲಿ ಸಂಗ್ರಹಿಸಿದೆ. ಅವರ ಮುಂದಿನ ಅಧ್ಯಾಯದಲ್ಲಿ ಛಂದಶ್ಶಾಸ್ತ್ರವನ್ನು ವಿವರಿಸಿದೆ. ಅಲ್ಲಿಗೆ ವೇದಗಳ ಆರು ಅಂಗಗಳನ್ನೂ ನಿರೂಪಿಸಿದಂತಾಯಿತು.

ತರುವಾಯ ಹಿಂದೆ ಪ್ರಸಕ್ತವಾಗಿದ್ದ ಶುಕಮುನಿಯ ಜನನವೃತ್ತಾಂತವನ್ನು ಐದು ಅಧ್ಯಾಯಗಳಿಂದ ವಿಸ್ತರಿಸಿದೆ. ಆ ಸಂದರ್ಭದಲ್ಲಿ ಸನತ್ಕುಮಾರಮುನಿಯ ಹಿತೋಪದೇಶ, ಜನಕಮಹಾರಾಜಕೃತವಾದ ತತ್ತ್ವೋಪದೇಶ ಮುಂತಾದ ಆಧ್ಯಾತ್ಮಿಕವಿಷಯಗಳು ಬಹಳವಾಗಿ ಅಡಕವಾಗಿವೆ. ಅಲ್ಲಿಗೆ ಪೂರ್ವಭಾಗದ ಎರಡನೆಯ ಪಾದವು ಮುಕ್ತಾಯಗೊಂಡಿತು.

ಈ ರೀತಿ ಐಹಿಕಾಮುಷ್ಮಿಕ ಶ್ರೇಯಸ್ಸಿಗೆ ಸಾಧಕವಾದ ಜ್ಞಾನಜ್ಯೋತಿಯನ್ನು ಬೆಳಗಿಸಿ ಕನ್ನಡನಾಡಿನ ಜನತೆಯನ್ನುದ್ಧರಿಸುತ್ತಿರುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಸ್ವಾಮಿಯವರ ಸನ್ನಿಧಾನದಲ್ಲಿ ಕೃತಜ್ಞತೆಯನ್ನರ್ಪಿಸಿ ಮಹಾಸ್ವಾಮಿಯವರಿಗೆ ಭಗವಂತನು ಆಯುರಾರೋಗ್ಯಸತ್ಸಂತಾನಾದಿ ಸಕಲೈಶ್ವರ್ಯಗಳನ್ನೂ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

**ಸರ್ವಜಿತು ಸಂ॥ ವೈಶಾಖ ಬ॥ ಪಂಚಮಿ** — **ಅನುವಾದಕ :**

**ಮೈಸೂರು,** — ಮಹಾವಿದ್ವಾನ್, ವಿದ್ವನ್ಮಣಿ,

10-5-47. — **ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ.**

# ವಿಷಯಾನುಕ್ರಮಣಿಕೆ

ಪುಟಸಂಖ್ಯೆ

ಅರವತ್ತೆರಡನೆಯ ಅಧ್ಯಾಯವು—

ಶುಕಮುನಿಯ ವೈಕುಂಠಗಮನ ವೃತ್ತಾಂತ.

ಶುಕನು ಗಗನ ಮಾರ್ಗದಿಂದ ಊರ್ಧ್ವಲೋಕಪ್ರಯಾಣ ಮಾಡಿದುದು.

ವ್ಯಾಸಮುನಿಯು ಶುಕಾ! ಎಂದು ಕೂಗುತ್ತಾ ಅವನನ್ನೇ ಹಿಂಬಾಲಿಸಿದುದು.

ಶುಕನು ಪ್ರತಿಧ್ವನಿಮಾಡಿ ಶ್ವೇತದ್ವೀಪಕ್ಕೆ ಹೋಗಿ ಬಳಿಕ ವೈಕುಂಠಕ್ಕೆ ನಡೆದು ಅಲ್ಲಿದ್ದ ಭಗವಂತನನ್ನು ಸ್ತುತಿಸಿ ಅವನ ಅಪ್ಪಣೆಯಂತೆ ಗಂಧಮಾದನ ಪರ್ವತದಲ್ಲಿದ್ದ ತಂದೆಯ ಬಳಿಗೆ ಬಂದು ಅವರಿಂದ ಭಾಗವತ ಸಂಹಿತೆ ಯನ್ನು ಅಧ್ಯಯನ ಮಾಡಿದುದು. 385-402



*

*

॥ ಶ್ರೀಃ ॥

# ನಾರದೀಯಮಹಾಪುರಾಣಂ

## ಚತುಃಪಂಚಾಶತ್ತಮೋಽಧ್ಯಾಯಃ

---

**ಸನಂದನ ಉವಾಚ**

**ಜ್ಯೋತಿಷಾಂಗಂ ಪ್ರವಕ್ಷ್ಯಾಮಿ ಯದುಕ್ತಂ ಬ್ರಹ್ಮಣಾ ಪುರಾ ।**
**ಯಸ್ಯ ವಿಜ್ಞಾನಮಾತ್ರೇಣ ಧರ್ಮಸಿದ್ಧಿರ್ಭವೇನ್ನೃಣಾಂ ॥ ೧ ॥**

**ತ್ರಿಸ್ಕಂಧಂ ಜ್ಯೌತಿಷಂ ಶಾಸ್ತ್ರಂ ಚತುರ್ಲಕ್ಷಮುದಾಹೃತಂ ।**
**ಗಣಿತಂ ಜಾತಕಂ ವಿಪ್ರ ಸಂಹಿತಾಸ್ಕಂಧಸಂಜ್ಞಿತಂ ॥ ೨ ॥**

---

### ಐವತ್ತನಾಲ್ಕನೆಯ ಅಧ್ಯಾಯವು

೧. ಹಿಂದೆ ಬ್ರಹ್ಮನು ಹೇಳಿದಂತಹ ಜ್ಯೋತಿಶ್ಶಾಸ್ತ್ರದ ಕೆಲವು ಮುಖ್ಯಾಂಶಗಳನ್ನು ಈಗ ನಿನಗೆ ವಿವರಿಸುವೆನು. ಈ ಜ್ಯೋತಿಶ್ಶಾಸ್ತ್ರದ ಅರಿವಿನಿಂದಲೇ ಜನರಿಗೆ ಧರ್ಮಕಾರ್ಯಗಳ ಫಲವು ಅನಾಯಾಸವಾಗಿ ಲಭಿಸುವುದು. ಆದ್ದರಿಂದ ದೃಢಚಿತ್ತನಾಗಿ ಲಾಲಿಸು ಎಂದು ಸನಂದನಮಹರ್ಷಿಯು ಜ್ಯೋತಿಷವೆಂಬ ವೇದಾಂಗವನ್ನು ಹೀಗೆ ಹೇಳತೊಡಗಿದನು.

೨. ಜ್ಯೌತಿಷವೆಂಬುದು ತ್ರಿಸ್ಕಂಧಾತ್ಮಕವಾದ ಶಾಸ್ತ್ರ. ಇದರಲ್ಲಿ ನಾಲ್ಕು ಲಕ್ಷ ಗ್ರಂಥಗಳಿವೆ. (1) ಗಣಿತಸ್ಕಂಧ, (2) ಜಾತಕಸ್ಕಂಧ, (3) ಸಂಹಿತಾಸ್ಕಂಧವೆಂದು ಈ ಜ್ಯೋತಿಶ್ಶಾಸ್ತ್ರದ ಪ್ರಕ್ರಿಯೆಯನ್ನೆಲ್ಲಾ ಮೂರುವಿಧವಾಗಿ ವಿಂಗಡಿಸಿರುವರು.

ಗಣಿತೇ ಪರಿಕರ್ಮಾದಿ ಖಗಮಧ್ಯಸ್ಫುಟಕ್ರಿಯೇ ।
ಅನುಯೋಗಶ್ಚಂದ್ರಸೂರ್ಯಗ್ರಹಣಂ ಚೋದಯಾಸ್ತಕಂ ॥ ೩ ॥

ಛಾಯಾಶೃಂಗೋನ್ನತಿಯುತೀ ಪಾತಸಾಧನಮೀರಿತಂ ।
ಜಾತಕೇ ರಾಶಿಭೇದಾಶ್ಚ ಗ್ರಹಯೋನಿಶ್ಚ ಯೋನಿಜಂ ॥ ೪ ॥

ನಿಷೇಕಜನ್ಮಾರಿಷ್ಟಾನಿ ಹ್ಯಾಯುರ್ದಾಯೋ ದಶಾಕ್ರಮಃ ।
ಕರ್ಮಾಜೀವಶ್ಚಾಷ್ಟವರ್ಗೋ ರಾಜಯೋಗಾಶ್ಚ ನಾಭಸಾಃ ॥ ೫ ॥

ಚಂದ್ರಯೋಗಾಃ ಪ್ರವ್ರಜ್ಯಾಖ್ಯಾ ರಾಶಿಶೀಲಂ ಚ ದೃಕ್ಫಲಂ ।
ಗ್ರಹಭಾವಫಲಂ ಚೈವಾಶ್ರಯಯೋಗಪ್ರಕೀರ್ಣಕೇ ॥ ೬ ॥

---

೩. ಗಣಿತಸ್ಕಂಧದಲ್ಲಿ ಗ್ರಹಗಳ ಸ್ಪಷ್ಟ (ಸ್ಫುಟ) ಮತ್ತು ಮಧ್ಯಮಗತಿಗಳ ಆನಯನ, ಸೂರ್ಯಚಂದ್ರಗ್ರಹಣಗಳನ್ನೂ ಉದಯಾಸ್ತಕಾಲಗಳನ್ನೂ ಕಂಡುಹಿಡಿಯುವುದು, ಛಾಯೆಯಿಂದ ಕ್ರಾಂತ್ಯಾದಿಗಳನ್ನು ತಿಳಿದುಕೊಳ್ಳುವುದು, ಪಾತಾನಯನ, ಮುಂತಾದ ಉಪಯುಕ್ತಗ್ರಹಗಣಿತಗಳನ್ನು ಅರಿಯಬಹುದು.

೪-೭. ಇನ್ನು ಜಾತಕಸ್ಕಂಧದಲ್ಲಿ ದ್ವಾದಶರಾಶಿಭೇದಗಳು, ಗ್ರಹಯೋನಿಭೇದ, ವಿಯೋನಿಜನ್ಮಗಳು, ನಿಷೇಕಲಗ್ನ, ಬಾಲಾರಿಷ್ಟಾದಿಜಾತಕಾರಿಷ್ಟಗಳು ಆಯುರ್ದಾಯನಿರ್ಣಯ, ಗ್ರಹದೆಶೆಗಳು, ಕರ್ಮಾಜೀವಗಳನ್ನು ಸಾಧಿಸುವಿಕೆ, ಅಷ್ಟಕವರ್ಗದಿಂದ ಗೋಚರಫಲವನ್ನು ಹೇಳುವುದು, ರಾಜಯೋಗಾದಿಗಳಿಂದ ಜಾತಕಗಳ ಬಲಗಳನ್ನು ವಿವರಿಸುವುದು, ನಕ್ಷತ್ರಮೂಲಕವಾಗಿ ಹುಟ್ಟುವ ಯೋಗಗಳನ್ನು ಅರಿಯುವುದು, ಚಂದ್ರನಿಂದ ಬರುವ ಯೋಗಗಳು, ಸಂನ್ಯಾಸಯೋಗ, ರಾಶಿಶೀಲಗಳನಿರೂಪಣೆ, ಗೋಚರಫಲ ಮತ್ತು ಗ್ರಹಗಳ ಭಾವಫಲ ಇವುಗಳನ್ನು ತಿಳಿಯುವುದು, ಆಶ್ರಯಯೋಗಗಳು, ಮಿಶ್ರಯೋಗಗಳು, ಅನಿಷ್ಟಯೋಗಗಳು, ಸ್ತ್ರೀಜಾತಕನಿರೂಪಣೆ, ಕೊನೆಯದಾಗಿ ನಿರ್ಯಾಣಯೋಗಗಳು,

ಅನಿಷ್ಟಯೋಗಾಃ ಸ್ತ್ರೀಜನ್ಮಫಲಂ ನಿರ್ಯಾಣಮೇವ ಚ ।
ನಷ್ಟಜನ್ಮವಿಧಾನಂ ಚ ತಥಾ ದ್ರೇಷ್ಕಾಣಲಕ್ಷಣಂ ॥ ೭ ॥

ಸಂಹಿತಾಶಾಸ್ತ್ರರೂಪಂ ಚ ಗ್ರಹಚಾರೋಽಬ್ದಲಕ್ಷಣಂ ।
ತಿಥಿವಾಸರನಕ್ಷತ್ರಯೋಗತಿಥ್ಯರ್ಧಸಂಜ್ಞಕಾಃ ॥ ೮ ॥

ಮುಹೂರ್ತೋಪಗ್ರಹಾಃ ಸೂರ್ಯಸಂಕ್ರಾಂತಿರ್ಗೋಚರಃ ಕ್ರಮಾತ್ ।
ಚಂದ್ರತಾರಾಬಲಂ ಚೈವ ಸರ್ವಲಗ್ನಾರ್ತವಾಹ್ವಯಃ ॥ ೯ ॥

ಆಧಾನಪುಂಸಸೀಮಂತಜಾತನಾಮಾನ್ನಭುಕ್ತಯಃ ।
ಚೌಲಂ ಕರ್ಣ್ಣಯಣಂ ಮೌಂಜೀ ಕ್ಷುರಿಕಾಬಂಧನಂ ತಥಾ ॥ ೧೦ ॥

ನಷ್ಟಜಾತಕಗಳನ್ನು ಪುನಃ ನಿರ್ಮಿಸುವುದು, ರಾಶಿಯ ಮೂರನೆಯ ಒಂದು ಭಾಗವಾದ ದ್ರೇಕ್ಕಾಣದಿಂದ ಫಲಾಫಲಗಳನ್ನರಿಯುವುದು ಇವೆಲ್ಲವೂ ನಿರೂಪಿತವಾಗಿವೆ.

೮-೧೩. ಮೂರನೆಯದಾದ ಸಂಹಿತಾಸ್ಕಂಧದಲ್ಲಿ ಸೂರ್ಯಾದಿಗ್ರಹಗಳು ಸಂಚರಿಸುವ ಕ್ರಮ, ವರ್ಷಲಕ್ಷಣ, ತಿಥಿ, ವಾರ, ನಕ್ಷತ್ರ, ಯೋಗ, ಕರಣ ಇವುಗಳ ಉತ್ಪತ್ತಿಕ್ರಮ, ಮುಹೂರ್ತಲಕ್ಷಣ, ಉಪಗ್ರಹಗಳು, ಸೂರ್ಯ ಸಂಕ್ರಾಂತಿಪುರುಷರ ಲಕ್ಷಣ, ಚಂದ್ರಬಲ ಮತ್ತು ತಾರಾಬಲಗಳ ವಿವರಣೆ, ಉಳಿದ ಎಲ್ಲಾ ಕರ್ಮಗಳಿಗೂ ಬೇಕಾಗುವ ಮುಹೂರ್ತಗಳು, ಆರ್ತವಕಾಲ ಆಧಾನಕಾಲ, (ಗರ್ಭಾಧಾನ ಕಾಲ) ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಕರ್ಣವೇಧನ, (ಕಿವಿಯನ್ನು ಚುಚ್ಚುವುದು) ಉಪನಯನ, ಕೇಶಚ್ಛೇದನ, ಸಮಾವರ್ತನ, ವಿವಾಹ ಮುಂತಾದ ಷೋಡಶಕರ್ಮಗಳಿಗೆ ಬೇಕಾಗುವ ಮುಹೂರ್ತಗಳ ಲಕ್ಷಣ, ಹಾಗೆಯೇ ವಿಗ್ರಹ ಪ್ರತಿಷ್ಠಾದಿಗಳಿಗೂ ಮತ್ತು ನೂತನಗೃಹಪ್ರವೇಶಾದಿಗಳಿಗೂ ಬೇಕಾಗುವ ಅತಿ ಮುಖ್ಯವಾದ ಮುಹೂರ್ತಗಳು, ಯಾತ್ರೆ (ತೀರ್ಥಯಾತ್ರಾದಿಗಳು) ಪ್ರಯಾಣ,

ಸಮಾವರ್ತನವೈವಾಹಪ್ರತಿಷ್ಠಾಸದ್ಮಲಕ್ಷಣಂ ।
ಯಾತ್ರಾಪ್ರವೇಶನಂ ಸದ್ಯೋವೃಷ್ಟಿಃ ಕರ್ಮವಿಲಕ್ಷಣಂ ॥ ೧೧ ॥

ಉತ್ಪತ್ತಿಲಕ್ಷಣಂ ಚೈವ ಸರ್ವಂ ಸಂಕ್ಷೇಪತೋ ಬ್ರುವೇ ।
ಏಕಂ ದಶ ಶತಂ ಚೈವ ಸಹಸ್ರಾಯುತಲಕ್ಷಕಂ ॥ ೧೨ ॥

ಪ್ರಯುತಂ ಕೋಟಿಸಂಜ್ಞಾಂ ಚಾರ್ಬುದಮಬ್ಜಂ ಚ ಖರ್ವಕಂ ।
ನಿಖರ್ವಂ ಚ ಮಹಾಪದ್ಮಂ ಶಂಕುರ್ಜಲಧಿರೇವ ಚ ॥ ೧೩ ॥

ಅಂತ್ಯಂ ಮಧ್ಯಂ ಪರಾರ್ಧಂ ಚ ಸಂಜ್ಞಾ ದಶಗುಣೋತ್ತರಾಃ ।
ಕ್ರಮಾದುತ್ಕ್ರಮತೋ ವಾಪಿ ಯೋಗಃ ಕಾರ್ಯೋತ್ತರಂ ತಥಾ ॥ ೧೪ ॥

---

ವೃಷ್ಟಿ (ಮಳೆ) ಇವುಗಳನ್ನು ತಿಳಿಯುವ ಚಿಹ್ನೆಗಳು ಇನ್ನೂ ಅನೇಕ ವಿಧವಾದ ಕರ್ಮಗಳ ಸ್ವರೂಪವಿವರಣೆ, ಭೂಮಿಯಲ್ಲಿ ಉತ್ಪತ್ತಿಯಾಗುವ ವಜ್ರಾದಿಖನಿಜಗಳ ಲಕ್ಷಣ ಇವೇ ಮುಂತಾದ ವಿಷಯಗಳು ಪ್ರತಿಪಾದಿತವಾಗಿವೆ. ಮೇಲೆ ಹೇಳಿದ ತ್ರಿಸ್ಕಂಧಾತ್ಮಕವಾದ ಜ್ಯೋತಿಶ್ಶಾಸ್ತ್ರದ ತತ್ವವನ್ನು ಇನ್ನು ಮುಂದೆ ಸಂಕ್ಷೇಪವಾಗಿ ವಿವರಿಸುವೆನು.

೧೨-೧೪. ಗಣಿತಭಾಗಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಅಂಕಿಗಳು ದಶಸಂಖ್ಯೆಯಿಂದ ಗುಣಿತವಾದರೆ ಈರೀತಿಯಾಗಿ ಸಂಜ್ಞೆಗಳನ್ನು ಪಡೆಯುತ್ತವೆ. ಒಂದು (೧) ಹತ್ತು (೧೦) ನೂರು (೧೦೦) ಸಾವಿರ (೧೦೦೦) ದಶಸಾವಿರ (೧೦೦೦೦) ಲಕ್ಷ (೧೦೦೦೦೦) ಪ್ರಯುತ (೧೦೦೦೦೦೦) ಕೋಟಿ (೧೦೦೦೦೦೦೦) ಅರ್ಬುದ (೧೦೦೦೦೦೦೦೦) ಅಬ್ಜ (೧೦೦೦೦೦೦೦೦೦) ಖರ್ವ (೧೦೦೦೦೦೦೦೦೦೦) ನಿಖರ್ವ (೧೦೦೦೦೦೦೦೦೦೦೦) ಮಹಾಪದ್ಮ (೧೦೦೦೦೦೦೦೦೦೦೦೦) ಶಂಕು (೧೦೦೦೦೦೦೦೦೦೦೦೦೦) ಜಲಧಿ (೧೦೦೦೦೦೦೦೦೦೦೦೦೦೦) ಅಂತ್ಯ (೧೦೦೦೦೦೦೦೦೦೦೦೦೦೦೦) ಮಧ್ಯ (೧೦೦೦೦೦೦೦೦೦೦೦೦೦೦೦೦) ಪರಾರ್ಧ (೧೦೦೦೦೦೦೦೦೦೦೦೦೦೦೦೦೦) ಹೀಗೆ ಬೇರೆಬೇರೆ ಹೆಸರಿನಿಂದ ಗಣಿತಕ್ಕೆ ಸಹಾಯವಾಗುತ್ತವೆ. ಈ ಸಂಖ್ಯೆಗಳನ್ನು ಯೋಗಮಾಡುವುದಕ್ಕೆ ಕ್ರಮಸಂಖ್ಯೆಯಿಂದಾಗಲೀ, ವ್ಯುತ್ಕ್ರಮಸಂಖ್ಯೆಯಿಂದಾಗಲೀ ಅವಕಾಶವಿರುವುದು.

ಹನ್ಯಾದ್ಗುಣೇನ ಗುಣ್ಯಂ ಸ್ಯಾತ್ತೇನೈವೋಪಾಂತಿಮಾದಿಕಾನ್ ।
ಶುದ್ಧ್ಯೇದ್ಧರೋ ಯದ್ಗುಣಶ್ಚ ಭಾಜ್ಯಾಂತ್ಯಾ ತತ್ಫಲಂ ಮುನೇ ॥ ೧೫ ॥

ಸಮಾಂಕಘಾತೋ ವರ್ಗಃ ಸ್ಯಾತ್ತಮೇವಾಹುಃ ಕೃತಿಂ ಬುಧಾಃ ।
ಅಂತ್ಯಾತ್ತು ವಿಷಮಾತ್ತ್ಯಕ್ತ್ವಾ ಕೃತಿಂ ಮೂಲಂ ನ್ಯಸೇತ್ಪೃಥಕ್ ॥ ೧೬ ॥

ದ್ವಿಗುಣೇನಾಮುನಾ ಭಕ್ತೇ ಫಲಂ ಮೂಲೇ ನ್ಯಸೇತ್ಕ್ರಮಾತ್ ।
ತತ್ಕೃತಿಂ ಚ ತ್ಯಜೇದ್ವಿಪ್ರ ಮೂಲೇನ ವಿಭಜೇತ್ಪುನಃ ॥ ೧೭ ॥

ಏವಂ ಮುಹುರ್ವರ್ಗಮೂಲಂ ಜಾಯತೇ ಚ ಮುನೀಶ್ವರ ।
ಸಮತ್ರ್ಯಂಕಹತಿಃ ಪ್ರೋಕ್ತೋ ಯತಸ್ತತ್ರ ವಿಧಿಃ ಪದೇ ॥ ೧೮ ॥

೧೫. ಎರಡು ಸಂಖ್ಯೆಗಳನ್ನು ಪರಸ್ಪರವಾಗಿ ಗುಣಿಸುವಾಗ ಗುಣ್ಯದ ಕೊನೆಯ ಅಂಕಿಯನ್ನು ಗುಣಕದಿಂದ ಗುಣಿಸಬೇಕು. ಬಂದ ಲಬ್ಧಕ್ಕೆ ಉಪಾಂತ್ಯದ ಅಂಕಿಯ (ಅಂದರೆ ಅದರ ಸಮೀಪದಲ್ಲಿರುವ ಅಂಕಿಯ) ಗುಣ ಲಬ್ಧವನ್ನು ಸೇರಿಸಬೇಕು. ಹೀಗೆಯೇ ಗುಣಲಬ್ಧವನ್ನು ಒಂದೇ ಸಾಲಿನಲ್ಲಿ ಇಡುತ್ತಾ ಬರಬೇಕು. ಇದರಂತೆಯೇ ಭಾಗಹಾರವನ್ನು ಮಾಡುವಾಗ ಭಾಜ್ಯಾಂಕದ ಭಾಜಕದ ಯಾವ ಗುಣಸಂಖ್ಯೆಯಿಂದ ಕಳೆಯಲು ಸಾಧ್ಯವೋ ಆ ಗುಣಕವೇ ಭಾಗಲಬ್ಧವೆನಿಸುವುದು. ಹೀಗೆ ಗುಣಲಬ್ಧವನ್ನು ಗುಣಕದಿಂದಲೂ ಭಾಗಲಬ್ಧವನ್ನು ಭಾಜ್ಯದಿಂದಲೂ ಸಾಧಿಸಬೇಕು.

೧೬-೧೮. ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದಲೇ ಗುಣಿಸುವುದಕ್ಕೆ ವರ್ಗ, ಅಥವಾ ಕೃತಿ ಎಂದು ಈ ಜ್ಯೋತಿಶ್ಶಾಸ್ತ್ರದಲ್ಲಿ ಸಂಜ್ಞೆಯುಂಟು. ಆ ವರ್ಗದ ಮೂಲಸಂಖ್ಯೆಯನ್ನರಿಯುವುದು ವರ್ಗಮೂಲವೆನಿಸುವುದು. (ಅಂದರೆ ೩×೩=೯=ಇದು ವರ್ಗ. ಇದರ ಮೂಲ ೩ ಎಂದು ತಿಳಿಯಬೇಕು.) ಜ್ಯೋತಿಶ್ಶಾಸ್ತ್ರದಲ್ಲಿ ಅಂಕಗಳನ್ನು ಬಲಭಾಗದಿಂದ ಎಡಭಾಗಕ್ಕೆ ಯಾವಾಗಲೂ ಎಣಿಸುವುದು ವಾಡಿಕೆಯಾಗಿದೆ. ('ಅಂಕಾನಾಂ ವಾಮತೋ ಗತಿಃ') ವರ್ಗ ಸಂಖ್ಯೆಯಲ್ಲಿ ಕೊನೆಯದಾಗಿಯೂ ಮತ್ತು ವಿಷಮವಾಗಿಯೂ ಇರುವ ಅಂಕಿ, ಅಥವಾ ಅಂಕಿಗಳಿಗೆ ಮೊದಲು ಮೂಲವನ್ನು ಕಂಡುಹಿಡಿದುಕೊಳ್ಳಬೇಕು.

**ಪ್ರೋಚ್ಯತೇ ವಿಷಮಂ ತ್ವಾದ್ಯಂ ಸಮೇ ದ್ವೇ ಚ ತತಃ ಪರಂ ।**
**ವಿಶೋಧ್ಯಂ ವಿಷಮಾದಂತ್ಯಾದ್ಘನಂ ತನ್ಮೂಲಮುಚ್ಯತೇ ॥ ೧೯ ॥**

**ತ್ರಿಘ್ನಾದ್ಭಜೇನ್ಮೂಲಕೃತ್ಯಾ ಸಮಂ ಮೂಲೇ ನ್ಯಸೇತ್ಫಲಂ ।**
**ತತ್ಕೃತಿಘ್ನೇನ ನಿಹತಾನ್ನಿಘ್ನೀಂ ಚಾಪಿ ವಿಶೋಧಯೇತ್ ॥ ೨೦ ॥**

---

ನಂತರ ಆ ಮೂಲವನ್ನು ಎರಡರಿಂದ (೨) ಗುಣಿಸಿ ಅನಂತರ ಮುಂದಿನ ವಿಷಮ ಸಂಖ್ಯಾಪರ್ಯಂತವಾಗಿರುವ ಅಂಕಿಗಳಲ್ಲಿ ಕಳೆಯಬೇಕು. ಲಬ್ಧವನ್ನು ಎರಡರಿಂದ (೨) ಗುಣಿಸಿ ಲಬ್ಧಸ್ಥಾನದಲ್ಲಿಡಬೇಕು. ಈ ರೀತಿ ಆನಯನಮಾಡುವ ಕ್ರಮವೇ ವರ್ಗಮೂಲಸಾಧನಾವಿಧಿಯೆನಿಸುವುದು. (ಅಂದರೆ ವರ್ಗದ ಅಂಕಿಗಳಿಂದ ಅದರ ಮೂಲವನ್ನು ಕಂಡುಹಿಡಿಯುವ ವಿಧಾನ ಅಥವಾ ರೀತಿ ಎನಿಸುವುದು) ಹೀಗೆ ಒಂದೇ ಅಂಕಿಯನ್ನು ಅದೇ ಅಂಕಿಯಿಂದ ಗುಣಿಸುವುದು, ಘನವೆನಿಸುವುದು. ಇದಕ್ಕೂ ಮೂಲವನ್ನರಿಯಬೇಕು. (೪×೪=೪=೬೪ ಇದೇ ಘನವೆನಿಸುವುದು).

೧೯.೨೧. ಘನಮೂಲವನ್ನರಿಯಬೇಕಾದರೆ, ಘನದ ಅಂಕಿಗಳಲ್ಲಿ ಮೊದಲನೆಯ ಅಂಕಿಯು ಘನಸಂಜ್ಞೆಯುಳ್ಳದ್ದು. ಅದರ ಮುಂದಿನ ಎರಡು ಅಂಕಿಗಳು ಘನಾಂಕಗಳಲ್ಲವು. ಅದಕ್ಕಿಂತ ಮುಂದಿನ ಅಂಕಿಯು ಘನಸ್ಥಾನದ್ದೆಂದು ಮೊದಲು ಗುರುತುಮಾಡಿಕೊಳ್ಳಬೇಕು. ಅದಕ್ಕೋಸ್ಕರ ಘನಾಂಕಗಳಮೇಲೆ । ಸಂಜ್ಞೆಮಾಡಿಕೊಳ್ಳಬೇಕು. ಘನಾಂಕಗಳಲ್ಲದವುಗಳ ಮೇಲೆ—ಗುರುತುಮಾಡಬೇಕು. ಉದಾ. ೧೯೫೩೧೨೫=೩೫. ೧೨೫=ಎಂಬ ಅಂಕಿಯ ಘನ ಅಂಕಿ. ಈ ಶಾಸ್ತ್ರವಲ್ಲಿ ಅಂಕಗಳನ್ನು ಬಲದಿಂದ ಎಡಕ್ಕೆ 'ಅಂಕಾನಾಂ ವಾಮತೋ ಗತಿಃ' ಎಂಬ ನಿಯಮದಿಂದ ಎಣಿಸಿದರೆ, ಕೊನೆಯ ೫ ಎಂಬ ಅಂಕಿಯು ಮೊದಲನೆಯದಾಗುತ್ತೆ. ಅದು ಘನಸಂಜ್ಞೆಯನ್ನು ಹೊಂದುವುದು. ಅದರ ಪಕ್ಕದ ೨ ಮತ್ತು ೧ ಎಂಬ ಅಂಕಿಗಳ ಅಘನಸ್ಥಾನದ ಅಂಕಿಗಳು ಪುನಃ ೩ ಎಂಬುದು ಘನಸ್ಥಾನವನ್ನು ಹೊಂದುವುದು. ೫ ಮತ್ತು ೯ ಎಂಬುದು ಅಘನಸ್ಥಾನಗಳಲ್ಲಿವೆ. ಅದಕ್ಕಿಂತ ಮುಂದಿನ ಅಂದರೆ ಲೌಕಿಕ

ಘನಂ ಚ ವಿಷಮಾದೇವಂ ಘನಮೂಲಂ ಮುಹುರ್ಭವೇತ್ ।
ಅನ್ಯೋನ್ಯಹಾರನಿಹತೌ ಹರಾಂಶೌ ತು ಸಮಚ್ಛಿದಾ ॥ ೨೦ ॥

ಲವಾ ಲವಘ್ನಾಶ್ಚ ಹರಾ ಹರಾಘ್ನಾ ಹಿ ಸವರ್ಣನಂ ।
ಭಾಗಪ್ರಭಾಗೇ ವಿಜ್ಞೇಯಂ ಮುನೇ ಶಾಸ್ತ್ರಾರ್ಥಚಿಂತಕೈಃ ॥ ೨೧ ॥

---

ವ್ಯವಹಾರದಂತೆ ಮೊದಲನೆಯ ಅಂಕಿಯಾಗಿರುವ ೧ ಎಂಬ ಅಂಕಿಯು ಘನಸ್ಥಾನದಲ್ಲಿರುವುದು. ಆದುದರಿಂದ ಹಿಂದೆ ಹೇಳಿದ ಘನ ಮತ್ತು ಅಘನ ಸ್ಥಾನಗಳ ಗುರುತನ್ನು ಹೀಗೆ ಮಾಡಿಕೊಳ್ಳಬೇಕು. "೧ ೯ ೫ ೩ ೧ ೨ ೫.' 'ಹೀಗೆ ಸ್ಥಾನಗಳನ್ನು ಕಂಡುಹಿಡಿದು ಗುರ್ತಿಸಿದ ನಂತರ, ಆ ಘನಸ್ಥಾನದಲ್ಲಿ ಕೊನೆಯ ಅಂಕಿಗೆ ಮಾತ್ರ ಘನಮೂಲವನ್ನು ಪ್ರತ್ಯೇಕವಾಗಿಟ್ಟುಕೊಳ್ಳಬೇಕು. ನಂತರ ಮುಂದಿನ ಘನಸ್ಥಾನಪರ್ಯಂತವಾದ ಅಂಕಿಗಳಲ್ಲಿ ಆ ಮೂಲದ ವರ್ಗವನ್ನು ಮೂರರಿಂದ ಗುಣಿಸಿ, ಮೊದಲನೆಯ ಘನಮೂಲದಿಂದ ಭಾಗಿಸಬೇಕು. ಆ ಫಲವನ್ನು ಲಬ್ಧದಲ್ಲಿ ಕಲ್ಪಿಸಿಕೊಳ್ಳಬೇಕು. ಈ ಮೂಲಗಳ ಕೃತಿಯಲ್ಲಿ (ವರ್ಗದಲ್ಲಿ) ಮೊದಲನೆಯ ಅಂಕಿಯಿಂದಲೂ ಮೂರರಿಂದಲೂ ಸಹ ಗುಣಿಸಿ ಉಳಿದ ಘನಸ್ಥಾನಗಳಲ್ಲಿ ಕಳೆಯಬೇಕು. ಬಂದ ಲಬ್ಧವನ್ನು ಘನಮೂಲದ ಜೊತೆಗೆ ಸೇರಿಸಿಕೊಳ್ಳಬೇಕು. ಹೀಗೆ ಬರುವ ಲಬ್ಧವೇ ಘನಮೂಲವೆನಿಸಿಕೊಳ್ಳುವುದು. ಇನ್ನು ಭಿನ್ನಪರಿಕರ್ಮದ ರೀತಿಯಿಂದ ಗಣಿತಫಲವನ್ನು ಸಾಧಿಸುವ ಕ್ರಮನ್ನು ತಿಳಿಸುವೆನು. ಇದರಲ್ಲಿ ಹಾರ, ಅಂಶ ಇವುಗಳನ್ನು ಮೊದಲು ತಿಳಿದುಕೊಳ್ಳಬೇಕು.

೨೧. ಭಾಗಪ್ರಭಾಗಗಳನ್ನರಿಯುವಾಗ ಅಂಶವನ್ನು ಮತ್ತೊಂದು ಅಂಶದಿಂದಲೇ ಗುಣಿಸಬೇಕು. ಹಾಗೆಯೇ ಹಾರವನ್ನೂ ಮತ್ತೊಂದು ಸಂಖ್ಯೆಯ ಹಾರದಿಂದಲೇ ಗುಣಿಸಿಕೊಂಡರೆ ಆಗ ಅದು ಸವರ್ಣವೆನಿಸುವುದು. ಅಂದರೆ ಹಾರಾಂಶಗಳು ವ್ಯತ್ಯಸ್ತವಾಗುವುದಿಲ್ಲ. (೧/೩, ೧/೪ ಇಲ್ಲಿ ಮೂರು (೩) ಮತ್ತು ನಾಲ್ಕು ಈ ಅಂಕಿಗಳು ಹಾರಾಂಕಗಳೆಂದೂ, ಒಂದು (೧) ಎಂಬ ಅಂಕಿಯೇ ಎರಡು ಕಡೆಗಳಲ್ಲೂ ಅಂಶವೆಂದೂ ತಿಳಿಯಬೇಕು.)

**ಅನುಬಂಧಾಪವಾಹೇ ಚೈಕಸ್ಯ ಚೇದಧಿಕೋನಕಃ ।**
**ಭಾಗಾಸ್ತಲಸ್ಥಹಾರೇಣ ಹರಂ ಸ್ವಾಂಶಾಧಿಕೇನ ತಾನ್** ॥ ೨೩ ॥

**ಊನೇನ ಚಾಪಿ ಗುಣಯೇದ್ಧನರ್ಣಂ ಚಿಂತಯೇತ್ತಥಾ ।**
**ಕಾರ್ಯಸ್ತುಲ್ಯಹರಾಂಶಾನಾಂ ಯೋಗಶ್ಚಾಪ್ಯಂತರಂ ಮುನೇ** ॥ ೨೪ ॥

**ಅಹಾರರಾಶೌ ರೂಪಂ ತು ಕಲ್ಪಯೇದ್ಧರಮಪ್ಯಥ ।**
**ಅಂಶಾಹತಿಶ್ಛೇದಘಾತಹೃದ್ಭಿನ್ನಗುಣನೇ ಫಲಂ** ॥ ೨೫ ॥

---

೨೩-೨೪. ಇನ್ನು ಭಾಗಾನುಬಂಧ ಮತ್ತು ಭಾಗಾಪವಾಹಗಳನ್ನು ತಿಳಿಸುವೆನು. ಹಾರಕ್ಕಿಂತಲೂ ಅಂಶವು ಹೆಚ್ಚಾಗಿದ್ದರೆ, ಭಾಗಾಪವಾಹಮಾಡಬೇಕು. ಹಾರಕ್ಕಿಂತಲೂ ಅಂಶವು ಕಡಿಮೆಯಿದ್ದರೆ ಭಾಗಾನುಬಂಧವನ್ನು ಮಾಡಬೇಕು. ಭಾಗಾನುಬಂಧಮಾಡಬೇಕಾದರೆ ಪೂರ್ಣಾಂಕವನ್ನು ತಲಭಾಗದಲ್ಲಿರುವ (ಕೆಳಭಾಗದಲ್ಲಿರುವ) ಹಾರದಿಂದ ಗುಣಿಸಿ ಮೇಲಿನ ಅಂಶವನ್ನು ಕೂಡಿಸಬೇಕು. ಆದರೆ ಭಾಗಾಪವಾಹಮಾಡುವಾಗ ಮಾತ್ರ ಪೂರ್ಣಾಂಕವನ್ನು ಹಾರದಿಂದ ಗುಣಿಸಿದ ನಂತರ ಬಂದ ಸಂಖ್ಯೆಯಲ್ಲಿ ಅಂಶವನ್ನು ಕಳೆಯಬೇಕು. ಇಷ್ಟೇ ವ್ಯತ್ಯಾಸ. ಅಂತೂ ಹಾರವನ್ನು ಒಂದೇ ಸಂಖ್ಯೆಯನ್ನಾಗಿ ಮಾಡಿಕೊಳ್ಳಬೇಕು. ಅಂದರೆ ಹಾರವು ವಿಕಾರವಾಗುವುದಿಲ್ಲ. ಹೀಗೆ ಹಾರಾಂಶಗಳನ್ನು ಕ್ರಮಪಡಿಸಿಕೊಂಡಮೇಲೆ ಸಂಕಲನ (ಕೂಡುವುದು) ಅಥವ ವ್ಯವಕಲನ (ಕಳೆಯುವುದು) ಗಳನ್ನು ಮಾಡಬಹುದು. ಹಾರಾಂಶಗಳೆರಡೂ ಸಮಾನವಾಗಿಯೇ ಇದ್ದರೆ ಪೂರ್ಣಸಂಖ್ಯೆಯಿಂದಲೇ ಸಂಕಲನ ಮಾಡಬೇಕು.

೨೫. ಹಾರವಿಲ್ಲದ ರಾಶಿಗೆ ಒಂದು ಎಂಬ ಸಂಖ್ಯೆಯನ್ನು ಹಾರವನ್ನಾಗಿ ಮಾಡಿಕೊಳ್ಳಬೇಕು. ಗುಣಾಕಾರಮಾಡುವಾಗ ಪರಸ್ಪರ ಗುಣ್ಯ, ಗುಣಕಗಳ ಅಂಶವನ್ನೇ ಪರಸ್ಪರವಾಗಿ ಗುಣಿಸಿ, ಹಾಗೆಯೇ ಪರಸ್ಪರ ಹಾರಗಳ ಗುಣನದಿಂದ ಬಂದ ಅಂಕಿಯಿಂದ ಅಂಶಾಹತಿಯನ್ನು ಭಾಗಿಸಿ ಫಲವನ್ನು ಪ್ರತ್ಯೇಕವಾಗಿಡಬೇಕು.

**ಛೇದಂ ಚಾಪಿ ಲವಂ ವಿದ್ವನ್ಪರಿವರ್ತ್ಯ ಹರಸ್ಯ ಚ ।**
**ಶೇಷಃ ಕಾರ್ಯೋ ಭಾಗಹಾರೇ ಕರ್ತವ್ಯೋ ಗುಣನಾವಿಧಿಃ ॥ ೨೬ ॥**

**ಹಾರಾಂಶಯೋಃ ಕೃತೀ ವರ್ಗೇ ಘನೌ ಘನವಿಧೌ ಮುನೇ ।**
**ಪದಸಿದ್ಧ್ಯೈ ಪದೇ ಕುರ್ಯಾದಥೋ ಖಂ ಸರ್ವತಶ್ಚ ಖಂ ॥ ೨೭ ॥**

**ಛೇದಂ ಗುಣಂ ಗುಣಂ ಛೇದಂ ವರ್ಗಂ ಮೂಲಂ ಪದಂ ಕೃತಿ ।**
**ಋಣಂ ಸ್ವಂ ಸ್ವಮೃಣಂ ಕುರ್ಯಾದ್ದೃಶ್ಯೇ ರಾಶಿಪ್ರಸಿದ್ಧಯೇ ॥ ೨೮ ॥**

**ಅಥ ಸ್ವಾಂಶಾಧಿಕೋನೇ ತು ಲವಾಢ್ಯೋನೋ ಹರೋ ಹರಃ ।**
**ಅಂಶಸ್ತ್ವವಿಕೃತಸ್ತತ್ರ ವಿಲೋಮೇ ಶೇಷಮುಕ್ತವತ್ ॥ ೨೯ ॥**

---

೨೬. ಭಾಗಾಹಾರದಲ್ಲಿ ಭಾಜ್ಯದ ಅಂಶ ಮತ್ತು ಹಾರಗಳನ್ನು ಬದಲಾಯಿಸಿಕೊಂಡು ಭಾಜ್ಯದ ಅಂಶ, ಹಾರಗಳಿಂದ ಗುಣಿಸುವುದೇ ಭಿನ್ನಾಂಶದ ಭಾಗಹಾರವೆನಿಸುವುದು.

೨೭. ವರ್ಗ ಮತ್ತು ಘನವಾಗಿರುವ ಹಾರಾಂಶಗಳಿಗೆ ವರ್ಗಮೂಲ ಮತ್ತು ಘನಮೂಲವಿಧಿಗಳಿಂದಲೇ ಪ್ರತ್ಯೇಕವಾಗಿ ಹಾರಾಂಶಗಳನ್ನು ಕಂಡುಹಿಡಿಯಬೇಕು. ಸೊನ್ನೆಯನ್ನು ಗುಣಿಸಿದರೂ, ಭಾಗಿಸಿದರೂ, ಉಳಿಯುವುದು ಸೊನ್ನೆಯೇ ಆಗುವುದು. ಇಲ್ಲಿನವರೆವಿಗೂ ಕ್ರಮಸಂಖ್ಯಾಗಣಿತವನ್ನು ವಿವರಿಸಿದ್ದಾಯಿತು. ಇನ್ನು ಮುಂದೆ ವ್ಯಸ್ತವಿಧಿಯು ನಿರೂಪಿಸಲ್ಪಡುವುದು.

೨೮. ವಿಲೋಮವಿಧಿಯಲ್ಲಿ ನಿಜವಾದ ರಾಶಿಯನ್ನು ಅರಿಯಬೇಕಾದರೆ ಛೇದವನ್ನು ಗುಣವನ್ನಾಗಿಯೂ, ಗುಣವನ್ನು ಛೇದವನ್ನಾಗಿಯೂ, ವರ್ಗವನ್ನು ಮೂಲವನ್ನಾಗಿಯೂ. ಮೂಲವನ್ನು ವರ್ಗವನ್ನಾಗಿಯೂ, ಋಣವನ್ನು ಧನವನ್ನಾಗಿಯೂ, ಧನವನ್ನು ಋಣವನ್ನಾಗಿಯೂ ಬದಲಾಯಿಸಿಕೊಳ್ಳಬೇಕು. ಆಧುನಿಕರು ಧನಕ್ಕೆ+ಈ ಚಿಹ್ನೆಯನ್ನೂ, ಋಣಕ್ಕೆ—ಈ ಚಿಹ್ನೆಯನ್ನೂ ಉಪಯೋಗಿಸುವರು.

೨೯. ಹರವು ಅಂಶಕ್ಕಿಂತ ಅಧಿಕವಾಗಿದ್ದರೆ ಅಂಶವನ್ನು ಹರಕ್ಕೆ ಕೂಡಬೇಕು. ಹರವು ಅಂಶಕ್ಕಿಂತ ಕಡಿಮೆಯಾಗಿದ್ದರೆ ಹರವನ್ನು ಕಳೆದು

ಉದ್ದಿಷ್ಟರಾಶಿಃ ಸಂಕ್ಷಿಪ್ತೌ ಹೃತೋಂಶೌ ರಹಿತೋ ಯುತಃ ।
ಇಷ್ಟಘ್ನೆ ದೃಷ್ಟಘಾತೇನ ಭಕ್ತರಾಶಿರನೀಶಿತಃ ॥ ೩೦ ॥

ಯೋಗೋಂತರೇಣೋನಯುತೋಧಿತೋ ರಾಶೀ ಚ ಸಂಕ್ರಮೇ ।
ರಾಶ್ಯಂತರಹೃತಂ ವರ್ಗೋತ್ತರಂ ಯೋಗಸ್ತತಶ್ಚ ತೌ ॥ ೩೧ ॥

ಗಚಗ್ರೇಷ್ಟಕೃತಿರ್ವ್ಯೇಕಾ ದಲಿತಾ ಚೇಷ್ಟಭಾಜಿತಾ ।
ಏಕೋಸ್ಯ ವರ್ಗೋ ದಲಿತಃ ಸೈಕೋ ರಾಶಿಃ ಪರೋ ಮತಃ ॥ ೩೨ ॥

---

ಅದನ್ನೇ ಹರವೆಂದು ಭಾವಿಸಬೇಕು. ಅಂಶವು ಮಾತ್ರ ಒಂದೇರೀತಿಯಲ್ಲಿರುವುದು. ಇನ್ನು ಉಳಿದ ಸಂಕಲನ ಮತ್ತು ವ್ಯವಕಲನಗಳೆಲ್ಲವನ್ನೂ ಹಿಂದೆ ಹೇಳಿದಂತೆಯೇ ನಡೆಸಬಹುದು.

೩೦. ಇಷ್ಟಕರ್ಮದಿಂದ ಉದ್ದಿಷ್ಟರಾಶಿಯನ್ನು ಕಂಡುಹಿಡಿಯುವ ಕ್ರಮ ಹೇಗೆಂದರೆ:—ತನ್ನ ಇಷ್ಟದಂತೆ ಯಾವುದೋ ಒಂದು ಸಂಖ್ಯೆಯನ್ನು ಮೊದಲು ಕಲ್ಪಿಸಿಕೊಳ್ಳಬೇಕು. ಅದನ್ನು ಪ್ರಶ್ನೆಕೇಳುವವರು ಹೇಳುವಂತೆ ಗುಣನ, ಭಜನಗಳಿಂದ, ಅಂಶ, ಹಾರ ಇವುಗಳನ್ನೂ, ಸಂಕಲನ ಮತ್ತು ವ್ಯವಕಲನಗಳಿಂದ ಮತ್ತೊಂದು ಸಂಖ್ಯೆಯನ್ನೂ ಸಾಧಿಸಿಕೊಳ್ಳಬೇಕು. ಹಾಗೆ ಸಾಧಿತವಾದ ಅಂಕೆಯಲ್ಲಿ ಇಷ್ಟಾಂಕವನ್ನು ಗುಣಿಸಿ, ದೃಷ್ಟಾಂಕದಿಂದ ಭಾಗಿಸಿದರೆ ಬರುವುದೇ ಉತ್ತರವಾದ ಅಂಕೆಯಾಗುವುದು. ಇದನ್ನೇ ದೃಷ್ಟಕರ್ಮ ಅಥವಾ ಇಷ್ಟಕರ್ಮವೆಂದು ಹೇಳುವರು.

೩೧. ಇನ್ನು ಸಂಕ್ರಮಗಣಿತವನ್ನು ಹೇಳುವೆನು. ಎರಡು ಅಂಕೆಗಳ ಯೋಗ ಮತ್ತು ವಿಯೋಗ ಇವುಗಳನ್ನು ಹೇಳಿ ಇಷ್ಟವಾದ ಎರಡು ಅಂಕೆಗಳನ್ನು ಕಂಡುಹಿಡಿಯುವ ಕ್ರಮಕ್ಕೆ ಸಂಕ್ರಮಗಣಿತವೆನ್ನುವರು. ಈವಿಧದ ಗಣಿತದಲ್ಲಿ ಯೋಗದಿಂದ ವಿಯೋಗವನ್ನು ಕಳೆದು ಎರಡನ್ನೂ ಅರ್ಧಮಾಡಿದರೆ ಆ ಉದ್ದಿಷ್ಟವಾದ ಎರಡು ಅಂಕೆಗಳು ಗೊತ್ತಾಗುವುವು.

೩೨. ಈಗ ವರ್ಗಕರ್ಮ ಗಣಿತಕ್ರಮವನ್ನು ತಿಳಿಸುವೆನು, ಹೇಗೆಂದರೆ ಇಷ್ಟವಾದ ಸಂಖ್ಯೆಯೊಂದನ್ನು ಕಲ್ಪಿಸಿಕೊಂಡು, ಅದಕ್ಕೆ ವರ್ಗವನ್ನು

ದ್ವಿಗುಣೇಷ್ಟಹೃತಂ ರೂಪಂ ಶ್ರೇಷ್ಟಂ ಪ್ರಾಗ್ರೂಪಕಂ ಪರಂ ।
ವರ್ಗಯೋಗಾಂತರೇ ವ್ಯೇಕೇ ರಾಶ್ಯೋರ್ವರ್ಗೌಸ್ತ ಏತಯೋಃ ॥ ೩೩ ॥

ಇಷ್ಟವರ್ಗಕೃತಿಶ್ಚೇಷ್ಟಘನೋಷ್ಟಘ್ನೌ ಚ ಸೈಕಕೌ ।
ರಾಶೀ ಸ್ಯಾತಾಮುಭೇಃ ವ್ಯಕ್ತೇ ಗಣಿತೇ ವ್ಯಕ್ತಮೇವ ಚ ॥ ೩೪ ॥

ಗುಣಘ್ನಮೂಲೋನಯುತಃ ಸಗುಣಾರ್ಧೇ ಕೃತಂ ಪದಂ ।
ದೃಷ್ಟಸ್ಯ ಚ ಗುಣಾರ್ಧೋನ ಯುತಂ ವರ್ಗೀಕೃತಂ ಗುಣಃ ॥ ೩೫ ॥

---

ಮಾಡಿ, ಬಂದ ವರ್ಗವನ್ನು ಎಂಟರಿಂದ ಗುಣಿಸಿ ಒಂದನ್ನು ಕಳೆದು, ಇಷ್ಟ ಸಂಖ್ಯೆಯಿಂದ ಭಾಗಿಸಬೇಕು. ಬರುವ ಭಾಗಲಬ್ಧವೇ ಒಂದು ಸಂಖ್ಯೆಯಾಗುವುದು. ಪುನಃ ಅದರ ವರ್ಗಕ್ಕೆ ಒಂದನ್ನು ಸೇರಿಸಿ ಅರ್ಧಮಾಡಿದರೆ ಮತ್ತೊಂದು ರಾಶಿಯು ದೊರಕುವುದು. ಈ ರೀತಿಯಾದ ಕ್ರಮವನ್ನು, ಪ್ರಶ್ನೆ ಮಾಡುವವನು ವರ್ಗಸಂಖ್ಯೆಯ ಯೋಗವಿಯೋಗಗಳ ಮೊತ್ತವನ್ನು ಕೊಟ್ಟು ಮೂಲಸಂಖ್ಯೆಯನ್ನು ಕೇಳುವಾಗ ಉಪಯೋಗಿಸಬೇಕು.

೩೩. ವರ್ಗರಾಶಿಯನ್ನೇ ಕಂಡುಹಿಡಿಯಬೇಕಾದರೆ, ಒಂದು ಎಂಬುವನ್ನೇ ರೂಪವೆಂದು ಭಾವಿಸಿ, ದ್ವಿಗುಣವಾದ ಇಷ್ಟಸಂಖ್ಯೆಯಿಂದ ಅದನ್ನು ಗುಣಿಸಿಕೊಳ್ಳಬೇಕು. ಅದಕ್ಕೆ ಇಷ್ಟಸಂಖ್ಯೆಯನ್ನು ಸೇರಿಸಿದರೆ ಬರುವ ಲಬ್ಧವೇ ಒಂದು ರಾಶಿಯಾಗುವುದು. ಎರಡು ರಾಶಿಗಳ ವರ್ಗಯೋಗ ಮತ್ತು ವರ್ಗಾಂತರ ಇವುಗಳಲ್ಲಿ ಒಂದನ್ನು ಕಳೆದರೆ, ಆ ಎರಡು ಸಂಖ್ಯೆಗಳೂ ಮತ್ತೊಂದರ ವರ್ಗರೂಪವಾಗುವುದು.

೩೪. ಅಥವಾ ವರ್ಗಕರ್ಮವನ್ನು ಮತ್ತೊಂದು ರೀತಿಯಲ್ಲಿಯೂ ಸಾಧಿಸಬಹುದು. ಇಷ್ಟಸಂಖ್ಯೆಯ ವರ್ಗಕ್ಕೆ ವರ್ಗವನ್ನೂ ಮತ್ತು ಘನವನ್ನೂ ಕಂಡುಹಿಡಿದು, ಅವುಗಳನ್ನು ಎಂಟರಿಂದ ಗುಣಿಸಿ, ಒಂದನ್ನು ಸೇರಿಸಿದರೆ ಅದು ಪ್ರಥಮರಾಶಿಯಾಗುವುದು. ಈರೀತಿ ವ್ಯಕ್ತ, ಅಥವಾ ಅವ್ಯಕ್ತಸಂಖ್ಯೆಗಳ ವರ್ಗಕರ್ಮವನ್ನು ಕಂಡುಹಿಡಿಯಬಹುದು.

೩೫. ಗುಣಕರ್ಮದಿಂದ ಇಷ್ಟರಾಶಿಯನ್ನು ಕಂಡುಹಿಡಿಯುವ ಕ್ರಮ : ಪ್ರಶ್ನೆಮಾಡುವವನು ಅವ್ಯಕ್ತವಾದ ಒಂದು ರಾಶಿಯನ್ನು ವ್ಯಕ್ತವಾದ ಒಂದು

**ಯದಾ ಲವೋನಯುಗಾಶಿರ್ದೃಶ್ಯಂ ಭಾಗೋನಯುಗ್ಭವಾ ।**
**ಭಕ್ತಂ ತಥಾ ಮೂಲಗುಣಂ ತಾಭ್ಯಾಂ ಸಾಧ್ಯೋಥ ಪೋಕ್ತವತ್ ॥ ೩೬ ॥**

**ಪ್ರಮಾಣೇಚ್ಛೇ ಸಜಾತೀಯೇ ಆದ್ಯಂತೇ ಮಧ್ಯಗಂ ಫಲಂ ।**
**ಇಚ್ಛಾಘ್ನಮಾದ್ಯಹೃತ್ಸ್ವೇಷ್ಟಂ ಫಲಂ ವ್ಯಸ್ತೇ ವಿಪರ್ಯಯಾತ್ ॥ ೩೭ ॥**

---

ಅಂಕಿಯನ್ನೂ ಹೇಳಿ, ರಾಶಿಯ ಸಂಖ್ಯೆಯನ್ನು ಸ್ಪಷ್ಟವಾಗಿ ಹೇಳುವಂತೆ ಪ್ರಶ್ನಿಸುವನು. ಆಗ ಪ್ರಾಶ್ನಿಕನು ಹೇಳುವ ಗುಣಸಂಖ್ಯೆಯನ್ನು ಅರ್ಧಮಾಡಿ, ಅದಕ್ಕೆ ವರ್ಗವನ್ನು ಕಂಡು ಹಿಡಿದು, ಗುಣದಿಂದ ಗುಣಿತವಾದ ಮೂಲವನ್ನು ಒಂದುಕಡೆ ಕಳೆದು ಮತ್ತೊಂದುಕಡೆ ಕೂಡಬೇಕು. ಆ ಎರಡು ರಾಶಿಗಳಿಗೂ ವರ್ಗಮಾಡಿದರೆ ಪ್ರಾಶ್ನಿಕನು ಕೇಳಿದ ಪ್ರಶ್ನೆಗೆ ಸರಿಯಾಗುವ ಸಂಖ್ಯೆಯು ಉತ್ತರರೂಪವಾಗಿ ಲಭಿಸುವುದು.

೩೬. ಯಾವಾಗ ಆ ರಾಶಿಯು ಅಂಶದಿಂದ ಯುತವಾಗಿ ಅಥವಾ ವಿಯುತವಾಗಿ ಆಗುವುದೋ ಆ ಸಂಖ್ಯೆಯೇ ದೃಶ್ಯರಾಶಿಯೆನಿಸುವುದು. ಹಾಗೆಯೇ ಅದನ್ನು ಸರಿನೋಡಬೇಕಾದರೆ ಮೂಲಗುಣಕ್ಕೆ ಭಾಗವನ್ನು ಕೂಡಿಸಿ ಒಂದುಕಡೆ ಕಳೆದು ಒಂದನ್ನು ಮತ್ತೊಂದರಿಂದ ಭಾಗಿಸಿದ ಪಕ್ಷದಲ್ಲಿ ಮೊದಲು ಕೊಟ್ಟ ಸಂಖ್ಯೆಯೇ ಲಬ್ಧವಾಗುವುದು.

೩೭. ಇನ್ನು ತ್ರೈರಾಶಿಕಗಣಿತವು ವಿವರಿಸಲ್ಪಡುವುದು. ತ್ರೈರಾಶಿಯೆಂದರೆ, ಮೂರುಸಂಖ್ಯೆಗಳಿಂದ ನಾಲ್ಕನೆಯ ಸಂಖ್ಯೆಯನ್ನು ಕಂಡುಹಿಡಿಯುವುದು ಎಂದರ್ಥ. ಅದರಲ್ಲಿ ಪ್ರಮಾಣ ಮತ್ತು ಇಚ್ಛಾರಾಶಿಗಳು ಒಂದೇ ಜಾತಿಯವುಗಳಾಗಿರಬೇಕು. ಉದಾ.—(೪) ನಾಲ್ಕು ಹಣ್ಣುಗಳಿಗೆ (೬) ರೂ. ಗಳಾದರೆ, (೧೦) ಹತ್ತು ಹಣ್ಣುಗಳಿಗೆ ಎಷ್ಟು? ಈ ಲೆಕ್ಕದಲ್ಲಿ ನಾಲ್ಕು ಮತ್ತು ಹತ್ತು ಎಂಬ ಸಂಖ್ಯೆಗಳು ಪ್ರಮಾಣ ಮತ್ತು ಇಚ್ಛಾರಾಶಿಗಳು. ಇವೆರಡೂ ಹಣ್ಣುಗಳ ಎಣಿಕೆಗಳನ್ನು ತೋರಿಸುವ ಸಮಾನಜಾತಿಯ ಅಂಕಿಗಳಾಗಿರುವುವು. ಉತ್ತರವೇ ಫಲರಾಶಿಯೆನಿಸುವುದು. ಇದರಲ್ಲಿ ಆದ್ಯಂತಗಳಲ್ಲಿ ಪ್ರಮಾಣೇಚ್ಛಾರಾಶಿಗಳನ್ನಿಟ್ಟು ಮಧ್ಯೆ ಫಲರಾಶಿಯನ್ನು ಬರೆಯಬೇಕು. ಇಚ್ಛಾರಾಶಿಯನ್ನು ಫಲರಾಶಿಯಿಂದ ಗುಣಿಸಿ ಪ್ರಮಾಣರಾಶಿಯಿಂದ ಭಾಗಿಸಿದರೆ ಉತ್ತರವು ದೊರೆಯುವುದು.

ಪಂಚರಾಶ್ಯಾದಿಕೇಽನ್ಯೋಽನ್ಯಪಕ್ಷಂ ಕೃತ್ವಾ ಫಲಚ್ಛಿದಾಂ ।
ಬಹುರಾಶಿವಧಂ ಭಕ್ತೇ ಫಲಂ ಸ್ವಲ್ಪವಧೇನ ಚ ॥ ೩೮ ॥

ಇಷ್ಟಕರ್ಮವಧೇಮೂಲಂ ಚ್ಯುತಂ ಮಿಶ್ರಾತ್ಕಲಾಂತರೇ ।
ಮಾನಘ್ನಕಲಶ್ಚಾತೀತಕಾಲಾಘ್ನಫಲಸಂಹೃತಾಃ ॥ ೩೯ ॥

ಸ್ವಯೋಗಭಕ್ತಾನಿಘ್ನಾಃ ಸ್ಯುಃ ಸಂಪ್ರಯುಕ್ತದಲಾನಿ ಚ ।
ಬಹುರಾಶಿಫಲಾತ್ಸ್ವಲ್ಪರಾಶಿಮಾಸಫಲಂ ಬಹು ॥ ೪೦ ॥

---

೩೮. ಇನ್ನು ಪಂಚರಾಶಿಗಣಿತ ಕ್ರಮವನ್ನು ವಿವರಿಸುವೆನು—ಪಂಚರಾಶಿ, ಅಂದರೆ ಐದು ರಾಶಿಗಳಿಂದ ಆರನೆಯ ರಾಶಿಯನ್ನು ಕಂಡುಹಿಡಿಯುವ ಕ್ರಮವೆಂದು ತಿಳಿಯಬೇಕು. ಪಂಚರಾಶಿ, ಸಪ್ತರಾಶಿ, ನವರಾಶಿ ಮೊದಲಾದ ಗಣಿತಕ್ರಮದಲ್ಲಿ ಫಲರಾಶಿಗಳನ್ನೂ, ಪ್ರಮಾಣೇಚ್ಛಾರಾಶಿಗಳನ್ನೂ ವಿಭಾಗಿಸಿಕೊಂಡು ಬಹುರಾಶಿಗಳನ್ನೆಲ್ಲಾ ಗುಣಿಸಿದ ಲಬ್ಧವನ್ನು, ಅಲ್ಪರಾಶಿಜವಾದ ಗುಣಲಬ್ಧದಿಂದ ಭಾಗಿಸಿದರೆ ಬರುವ ಸಂಖ್ಯೆಯೇ ಉದ್ದಿಷ್ಟಸಂಖ್ಯೆಯೆನಿಸುವುದು.

೩೯-೪೦. ಮಿಶ್ರಕವ್ಯವಹಾರಗಣಿತ ಕ್ರಮ—ಮಿಶ್ರಕವ್ಯವಹಾರವೆಂದರೆ, ಮೂಲಧನ, ಬಡ್ಡಿ, ಕಾಲ ಇವುಗಳಿಂದ ಮೊತ್ತವನ್ನು ಕಂಡುಹಿಡಿಯುವುದು. ಇದೇರೀತಿ ಕಾಲ, ಬಡ್ಡಿ, ಅಸಲು ಇವುಗಳನ್ನೂ ಹಾಗೆಯೇ ಕಾಲಮಾನಗಳನ್ನೂ ನಿಷ್ಕರ್ಷಿಸುವುದು. ಇವುಗಳಿಗಾಗಿ ಉಪಯೋಗಿಸುವ ಗಣಿತಕ್ಕೆ ಮಿಶ್ರವ್ಯವಹಾರಗಣಿತವೆಂದು ಹೆಸರು. ಈ ಗಣಿತದಲ್ಲಿ ಪ್ರಮಾಣಕಾಲದಿಂದ ಫಲಸಂಖ್ಯೆಯನ್ನು ಗುಣಿಸಿ, ಮಿಶ್ರಸಂಖ್ಯೆಯನ್ನು ಸೇರಿಸಿ, ಮೂಲಕಲೆಯಿಂದ ಭಾಗಿಸಿದರೆ, ಬರುವ ಸಂಖ್ಯೆಯೇ ಕಾಲರೂಪವಾದ ಉತ್ತರವಾಗುವುದು. ಅಥವಾ ಇಷ್ಟಕರ್ಮದಲ್ಲಿ ಹೇಳಿದಂತೆ ವರ್ಗ ಮತ್ತು ಮೂಲ ಇವುಗಳನ್ನನುಸರಿಸುವುದರಿಂದಲೂ, ಇಷ್ಟಸಂಖ್ಯೆಯನ್ನು ಕಂಡುಹಿಡಿಯಬಹುದು. ಹೀಗೆ ಇದಕ್ಕೆ ಎರಡು ದಾರಿಯಿರುವುದು.

ಚೇದ್ರಾಶಿವಿವರಂ ಮಾಸಫಲಾಂತರಹೃತಂ ಚ ಯಃ ।
ಕ್ಷೇಪಾ ಮಿಶ್ರಹತಾಃ ಕ್ಷೇಪಯೋಗಭಕ್ತಾಃ ಫಲಾನಿ ಚ ॥ ೪೧ ॥

ಭಜೇಚ್ಛಿದೋಂಶೈಸ್ತೈರ್ಮಿಶ್ರೈ ರೂಪಂ ಕಾಲಶ್ಚ ಪೂರ್ತಿಕೃತ್ ।
ಪಣ್ಯೋಗಚ್ಛೇತ್ಸಮೇಧ್ಯರ್ಧ್ಯೇ ಸಮೇ ವರ್ಗೋಧ್ರಿಃಶೇತ್ಸ್ಯತಃ ॥ ೪೨ ॥

೪೧. ಇಲ್ಲಿ ಕ್ಷೇಪರಾಶಿಯೆಂದರೆ .... ಅಸಲು (1)
ಮಿಶ್ರರಾಶಿಯೆಂದರೆ .... ಮೊತ್ತ (2)
ಫಲವೆಂದರೆ .... ಬಡ್ಡಿ (3)

ಮೂರುಜನರು ಸ್ವಲ್ಪಸ್ವಲ್ಪ ತಮ್ಮ ಪ್ರಕ್ಷೇಪನಿಧಿಯಿಂದ (ಮೂಲ ಧನದಿಂದ) ಒಂದು ವ್ಯಾಪಾರವಮಾಡಿ, ಒಟ್ಟಾದ ಒಂದು ಮೊತ್ತವನ್ನು ಪಡೆಯು ವರು. ಆಗ ಆ ಮೂರು ಮುಂದಿಗೂ ಫಲದ ಹಂಚಿಕೆಯು ಹೇಗಾಗಬೇಕೆಂಬು ದನ್ನು ವಿವರಿಸುವುದೇ ಈ ಗಣಿತವಿಧಿಯು. ಇದರಲ್ಲಿ ಪ್ರಕ್ಷೇಪಕರಾಶಿಗಳನ್ನು ಮಿಶ್ರರಾಶಿಯಿಂದ ಗುಣಿಸಿ, ಪ್ರಕ್ಷೇಪಗಳ ಯೋಗದಿಂದ ವಿಭಾಗಿಸಿದರೆ ಫಲವು ಪ್ರತ್ಯೇಕಪ್ರತ್ಯೇಕವಾಗಿ ಬರುವುದು.

೪೨. ಬಾವಿಯೇ ಮೊದಲಾದ ಸ್ಥಳಗಳಲ್ಲಿ ನೀರು ತುಂಬುವ ಕಾಲ ವನ್ನು ಕಂಡುಹಿಡಿಯುವ ಕ್ರಮವು ಹೇಗೆಂದರೆ—

ಬೇರೆಬೇರೆ ಜಲರಾಶಿಯು ಒಂದು ಬಾವಿಯನ್ನು ಭಿನ್ನಭಿನ್ನಕಾಲಗಳಲ್ಲಿ ತುಂಬುವುದಾದರೆ, ಆ ಜಲರಾಶಿಯು ಒಟ್ಟಾಗಿ ಕಲೆತು ತುಂಬುವುದಾದರೆ ಎಷ್ಟುಕಾಲ ಬೇಕು? ಎಂಬ ಪ್ರಶ್ನೆಯಲ್ಲಿ ಛೇದವನ್ನು ಅಂಶಗಳಿಂದ ಭಾಗಿಸ ಬೇಕು. ಹಾಗೆಯೇ ಮಿಶ್ರವಾದ ರಾಶಿಯಿಂದ ರೂಪವನ್ನು ಭಾಗಿಸಿದರೆ, ಬರುವ ಲಬ್ಧವೇ ಕಾಲರೂಪವಾಗಿ ಬರುವುದು. ಹಾಗೆಯೇ ಕ್ರಯವಿಕ್ರಯ ವಸ್ತುಗಳನ್ನು ಕಂಡುಹಿಡಿಯಲು, ಮೂಲ್ಯವನ್ನು ಭಾಗದಿಂದ ಗುಣಿಸಿ ಪಣ್ಯ ವಸ್ತುಸಂಖ್ಯೆಯಿಂದ ಭಾಗಿಸಿದರೆ ಬರುವ ಸಂಖ್ಯೆಯ ಅರ್ಧಭಾಗವೇ ಇಷ್ಟವಾದ ಪಣ್ಯವಸ್ತುವಿನ ಸಂಖ್ಯೆಯಾಗುವುದು.

ವ್ಯಸ್ತಂ ಗಚ್ಛೇತಂ ಫಲಂ ಯದ್ಗುಣವರ್ಗ ಭಜಂ ಹಿ ತತ್ ।
ವ್ಯೇಕಂ ವ್ಯೇಕಗುಣಾಪ್ತಂ ಚ ಪ್ರಾಗ್ಘ್ನಂ ಜ್ಞಾತಂ ಗುಣೋತ್ತರೇ ॥ ೪೩ ॥

ಭುಜಕೋಟಿಕೃತೀಯೋರ್ಗಮೂಲಂ ಕರ್ಣಶ್ಚ ದೋರ್ಭವೇತ್ ।
ಶ್ರುತಕೃತ್ಯಂತರಪದಂ ಕೋಟಿರ್ದೋಃ ಕರ್ಣವರ್ಗಯೋಃ ॥ ೪೪ ॥

---

೪೩. ದ್ವಿಗುಣೋತ್ತರವಾಗಿರುವ ಅಂದರೆ ಪ್ರತಿದಿನವೂ ಎರಡರಷ್ಟಾಗುವ ಧನಸಂಖ್ಯೆಯನ್ನು ಕಂಡಹಿಡಿಯುವ ಕ್ರಮವು ಹೀಗಿರುವುದು. ಇಲ್ಲಿ ಉಪಯೋಗಿಸುವ 'ಗಚ್ಛ' ಎಂಬುದು ಸಾಂಕೇತಿಕವಾದ ಪದವೆಂದು ತಿಳಿಯಬೇಕು. ಗಚ್ಛರಾಶಿಯು ವಿಷಮವಾಗಿದ್ದರೆ ಅದರಲ್ಲಿ ಒಂದನ್ನು ಕಳೆದು, ಗುಣಿಸಬೇಕು. ಸಮವಾಗಿದ್ದರೆ ಅರ್ಧಭಾಗಮಾಡಿ ವರ್ಗಮಾಡಬೇಕು. ಹೀಗೆ ಗಚ್ಛಕ್ಷಯವಾಗುವವರೆವಿಗೂ ಕಳೆದು ಕೊನೆಯಲ್ಲಿ ಯಾವುದು ವ್ಯಸ್ತವಾಗಿರುವುದೋ ಅದರಲ್ಲಿ ಮೊದಲಿನ ಗಚ್ಛವನ್ನು ಗುಣಿಸಿದರೆ ಬರುವ ಫಲವೇ ಉತ್ತರವಾಗುವುದು.

೪೪. ಈಗ ಕ್ಷೇತ್ರಗಣಿತವು ನಿರೂಪಿತವಾಗುವುದು—

ಈ ಕ್ಷೇತ್ರಗಣಿತದಲ್ಲಿ ಕೋಟಿ, ಕರ್ಣ, ಭುಜ ಎಂಬುದಾಗಿ ಕೆಲವು ಸಂಕೇತಪದಗಳಿಂದ ರೇಖೆಗಳನ್ನು ವ್ಯಹರಿಸಬೇಕು. ತ್ರಿಭುಜ ಅಥವ ಚತುರ್ಭುಜಕ್ಷೇತ್ರಗಳಲ್ಲಿ ಇಷ್ಟವಾದ ಒಂದು ಬಾಹುವಿಗೆ 'ಭುಜವೆಂದು' ಹೆಸರು. ಅದಕ್ಕೆ ಪ್ರತಿಸ್ಪರ್ಧಿಯಾಗಿರುವ ಮತ್ತೊಂದು ಭುಜಕ್ಕೆ 'ಕೊಟಿಯೆಂದೂ,' ಅವೆರಡನ್ನೂ ಸೇರಿಸುವ ಒಂದು ರೇಖೆಗೆ 'ಕರ್ಣ' ವೆಂದೂ ಹೆಸರು. ಉದಾ—




ಅ. ಆ ರೇಖೆಯು ಭುಜವೆನಿಸುವುದು.

ಅ. ಇರೇಖೆಯು ಕೋಟಿ............

ಆ. ಇರೇಖೆಯು ಕರ್ಣ............

ಬಿಂಬಂ ತಸ್ಮಾತ್ಕರ್ಣಪದಂ ಕ್ಷೇತ್ರೇ ತ್ರಿಚತುರಸ್ರಕೇ ।
ರಾಶ್ಯೋರಂತರವರ್ಗೇಣ ದ್ವಿಘ್ನೇ ಘಾತೇ ಯುತೇ ತಯೋಃ ॥ ೪೫ ॥

ವರ್ಗಯೋಗೋಥ ಯೋಗಾಂತಹತಿರ್ವರ್ಗಾಂತರಂ ಭವೇತ್ ।
ವ್ಯಾಸ ಅಕೃತಿಸಂಕ್ಷುಗೋ ಆಸಃ ಸ್ಯಾತ್ಪರಿಧಿರ್ಮುನೇ ॥ ೪೬ ॥

ಜ್ಯಾವ್ಯಾಸಯೋಗವಿವರಾಹತಮೂಲೋನಿತೋರ್ಧಿತಃ ।
ವ್ಯಾಸಃ ಶರಃ ಶರೋನಾಚ್ಚ ವ್ಯಾಸಾಚ್ಛರಗುಣಾತ್ಪದಂ ॥ ೪೭ ॥

ಇದರಲ್ಲಿ ಯಾವುದಾದರೂ ಎರಡರ ಪ್ರಮಾಣವನ್ನು ಕೊಟ್ಟು, ಮೂರನೆಯದರ ಪ್ರಮಾಣವನ್ನು ಕೇಳುವುದೇ ಕ್ಷೇತ್ರಗಣಿತ ಪ್ರಶ್ನೆ. ಇದರಲ್ಲಿ ಭುಜ, ಕೋಟಿಗಳ ವರ್ಗಯೋಗಕ್ಕೆ ಪದವನ್ನು ಕಂಡುಹಿಡಿದರೆ, ಅದು ಕರ್ಣ ಪ್ರಮಾಣವಾಗುವುದು. ಕರ್ಣ ಭುಜಗಳ ವರ್ಗಾಂತರವನ್ನು ಮಾಡಿಕೊಂಡು ಮೂಲವನ್ನು ತೆಗೆದರೆ ಬರುವುದೇ ಕೋಟಿರೂಪವಾದ ಉತ್ತರವಾಗುವುದು. ಹೀಗೆಯೇ ಕೋಟಿ ಮತ್ತು ಕರ್ಣಗಳ ವರ್ಗಾಂತರ ಮೂಲವೇ ಭುಜವೆನಿಸುವುದು.

೪೫. ತ್ರಿಕೋಣ, ಅಥವಾ ಚತುಷ್ಕೋಣಗಳಲ್ಲಿ ಕರ್ಣದ ವರ್ಗವನ್ನು, ಭುಜಕೋಟಿಗಳ ವರ್ಗ ಸಂಖ್ಯೆಯಿಂದಲೂ, ಎರಡರಿಂದಲೂ ಗುಣಿಸಿ, ಮೂಲವನ್ನು ತೆಗೆದರೆ, ಒಟ್ಟು ಚತುರಸ್ರದ ಪರಿಮಿತಿಯು ಗೊತ್ತಾಗುವುದು.

೪೬-೪೭. ವೃತ್ತಕ್ಷೇತ್ರದಲ್ಲಿ ಶರವನ್ನು ಕಂಡುಹಿಡಿಯಬೇಕಾದರೆ, ಜ್ಯಾ ಮತ್ತು ವ್ಯಾಸ, ಇವುಗಳ ಯೋಗ ಮತ್ತು ಅಂತರ ಇವುಗಳನ್ನು ಗುಣಿಸಿ ಮೂಲವನ್ನು ತೆಗೆದು ಅದರಲ್ಲಿ ವ್ಯಾಸಪ್ರಮಾಣವನ್ನು ಕಳೆದು ಅರ್ಧಿಸಬೇಕು. ಅದರಿಂದಲೇ ಶರವು ದೊರೆಯುವುದು. ವ್ಯಾಸಾರ್ಧವೇ ತ್ರಿಜ್ಯಾ. ಈ ತ್ರಿಜ್ಯೆಯಿಂದಲೇ ಪರಿಧಿಯನ್ನೂ ಆನಯನಮಾಡಬಹುದು. ವ್ಯಾಸಪ್ರಮಾಣವನ್ನು ಶರದಿಂದ ಕಳೆದು, ಅದನ್ನೇ ಶರಪ್ರಮಾಣದಿಂದ ಗುಣಿಸಿ, ಅದಕ್ಕೆ ಮೂಲವನ್ನು ಕಂಡುಹಿಡಿದು, ಬಂದುದನ್ನು ಎರಡರಿಂದ ಗುಣಿಸಿದರೆ ಜ್ಯಾ ಪ್ರಮಾಣವು ಗೊತ್ತಾಗುವುದು. ಹಾಗೆಯೇ ಜ್ಯಾ ಪ್ರಮಾಣವನ್ನು ಅರ್ಧಮಾಡಿ, ಶರದಿಂದ

ದ್ವಿಘ್ನಂ ಜೀವಾಥ ಜೀವಾರ್ಧ್ಧವರ್ಗೇ ಶರಹೃತೇ ಯುತೇ ।
ವ್ಯಾಸೋಪ್ಸತೇ ಭವೇದೇವಂ ಪ್ರೋಕ್ತಂ ಗಣಿತಕೋವಿದೈಃ ॥ ೪೮ ॥

ಚಾಪೋನ ನಿಘ್ನಃ ಪರಿಧಿಃ ಪ್ರಾಗಾಂಕಃ ಪರಿಧೇಃ ಕೃತೇ ।
ತುರ್ಯಾಂಶೇನ ಶರಘ್ನೇನಾಘೋನಿನಾಘಂ ಚತುರ್ಗಣಂ ॥ ೪೯ ॥

ವ್ಯಾಸಘ್ನಂ ಪ್ರಭಜೇದ್ವಿಪ್ರ ಜ್ಯಕಾ ತಜ್ಜಾಯತೇ ಸ್ಫುಟಾ ।
ಜ್ಯಾಂಘ್ರೀಷುಘ್ನೋವೃತ್ತವರ್ಗೋಬ್ಧಿಘ್ನವ್ಯಾಸಾಢ್ಯಮೌರ್ವಿಹೃತ್ ॥ ೫೦ ॥

ಲಬ್ಧೋನವೃತ್ತವರ್ಗೋದ್ರಿಪದೇರ್ಧಾತ್ಪತಿತೇ ಧನುಃ ।
ಸ್ಥೂಲಮಧ್ಯಾಪ್ಯವನ್ನವೇಧೋ ವೃತಾಂಕಾಶೇಷಭಾಗಕಃ ॥ ೫೧ ॥

ಭಾಗಿಸಿ, ಬಂದ ಲಬ್ಧಕ್ಕೆ ಶರವನ್ನು ಕೂಡಿದರೆ, ವ್ಯಾಸಪ್ರಮಾಣವು ದೊರೆಯುವುದು. ಹೀಗೆ ಶರ, ವ್ಯಾಸ, ಪರಿಧಿ ಇವುಗಳನ್ನು ಪರಸ್ಪರವಾಗಿ ಕಂಡುಹಿಡಿಯಬಹುದು.

೪೯–೫೧. ವೃತ್ತಕ್ಷೇತ್ರದಲ್ಲಿ ಚಾಪದಿಂದ ಪರಿಧಿಪ್ರಮಾಣವನ್ನು ಕಳೆದು, ಆದರಿಂದ ಪರಿಧಿಪ್ರಮಾಣವನ್ನು ಗುಣಿಸಿದರೆ, ಬರುವ ಸಂಖ್ಯೆಗೆ ಪ್ರಥಮವೆಂದು ಹೆಸರು. ಪರಿಧಿಯ ವರ್ಗದ ನಾಲ್ಕನೆಯ ಒಂದುಭಾಗವನ್ನು ಐದರಿಂದ (5) ಗುಣಿಸಿ, ಪ್ರಥಮಪ್ರಮಾಣದಿಂದ ಕಳೆದು, ಚತುರ್ಗುಣಿತವಾದ (ನಾಲ್ಕರಿಂದ ಗುಣಿಸಲ್ಪಟ್ಟಿರುವ) ವ್ಯಾಸಪ್ರಮಾಣದಿಂದ ಗುಣಿಸಿ, ಪ್ರಥಮವನ್ನು ಭಾಗಿಸಿದರೆ, ಬರುವ ಸಂಖ್ಯೆಗೆ ಜ್ಯಕಾಂಶವೆಂದು ಹೆಸರು. ಇದೇ ಸ್ಥೂಲಜ್ಯಾವನ್ನು ಕಂಡುಹಿಡಿಯುವ ಕ್ರಮ. ಇನ್ನು ಚಾಪವನ್ನು ಕಂಡುಹಿಡಿಯುವ ಪ್ರಕಾರಾಂತರವು ಹೇಗೆಂದರೆ, ಜ್ಯಾಸಂಖ್ಯೆಯ ನಾಲ್ಕನೆಯ ಒಂದುಭಾಗವನ್ನು ಐದರಿಂದ ಗುಣಿಸಿ ಪರಿಧಿಯ ವರ್ಗಕ್ಕೆ ಸೇರಿಸಬೇಕು. ಹಾಗೆಯೇ ವ್ಯಾಸಪ್ರಮಾಣದ ಚತುರ್ಥಾಂಶದಿಂದ ಯುಕ್ತವಾದ ಜ್ಯಾಸಂಖ್ಯೆಯಿಂದ ಭಾಗಿಸಿ, ಅದರಿಂದ ಪರಿಧಿಯ ವರ್ಗಚತುರ್ಥಭಾಗವನ್ನು ಮತ್ತೆ ಭಾಗಿಸಿದರೆ, ಉಳಿಯುವ ಶೇಷವೇ ಧನುಸ್ಸಾಗುವುದು. ಇದನ್ನೇ ಚಾಪವೆಂಬ ಹೆಸರಿನಿಂದಲೂ ವ್ಯವಹರಿಸುವರು.

ವೃತ್ತಾಂಗಾಂಶಕೈಶಿರ್ವೇಧನಿಘ್ನೇಯನಕರಾಮಿತಾ ।
ವಾರಿವ್ಯಾಸಹತಂ ದೈರ್ಘ್ಯಂ ಬೋಧಾಂಗುಲಹತಂ ಪುನಃ ॥ ೫೨ ॥

ಖಬೇಂದುರಾಮವಿಹತಂ ಮಾನಂ ದ್ರೋಣಾದಿವಾರಿಣಃ ।
ವಿಸ್ತಾರಾಯಾಮವೇಧಾನಾಮಂಗುಲ್ಯೋನ್ಯೋನ್ಯನಾಡಿಘ್ನಾಃ ॥ ೫೩ ॥

ರಸಾಂಕಾಭ್ರಾಬ್ಧಿಭಿರ್ಭಕ್ತಾ ಧಾನ್ಯೇ ದ್ರೋಣಾದಿಕಾಮಿತಿಃ ।
ಉತ್ಸೇಧವ್ಯಾಸದೈರ್ಘ್ಯಾಣಾಮಂಗುಲ್ಯಾನ್ಯಸ್ಯ ನೋ ದ್ವಿಜ ॥ ೫೪ ॥

---

೫೨-೫೪. ಈಗ ಖಾತವ್ಯವಹಾರ, ಎಂದರೆ ವಿಷಮಾಕಾರವಾದ ಭೂಮಿಯನ್ನು ಸಮಾಕಾರವಾಗಿ ಮಾಡಿ ಅದರ ಘನಪರಿಮಾಣವನ್ನೂ ಮತ್ತು ವಿಷಮಾಕಾರದ ಘನಪರಿಮಾಣವನ್ನೂ ಕಂಡುಹಿಡಿಯುವ ಕ್ರಮ. ಈ ವಿಧವಾದ ಗಣಿತವು ಈಗ ವಿವರಿಸಲ್ಪಡುವುದು :—

ಒಂದು ಪ್ರದೇಶದ ವಿಸ್ತಾರವನ್ನು ಅಂದರೆ ಹಳ್ಳ, ತಿಟ್ಟು, ಇವೆಲ್ಲವನ್ನೂ ಸೇರಿಸಿ, ಅಗಲದ ಪರಿಮಾಣವನ್ನು ಕಂಡುಹಿಡಿಯಬೇಕು. ಮತ್ತು ಅದರಲ್ಲಿ ಅಡಕವಾಗಿರುವ ನೀರಿನ ಪ್ರಮಾಣವನ್ನೂ ಕಂಡುಹಿಡಿಯಲು ಅನುಕೂಲವಾಗುವ ಗಣಿತವು ಈರೀತಿಯಾಗಿರುವುದು :—

ವೃತ್ತಾಕಾರವಾದ ಬಾವಿಯ ವೇಧಪ್ರಮಾಣವನ್ನು ಅಂಗುಲ್ಯಾತ್ಮಕವಾಗಿ ಬದಲಾಯಿಸಿಕೊಂಡು, ಆ ಬಾವಿಯಲ್ಲಿರುವ ನೀರಿನ ವ್ಯಾಸದಿಂದ, ಆ ಅಂಗುಲಗಳನ್ನು ಗುಣಿಸಿ, ಉದ್ದದ ಅಳತೆಯನ್ನು (೩೧೦೦) ಮೂರುಸಾವಿರದ ನೂರರಿಂದ ಗುಣಿಸಿದರೆ ಬರುವ ಲಬ್ಧವು ನೀರಿನ ದ್ರೋಣರೂಪವಾಗಿ ಪರಿಣತವಾಗುವುದು. ಒಂದು ಧಾನ್ಯರಾಶಿಯ ಉದ್ದ ಮತ್ತು ಅಗಲ ಇವುಗಳ ಅಳತೆಯನ್ನು ಅಂಗುಲರೂಪವಾಗಿ ಮಾಡಿಕೊಂಡು, ಪರಸ್ಪರವಾಗಿ ಗುಣಿಸಿ, ಬಂದ ಲಬ್ಧವನ್ನು (೪೦೯೬) ನಾಲ್ಕುಸಾವಿರದ ತೊಂಬತ್ತಾರರಿಂದ ಭಾಗಿಸಿದರೆ ಬರುವ ಅಳತೆಯು ದ್ರೋಣ (ಬಳ್ಳ) ರೂಪವಾಗಿ ದೊರೆಯುವುದು. ರಾಶಿಯ ವ್ಯಾಸಾದಿಗಳನ್ನು ಎಂದಿಗೂ ಅಂಗುಲಿರೂಪವಾಗಿ ಎಣಿಸಕೂಡದು.

ಮಿಥೋಘ್ನಾ ತಿಭಜೇದ್ರಾಶೇಸ್ಸ್ಯಾದ್ದ್ರೋಣಾದಿಮಿತಿರ್ಘನೇತ್ ।
ವಿಸ್ತಾರಾದ್ಯಂಗುಲಾನ್ಯೇವಂ ಮಿಥೋಘ್ನಾನ್ಯಪಸಾಂ ಭವೇತ್ ॥ ೫೭ ॥

ವಾಣೇಭ ಮಾರ್ಗಣೈರ್ಲಬ್ಧಂ ದ್ರೋಣಾದ್ಯಂ ಮಾನಮಾದಿಶೇತ್ ।
ದೀಪಶಂಕುತಲಚ್ಛಿಘ್ನಃ ಶಂಕುರ್ಭಾವಂ ಭವೇನ್ನರೇ ॥ ೫೮ ॥

ನರೋ ನ ದೀಪಕಶಿಖೌಚ್ಯಭಕ್ತೋ ಹ್ಯಥ ಭೋದ್ಯನೇ ।
ಶಂಕೌ ನ್ಯದೀಪಾಧಶ್ಛಿದ್ರಘ್ನ್ಯೈರ್ದೀಪೌಚ್ಯಂ ನರಾನ್ವಿತೇ ॥ ೫೯ ॥

ವಿಶಂಕುದೀಪೌಚ್ಯಗುಣಾಚ್ಛಾಯಾ ಶಂಕೂದ್ಧೃತಾ ಭವೇತ್ ।
ದೀಪಶಂಕ್ವಂತರಂ ಚಾಥ ಚ್ಛಾಯಾಗ್ರವಿವರಘ್ನಥಾ ॥ ೬೦ ॥

೫೭-೬೦. ಎರಡುರಾಶಿಗಳ ದ್ರೋಣಾದಿಮಾನಗಳನ್ನು ಪರಸ್ಪರವಾಗಿ ಗುಣಿಸಿ, ಅವುಗಳ ವಿಸ್ತಾರಾದಿಗಳಿಂದ ಅಂಗುಲರೂಪವಾಗಿ ಬದಲಾಯಿಸಿ ಕೊಂಡು ಭಾಗಿಸಿದರೆ, ಬರುವ ಲಬ್ಧವು ಎರಡುರಾಶಿಗಳ ದೈರ್ಘ್ಯಪ್ರಮಾಣ ವಾಗುವುದು. ನಂತರ ಆ ಅಂಗುಲಗಳನ್ನು (೫೮೫) ಐನೂರೆಂಭತ್ತೈದರಿಂದ ಭಾಗಿಸಿದರೆ ಬರುವ ಲಬ್ಧವು ರಾಶಿಯ ದ್ರೋಣರೂಪವಾಗುವುದು. ಒಂದು ದೀಪದಕಂಬವನ್ನಿಟ್ಟು ಆ ದೀಪದ ಕಂಬದ ನೆರಳು ಎಷ್ಟು ಪ್ರಮಾಣವಿದೆಯೆಂಬು ದನ್ನು, ಈ ಗಣಿತಕ್ರಮದಿಂದ ಅನಯನಮಾಡಬಹುದು. ದೀಪದ ತಲಭಾಗದ ಮತ್ತು ಶಂಕುವಿನ ತಲಭಾಗದ ಮಧ್ಯಭೂಮಿಯ ಪ್ರಮಾಣವನ್ನು ಶಂಕು ಪ್ರಮಾಣದಿಂದ ಗುಣಿಸಿ, ಇದನ್ನು ದೀಪ ಮತ್ತು ಅದರ ಕಂಬದ ಅಂತರದಿಂದ ಭಾಗಿಸಿದರೆ, ಆ ದೀಪದ ನೆರಳಿನ ಪ್ರಮಾಣವು ದೊರೆಯುವುದು. ಇನ್ನು ದೀಪದ ಪರಿಮಾಣವನ್ನು ಕಂಡುಹಿಡಿಯಬೇಕಾದರೆ, ಶಂಕುಪ್ರಮಾಣವನ್ನು, ನರ (ಶಂಕು) ಮತ್ತು ದೀಪ ಇವುಗಳ ಅಂತರದಿಂದ ಗುಣಿಸಿ, ಛಾಯಾ ಪ್ರಮಾಣದಿಂದ ಭಾಗಿಸಿ, ಬಂದ ಲಬ್ಧಕ್ಕೆ ಶಂಕುಪ್ರಮಾಣವನ್ನು ಸೇರಿಸಿದ್ದೇ ಆದರೆ, ದೀಪದ ಪ್ರಮಾಣವು ದೊರೆಯುವುದು. ಇನ್ನು ದೀಪ ಮತ್ತು ಶಂಕು ಇವುಗಳ ಅಂತರದಲ್ಲಿರುವ ಭೂಮಾನವನ್ನು ತಿಳಿಯಲು ಈರೀತಿ ಗಣಿತಮಾಡ ಬೇಕು. ಛಾಯೆಯ ಪ್ರಮಾಣವನ್ನು ಶಂಕು ಮತ್ತು ದೀಪೋಚ್ಛ್ರಯ ಇವುಗಳ

ಮಾನಾಂತರದ್ರುವದ್ಭೂಮಿಃ ಸ್ಯಾದಥೋಭೂನರಾಹತಿಃ ।
ಪ್ರಭಾಪ್ತಾ ಜಾಯತೇ ದೀಪಶಿಖೌಚ್ಚ್ಯಂ ಸ್ಯಾತ್ತ್ರಿರಾಶಿಕಾತ್ ॥ ೨೯ ॥

ಏತತ್ಸಂಕ್ಷೇಪತಃ ಪ್ರೋಕ್ತಂ ಗಣಿತೇ ಪರಿಕರ್ಮಕಂ ।
ಗ್ರಹಮಧ್ಯಾದಿಕಂ ವಕ್ಷ್ಯೇ ಗಣಿತೇ ನಾತಿವಿಸ್ತರಾನ್ ॥ ೩೦ ॥

ಯುಗಮಾನಂ ಸ್ಮೃತಂ ವಿಪ್ರ ಖಚತುಷ್ಕರದಾರ್ಣವಾ ।
ತದ್ದಶಾಂಶಾಸ್ತು ಚತ್ವಾರಃ ಕೃತಾಖ್ಯಂ ಪಾದಮುಚ್ಯತೇ ॥ ೩೧ ॥

ತ್ರಯಸ್ತ್ರೇತಾ ದ್ವಾಪರಃ ದ್ವೌ ಕಲಿರೇಕಃ ಪ್ರಕೀರ್ತಿತಃ ।
ಮನುಕೃತಾಬ್ದಸಹಿತಾ ಯುಗಾನಾಮೇಕಸಪ್ತತಿಃ ॥ ೩೨ ॥

---

ಅಂತರದಿಂದ ಗುಣಿಸಿ, ಶಂಕುವಿನ ಪ್ರಮಾಣದಿಂದ ಭಾಗಿಸಿದರೆ, ಬರುವ ಫಲವು ದೀಪನರಾಂತರರೂಪವಾಗುವುದು. ಈಗ ಛಾಯಾ ಮತ್ತು ದೀಪ ಇವುಗಳ ಅಂತರದಿಂದ ದೀಪದ ಎತ್ತರವನ್ನು ತಿಳಿಯಲು ಹೀಗೆ ಗಣಿತಮಾಡಬೇಕು. ಛಾಯಾ ಮತ್ತು ದೀಪಾಗ್ರದ ಅಂತರದಿಂದ ಛಾಯಾಪ್ರಮಾಣವನ್ನು ಗುಣಿಸಿ, ಛಾಯಾ ದೀಪಾಗ್ರಾಂತರದಿಂದ ಭಾಗಿಸಿದರೆ ಬರುವ ಲಬ್ಧವು ಭೂಪ್ರಮಾಣ ವಾಗುವುದು. ಭೂಪ್ರಮಾಣ ಮತ್ತು ಶಂಕುಪ್ರಮಾಣ ಇವೆರಡನ್ನೂ ಗುಣಿಸಿ, ಪ್ರಭೆಯಿಂದ ಭಾಗಿಸಿದರೆ ಬರುವ ಲಬ್ಧವು, ದೀಪಶಿಖೆಯ ಔನ್ನತ್ಯವಾಗುವುದು. ಇಷ್ಟನ್ನು ಒಂದುಕಡೆ ತಿಳಿದಮೇಲೆ, ಉಳಿದ ಲೆಕ್ಕಗಳನ್ನೆಲ್ಲಾ ತ್ರೈರಾಶಿಕದಿಂದ ಕಂಡುಹಿಡಿಯಬೇಕು. ತ್ರೈರಾಶಿಕವೆಂಬುದು ಸಕಲಗಣಿತಸಾಧಾರಣವಾದ ದ್ದೆಂದು ತಿಳಿಯಬೇಕು. ಇಲ್ಲಿನವರೆಗೆ ಸಂಕ್ಷೇಪವಾಗಿ ಸಕಲಗಣಿತಗಳ ಪರಿಕರ್ಮಗಳೆಲ್ಲವನ್ನೂ ಹೇಳಿರುವೆನು. ಇನ್ನು ಮುಂದೆ ಗ್ರಹಮಧ್ಯಗಳನ್ನು ಅಂದರೆ ಭಗೋಳದಲ್ಲಿ ನಡೆಯುವ ಆದಿತ್ಯಾದಿಗ್ರಹಗಳ ಚಲನವಲನಗಳನ್ನು ವಿವರಿಸುವೆನು ಕೇಳು.

೩೧-೩೨. ಮಹರ್ಷಿಯೇ! ಕೃತ, ತ್ರೇತ, ದ್ವಾಪರ ಮತ್ತು ಕಲಿ ಈ ನಾಲ್ಕು ಯುಗಗಳ ಒಟ್ಟು ಪರಿಮಿತಿಯೆಂದರೆ, ೪೩೨೦೦೦೦, ನಲವತ್ತು ಮೂರುಲಕ್ಷದ ಇಪ್ಪತ್ತುಸಾವಿರ ವರ್ಷಗಳು. ಅದರಲ್ಲಿ $\frac{೪}{೧೦}$ ಹತ್ತನೆಯ ನಾಲ್ಕು

ವಿಧೇರ್ದಿನೇ ಸ್ಯುರ್ವಿಪ್ರೇಂದ್ರ ಮನವಸ್ತು ಚತುರ್ದಶ ।
ತಾವತ್ಯೇವ ನಿಶಾ ತಸ್ಯ ವಿಪ್ರೇಂದ್ರ ಪರಿಕೀರ್ತಿತಾ ॥ ೬೩ ॥

---

ಭಾಗ, ಅಂದರೆ ೧೭೨೮೦೦೦ ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳು ಕೃತಯುಗದ ಪ್ರಮಾಣವಾಗುವುದು. ತ್ರೇತಾಯುಗದ ಪ್ರಮಾಣವು ಚತುರ್ಯುಗಪ್ರಮಾಣದ $\frac{೩}{೧೦}$ ಹತ್ತನೆಯ ಮೂರುಭಾಗ ಅಂದರೆ ೧೨೯೬೦೦೦, ಹನ್ನೆರಡುಲಕ್ಷದ ತೊಂಭತ್ತಾರುಸಾವಿರ ವರ್ಷಗಳು. ದ್ವಾಪರ ಯುಗದ ಪ್ರಮಾಣವು ಒಟ್ಟು ಯುಗಪ್ರಮಾಣದ $\frac{೨}{೧೦}$ ಹತ್ತನೆಯ ಎರಡು ಭಾಗ, ಅಂದರೆ, ೮೬೪೦೦೦ ಎಂಟುಲಕ್ಷದ ಅರವತ್ತುನಾಲ್ಕುಸಾವಿರ ವರ್ಷಗಳು. ಕಲಿಯುಗದ ಪ್ರಮಾಣವಾದರೋ $\frac{೧}{೧೦}$ ಹತ್ತನೆಯ ಒಂದುಭಾಗ ಅಂದರೆ ೪೩೨೦೦೦ ನಾಲ್ಕುಲಕ್ಷದ ಮೂವತ್ತೆರಡುಸಾವಿರ ವರ್ಷಗಳು. ಹೀಗೆ ಕೃತಾದಿ ನಾಲ್ಕು ಯುಗಗಳಿಗೂ ಭಿನ್ನಭಿನ್ನ ಸಂಖ್ಯಾಪರಿಮಿತವಾದ ವರ್ಷಗಳಿವೆ. ಮೇಲೆ ಹೇಳಿದ ವರ್ಷವಿಭಾಗ ಪಟ್ಟಿ :—

| | | | | | | |
|---|---|---|---|---|---|---|
| | | | | | | ವರ್ಷಗಳು |
| ಒಟ್ಟು ಕೃತ, ತ್ರೇತಾ, ದ್ವಾಪರ, ಮತ್ತು ಕಲಿಯುಗಗಳ ಪ್ರಮಾಣ, | | | | | | ೪೩೨೦೦೦೦ |
| ಕೃತಯುಗಪ್ರಮಾಣ= | $\frac{೪}{೧೦}$ | ಭಾಗ | = | $\frac{೪೩೨೦೦೦೦ \times ೪}{೧೦}$ | = | ೧೭೨೮೦೦೦ |
| ತ್ರೇತಾ .... .... | $\frac{೩}{೧೦}$ | ಭಾಗ | = | $\frac{೪೩೨೦೦೦೦ \times ೩}{೧೦}$ | = | ೧೨೯೬೦೦೦ |
| ದ್ವಾಪರ .... .... | $\frac{೨}{೧೦}$ | ಭಾಗ | = | $\frac{೪೩೨೦೦೦೦ \times ೨}{೧೦}$ | = | ೮೬೪೦೦೦ |
| ಕಲಿ .... .... | $\frac{೧}{೧೦}$ | ಭಾಗ | = | $\frac{೪೩೨೦೦೦೦ \times ೧}{೧೦}$ | = | ೪೩೨೦೦೦ |

ಒಂದು ಮನ್ವಂತರಕ್ಕೆ ಎಪ್ಪತ್ತೊಂದು ಮಹಾಯುಗಗಳು ಸೇರುತ್ತವೆ. ಈ ಕೃತಾದಿ ನಾಲ್ಕುಯುಗಗಳ ಒಟ್ಟು ಪ್ರಮಾಣಕ್ಕೆ ಮಹಾಯುಗವೆಂದು ಹೆಸರು.

ಸ್ವಯಂಭುವಾ ಶತಗತಾನಬ್ದಾನ್ಸಂಪಿಂಡ್ಯ ನಾರದ ।
ಖಚರಾನಯನಂ ಕಾರ್ಯಮಥವೇಷ್ಟಯುಗಾದಿತಃ ॥ ೬೪ ॥

ಯುಗೇ ಸೂರ್ಯಜ್ಞಶುಕ್ರಾಣಾಂ ಖ ಚತುಷ್ಕರದಾರ್ಣವಾಃ ।
ಕುಜಾರ್ಕಿಗುರುಶಕ್ರಾಣಾಂ ಭಗಣಾಃ ಪೂರ್ವಯಾಯಿನಾಂ ॥ ೬೫ ॥

ಇಂದೋರಸಾಗ್ನಿತ್ರಿತ್ರಿಷು ಸಪ್ತಭೂಧರಮಾರ್ಗಣಾಃ ।
ದಸ್ರತ್ರ್ಯಷ್ಟರಸಾಂಕಾಕ್ಷಿಲೋಚನಾನಿ ಕುಜಸ್ಯ ತು ॥ ೬೬ ॥

ಬುಧಶೀಘ್ರಸ್ಯ ಶೂನ್ಯರ್ತುಖಾದ್ರಿತ್ರ್ಯಂಕನಗೇಂದವಃ ।
ಬೃಹಸ್ಪತೇಃ ಖದಸ್ರಾಕ್ಷಿವೇದಷಡ್ವಹ್ನಯಸ್ತಥಾ ॥ ೬೭ ॥

---

ಇಂತಹ ಹದಿನಾಲ್ಕು ಮನ್ವಂತರಗಳಾದರೆ, ಅದು ಬ್ರಹ್ಮನಿಗೆ ಒಂದು ಹಗಲಾಗುವುದು. ಬ್ರಹ್ಮನ ರಾತ್ರಿಯೂ, ಹಗಲಿನಷ್ಟೇ ಪರಿಮಾಣವುಳ್ಳದ್ದು. ಒಟ್ಟಿನಲ್ಲಿ ಇಪ್ಪತ್ತೆಂಟು ಮನ್ವನ್ತರಗಳಿಗೆ ಅಂದರೆ ೭೧×೨೮= ೧೯೮೮ ಮಹಾಯುಗಗಳಿಗೆ ಬ್ರಹ್ಮನ ಒಂದು ದಿನವಾಯಿತು.

೬೪. ಈ ಅಹರ್ಮಾನದಿಂದ ಕೂಡಿದ ನೂರುವರ್ಷಗಳು ಒಬ್ಬ ಬ್ರಹ್ಮನ ಆಯುಷ್ಯವೆಂದು ತಿಳಿಯಬೇಕು. ಅಂದರೆ ಅಲ್ಲಿಯವರೆಗೂ ಬ್ರಹ್ಮನು ಸೃಷ್ಟ್ಯಾದಿಗಳಿಂದ ಕೂಡಿದ ಲೋಕರಚನೆಯನ್ನು ಮಾಡುತ್ತಿರುವನು.

೬೫-೬೬. ಒಂದು ಮಹಾಯುಗದಲ್ಲಿ ಸೂರ್ಯ, ಬುಧ, ಶುಕ್ರ, ಎಂಬ ಮೂರು ಗ್ರಹಗಳಿಗೂ, ಕುಜ, ಶನಿ, ಗುರು ಈ ಗ್ರಹಗಳ ಶೀಘ್ರೋಚ್ಚಗಳಿಗೂ ೪೩,೨೦೦೦೦ ನಲವತ್ತಮೂರುಲಕ್ಷದ ಇಪ್ಪತ್ತುಸಾವಿರ ಭಗಣಗಳಿವೆ. ಅಂದರೆ ಅಷ್ಟುಸಾರಿ ದ್ವಾದಶ ರಾಶ್ಯಾತ್ಮಕವಾದ ಭಗೋಳದಲ್ಲಿ ಪೂರ್ವಾಭಿಮುಖವಾಗಿ ಗ್ರಹಗಳು ಸುತ್ತುತ್ತವೆಯೆಂದರ್ಥ. ಚಂದ್ರನಿಗೆ ೫೭೭೫೩೩೩೬, ಐದುಕೋಟಿ ಎಪ್ಪತ್ತೇಳುಲಕ್ಷದ, ಐವತ್ತಮೂರುಸಾವಿರದ, ಮುನ್ನೂರಮೂವತ್ತಾರು ಭಗಣಗಳೂ, ಕುಜನಿಗೆ ೨೨೯೬೮೩೨ ಇಪ್ಪತ್ತೆರಡುಲಕ್ಷ ತೊಂಭತ್ತಾರುಸಾವಿರದ ಎಂಟನೂರಮೂವತ್ತೆರಡು ಭಗಣಗಳೂ ಇರುತ್ತವೆ.

೬೭-೬೮. ಬುಧ ಶೀಘ್ರೋಚ್ಚಕ್ಕೆ ೧೭೯೩೭೦೬೦ ಭಗಣಗಳೂ, ಗುರು

ಶಿತಶೀಘ್ರಸ್ಯ ಷಟ್ಸಪ್ತತ್ರಿಯಮಾಶ್ವಿಸ್ವಭೂಧರಾಃ ।
ಶನೇರ್ಭುಜಂಗ ಷಟ್ಪಂಚರಸವೇದನಿಶಾಕರಾಃ ॥ ೧೮ ॥

ಚಂದ್ರೋಚ್ಚಸ್ಯಾಗ್ನಿ ಶೂನ್ಯಾಶ್ವಿವಸುಸರ್ಪಾರ್ಣವಾ ಯುಗೇ ।
ವಾಮಂ ಪಾತಸ್ಯ ವಸ್ವಗ್ನಿಯಮಾಶ್ವಿಶಿಖಿದಸ್ರಕಾಃ ॥ ೧೯ ॥

ಉದಯಾದುದಯಂ ಭಾನೋರ್ಭೂಮೇಃ ಸಾವನ ವಾಸರಾಃ ।
ವಸುದ್ವ್ಯಷ್ಟಾದ್ರಿರೂಪಾಂಕ ಸಪ್ತಾದ್ರಿತಿಥಯೋ ಯುಗೇ ॥ ೨೦ ॥

ಷಡ್ ವಹ್ನಿ ತ್ರಿಹುತಾಶಾಂಕತಿಥಯಶ್ಚಾಧಿಮಾಸಕಾಃ ।
ತಿಥಿಕ್ಷಯಾಯಮಾರ್ಥಾಕ್ಷಿದ್ವ್ಯಷ್ಟವ್ಯೋಮಶರಾಶ್ವಿನಃ ॥ ೨೧ ॥

ಖಚತುಷ್ಕ ಸಮುದ್ರಾಷ್ಟಕುಪಂಚರವಿಮಾಸಕಾಃ ।
ಷಟ್ತ್ರ್ಯಗ್ನಿವೇದಾಗ್ನಿಪಂಚಶುಭ್ರಾಂಶುಮಾಸಕಾಃ ॥ ೨೨ ॥

---

ವಿಗೆ ೩೬೪೨೨೦ ಭಗಣಗಳೂ, ಶುಕ್ರ ಶೀಘ್ರೋಚ್ಚಕ್ಕೆ ೭೦೨೨೩೭೬ ಭಗಣಗಳೂ, ಶನಿಗೆ ೧೪೬೫೬೮ ಭಗಣಗಳೂ ಇವೆ.

೧೯. ಚಂದ್ರೋಚ್ಚಕ್ಕೆ ೪೮೮೨೦೩ ಭಗಣಗಳಿವೆ. ಪಶ್ಚಿಮಾಭಿಮುಖವಾಗಿ ಹೋಗತಕ್ಕ ಅದೃಶ್ಯರೂಪವಾದ ಚಂದ್ರಪಾತಕ್ಕೆ ೨೩೨೨೩೮ ಭಗಣಗಳಿವೆ.

೨೦–೨೧. ಭೂಮಿಯಲ್ಲಿ ಸೂರ್ಯೋದಯದಿಂದ ಮತ್ತೆ ಸೂರ್ಯೋದಯದ ವರೆಗಿರುವ ಕಾಲಕ್ಕೆ ಅರ್ಕಸಾವನಾಹಸ್ಸು ಅಥವ ಸೌರದಿನವೆನ್ನಬಹುದು. ಅಂತಹ ಸೌರದಿನಗಳು ಮಹಾಯುಗಕ್ಕೆ ೧೫೭೭೯೧೭೮೨೮ ಇಷ್ಟಾಗುವುವು. ಮತ್ತು ಮಹಾಯುಗಕ್ಕೆ ೧೫೯೩೩೩೬ ಅಧಿಮಾಸಗಳಿರುವುವು. ಹಾಗೆಯೇ ೨೫೦೮೨೫೨ ತಿಥಿಕ್ಷಯಗಳಿರುವುವು.

೨೨-೨೪. ಒಂದು ಮಹಾಯುಗದಲ್ಲಿ ೫೧೮೪೦೦೦೦ ಸೂರ್ಯಮಾಸಗಳೂ, ೫೩೪೩೩೬೦೦೦೦ ಚಾಂದ್ರಮಾಸಗಳೂ ಇರುತ್ತವೆ. ಪೂರ್ವಾಭಿಮುಖವಾಗಿ ಹೋಗುವ ಸೂರ್ಯಮಂದೋಚ್ಚಕ್ಕೆ ಒಂದು ಕಲ್ಪದಲ್ಲಿ ೩೮೭ ಭಗಣಗಳೂ, ಕುಜ ಮಂದೋಚ್ಚಕ್ಕೆ ೨೦೪ ಭಗಣಗಳೂ, ಬುಧಮಂದೋಚ್ಚಕ್ಕೆ ೩೬೮ ಭಗಣಗಳೂ,

ಪ್ರಾಗ್ಗತೇಃ ಸೂರ್ಯಮಂದಸ್ಯ ಕಲ್ಪೇಸಪ್ತಾಷ್ಟವಹ್ನಯಃ ।
ಕೌಜಸ್ಯ ವೇದಸ್ವಯಮಾ ವೌಧಸ್ಯಾಷ್ಟರ್ತುವಹ್ನಯಃ ॥ ೨೩ ॥

ಖಖರಂಧ್ರಾಣಿ ಜೈವಸ್ಯ ಶೌಕ್ರಸ್ಯಾರ್ಥಗುಣೇಷವಃ ।
ಗೋಗ್ನಯಃ ಶನಿಮಂದಸ್ಯ ಪಾತಾನಾಮಥ ವಾಮತಃ ॥ ೨೪ ॥

ಮನುದಸ್ರಾಸ್ತು ಕೌಜಸ್ಯ ಬೌಧಸ್ಯಾಷ್ಟಾಷ್ಟಸಾಗರಾಃ ।
ಕೃತಾದ್ರಿಚಂದ್ರಾ ಜೈವಸ್ಯ ಶೌಕ್ರಸ್ಯಾಗ್ನಿಖನಂದಕಾಃ ॥ ೨೫ ॥

ಶನಿಪಾತಸ್ಯ ಭಗಣಾಃ ಕಲ್ಪೇಯಮರಸರ್ತವಃ ।
ವರ್ತಮಾನಯುಗೇ ಯಾತಾವತ್ಸರಾಭಗಣಾಭಿಧಾಃ ॥ ೨೬ ॥

ಮಾಸೀಕೃತಾಯುತಾಮಾಸೈರ್ಮಧುಶುಕ್ಲಾದಿಭಿರ್ಗತೈಃ ।
ಪೃಥಕ್ಸ್ಥಾಸ್ತೇಧಿಮಾಸಘ್ನಾಃ ಸೂರ್ಯಮಾಸವಿಭಾಜಿತಾಃ ॥ ೨೭ ॥

---

ಬೃಹಸ್ಪತಿಮಂದೋಚ್ಚಕ್ಕೆ ೯೦೦ ಭಗಣಗಳೂ, ಶುಕ್ರಮಂದೋಚ್ಚಕ್ಕೆ ೬೫೩ ಭಗಣಗಳೂ, ಶನಿಮಂದೋಚ್ಚಕ್ಕೆ ೩೯ ಭಗಣಗಳೂ ಇವೆ. ಈ ಮಂದೋಚ್ಚಗಳಿಗೆಲ್ಲಾ ಪೂರ್ವಾಭಿಮುಖವಾಗಿ ಗಮನವೇರ್ಪಟ್ಟಿರುವುದು.

೨೫-೨೬. ಇನ್ನು ಪಶ್ಚಿಮಗಮನವುಳ್ಳ ಗ್ರಹಪಾತಗಳಿಗೆ ಈರೀತಿ ಭಗಣಗಳುಂಟು. ಒಂದು ಕಲ್ಪದಲ್ಲಿ ಕುಜಪಾತವು ೨೧೪ ಸಾರಿಯೂ, ಬುಧಪಾತವು ೪೮೮ ಸಾರಿಯೂ, ಗುರುಪಾತವು ೧೭೪ ಸಾರಿಯೂ, ಶುಕ್ರಪಾತವು ೯೦೩ ಸಾರಿಯೂ, ಶನಿಪಾತವು ೬೬೨ ಸಾರಿಯೂ, ಭಚಕ್ರವನ್ನು ಸುತ್ತುವುವು. ಹೀಗೆ ಭಚಕ್ರವನ್ನು ಸುತ್ತುವ ಕಾಲಗಳಿಗೆ ಭಗಣಕಾಲವೆಂದು ವ್ಯವಹಾರವೇರ್ಪಟ್ಟಿರುವುದು.

೨೭-೨೯. ಇನ್ನು ಇಷ್ಟಕಾಲವವರೆಗೆ ಯುಗಾದಿಯಿಂದ ಕಳೆದುಹೋಗಿರುವ ದಿನಗಳನ್ನು ತಿಳಿಯುವ ಅಹರ್ಗಣಾನಯನಕ್ರಮವು ಹೇಗೆಂದರೆ:— ಇಷ್ಟಕಾಲದವರೆಗೆ ಸೂರ್ಯನಿಗೆ ಕಳೆದುಹೋಗಿರುವ ಭಗಣಗಳನ್ನು, ಅಂದರೆ ಸೌರವರ್ಷಗಳನ್ನು, ಹನ್ನೆರಡರಿಂದ ಗುಣಿಸಿ, ಬಂದ ಲಬ್ಧಕ್ಕೆ, ಇಷ್ಟಕಾಲವ ಪರ್ಯಂತ ಕಳೆದಿರುವ ಚೈತ್ರಾದಿಯಾದ ತಿಂಗಳಿನ ಸಂಖ್ಯೆಯನ್ನು ಸೇರಿಸಬೇಕು.

ಅಥಾಧಿಮಾಸಕೈರ್ಯುಕ್ತಾ ದಿನೀಕೃತ್ಯ ದಿನಾನ್ವಿತಾಃ ।
ದ್ವಿಸ್ಥಾಸ್ತಿಥಿಕ್ಷಯಾಭ್ಯಸ್ತಾಶ್ಚಾಂದ್ರವಾಸರಭಾಜಿತಾಃ ॥ ೭೮ ॥

ಲಬ್ಧೋನರಾತ್ರಿರಹಿತಾಲಂಕಾಯಾಮಾರ್ಧರಾತ್ರಿಕಃ ।
ಸಾವನೋದ್ಯುಗಣಃ ಸೂರ್ಯಾದ್ದಿನಮಾಸಾಬ್ದಪಾಸ್ತತಃ ॥ ೭೯ ॥

ಸಪ್ತಭಿಃ ಕ್ಷಪಿತಃ ಶೇಷಃ ಸೂರ್ಯಾದ್ಯೋವಾಸರೇಶ್ವರಃ ।
ಮಾಸಾಬ್ದದಿನಸಂಖ್ಯಾಪ್ತಂದ್ವಿತ್ರಿಘ್ನಂ ರೂಪಸಂಯುತಂ ॥ ೮೦ ॥

ಸಪ್ತೋದ್ಧೃತಾವಶೇಷೌ ತೌ ವಿಜ್ಞೇಯೌ ಮಾಸವರ್ಷಪೌ ।
ಯಥಾಸ್ವಭಗಣಾಭ್ಯಸ್ತೋ ದಿನರಾಶಿಃ ಕುವಾಸರೈಃ ॥ ೮೧ ॥

ಅವನ್ನು ಎರಡುಕಡೆ ಬರೆದುಕೊಳ್ಳಬೇಕು. ಒಂದುಕಡೆಯ ಅಂಕಿಯನ್ನು ಯುಗಾಧಿಮಾಸ ಸಂಖ್ಯೆಯಿಂದ ಗುಣಿಸಿ, ಸೂರ್ಯಮಾಸಗಳಿಂದ ಭಾಗಿಸಬೇಕು. ಬರುವ ಫಲವು ಅಧಿಮಾಸರೂಪವಾಗುವುದು. ಈ ಅಧಿಮಾಸಸಂಖ್ಯೆಯನ್ನು, ಹಿಂದಿನ ಮಾಸಸಂಖ್ಯೆಗೆ ಸೇರಿಸಿ, ಮೂವತ್ತರಿಂದ ಗುಣಿಸಿ, ದಿನಗಳನ್ನಾಗಿ ಮಾಡಿಕೊಳ್ಳಬೇಕು. ಇಷ್ಟಕಾಲದವರೆಗೆ ತಿಂಗಳಿನಲ್ಲಿ ಕಳೆದ ದಿನಗಳನ್ನು ಸೇರಿಸಬೇಕು. ಬಂದ ಸಂಖ್ಯೆಯನ್ನೂ ಎರಡುಕಡೆ ಬರೆದುಕೊಂಡು, ಒಂದು ಸಂಖ್ಯೆಯನ್ನು ಯುಗದ ತಿಥಿಕ್ಷಯ ದಿನಗಳಿಂದ ಗುಣಿಸಿ, ಯುಗ ಚಾಂದ್ರವಾಸರಗಳಿಂದ ಭಾಗಿಸಬೇಕು. ಲಬ್ಧವಾಗಿ ಬಂದ ತಿಥಿಕ್ಷಯಗಳನ್ನು ಮತ್ತೊಂದು ಕಡೆ ಇಟ್ಟಿರುವ ದಿನಸಂಖ್ಯೆಯಲ್ಲಿ ಕಳೆಯಬೇಕು. ಉಳಿದ ದಿನಗಳೇ ನಿರಕ್ಷ ದೇಶವಾದ ಲಂಕಾನಗರಿಯ ಅರ್ಧರಾತ್ರಿಗೆ ಬಂದ ದಿನಗಳು. ಇದನ್ನೇ ಅಹರ್ಗಣವೆನ್ನುವರು.

೮೦-೮೧. ಹೀಗೆ ಬಂದ ಅಹರ್ಗಣವನ್ನು ಏಳರಿಂದ ಭಾಗಿಸಿದರೆ ಉಳಿದ ಶೇಷಕ್ಕೆ ಸೂರ್ಯಾದಿಯಾಗಿರುವ ವಾರವು ತಿಳಿಯುವುದು. ಹಾಗೆಯೇ ಅಹರ್ಗಣಸಂಖ್ಯೆಯನ್ನು ಮೂವತ್ತರಿಂದಲೂ ಮುನ್ನೂರರವತ್ತರಿಂದಲೂ ಪ್ರತ್ಯೇಕವಾಗಿ ಭಾಗಿಸಿ, ಕ್ರಮವಾಗಿ ಬಂದ ಲಬ್ಧವನ್ನು ಎರಡು ಮತ್ತು

ವಿಭಾಜಿತೋ ಮಧ್ಯಗತ್ಯಾ ಭಗಣಾದಿರ್ಗ್ರಹೋ ಭವೇತ್ ।
ಏವಂ ಸ್ವಶೀಘ್ರಮಂದೋಚ್ಚಾ ಯೇ ಪ್ರೋಕ್ತಾಃ ಪೂರ್ವಯಾಯಿನಃ ॥ ೮೨॥

ವಿಲೋಮಗತಯಃ ಪಾತಾಸ್ತದ್ವಚ್ಚಕ್ರಾದಿಶೋಧಿತಾಃ
ಯೋಜನಾನಿ ಶತಾನ್ಯಷ್ಟೌ ಭೂಕರ್ಣೋ ದ್ವಿಗುಣಃ ಸ್ಮೃತಃ ॥ ೮೩ ॥

ತದ್ವರ್ಗತೋ ದಶಗುಣಾತ್ಪದಂ ಭೂಪರಿಧಿರ್ಭವೇತ್ ।
ಲಂಬಜ್ಯಾಘ್ನಸ್ತ್ರಿಜೀವಾಪ್ತಃ ಸ್ಫುಟೋ ಭೂಪರಿಧಿಃ ಸ್ವಕಃ ॥ ೮೪ ॥

---

ಮೂರರಿಂದ ಗುಣಿಸಿ, ಒಂದನ್ನು ಸೇರಿಸಿ, ಏಳರಿಂದ ಭಾಗಿಸಿದರೆ, ಕ್ರಮವಾಗಿ ಮಾಸಾಧಿಪತಿ, ವರ್ಷಾಧಿಪತಿಗಳು ತಿಳಿದು ಬರುವರು. ಇದರಮೇಲೆ ಯಾವ ಗ್ರಹದ ಗತಭಗಣವನ್ನು ಅರಿಯಬೇಕಾದರೂ, ಅಹರ್ಗಣವನ್ನು ಆಯಾ ಗ್ರಹಭ ಗಣಗಳಿಂದ ಗುಣಿಸಿ, ಯುಗಸಾವನದಿನಗಳಿಂದ ಭಾಗಿಸಿದರೆ, ಬರುವ ಲಬ್ಧವು ಗತಭಗಣವೆನಿಸುವುದು. ಮುಂದಿನ ಗಣಿತದಿಂದ ರಾಶಿ ಭಾಗಾದಿಗಳನ್ನು ತಿಳಿದುಕೊಳ್ಳಬೇಕು. ಹೀಗೆ ರಾಶಿ, ಭಾಗ, ಲಿಪ್ತ್ಯಾದಿಗಳಿಂದ ಕೂಡಿದ ಸ್ಫುಟವೇ ಗ್ರಹದ ಮಧ್ಯಸ್ಫುಟವೆನಿಸಿಕೊಳ್ಳುವುದು. ಇದೇರೀತಿ ಪೂರ್ವಗತಿಯುಳ್ಳ ಶೀಘ್ರೋಚ್ಚಾದಿಗಳಿಗೂ ಮಧ್ಯಸ್ಫುಟವನ್ನು ಆನಯನಮಾಡಬೇಕು.

೮೩–೮೫. ಪಶ್ಚಿಮಗತಿಯುಳ್ಳ ಪಾತಗಳನ್ನು ಗ್ರಹಗಳನ್ನಾನಯನ ಮಾಡುವ ರೀತಿಯಲ್ಲಿ ಮಾಡಿ, ದ್ವಾದಶರಾಶಿಯಿಂದ ಕಳೆಯಬೇಕು. ಇದರಿಂದ ಪಾತಸ್ಥಾನವು ದೊರೆಯುವುದು. ಗೋಳಾಕಾರವಾದ ಭೂವ್ಯಾಸವು ೧೬೦೦ ಸಾವಿರದಾರುನೂರು ಯೋಜನವೆಂದು ಹೇಳಲ್ಪಟ್ಟದೆ. ಈ ಭೂವ್ಯಾಸದ ವರ್ಗ ಮಾಡಿ, ಹತ್ತರಿಂದ ಗುಣಿಸಿದರೆ ಬರುವ ಸಂಖ್ಯೆಯೇ ಭೂಪರಿಧಿಯೆನಿಸುವುದು. ಇದು ಮಧ್ಯಮ ಭೂಪರಿಧಿ. ಇದನ್ನು ದೇಶಾಂತರಗಳಿಗೆ ಸ್ಫುಟಭೂಪರಿಧಿಯಾಗಿ ಮಾಡಿಕೊಳ್ಳಬೇಕಾದರೆ ಆಯಾದೇಶದ ಲಂಬಜ್ಯಾದಿಂದ ಗುಣಿಸಿ, ತ್ರಿಜ್ಯೆಯಿಂದ ಭಾಗಿಸಬೇಕು. ಲಂಬಜ್ಯಾ ಎಂದರೆ ದ್ವಾದಶಾಂಗುಲಪರಿಮಾಣವುಳ್ಳ ಶಂಕು, ಅದರ ಛಾಯಾ, ಇವುಗಳ ವರ್ಗಯೋಗಮೂಲವಾದ ಅಕ್ಷಕರ್ಣ

ತೇನ ದೇಶಾಂತರಾಭ್ಯಸ್ತಾ ಗ್ರಹಭುಕ್ತಿರ್ವಿಭಾಜಿತಾ ।
ಕಲಾದಿತತ್ಫಲಂ ಪ್ರಾಚ್ಯಾಂ ಗ್ರಹೇಭ್ಯಃ ಪರಿಶೋಧಯೇತ್ ॥ ೮೫ ॥

ರೇಖಾಪ್ರತೀಚೀಸಂಸ್ಥಾನೇ ಪ್ರಕ್ಷಿಪೇತ್ಸ್ಯುಃ ಸ್ವದೇಶತಃ ।
ರಾಕ್ಷಸಾಲಯ ದೇವೌಕಃ ಶೈಲಯೋರ್ಮಧ್ಯಸೂತ್ರಗಾಃ ॥ ೮೬ ॥

ಅವಂತಿಕಾರೋಹತಿಕಂ ತಥಾ ಸನ್ನಿಹಿತಂ ಸರಃ ।
ವಾರಪ್ರವೃತ್ತಿಃಪ್ರಾಗ್ದೇಶೇ ಕ್ಷಪಾರ್ಧೇಽಭ್ಯಧಿಕೋ ಭವೇತ್ ॥ ೮೭ ॥

ತದ್ದೇಶಾಂತರನಾಡೀಭಿಃ ಪಶ್ಚಾದೂನೇ ವಿನಿರ್ದಿಶೇತ್ ।
ಇಷ್ಟನಾಡೀ ಗುಣಾಭುಕ್ತಿಃ ಷಷ್ಟ್ಯಾ ಭಕ್ತಾ ಕಲಾದಿಕಂ ॥ ೮೮ ॥

---

ವನ್ನು ಹನ್ನೆರಡರಿಂದ ಗುಣಿಸಿ, ತ್ರಿಜ್ಯೆಯಿಂದ ಭಾಗಿಸಿದರೆ, ಅದೇ ಲಂಬಜ್ಯೆಯೆನಿಸುವುದು. ಸ್ವರೇಖಾ ಮತ್ತು ಸ್ವದೇಶಗಳಿಗಿರುವ ಅಂತರವೇ ರೇಖಾಂತರವು. ಅಥವಾ ದೇಶಾಂತರಗ್ರಹಗಳ ಗತಿಗಳನ್ನು ಈ ದೇಶಾಂತರಯೋಜನಗಳಿಂದ ಗುಣಿಸಿ, ಸ್ಫುಟಭೂಪರಿಧಿಯಿಂದ ಭಾಗಿಸಿದರೆ, ಬರುವ ಕಲಾರೂಪವಾದ ಗತಿಯನ್ನು ಪಶ್ಚಿಮದಿಕ್ಕಿನಲ್ಲಿರುವ ದೇಶಗಳ ಗ್ರಹಗಳಿಗೆ ಕೂಡಬೇಕು. ಪೂರ್ವದೇಶಗಳಲ್ಲಿ ಕಳೆಯಬೇಕು. ಇದನ್ನೇ ದೇಶಾಂತರ ಸಂಸ್ಕಾರವೆನ್ನುವರು.

೮೬-೮೭. ರಾಕ್ಷಸಾಲಯವಾದ ಲಂಕಾದೇಶ, ದೇವಪರ್ವತವಾದ ಮೇರು, ಇವೆರಡರ ಮೇಲೂ ಹಾದುಹೋಗುವ ಒಂದುರೇಖೆಯು, ಮಧ್ಯದಲ್ಲಿರುವ ರೋಹೀತಕನಗರ, ಅವಂತಿ (ಉಜ್ಜಯಿನೀ), ಕುರುಕ್ಷೇತ್ರ ಇವುಗಳಮೇಲೆ ಹಾದುಹೋಗುವುದು ದೇಶಾಂತರನಾಡಿಗಳಿಂದ ಯುಕ್ತವಾದ ಪೂರ್ವದೇಶದ ಅರ್ಧರಾತ್ರಿಯಿಂದ ವಾರಪ್ರವೃತ್ತಿಯುಂಟಾಗುವುದು. ಅದೇ ವಾರಪ್ರವೃತ್ತಿಯು ಪಶ್ಚಿಮದೇಶಗಳಲ್ಲಿಯೂ, ದೇಶಾಂತರಕಲಾವಿಶಿಷ್ಟವಾದ ಅನಂತರವೇ ಪ್ರಾರಂಭವಾಗುವುದೆಂದು ತಿಳಿಯಬೇಕು.

೮೮-೯೦. ಗ್ರಹಗಳಿಗೆ ತಾತ್ಕಾಲಿಕೀಕರಣಮಾಡುವ ರೀತಿ ಹೇಗೆಂದರೆ:— ಉದಯಕಾಲಕ್ಕೆ ಗಣಿತದಿಂದ ಬಂದಿರುವ ಗ್ರಹವನ್ನು ಇಷ್ಟಕಾಲಕ್ಕೆ ತರಬೇಕಾ

ಗತೇ ಶೋಧ್ಯಂ ತಥಾ ಯೋಜ್ಯಂ ಗಮ್ಯೇ ತತ್ಕಾಲಿಕೋ ಗ್ರಹಃ ।
ಭಚಕ್ರಲಿಪ್ತಾಶೀತ್ಯಂಶಃ ಪರಮಂ ದಕ್ಷಿಣೋತ್ತರಂ ॥ ೮೯ ॥

ವಿಕ್ಷಿಪ್ಯತೇ ಸ್ವಪಾತೇನ ಸ್ವಕ್ರಾಂತ್ಯಂತಾದನುಷ್ಣಗುಃ ।
ತನ್ನವಾಂಶಂ ದ್ವಿಗುಣಿತಂ ಜೀವಸ್ತ್ರಿಗುಣಿತಂ ಕುಜಃ ॥ ೯೦ ॥

ಬುಧಶುಕ್ರಾರ್ಕಜಾಃ ಪಾತೈರ್ವಿಕ್ಷಿಪ್ಯಂತೇ ಚತುರ್ಗುಣಂ ।
ರಾಶಿಲಿಪ್ತಾಷ್ಟಮೋ ಭಾಗಃ ಪ್ರಥಮಂ ಜ್ಯಾರ್ಧಮುಚ್ಯತೇ ॥ ೯೧ ॥

---

ದರೆ, ಉದಯೇಷ್ಟಕಾಲಗಳ ಮಧ್ಯಘಟಿಯನ್ನು ಗ್ರಹಭುಕ್ತಿಯಿಂದ ಗುಣಿಸಿ, ಅರವತ್ತರಿಂದ ಭಾಗಿಸಬೇಕು. ಇಷ್ಟಕಾಲವು ಉದಯಕಾಲಕ್ಕಿಂತ ಮುಂಚೆ ಇದ್ದರೆ ಕಳೆಯಬೇಕು. ಅನಂತರವಾಗಿದ್ದರೆ ಕೂಡಬೇಕು. ಇದೇ ಗ್ರಹಗಳನ್ನು ತತ್ಕಾಲಕ್ಕೆ ಆನಯನಮಾಡುವರೀತಿಯೆನಿಸುವುದು. ಚಂದ್ರಪಾತದಿಂದ ಚಂದ್ರನು ದಕ್ಷಿಣೋತ್ತರವಾಗಿ ಎಳೆಯಲ್ಪಡುವನು. ಇದಕ್ಕೆ ವಿಕ್ಷೇಪವೆಂದು ಹೆಸರು. ಇಂತಹ ಪರಮವಿಕ್ಷೇಪವು ಚಂದ್ರನಿಗೆ ೨೭೦ ಇನ್ನೂರೆಪ್ಪತ್ತು ಲಿಪ್ತಿಯಿರುವುದು. ಅದು ಭಚಕ್ರಲಿಪ್ತಿಗಳ $\frac{೧}{೮೧}$ ಭಾಗವಾಗಿರುವುದು. ಇದೇ ಚಂದ್ರನಿಗೆ ಪಾತದಿಂದ ಬರುವ ಪರಮವಿಕ್ಷೇಪವೆಂದು ತಿಳಿಯಬೇಕು. ಸೂರ್ಯನಿಗೆ ಪಾತವಿಲ್ಲದ್ದರಿಂದ ವಿಕ್ಷೇಪವಿಲ್ಲ. ಕೇವಲ ಕ್ರಾಂತಿ ಮಾತ್ರವಿರುವುದು. ಈ ಚಂದ್ರವಿಕ್ಷೇಪದ ನವಾಂಶದ (ಒಂಬತ್ತನೆಯ ಒಂದುಭಾಗದ) ದ್ವಿಗುಣವೆಂದರೆ ೬೦. ಅರವತ್ತು ಕಲೆಯು ಗುರುವಿಗೂ ೯೦ ತೊಂಬತ್ತು ಕಲೆಯ ಕುಜನಿಗೂ ಪರಮವಿಕ್ಷೇಪವಾಗಿರುವುದು.

೯೧-೯೨. ಬುಧ, ಶುಕ್ರ, ಶನಿ ಇವರಿಗೆ ಮಾತ್ರ ಚತುರ್ಗುಣವಾಗಿ ಅಂದರೆ ೧೨೦ ನೂರಿಪ್ಪತ್ತು ಕಲೆಯು ಪರಮವಿಕ್ಷೇಪವಾಗಿರುವುದು. ಒಂದು ರಾಶಿಯ ಒಟ್ಟು ಕಲೆಯಾದ, ೧೮೦೦ ಸಾವಿರದ ಎಂಟನೂರರಲ್ಲಿ $\frac{೧}{೮}$ ಎಂಟನೆಯ ಒಂದು ಭಾಗವೇ ಅಂದರೆ ೨೨೫. ಇನ್ನೂರಿಪ್ಪತ್ತೈದು

ತತೋ ದ್ವಿಭಕ್ತಲಬ್ಧೋನಮಿಶ್ರಿತಂ ತದ್ದ್ವಿತೀಯಕಂ ।
ಆದ್ಯೇನೈವಂ ಕ್ರಮಾತ್ಪಿಂಡಾನ್ಭಕ್ತಾಲ್ಲಬ್ಧೋನಿತೈರ್ಯುತಾನ್ ॥ ೯೨ ॥

ಖಂಡಕಾಃ ಸ್ಯುಶ್ಚತುರ್ವಿಂಶಜ್ಜ್ಯಾರ್ಧಪಿಂಡಾಃ ಕ್ರಮಾದಮೀ ।
ಪರಮಾಪಕ್ರಮಜ್ಯಾ ತು ಸಪ್ತರಂಧ್ರಗುಣೇಂದವಃ ॥ ೯೩ ॥

ತದ್ಗುಣಜ್ಯಾ ತ್ರಿಜೀವಾಪ್ತಾ ತಚ್ಚಾಪಂ ಕ್ರಾಂತಿರುಚ್ಯತೇ ।
ಗ್ರಹಂ ಸಂಶೋಧ್ಯ ಮಂದೋಚ್ಚಾತ್ ತಥಾ ಶೀಘ್ರಾದ್ವಿಶೋಧ್ಯ ಚ ॥ ೯೪ ॥

ಶೇಷಂ ಕೇಂದ್ರಪದಂ ತಸ್ಮಾದ್ಭುಜಜ್ಯಾ ಕೋಟಿರೇವ ಚ ।
ಗತಾದ್ಭುಜಜ್ಯಾ ವಿಷಮೇ ಗಮ್ಯಾತ್ಕೋಟಿಃ ಪದೇ ಭವೇತ್ ॥ ೯೫ ॥

---

ಕಲೆಯೇ ಮೊದಲನೆಯ ಜ್ಯಾರ್ಧ. ಮೊದಲನೆಯ ಜ್ಯಾರ್ಧದ ಫಲವನ್ನು ಪ್ರಥಮಜ್ಯಾರ್ಧದಲ್ಲಿ ಕಳೆದು, ಜ್ಯಾರ್ಧಕ್ಕೆ ಸೇರಿಸಿದರೆ, ಬರುವುದೇ ದ್ವಿತೀಯ ಜ್ಯಾರ್ಧ. ಅದು ೪೪೯ ನಾನೂರನಲವತ್ತೊಂಬತ್ತಾಗುವುದು. ಇದೇರೀತಿ ೨೪ ಇಪ್ಪತ್ತನಾಲ್ಕು ಜ್ಯಾಪ್ರಮಾಣಗಳನ್ನೂ ತಿಳಿಯಬೇಕು.

೯೩-೯೫. ಹೀಗೆ ಜ್ಯಾರ್ಧಗಳು ೨೪ ಇಪ್ಪತ್ತನಾಲ್ಕು. ಅದರಲ್ಲಿ ಪರಮಕ್ರಾಂತಿಜ್ಯಾ ೧೩೯೭ ಸಾವಿರದ ಮುನ್ನೂರತೊಂಬತ್ತೇಳು. ಅಭೀಷ್ಟ ಜ್ಯಾವನ್ನು ಪರಮಕ್ರಾಂತಿಜ್ಯೆಯಿಂದ ಗುಣಿಸಿ, ತ್ರಿಜ್ಯೆಯಿಂದ ಭಾಗಿಸಿದರೆ, ಕಲಾತ್ಮಕವಾದ ಕ್ರಾಂತಿಯು ಬರುವುದು. ಹಿಂದೆ ಆನಯನಮಾಡಿರುವ ಗ್ರಹವನ್ನು ಮಂದೋಚ್ಚ ಮಧ್ಯದಿಂದ ಕಳೆದರೆ, ಬರುವ ಸ್ಫುಟವು ಮಂದಕೇಂದ್ರ ಸ್ಫುಟವಾಗುವುದು. ಹಾಗೆಯೇ ಶೀಘ್ರೋಚ್ಚದಿಂದ ಕಳೆದ ರಾಶ್ಯಾದಿಕವಾದ ಗ್ರಹವು ಶೀಘ್ರಕೇಂದ್ರವೆನಿಸುವುದು. ಆ ಕೇಂದ್ರದಿಂದ ರಾಶಿತ್ರಯಾತ್ಮಕವಾದ ಪದವನ್ನು, ಅಂದರೆ ರಾಶಿತ್ರಯದಿಂದ ಕಳೆದು, ಸಮ, ವಿಷಮಪದಗಳನ್ನು ನಿರ್ಧರಿಸಿಕೊಂಡು, ಅದಕ್ಕೆ ಭುಜಜ್ಯಾ ಮತ್ತು ಕೋಟಿಜ್ಯಾಸಂಖ್ಯೆಯನ್ನು ತಿಳಿಯಬೇಕು.

ಸಮೇ ತು ಗಮ್ಯಾದ್ಭುಜಜ್ಯಾ ಕೋಟಿಜ್ಯಾನುಗತಾದ್ಭವೇತ್ ।
ಲಿಪ್ತಾಸ್ತತ್ತ್ವಯಮೈರ್ಭಕ್ತಾ ಲಬ್ಧಂ ಜ್ಯಾಪಿಂಡಕಂ ಗತಂ ॥ ೯೬ ॥

ಗತಗಮ್ಯಾಂತರಾಭ್ಯಸ್ತಂ ವಿಭಜೇತ್ತತ್ತ್ವಲೋಚನೈಃ ।
ತದವಾಪ್ತಫಲಂ ಯೋಜ್ಯಂ ಜ್ಯಾಪಿಂಡೇ ಗತಸಂಜ್ಞಕೇ ॥ ೯೭ ॥

ಸ್ಯಾತ್ಕ್ರಮಜ್ಯಾವಿಧಿಶ್ಚೈವಮುತ್ಕ್ರಮಜ್ಯಾಗತಾ ಭವೇತ್ ।
ಲಿಪ್ತಾಸ್ತತ್ತ್ವಯಮೈರ್ಭಕ್ತಾ ಲಬ್ಧಂ ಜ್ಯಾಪಿಂಡಕಂ ಗತಂ ॥ ೯೮ ॥

ಗತಗಮ್ಯಾಂತರಾಭ್ಯಸ್ತಂ ವಿಭಜೇತ್ತತ್ತ್ವಲೋಚನೈಃ ।
ತದವಾಪ್ತಫಲಂ ಯೋಜ್ಯಂ ಜ್ಯಾಪಿಂಡೇ ಗತಸಂಜ್ಞಕೇ ॥ ೯೯ ॥

ಸ್ಯಾತ್ಕ್ರಮಜ್ಯಾವಿಧಿಶ್ಚೈವಮುತ್ಕ್ರಮಜ್ಯಾಸ್ವಪಿ ಸ್ಮೃತಃ ।
ಜ್ಯಾಂ ಪ್ರೋಜ್ಝ್ಯ ಶೇಷಂ ತತ್ತ್ವಾಶ್ವಿಹತಂ ತದ್ವಿವರೋದ್ಧೃತಂ ॥ ೧೦೦ ॥

---

೯೬-೧೦೦. ಮೂರು ರಾಶಿಗಳಿಗೆ ಒಂದು ಪದವೆನಿಸುವುದು. ಅದರಲ್ಲಿ ಮೊದಲನೆಯ ಮತ್ತು ಮೂರನೆಯ ರಾಶಿತ್ರಯಗಳಿಗೆ ವಿಷಮಪದವೆಂದೂ, ಎರಡು ಮತ್ತು ನಾಲ್ಕನೆಯ ರಾಶಿತ್ರಯಗಳಿಗೆ ಸಮಪದವೆಂದೂ ಸಂಕೇತವಿರುವುದು. ವಿಷಮಪದದಲ್ಲಿ ಗ್ರಹಕ್ಕೆ ಗತವಾದ ಜ್ಯಾವನ್ನು ಭುಜಜ್ಯಾ ಎಂದೂ, ಗಮ್ಯವಾದ ಜ್ಯಾವನ್ನು ಕೋಟಿಜ್ಯಾ ಎಂದೂ ವ್ಯವಹರಿಸುವರು. ಇದು ಸಮಪದದಲ್ಲಿ ವ್ಯತ್ಯಾಸಹೊಂದುವುದು. ಒಂದುಪದದಲ್ಲಿ ಜ್ಯಾಸಾಧನೆಮಾಡಬೇಕಾದರೆ, ಗ್ರಹಭುಕ್ತವಾದ ರಾಶ್ಯಾದಿಗಳನ್ನು ಕಲಾರೂಪಕ್ಕೆ ತಂದು, ಅದನ್ನು ೨೨೫ ಇನ್ನೂರಿಪ್ಪತ್ತೈದರಿಂದ ಭಾಗಿಸಿದರೆ, ಗತವಾದ ಜ್ಯಾಸಮೂಹವು ತಿಳಿಯುವುದು. ಗತವಾದ ಮತ್ತು ಗಮ್ಯವಾದ ಜ್ಯಾಂತರದಿಂದ ಗುಣಿಸಿ, ೨೨೫ ಇನ್ನೂರಿಪ್ಪತ್ತೈದರಿಂದ ಭಾಗಿಸಿ ಬಂದ ಲಬ್ಧವನ್ನು, ಗತಜ್ಯಾಸಮೂಹಕ್ಕೆ ಸೇರಿಸಬೇಕು. ಅದೇ ಆ ಗ್ರಹದ ಕ್ರಮಜ್ಯಾ (ಭುಜಜ್ಯಾ) ಆಗುವುದು. ಇದೇರೀತಿ ಉತ್ಕ್ರಮಜ್ಯಾವನ್ನೂ ಆನಯನಮಾಡಬೇಕು. ಜ್ಯಾಸಾಧನೆಯಿಂದ ಧನುಸ್ಸನ್ನು ಸಾಧಿಸಬೇಕು. ಯಾವ ಜ್ಯಾರಾಶಿಗೆ ಧನುಸ್ಸನ್ನು ಆನಯನಮಾಡಬೇಕೋ, ಅಂತಹ ಜ್ಯಾರಾಶಿಯನ್ನು ಅದರ ಮುಂದಿನ ಜ್ಯಾಪಿಂಡದಿಂದ ಕಳೆದು, ೨೨೫ ಇನ್ನೂರಿಪ್ಪತ್ತೈದರಿಂದ ಗುಣಿಸಿ, ಶುದ್ಧಾಶುದ್ಧ ಜ್ಯಾಂತರದಿಂದ ಭಾಗಿಸಿ, ಬಂದ ಲಬ್ಧವನ್ನು ೨೨೫ ಇನ್ನೂರಿಪ್ಪತ್ತೈದರ ವರ್ಗಸಂಖ್ಯೆಗೆ ಸೇರಿಸಬೇಕು. ಅದೇ ಆಗ್ರಹದ ಧನಸ್ಸು ಅಥವ ಚಾಪ ಎನಿಸಿಕೊಳ್ಳುವುದು.

ಸಂಖ್ಯಾತತ್ತ್ವಾಶ್ವಿಸಂವರ್ಗೇ ಸಂಯೋಜ್ಯ ಧನುರುಚ್ಯತೇ ।
ರವೇರ್ಮಂದಪರಿಧ್ಯಂಶಾ ಮನವಃ ಶೀತಗೋರದಾಃ ॥ ೧೧೦ ॥

ಯುಗ್ಮಾಂತೇ ವಿಷಮಾಂತೇ ಚ ನಖಲಿಪ್ತೋನಿತಾಸ್ತಯೋಃ ।
ಯುಗ್ಮಾಂತೇರ್ಥಾದಯಃ ಖಾಗ್ನೀಸುರಾಃ ಸೂರ್ಯಾನವಾರ್ಣವಾ ॥೧೧೨॥

ಓಜೇದ್ವ್ಯಗಾ ವಸುಯಮಾರದಾರುದ್ರಾಗಜಾಬ್ಧಯಃ ।
ಕುಜಾದೀನಾಮತಃ ಶೈಘ್ರ್ಯಾ ಯುಗ್ಮಾಂತೇರ್ಥಾಗ್ನಿದಸ್ರಕಾಃ ॥ ೧೧೩ ॥

ಗುಣಾಗ್ನಿಚಂದ್ರಾ' ಖನಗಾ ದ್ವಿರಸಾಕ್ಷೀಣಿ ಗೋಗ್ನಯಃ ।
ಓಜಾಂತೇ ದ್ವಿತ್ರಿಯಮಲಾ ದ್ವಿವಿಶ್ವೇ ಯಮಪರ್ವತಾಃ ॥ ೧೧೪ ॥

೧೧೧-೧೧೪. ಸೂರ್ಯನಿಗೆ ಪರಮಾಕರ್ಷಣದಿಂದುಂಟಾಗುವ ಪೂರ್ವಾಪರ ಗಮನರೂಪವಾದ ಪರಮಮಂದಫಲವು, ಯುಗ್ಮಪದದಲ್ಲಿ ೧೪ ಹದಿನಾಲ್ಕು ಅಂಶಗಳು. ಚಂದ್ರನಿಗೆ ೩೨ ಮೂವತ್ತೆರಡು ಅಂಶಗಳು. ವಿಷಮಪದದಲ್ಲಿ ೨೦ ಇಪ್ಪತ್ತು ಕಲೆಗಳು ಕಡಿಮೆಯಾಗಿರುತ್ತವೆ. ಯುಗ್ಮಪದದಲ್ಲಿ ಕುಜನಿಗೆ ೭೫ ಎಪ್ಪತ್ತೈದು. ಬುಧನಿಗೆ ೩೦ ಮೂವತ್ತು. ಗುರುವಿಗೆ ೩೩ ಮೂವತ್ತಮೂರು. ಶುಕ್ರನಿಗೆ ೧೨ ಹನ್ನೆರಡು. ಶನಿಗೆ ೪೯ ನಲವತ್ತೊಂಬತ್ತು. ಈರೀತಿ ಕಲೆಗಳಿರುವುವು. ವಿಷಮಪದದಲ್ಲಿ ಕುಜನಿಗೆ ೭೨ ಎಪ್ಪತ್ತೆರಡು. ಬುಧನಿಗೆ ೨೮ ಇಪ್ಪತ್ತೆಂಟು. ಗುರುವಿಗೆ ೧೧ ಹನ್ನೊಂದು. ಶುಕ್ರನಿಗೆ ೧೧ ಹನ್ನೊಂದು. ಶನಿಗೆ ೪೮ ನಲವತ್ತೆಂಟು ಅಂಶಗಳು ಮಂದಪರಿಧ್ಯಂಶಗಳಾಗಿರುತ್ತವೆ. ಹಾಗೆಯೇ ಅಂಗಾರಕಾದಿಗಳಿಗೆ ಯುಗ್ಮಪದದಲ್ಲಿ ಅಂದರೆ, ಅಂಗಾರಕನಿಗೆ ೨೩೫ ಇನ್ನೂರ ಮೂವತ್ತೈದು. ಬುಧನಿಗೆ ೧೩೩ ನೂರಮೂವತ್ತಮೂರು. ಗುರುವಿಗೆ ೭೦ ಎಪ್ಪತ್ತು. ಶುಕ್ರನಿಗೆ ೨೬೨ ಇನ್ನೂರರವತ್ತೆರಡು. ಶನಿಗೆ ೩೯ ಮೂವತ್ತೊಂಬತ್ತು ಅಂಶಗಳು ಶೀಘ್ರಪರಿಧ್ಯಂಶಗಳಾಗುವುವು. ವಿಷಮಪದದಲ್ಲಿ ಕುಜನಿಗೆ ೨೩೨ ಇನ್ನೂರಮೂವತ್ತೆರಡು. ಬುಧನಿಗೆ ೧೩೨ ನೂರಮೂವತ್ತೆರಡು. ಗುರುವಿಗೆ ೭೨ ಎಪ್ಪತ್ತೆರಡು. ಶುಕ್ರನಿಗೆ ೨೬೦ ಇನ್ನೂರರವತ್ತು. ಶನಿಗೆ ೪೦ ನಲವತ್ತು. ಈರೀತಿ ಶೀಘ್ರಪರಿಧ್ಯಂಶಗಳಿರುವುವು.

ಖಶರ್ಪದಸ್ತ್ರಾವಿಯದ್ವೇದಾಃ ಶೀಘ್ರಕರ್ಮಣಿ ಕೀರ್ತಿತಾಃ ।
ಓಜಯುಗ್ಮಾಂತರಗುಣಾಭುಜಜ್ಯಾ ತ್ರಿಜ್ಯಯೋದ್ಧೃತಾ ॥ ೧೦೫ ॥

ಯುಗ್ಮವೃತ್ತೇಧನರ್ಣಂಸ್ಯಾದೋಜಾದೂನೇಧಿಕೇ ಸ್ಫುಟಂ ।
ತದ್ಗುಣೇ ಭುಜಕೋಟಿಜ್ಯೇ ಭಗಣಾಂಶವಿಭಾಜಿತೇ ॥ ೧೦೬ ॥

ತದ್ಭುಜಜ್ಯಾ ಫಲಧನುರ್ಮಾಂದಂ ಲಿಪ್ತಾದಿಕಂ ಫಲ ।
ಶೈಘ್ರ್ಯಂ ಕೋಟಿಫಲಂ ಕೇಂದ್ರೇ ಮಕರಾದೌ ಧನಂ ಸ್ಮೃತಂ ॥ ೧೦೭ ॥

ಸಂಶೋಧ್ಯಂ ತು ತ್ರಿಜೀವಾಯಾಂ ಕರ್ಕಾದೌ ಕೋಟಿಜಂ ಫಲಂ ।
ತದ್ಬಾಹುಫಲವರ್ಗೈಕ್ಯಾನ್ಮೂಲಕರ್ಣಶ್ಚಲಾಭಿಧಃ ॥ ೧೦೮ ॥

ತ್ರಿಜ್ಯಾಭ್ಯಸ್ತಂ ಭುಜಫಲಂ ಕ್ರೇಂದ್ರೇ ಮಕರಾದೌ ಧನಂ ಸ್ಮೃತಂ ।
ಸಂಶೋಧ್ಯಂ ತು ತ್ರಿಜೀವಾಯಾಂ ಕರ್ಕಾದೌ ಕೋಟಿಜಂ ಫಲಂ ॥ ೧೦೯ ॥

೧೦೫-೧೦೬. ಇನ್ನು ಇಷ್ಟಕೇಂದ್ರದಿಂದ ಪರಿಧಿಭಾಗವನ್ನು ಆನಯನ ಮಾಡಬೇಕು. ಆಯಾ ಗ್ರಹದ ಭುಜಜ್ಯೆಯನ್ನು ವಿಷಮಸಮಪದಕೇಂದ್ರಾಂತರದಿಂದ ಗುಣಿಸಿ, ತ್ರಿಜ್ಯೆಯಿಂದ ಭಾಗಿಸಿ, ಬಂದ ಫಲವನ್ನು ಯುಗ್ಮಪದವು ಓಜಪದಕ್ಕಿಂತ ನ್ಯೂನವಾಗಿದ್ದರೆ ಕೂಡಬೇಕು. ಅಧಿಕವಾಗಿದ್ದರೆ ಕಳೆಯಬೇಕು. ಹೀಗೆ ಮಾಡಿದರೆ ಗ್ರಹದ ಸ್ಫುಟಪರಿಧಿಯು ದೊರಕುವುದು.

೧೦೭-೧೧೧. ಅನಂತರ ಮಂದಶೀಘ್ರಾಂತರಸಂಬಂಧದಿಂದ ಬಂದ ಭುಜ, ಕೋಟಿಜ್ಯಾಗಳನ್ನು, ಸ್ವೀಯಸ್ಫುಟಪರಿಧಿಯಿಂದ ಗುಣಿಸಿ, ೩೬೦ ಮುನ್ನೂರರವತ್ತರಿಂದ ಭಾಗಿಸಿದರೆ, ಬರುವ ಫಲವೇ ಭುಜಫಲ, ಕೋಟಿಫಲವೆನಿಸುವುದು. ಅದನ್ನು ಮಂದಕೇಂದ್ರಭುಜಫಲಕ್ಕೆ ಸೇರಿಸಿ, ಧನುರಾನಯನ ಮಾಡಿದರೆ, ಕಲಾದಿಯಾಗಿ ಮಂದಫಲವು ದೊರೆಯುವುದು. ಇದೇರೀತಿ ಶೀಘ್ರಫಲವನ್ನೂ ಆನಯನಮಾಡಬೇಕು. ಶೀಘ್ರಕೇಂದ್ರವು ಮಕರಾದಿ ಷಡ್ರಾಶ್ಯಂತರ್ಗತವಾಗಿದ್ದರೆ ಶೀಘ್ರಕೋಟಿಫಲವನ್ನು ತ್ರಿಜ್ಯೆಗೆ ಕೂಡಿಸಬೇಕು. ಕರ್ಕಾದಿ ಷಡ್ರಾಶಿಯಲ್ಲಿದ್ದರೆ, ಕಳೆಯಬೇಕು. ಇದರಿಂದ ಬರುವ ಫಲವೇ ಶೀಘ್ರಫಲವೆನಿಸುವುದು. ಇದು ಮಂದಫಲಾನಯನದಲ್ಲಿಲ್ಲ. ಕೋಟಿಫಲ

ತದ್ಬಾಹುಫಲವರ್ಗೈಕ್ಯಾನ್ಮೂಲಂ ಕರ್ಣಶ್ಚಲಾಭಿಧಃ ।
ತ್ರಿಜ್ಯಾಘ್ನಸ್ತಂ ಭುಜಫಲಂ ಫಲಕರ್ಣವಿಭಾಜಿತಂ ॥ ೧೧೦ ॥

ಲಬ್ಧಸ್ಯ ಚಾಪಂ ಲಿಪ್ತಾದಿಫಲಂ ಶೈಘ್ರ್ಯಮಿದಂ ಸ್ಮೃತಂ ।
ಏತದಾದೌ ಕುಜಾದೀನಾಂ ಚತುರ್ಥೇ ಚೈವ ಕರ್ಮಣಿ ॥ ೧೧೧ ॥

ಮಾಂದಂ ಕರ್ಮೈಕಮರ್ಕೇಂದ್ವೋಃ ಭೌಮಾದೀನಾಮಥೋಚ್ಯತೇ ।
ಶೈಘ್ರ್ಯಂ ಮಾಂದಂ ಪುನರ್ಮಾಂದಂ ಶೈಘ್ರ್ಯಂ ಚತ್ವಾರ್ಯನುಕ್ರಮಾತ್ ॥

ಅಜಾದಿಕೇಂದ್ರೇ ಸರ್ವೇಷಾಂ ಮಾಂದ್ಯೇ ಶೈಘ್ರ್ಯೇ ಚ ಕರ್ಮಣಿ ।
ಧನಂ ಗ್ರಹಾಣಾಂ ಲಿಪ್ತಾದಿತುಲಾದಾವೃಣಮೇವ ತತ್ ॥ ೧೧೩ ॥

ಸಂಸ್ಕೃತವಾದ ತ್ರಿಜ್ಯೆ ಮತ್ತು ಭುಜಫಲಗಳ ವರ್ಗಯೋಗಗಳ ಮೂಲವೇ ಶೀಘ್ರಕರ್ಣವೆನಿಸುವುದು. ಭುಜಫಲವನ್ನು ತ್ರಿಜ್ಯೆಯಿಂದ ಗುಣಿಸಿ, ಶೀಘ್ರ ಕರ್ಣದಿಂದ ಭಾಗಿಸಿ, ಬರುವ ಲಬ್ಧಕ್ಕೆ ಜ್ಯಾಸಾಧನೆಮಾಡಬೇಕು. ಅದೇ ಕಲಾದಿಯಾದ ಶೀಘ್ರಫಲವು. ಈ ಶೀಘ್ರಫಲಾನಯನವಮಾಡುವುದು, ಕುಜಾದಿ ಗ್ರಹಗಳ ಪ್ರಥಮ ಮತ್ತು ಚತುರ್ಥಕರ್ಮಗಳಲ್ಲಿ ಮಾತ್ರ. ದ್ವಿತೀಯ, ತೃತೀಯಕರ್ಮಗಳಲ್ಲಿ ಮಂದಫಲಸಂಸ್ಕಾರವನ್ನು ಮಾತ್ರ ಮಾಡಬೇಕು.

೧೧೨-೧೧೩. ಸೂರ್ಯಚಂದ್ರರಿಗೆ ಮಾತ್ರ ಶೀಘ್ರಫಲಸಂಸ್ಕಾರವಿಲ್ಲ. ಕೇವಲ ಮಂದಫಲಸಂಸ್ಕಾರದಿಂದಲೇ ಗ್ರಹವು ಸ್ಪಷ್ಟವಾಗುವುದು. ಕುಜಾದಿ ಗ್ರಹಗಳಿಗೆ ಮಾತ್ರ ಆನೀತವಾದ ಮಧ್ಯಗ್ರಹಗಳಿಗೆ ಮೊದಲು ಶೀಘ್ರಫಲ ಅನಂತರ ಮಂದಫಲ ಮತ್ತೆ ಶೀಘ್ರ ಮತ್ತು ಮಂದ ಈರೀತಿ ನಾಲ್ಕು ಸಂಸ್ಕಾರದಿಂದ ಸ್ಫುಟತ್ವವನ್ನು ತರಬೇಕು. ಎಲ್ಲಾ ಗ್ರಹಗಳಿಗೂ ಮೇಷಾದಿ ಕೇಂದ್ರಗಳಲ್ಲಿ ಕಲಾತ್ಮಕವಾದ ಶೀಘ್ರ ಮತ್ತು ಮಂದಫಲಗಳನ್ನು ಧನಸಂಸ್ಕಾರ ಮಾಡಬೇಕು. (ಕೂಡಬೇಕು ತುಲಾದಿಕೇಂದ್ರವಾಗಿದ್ದರೆ ಋಣಮಾಡಬೇಕು. (ಕಳೆಯಬೇಕು.) ಇದು ಪೂರ್ವಾಕರ್ಷಣ ಪಶ್ಚಿಮಾಕರ್ಷಣಾದಿಗಳನ್ನು ತಿಳಿಸುವುದು.

ಅರ್ಕಬಾಹುಫಲಾಭ್ಯಸ್ತಾ ಗ್ರಹಭುಕ್ತಿರ್ವಿಭಾಜಿತಾ ।
ಭಚಕ್ರಕಲಿಕಾಭಿಸ್ತು ಲಿಪ್ತಾಃ ಕಾರ್ಯಾ ಗ್ರಹೇರ್ಕವತ್ ॥ ೧೧೪ ॥

ಗ್ರಹಭುಕ್ತೇಃ ಫಲಂ ಕಾರ್ಯಂ ಗ್ರಹವನ್ಮಂದಕರ್ಮಣಿ ।
ಕರ್ಕಾದೌ ತದ್ಧನಂ ತತ್ರ ಮಕರಾದಾವೃಣಂ ಸ್ಮೃತಂ ॥ ೧೧೫ ॥

ದೋಃಜ್ಯಾಂತರಗುಣಾ ಭುಕ್ತಿಃ ತತ್ತ್ವನೇತ್ರೋದ್ಧೃತಾ ಪುನಃ
ಸ್ವಮಂದಪರಿಧಿಕ್ಷುಣ್ಣಾ ಭಗಣಾಂಶೋದ್ಧೃತಾಃ ಕಲಾಃ ॥ ೧೧೬ ॥

ಮಂದಸ್ಫುಟೀಕೃತಾಂ ಭುಕ್ತಿಂ ಪ್ರೋಜ್ಝ್ಯ ಶೀಘ್ರೋಚ್ಚಭುಕ್ತಿತಃ ।
ತಚ್ಛೇಷಂ ವಿವರೇಣಾಥ ಹನ್ಯಾತ್ತ್ರಿಜ್ಯಾಂತ್ಯಕರ್ಣಯೋಃ ॥ ೧೧೭ ॥

ಚಕ್ರಕರ್ಣಹೃತಂ ಭುಕ್ತೌ ಕರ್ಣೇ ತ್ರಿಜ್ಯಾಧಿಕೇ ಧನಂ ।
ಋಣಮೂನೇಧಿಕೇ ಪ್ರೋಜ್ಝ್ಯ ಶೇಷಂ ವಕ್ರಗತಿರ್ಭವೇತ್ ॥ ೧೧೮ ॥

---

೧೧೪-೧೧೫. ಸ್ಪಷ್ಟಗ್ರಹಗತಿಯನ್ನು ಸೂರ್ಯನ ಕಲಾತ್ಮಕವಾದ ಮಂದ ಫಲದಿಂದ ಗುಣಿಸಿ, ೨೧೬೦೦ ಇಪ್ಪತ್ತೊಂದುಸಾವಿರದ ಆರು ನೂರು ಕಲೆಗಳಿಂದ ಭಾಗಿಸಿ, ಬರುವ ಫಲವನ್ನು ಗ್ರಹಗಳಿಗೆ ಸೂರ್ಯನ ಮಂದಫಲಸಂಸ್ಕಾರದಂತೆ ಧನ ಅಥವ ಋಣವಾಡಬೇಕು. ಸ್ಫುಟಗ್ರಹವನ್ನು ಆನಯನ ಮಾಡಿದಂತೆಯೇ ಗ್ರಹಗತಿಗಳಿಗೂ ಭುಜ, ಕೋಟಜ್ಯಾನಯನಪೂರ್ವಕವಾಗಿ ಮಂದಫಲ ಮತ್ತು ಶೀಘ್ರಫಲಗಳನ್ನು ಆನಯನಮಾಡಿ, ಮಧ್ಯಗತಿಗೆ ಧನರ್ಣಸಂಸ್ಕಾರ ದಿಂದ ಸ್ಪಷ್ಟಗತಿಯನ್ನು ಕಂಡು ಹಿಡಿಯಬೇಕು.

೧೧೬-೧೧೮. ಇನ್ನು ಗ್ರಹಗಳಿಗೆ ವಕ್ರಗತಿಯನ್ನು ಕಂಡುಹಿಡಿಯಬೇಕಾದರೆ ಆಯಾಗ್ರಹದ ಭುಜಜ್ಯಾವನ್ನು ಗ್ರಹಗತಿಯಿಂದ ಗುಣಿಸಿ, ೨೨೫ ಇನ್ನೂರಿಪ್ಪತ್ತೈದರಿಂದ ಭಾಗಿಸಿ, ಮಂದಪರಿಧ್ಯಂಶಗಳಿಂದ ಗುಣಿಸಿ, ೩೬೦ ಮುನ್ನೂರರವತ್ತರಿಂದ ಭಾಗಿಸಬೇಕು ಬರುವ ಲಬ್ಧವೇ ಕಲಾತ್ಮಕವಾಗಿ ಮಂದಸ್ಫುಟಭುಕ್ತಿಯಾಗುವುದು. ಅದನ್ನು ಶೀಘ್ರೋಚ್ಚಭುಕ್ತಿಯಿಂದ ಕಳೆದು ತ್ರಿಜ್ಯಾ ಮತ್ತು ಶೀಘ್ರಕರ್ಣ ಇವುಗಳ ಅಂತರದಿಂದ ಗುಣಿಸಬೇಕು. ಆಗ ಬಂದ ಲಬ್ಧವು ತ್ರಿಜ್ಯೆಗಿಂತ ಅಧಿಕವಾಗಿದ್ದರೆ ಗ್ರಹಭುಕ್ತಿಗೆ ಕೂಡಬೇಕು.

ಕೃತರ್ತುಚಂದ್ರೈರ್ವೇದೇಂದ್ರೈಃ ಶೂನ್ಯತ್ರ್ಯೇಕೈರ್ಗುಣಾಷ್ಟಭಿಃ ।
ಶರರುದ್ರೈಶ್ಚತುರ್ಥೇಷುಕೇಂದ್ರಾಂಶೈರ್ಭೂಸುತಾದಯಃ ॥ ೧೦೯ ॥

ವಕ್ರಿಣಶ್ಚಕ್ರಶುದ್ಧ್ಯೈಸ್ತೈಸ್ತೈರಂಶೈರ್ಯಾಂತಿ ವಕ್ರತಾಂ ।
ಕ್ರಾಂತಿಜ್ಯಾ: ವಿಷುವದ್ಭಾಘ್ನೀ ಕ್ಷಿತಿಜ್ಯಾ ದ್ವಾದಶೋದ್ಧೃತಾ ॥ ೧೧೦ ॥

ತ್ರಿಜ್ಯಾಗುಣಾದಿನವ್ಯಾಸಭಕ್ತಾ ಚಾಪಂ ಚರಾದವಃ ।
ತತ್ಕಾರ್ಮುಕಮುಕ್ರಾಂತೌ ಧನಹಾನೀ ಪೃಥಕ್ಸ್ಥಿತೇ ॥ ೧೧೧ ॥

ನ್ಯೂನವಾಗಿದ್ದರೆ ಗ್ರಹಭುಕ್ತಿಯಲ್ಲಿ ಕಳೆಯಬೇಕು. ಉಳಿದ ಅಂಶವೇ ಗ್ರಹದ ವಕ್ರಾಂಶ ಅಥವ ವಕ್ರಗತಿಯೆನಿಸುವುದು. ಹೀಗೆಬಂದ ವಕ್ರಗತ್ಯಂಶಗಳ ಪರಮಾವಧಿಯು ಕುಜನಿಗೆ ೧೬೪ ನೂರರವತ್ತನಾಲ್ಕು. ಬುಧನಿಗೆ ೧೪೪ ನೂರನಲವತ್ತನಾಲ್ಕು. ಗುರುವಿಗೆ ೧೩೦ ನೂರಮೂವತ್ತು. ಶುಕ್ರನಿಗೆ ೧೬೩ ನೂರರವತ್ತಮೂರು. ಶನಿಗೆ ೧೧೫ ನೂರಹದಿನೈದು. ಈರೀತಿ ಅಂಶಗಳ ಪರಿಮಾಣದಲ್ಲಿರುತ್ತವೆಯೆಂದು ತಿಳಿಯಬೇಕು.

೧೧೦-೧೧೧. ಈ ವಕ್ರಾಂಶವನ್ನು ೩೬೦ ಮುನ್ನೂರರವತ್ತರಿಂದ ಕಳೆದರೆ ಉಳಿಯುವುದೇ ಋಜುಗ್ರಹದ ಸ್ಥಾನವಾಗುವುದು. ವಿಷುವದ್ದಿನದಲ್ಲಿ ಸ್ಥಾಪಿಸಲ್ಪಟ್ಟ ಶಂಕುವಿನ ಛಾಯೆಯಿಂದ ಆ ದಿನದ ಕ್ರಾಂತಿಜ್ಯಾವನ್ನು ಗುಣಿಸಿ ೧೨ ಹನ್ನೆರಡರಿಂದ ಭಾಗಿಸಿದರೆ, ಬರುವುದೇ ಕ್ಷಿತಿಜ್ಯಾ. ಇದಕ್ಕೆ ಕುಜ್ಯಾ ಎಂದೂ ಹೆಸರಿರುವುದು. ಅಂತಹ ಕ್ಷಿತಿಜ್ಯೆಯನ್ನು ತ್ರಿಜ್ಯೆಯಿಂದ ಗುಣಿಸಿ, ಅಹೋರಾತ್ರಾರ್ಧವೃತ್ತದ ಕರ್ಣದಿಂದ ಅಂದರೆ ದ್ಯುಜ್ಯೆಯಿಂದ ಭಾಗಿಸಿದರೆ, ಬರುವುದೇ ಚರಜ್ಯಾ. ಈ ಚರಜ್ಯೆಯನ್ನು ಧನುಸ್ಸಾಗಿ ಪರಿವರ್ತಿಸಿದರೆ ಬರುವುದೇ ಚರಕಲೆಗಳು. ಉತ್ತರಕ್ರಾಂತಿಯಿದ್ದರೆ ದಿನಮಾನದ ಚತುರ್ಥಾಂಶಕ್ಕೆ ಒಂದುಕಡೆ ಕೂಡಬೇಕು; ಒಂದುಕಡೆ ಕಳೆಯಬೇಕು. ಇದರಿಂದ ಅಹರ್ಮಾನ ಮತ್ತು ರಾತ್ರಿಮಾನಗಳು ಬರುವುವು. ಇದನ್ನು ಎರಡರಿಂದ

**ಸ್ಯಾಹೋರಾತ್ರಚತುರ್ಭಾಗೇ ದಿನರಾತ್ರಿದಲೇ ಸ್ಮೃತೇ ।**
**ಯಾಮ್ಯಕ್ರಾಂತೌ ವಿಪರ್ಯಸ್ತೇ ದ್ವಿಗುಣೇ ತು ದಿನಕ್ಷಪೇ ॥ ೧೨೨ ॥**

**ಭಭೋಗೋಽಷ್ಟಶತೀಲಿಪ್ತಾಃ ಖಾಶ್ವಿಶೈಲಾಸ್ತಥಾ ತಿಥೇಃ ।**
**ಗ್ರಹಲಿಪ್ತಾ ಭಗಾಭೋಗಾಥಾನಿ ಭುಕ್ತ್ಯಾ ದಿನಾದಿಕಂ ॥ ೧೨೩ ॥**

**ರವೀಂದುಯೋಗಲಿಪ್ತಾಸ್ತು ಯೋಗಾಭಭೋಗಭಾಜಿತಾಃ ।**
**ಗತಗಮ್ಯಾಶ್ಚ ಷಷ್ಟಿಘ್ನಾ ಭುಕ್ತಿಯೋಗಾಪ್ತನಾಡಿಕಾಃ ॥ ೧೨೪ ॥**

**ಅರ್ಕೋನಚಂದ್ರಲಿಪ್ತಾಸ್ತು ತಿಥಯೋ ಭೋಗಭಾಜಿತಾಃ ।**
**ಗತಗಮ್ಯಾಶ್ಚ ಷಷ್ಟಿಘ್ನಾ ನಾಡ್ಯೋ ಭುಕ್ತ್ಯಂತರೋದ್ಧೃತಾಃ ॥ ೧೨೫ ॥**

---

ಗುಣಿಸಿದರೆ ದಿನಮಾನಬರುವುದು. ದಕ್ಷಿಣಕ್ರಾಂತಿಯಾಗಿದ್ದರೆ ಧನರ್ಣವನ್ನು ವ್ಯತ್ಯಾಸಮಾಡಬೇಕು.

೧೨೩-೧೨೪. ಒಂದುಗ್ರಹಕ್ಕೆ ೧೮೦೦ ಸಾವಿರದೆಂಟನೂರು ನಕ್ಷತ್ರ ಭೋಗಕಲೆಗಳು. ೭೨೦ ಏಳನೂರಿಪ್ಪತ್ತು ತಿಥಿಭೋಗ ಕಲೆಗಳು. ಗ್ರಹವು ಯಾವ ನಕ್ಷತ್ರದಲ್ಲಿದೆಯೆಂಬುದನ್ನು ಕಂಡುಹಿಡಿಯಬೇಕಾದರೆ ಗ್ರಹಸ್ಫುಟದ ಕಲೆಗಳನ್ನು ೧೮೦೦ ಸಾವಿರದೆಂಟನೂರರಿಂದ ಭಾಗಿಸಿದರೆ ಬಂದ ಲಬ್ಧವೇ ಗತನಕ್ಷತ್ರಗಳನ್ನು ಅಶ್ವಿನ್ಯಾದಿಯಾಗಿ ತಿಳಿಸುತ್ತದೆ. ಉಳಿದ ಶೇಷದಿಂದ ಎಷ್ಟು ಭಾಗ ಕಳೆದಿದೆ ಎಂಬುದನ್ನೂ ತ್ರೈರಾಶಿಕದಿಂದ ತಿಳಿಯಬಹುದು. ಹಾಗೆಯೇ ೭೨೦ ಏಳನೂರಿಪ್ಪತ್ತರಿಂದ ಭಾಗಿಸಿ ತಿಥಿಯನ್ನು ಕಂಡುಹಿಡಿಯಬೇಕು. ಇನ್ನು ಯೋಗವನ್ನು ಸಾಧಿಸಬೇಕಾದರೆ ಸೂರ್ಯಚಂದ್ರರ ಸ್ಫುಟೈಕ್ಯವನ್ನು ೮೦೦ ಎಂಟನೂರರಿಂದ ಭಾಗಿಸಿದರೆ ಬರುವ ಲಬ್ಧವು ವಿಷ್ಕಂಭಾದಿಯಾಗಿ ಕಳೆದಿರುವ ಯೋಗಗಳನ್ನು ತಿಳಿಸುವುದು. ಉಳಿದ ಶೇಷದಿಂದ ಯೋಗದಲ್ಲಿ ಕಳೆದಿರುವ ಮತ್ತು ಉಳಿದಿರುವ ಘಟಿಕೆಗಳನ್ನು ಕಂಡುಹಿಡಿಯಬೇಕು.

೧೨೫-೧೨೬. ಸೂರ್ಯಚಂದ್ರರ ಸ್ಫುಟಾಂತರ ಕಲೆಗಳನ್ನು ೭೨೦ ಏಳನೂರಿಪ್ಪತ್ತರಿಂದ ಭಾಗಿಸಿ, ಬಂದ ಲಬ್ಧವನ್ನು ಗತತಿಥಿಯೆಂದೂ ಉಳಿದಿರುವ ಶೇಷ

ತಿಥಯಃ ಶುಕ್ಲಪ್ರತಿಪದೋ ದ್ವಿಘ್ನಾಃ ಸೈಕಾ ನಗಾಹತಾಃ ।
ಶೇಷಂ ಬವೋ ಬಾಲವಶ್ಚ ಕೌಲವಸ್ತೈತಿಲೋ ಗರಃ ॥ ೧೨೬ ॥

ವಣಿಜೋಽಥ ಭವೇದ್ವಿಷ್ಟಿಃ ಕೃಷ್ಣಭೂತಾಪರಾರ್ಧತಃ ।
ಶಕುನಿರ್ನಾಗಶ್ಚ ಚತುಷ್ಪದಂ ಕಿಂಸ್ತುಘ್ನಮೇವ ಚ ॥ ೧೨೭ ॥

ಶಿಲಾತಲೇಂಬುಸಂಶುದ್ಧೇ ವಜ್ರಲೇಪೇಽಪಿ ವಾ ಸಮೇ ।
ತತ್ರ ಶಂಕ್ವಂಗುಲೈರಿಷ್ಟೈಃ ಸಮಂ ಮಂಡಲಮಾಲಿಖೇತ್ ॥ ೧೨೮ ॥

ತನ್ಮಧ್ಯೇ ಸ್ಥಾಪಯೇಚ್ಛಂಕುಂ ಕಲ್ಪನಾದ್ವಾದಶಾಂಗುಲಂ ।
ತಚ್ಛಾಯಾಗ್ರಂ ಸ್ಪೃಶೇದ್ಯತ್ರ ವೃತ್ತೇ ಪೂರ್ವಾಪರಾಹ್ಣಯೋಃ ॥ ೧೨೯ ॥

ವನ್ನು ೬೦ ಅರವತ್ತರಿಂದ ಗುಣಿಸಿ, ರವಿಚಂದ್ರಾಂತರದಿಂದ ಭಾಗಿಸಿದರೆ ಬರುವುದು ಗಮ್ಯತಿಥಿಯ ಕಾಲವೆಂದೂ ಅರಿಯಬೇಕು. ಶುಕ್ಲಪ್ರತಿಪತ್ತಿನಿಂದ ಹಿಡಿದು ತಿಥಿಗಳು ಎರಡುಪಕ್ಷಗಳಲ್ಲಿಯೂ ಒಟ್ಟು ೩೦ ಮೂವತ್ತು ಆಗುವುವು. ಯಾವಾಗಲೂ ಕೃಷ್ಣಪಕ್ಷದ ಚತುರ್ದಶಿಯ ಉತ್ತರಾರ್ಧದಿಂದಲೇ ಸ್ಥಿರಕರಣಗಳು ಆರಂಭವಾಗುವುವು. ಶಕುನಿ, ನಾಗವಾನ್, ಚತುಷ್ಪಾತ್, ಕಿಂಸ್ತುಘ್ನ ಈ ನಾಲ್ಕು ಕರಣಗಳೇ ಸ್ಥಿರಕರಣಗಳು. ಇವು ಶುಕ್ಲಪ್ರತಿಪತ್ತಿನ ಪೂರ್ವಾರ್ಧಕ್ಕೆ ಪೂರ್ತಿಯಾಗಿ ಉತ್ತರಾರ್ಧದಿಂದ ಅಂದರೆ ಶುಕ್ಲಪ್ರತಿಪತ್ತಿನ ಉತ್ತರಾರ್ಧದಿಂದ ಬವಾದಿಯಾದ ಏಳು ಚರಕರಣಗಳು ಪ್ರಾರಂಭವಾಗುವುವು. ಬವ, ಬಾಲವ, ಕೌಲವ, ತೈತಿಲ, ಗರಜ, ವಣಿಕ್, ಮತ್ತು ಭದ್ರ ಇವೇ ಏಳು ಚರಕರಣಗಳೆನಿಸುವುವು.

೧೨೮-೧೩೧. ಈಗ ದಿಗ್ದೇಶಕಾಲಗಳೆಂಬ ಮೂರುವಿಷಯಗಳನ್ನು ವಿವರಿಸುವ ತ್ರಿಪ್ರಶ್ನಾಧಿಕಾರವು ಇಲ್ಲಿಂದ ಪ್ರಾರಂಭವಾಗುವುದು :—ಅದರಲ್ಲಿ ಮೊದಲು ದಿಕ್ಕು ಸಾಧಿಸುವ ವಿಧಾನ ಹೇಗೆಂದರೆ :—ನೀರಿನ ಮಟ್ಟದಂತೆ ಸಮವಾಗಿರುವ ಒಂದು ದೊಡ್ಡಬಂಡೆಯಮೇಲೆ ವಜ್ರಗಾರೆಯಿಂದ ಮೊದಲು ಭೂಮಿಯನ್ನು ಸಮವಾಗಿ ಮಾಡಿಕೊಳ್ಳಬೇಕು. ಅದರ ಸುತ್ತಲೂ ಒಂದು

ತತ್ರ ಬಿಂದೂ ವಿಧಾಯೋಭೌ ವೃತ್ತೇ ಪೂರ್ವಾಪರಾಭಿಧೌ ।
ತನ್ಮಧ್ಯೇ ತಿಮಿನಾ ರೇಖಾ ಕರ್ತವ್ಯಾ ದಕ್ಷಿಣೋತ್ತರಾ ॥ ೧೩೦ ॥

ಯಾಮ್ಯೋತ್ತರದಿಶೋರ್ಮಧ್ಯೇ ತಿಮಿನಾ ಪೂರ್ವಪಶ್ಚಿಮಾ ।
ದಿಙ್ಮಧ್ಯಮತ್ಸ್ಯೈಃ ಸಂಸಾಧ್ಯಾ ವಿದಿಶಸ್ತದ್ವದೇವ ಹಿ ॥ ೧೩೦ ॥

ಚತುರಸ್ರಂ ಬಹಿಃ ಕುರ್ಯಾತ್ಸೂತ್ರೈರ್ಮಧ್ಯಾದ್ವಿನಿಃ ಸೃತೈಃ ।
ಭುಜಸೂತ್ರಾಂಗುಲೈಸ್ತತ್ರ ದತ್ತೈರಿಷ್ಟಪ್ರಭಾ ಮತಾ ॥ ೧೩೨ ॥

ಪ್ರಾಕ್‌ಪಶ್ಚಿಮಾಶ್ರಿತಾ ರೇಖಾ ಪ್ರೋಚ್ಯತೇ ಸಮಮಂಡಲಂ ।
ಉನ್ಮಂಡಲಂ ಚ ವಿಷುವನ್ಮಂಡಲಂ ಪರಿಕೀರ್ತಿತಂ ॥ ೧೩೩ ॥

---

ಮಂಡಲಾಕಾರವನ್ನು ನಿರ್ಮಿಸಿಕೊಂಡು ಅದರಲ್ಲಿ ೩೬೦ ಮುನ್ನೂರರವತ್ತು ಭಾಗಗಳನ್ನು ಕಲ್ಪಿಸಿಕೊಳ್ಳಬೇಕು. ಈ ಮಂಡಲದ ಮಧ್ಯದಲ್ಲಿ ಹನ್ನೆರಡು ಅಂಗುಲ ಪ್ರಮಾಣವುಳ್ಳ ಒಂದು ಶಂಕುವನ್ನು ವಿಷುವದ್ದಿವಸದಲ್ಲಿ ಸ್ಥಾಪಿಸಬೇಕು. ಅದರ ನೆರಳು ಪೂರ್ವಾಪರಗಳಲ್ಲಿ ಸೂರ್ಯೋದಯ ಮತ್ತು ಅಸ್ತಕಾಲಗಳಲ್ಲಿ ಎಲ್ಲಿ ಬೀಳುತ್ತದೆಂಬುದನ್ನು ಆ ವೃತ್ತವಲ್ಲಿ ಗುರುತುಮಾಡಬೇಕು. ಆ ಎರಡುಗುರುತುಗಳಿಂದಲೂ, ಅವುಗಳ ಅಂತರವನ್ನೇ ವ್ಯಾಸವಾಗಿಟ್ಟುಕೊಂಡು, ಮತ್ಸ್ಯರೇಖೆಯನ್ನು ನಿರ್ಮಾಣಮಾಡಬೇಕು. ಅದು ದಕ್ಷಿಣೋತ್ತರವಾಗಿ ಬೀಳುವುದು. ಆ ರೇಖೆಗಳ ಮಧ್ಯಭಾಗವನ್ನು ಒಂದು ಸಮರೇಖೆಯಿಂದ ಗುರುತಿಸಬೇಕು. ಆ ಸಮರೇಖೆಯೇ ನಿಜವಾದ ಪೂರ್ವಪಶ್ಚಿಮ ದಿಕ್ಕುಗಳನ್ನು ಸೂಚಿಸುವ ರೇಖೆಯೆನಿಸುವುದು.

೧೩೨-೧೩೪. ಮಧ್ಯಸ್ಥಾನದಿಂದ, ಭುಜಸೂತ್ರಗಳ ಅಂಗುಲಸಂಖ್ಯೆಗಳನ್ನೇ ಮೂಲವಾಗಿಟ್ಟುಕೊಂಡು, ಚತುರಶ್ರಾಕಾರವಾದ ಮಂಡಲವನ್ನು ಮಾಡಬೇಕು. ಆ ಮಂಡಲವಲ್ಲಿ ಇಷ್ಟಶಂಕುವಿನ ಛಾಯಾಗ್ರವನ್ನು ಗುರುತು ಮಾಡಿಕೊಳ್ಳಬೇಕು. ಅದರಲ್ಲಿ ಪೂರ್ವಪಶ್ಚಿಮಾಭಿಮುಖವಾಗಿರುವ ರೇಖೆಗೆ ಸಮಮಂಡಲವೆಂದು ಹೆಸರು. ಅದನ್ನೇ ಉನ್ಮಂಡಲವೆಂದೂ, ವಿಷುವನ್ಮಂಡಲ

ರೇಖಾ ಪ್ರಾಚ್ಯಪರಾ ಸಾಧ್ಯಾ ವಿಷುವದ್ಭಾಗ್ರಗಾ ತಥಾ ।
ಇಷ್ಟಚ್ಛಾಯಾವಿಷುವತೋರ್ಮಧ್ಯಮಗ್ರಾಭಿಧೀಯತೇ ॥ ೧೩೪ ॥

ಶಂಕುಚ್ಛಾಯಾಕೃತಿಯುತೇರ್ಮೂಲಂ ಕರ್ಣೋಽಸ್ಯ ವರ್ಗತಃ ।
ಪ್ರೋಜ್ಝ್ಯ ಶಂಕುಕೃತಿಂ ಮೂಲಂ ಛಾಯಾ ಶಂಕುರ್ವಿಪರ್ಯಯಾತ್ ॥

ತ್ರಿಂಶತ್ಕೃತ್ಯೋ ಯುಗೇ ಭಾನಾಂ ಚಕ್ರಂ ಪ್ರಾಕ್ಪರಿಲಂಬತೇ ।
ತದ್ಗುಣಾದ್ಭೂದಿನೈರ್ಭಕ್ತಾದ್ದ್ಯುಗಣಾದ್ಯದವಾಪ್ಯತೇ ॥ ೧೩೬ ॥

ತದ್ದೋಸ್ತ್ರಿಘ್ನಾ ದಶಾಪ್ತಾಂಶಾ ವಿಜ್ಞೇಯಾ ಅಯನಾಭಿಧಾಃ ।
ತತ್ಸಂಸ್ಕೃತಾದ್ಗ್ರಹಾತ್ಕ್ರಾಂತಿಚ್ಛಾಯಾಚರದಲಾದಿಕಂ ॥ ೧೩೭ ॥

---

ವೆಂದೂ ಕರೆಯುವರು. ಆ ಚತುರಶ್ರಾಕಾರದಲ್ಲಿ ಪೂರ್ವಪಶ್ಚಿಮವಾದ ರೇಖೆಯನ್ನು ವಿಷುವಚ್ಛಾಯೆಯ ಮೇಲೆ ಬರುವಂತೆ ಎಳೆಯಬೇಕು. ಇಷ್ಟರೇಖೆ ಮತ್ತು ಅಗ್ರರೇಖೆಯ ಅಂತರವನ್ನೇ ಅಗ್ರಾ ಎಂಬ ಸಂಕೇತದಿಂದ ಕರೆಯುವರು.

೧೩೫. ಹನ್ನೆರಡಂಗುಲದ ಶಂಕು ಮತ್ತು ಅದರ ಛಾಯೆ, ಇವೆರಡರ ವರ್ಗಯೋಗದ ಮೂಲವೇ ಛಾಯಾಕರ್ಣವಾಗುವುದು. ಆ ಛಾಯಾಕರ್ಣದ ವರ್ಗದಿಂದ ಶಂಕುವರ್ಗವನ್ನು ಕಳೆದರೆ, ಬರುವುದೇ ಛಾಯಾಪ್ರಮಾಣವಾಗುವುದು. ಅಥವ ಛಾಯಾಕರ್ಣವರ್ಗದಿಂದ ಛಾಯಾವರ್ಗವನ್ನು ಕಳೆದು, ಮೂಲವನ್ನು ತೆಗೆದರೂ, ಈ ಛಾಯಾಪ್ರಮಾಣವು ದೊರೆಯುವುದು.

೧೩೬-೧೩೭. ಒಂದು ಮಹಾಯುಗದಲ್ಲಿ ಭಚಕ್ರವು ಪೂರ್ವಪಶ್ಚಿಮವಾಗಿ ೬೦೦ ಆರನೂರು ಸಾರಿ ಚಲನೆಯನ್ನು ಪಡೆದು, ಮತ್ತೆ ಯಥಾಸ್ಥಾನಕ್ಕೆ ಬಂದು ನಿಲ್ಲುತ್ತದೆ. ಆದ್ದರಿಂದ ಈ ೬೦೦ ಆರನೂರು ಎಂಬ ಭಚಕ್ರಭ್ರಮಣವನ್ನು ಮಹಾಯುಗದಿನಗಳಿಂದ ಭಾಗಿಸಿ, ಅಹರ್ಗಣದಿಂದ ಗುಣಿಸಿ, ಬಂದ ಸಂಖ್ಯೆಗೆ ಭುಜಾನಯನಮಾಡಿ, ಮೂರರಿಂದ (೩) ಗುಣಿಸಿ, ಹತ್ತರಿಂದ (೧೦) ಭಾಗಿಸಿದರೆ ಅಯನಾಂಶವು ಬರುವುದು. ಈ ಅಯನಾಂಶದಿಂದಲೇ ಗ್ರಹ ಮತ್ತು ಕ್ರಾಂತಿ, ಛಾಯಾ, ಚರಖಟೀ ಇತ್ಯಾದಿಗಳನ್ನು ಸಂಸ್ಕರಿಸಬೇಕು.

ಶಂಕುಚ್ಛಾಯಾಹತೇ ತ್ರಿಜ್ಯೇ ವಿಷುವತ್ಕರ್ಣಭಾಜಿತೇ ।
ಲಂಬಾಕ್ಷಜ್ಯೇ ತಯೋಶ್ಚಾಪೇ ಲಂಬಾಕ್ಷೌ ದಕ್ಷಿಣೌ ಸದಾ ॥ ೧೩೮ ॥

ಸ್ವಾಕ್ಷಾಪಕ್ರಮಯುತಿರ್ದಿಕ್ಸಾಮ್ಯೇಽಂತರಮನ್ಯಥಾ ।
ಶೇಷಂ ನತಾಂಶಾಃ ಸೂರ್ಯಸ್ಯ ತದ್ಬಾಹುಜ್ಯಾ ಚ ಕೋಟಿಜ್ಯಾ ॥ ೧೩೯ ॥

ಶಂಕುಮಾನಾಂಗುಲಾಭ್ಯಸ್ತೇ ಭುಜತ್ರಿಜ್ಯೇ ಯಥಾಕ್ರಮಂ ।
ಕೋಟಿಜ್ಯಯಾ ವಿಭಜ್ಯಾಪ್ತೇ ಛಾಯಾಕರ್ಣಾವಹರ್ದಲೇ ॥ ೧೪೦ ॥

ಸ್ವಾಕ್ಷಾರ್ಕನತಭಾಗಾನಾಂ ದಿಕ್ಸಾಮ್ಯೇಽಂತರಮನ್ಯಥಾ ।
ದಿಗ್ಭೇದೋಽಪಕ್ರಮಃ ಶೇಷಸ್ತಸ್ಯ ಜ್ಯಾ ತ್ರಿಜ್ಯಯಾ ಹತಾ ॥ ೧೪೧ ॥

---

೧೩೮. ಶಂಕು ಮತ್ತು ಆದರ ಛಾಯಾಪ್ರಮಾಣದಿಂದ ತ್ರಿಜ್ಯೆಯನ್ನು ಗುಣಿಸಿ ವಿಷುವತ್ಕರ್ಣದಿಂದ ಭಾಗಿಸಿದರೆ ಕ್ರಮವಾಗಿ ಲಂಬಜ್ಯಾ ಮತ್ತು ಅಕ್ಷಜ್ಯಾ ಇವು ದೊರಕುವುವು. ಇವುಗಳಿಗೆ ಧನುಸ್ಸನ್ನು ತೆಗೆದರೆ ದಕ್ಷಿಣ ಲಂಬಾಂಶ ಮತ್ತು ದಕ್ಷಿಣ ಅಕ್ಷಾಂಶ ಇವುಗಳನ್ನು ಸಾಧಿಸಿದಂತಾಗುವುದು.

೧೩೯. ಸ್ವದೇಶದ ಅಕ್ಷಾಂಶ ಮತ್ತು ಛಾಯಾ ಇವೆರಡೂ ಒಂದೇ ದಿಕ್ಕಿನಲ್ಲಿದ್ದರೆ ಆಗ ಸ್ವದೇಶದ ಅಕ್ಷಾಂಶಕ್ಕೆ ಮಧ್ಯಾಹ್ನಕಾಲದ ಸೂರ್ಯಕ್ರಾಂತ್ಯಂಶಗಳನ್ನು ಸೇರಿಸಬೇಕು. ಬೇರೆ ದಿಕ್ಕುಗಳಾದರೆ ಕಳೆಯಬೇಕು. ಉಳಿಯುವುದೇ ಸೂರ್ಯನ ನತಾಂಶ. ೯೦ ತೊಂಬತ್ತರಿಂದ ಕಳೆದ ನತಾಂಶವೇ ಉನ್ನತಾಂಶವೆನಿಸುವುದು.

೧೪೦-೧೪೩. ನತಾಂಶಜ್ಯಾವನ್ನೂ, ತ್ರಿಜ್ಯೆಯನ್ನೂ, ಶಂಕುಪ್ರಮಾಣದಿಂದ ಗುಣಿಸಿ, ಕೋಟಿಜ್ಯೆಯಿಂದ ಭಾಗಿಸಿದರೆ, ಬರುವ ಫಲವು ಛಾಯಾಕರ್ಣರೂಪವಾಗುವುದು. ಮತ್ತು ಅಕ್ಷಾಂಶ ಮತ್ತು ನತಾಂಶ ಇವುಗಳ ದಿಕ್ಕು ಒಂದೇ ಆದರೆ ಪರಸ್ಪರವಾಗಿ ಕಳೆಯಬೇಕು. ಬೇರೆಯ ದಿಕ್ಕುಗಳಾದರೆ ಕೂಡಬೇಕು. ಹೀಗೆ ಮಾಡುವುದರಿಂದ ಕ್ರಾಂತ್ಯಂಶವು ದೊರೆಯುವುದು. ಆ ಕ್ರಾಂತ್ಯಂಶದ ಜ್ಯಾವನ್ನು ತ್ರಿಜ್ಯೆಯಿಂದ ಗುಣಿಸಿ, ಪರಮಕ್ರಾಂತಿಜ್ಯೆಯಿಂದ

ಪರಮಾಪಕ್ರಮಜ್ಯಾಪ್ತಾ ಚಾಪಂ ಮೇಷಾದಿಗೇ ರವಿಃ ।
ಕರ್ಕಾದೌ ಪ್ರೋಜ್ಝ್ಯ ಚಕ್ರಾರ್ಧಾತ್ತುಲಾದೌ ಭಾರ್ಧಸಂಯುತಾತ್ ॥೧೪೨॥

ಮೃಗಾದೌ ಪ್ರೋಜ್ಝ್ಯ ಚಕ್ರಾತ್ತು ಮಧ್ಯಾಹ್ನೇಽರ್ಕಃ ಸ್ಫುಟೋ ಭವೇತ್ ।
ತನ್ಮಂದಮಸಕೃದ್ವಾಮಂ ಫಲಂ ಮಧ್ಯೋ ದಿವಾಕರಃ ॥ ೧೪೩ ॥

ಗ್ರಹೋದಯಾಃ ಪ್ರಾಣಹತಾಃ ಖಖಾಷ್ಟೈಕೋದ್ಧೃತಾ ಗತಿಃ ।
ಚಕ್ರಾಸವೋ ಲಬ್ಧಯುತೀ ಸ್ವಾಹೋರಾತ್ರಾಸವಃ ಸ್ಮೃತಾಃ ॥ ೧೪೪ ॥

ತ್ರಿಭದ್ಯುಕರ್ಣಾರ್ಧಗುಣಾ ಸ್ವಾಹೋರಾತ್ರಾರ್ಧಭಾಜಿತಾಃ ।
ಕ್ರಮಾದೇಕದ್ವಿತ್ರಿಭಜ್ಯಾ ತಚ್ಚಾಪಾನಿ ಪೃಥಕ್ಪೃಥಕ್ ॥ ೧೪೫ ॥

ಸ್ವಾಧೋಧಃ ಪ್ರವಿಶೋಧ್ಯಾಥ ಮೇಷಾಲ್ಲಂಕೋದಯಾಸವಃ ।
ಖಾಗಾಷ್ಟಯೋರ್ಥಗೋಽಗ್ನೈಕಾಃ ಶರತ್ರ್ಯಂಕಹಿಮಾಂಶವಃ ॥ ೧೪೬ ॥

---

ಭಾಗಿಸಿ, ಬಂದ ಜ್ಯಾಸಮೂಹಕ್ಕೆ ಧನುರಾನಯನಮಾಡಿದರೆ ಮೇಷಾದಿ ತ್ರಿರಾಶಿಸ್ಥಿತವಾದ ಸೂರ್ಯನಸ್ಥಾನವು ದೊರಕುವುದು. ಅದನ್ನು ಆರು ರಾಶಿಗಳಿಂದ ಕಳೆದರೆ ಕರ್ಕಾದಿಯಲ್ಲಿಯೂ, ಆರುರಾಶಿಯನ್ನು ಸೇರಿಸಿದರೆ ತುಲಾದಿಯಾಗಿಯೂ, ಹನ್ನೆರಡರಿಂದ ಕಳೆದರೆ ಮಕರಾದಿಯಾಗಿಯೂ ಇರುವ ಮಾಧ್ಯಾಹ್ನಿಕಕಾಲದ ಸೂರ್ಯಸ್ಫುಟವಾಗುವುದು.

೧೪೪. ಅಹೋರಾತ್ರಪ್ರಮಾಣಗಳನ್ನು ಕಂಡುಹಿಡಿಯಬೇಕಾದರೆ ಗ್ರಹಸ್ಫುಟವನ್ನೆಲ್ಲಾ ಪ್ರಾಣರೂಪವಾಗಿ ಬದಲಾಯಿಸಿಕೊಂಡು ೧೮೦೦ ಸಾವಿರದೆಂಟನೂರರಿಂದ ಭಾಗಿಸಿ, ಬಂದ ಲಬ್ಧವನ್ನು ಚಕ್ರಾಸುಗಳಾದ ೨೧೬೦೦ ಇಪ್ಪತ್ತೊಂದುಸಾವಿರದ ಆರನೂರಕ್ಕೆ ಕೂಡಿಸಿದರೆ ಆಯಾಗ್ರಹಗಳ ಅಹೋರಾತ್ರಾಸುಗಳು ದೊರಕುತ್ತವೆ.

೧೪೫-೧೪೮. ನಿರಕ್ಷದೇಶವೆಂದರೆ ಅಕ್ಷಾಂಶರಹಿತವಾದ ದೇಶವೆಂದರ್ಥವಾಗುವುದು. ಲಂಕಾ, ಯಮಕೋಟಿ, ರೋಮಕ, ಸಿದ್ಧಪುರ, ಎಂಬ

ಸ್ವದೇಶಚರಖಂಡೋನಾ ಭವಂತೀಷ್ಟೋದಯಾಸವಃ ।
ವ್ಯಸ್ತಾವ್ಯಸ್ತೈರ್ಯುತಾಸ್ತೈಸ್ತೈಃ ಕರ್ಕಟಾದ್ಯಾಸ್ತತಸ್ತು ಯಃ ॥ ೧೪೭ ॥

ಉತ್ಕ್ರಮೇಣ ಷಡೇವೈತೇ ಭವಂತೀಷ್ಟಾಸ್ತುಲಾದಯಃ ।
ಗತಭೋಗ್ಯಾಸವಃ ಕಾರ್ಯಾಃ ಸಾಯನಾಸ್ವೇಷ್ಟಭಾಸ್ಕರಾಃ ॥ ೧೪೮ ॥

---

ನಾಲ್ಕು ಊರುಗಳನ್ನು ನಿರಕ್ಷದೇಶಗಳೆಂದು ಶಾಸ್ತ್ರಜ್ಞರು ತೀರ್ಮಾನ ಮಾಡಿರುತ್ತಾರೆ. ಇಂತಹ ದೇಶಗಳ ಲಗ್ನ ಪ್ರಮಾಣದ ವಿಷಯವಾಗಿ ಗಣಿತ ಕ್ರಮವು ಹೇಗೆಂದರೆ :—

ಏಕರಾಶಿ, ದ್ವಿರಾಶಿ, ತ್ರಿರಾಶಿಗಳ ಜ್ಯಾವನ್ನು ತ್ರಿರಾಶಿ ದ್ಯುಜ್ಯೆಯಿಂದ ಅಂದರೆ ೧೩೮೭ ಸಾವಿರದ ಮುನ್ನೂರೆಂಭತ್ತೇಳರಿಂದ ಗುಣಿಸಿ, ಸ್ವಕ್ರಾಂತಿಜ್ಯಾ ಸಂಬಂಧವಾದ ದ್ಯುಜ್ಯೆಯಿಂದ ಭಾಗಿಸಬೇಕು. ಬಂದ ಜ್ಯಾರೂಪವಾದ ಫಲಕ್ಕೆ ಧನುಸ್ಸನ್ನು ಆನಯನಮಾಡಿ ಅವುಗಳನ್ನು ಭಿನ್ನಭಿನ್ನಸ್ಥಾನಗಳಲ್ಲಿ ಡಬೇಕು. ಅದರಲ್ಲಿ ಏಕರಾಶಿ ಸ್ಥಿತಜ್ಯಾಫಲವು ಯಥಾಸ್ಥಿತವಾಗಿರುತ್ತದೆ. ಅದರಲ್ಲಿ ಪ್ರಥಮಫಲವನ್ನು ದ್ವಿತೀಯಫಲದಲ್ಲಿಯೂ, ದ್ವಿತೀಯಫಲವನ್ನು ತೃತೀಯಫಲದಲ್ಲಿಯೂ ಕಳೆದು ಬಂದ ಲಬ್ಧವನ್ನು ಎರಡನೆಯ ಮತ್ತು ಮೂರನೆಯ ರಾಶಿಫಲವನ್ನಾಗಿ ಗ್ರಹಿಸಬೇಕು. ಇದು ನಿರಕ್ಷದೇಶದ ಉದಯಾಸುಗಳಾಗುವುವು. ಲಂಕಾದೇಶಕ್ಕೆ

ಮೇಷರಾಶಿಯ ಪ್ರಾಣಪ್ರಮಾಣ ೧೬೭೦ ಸಾವಿರದಾರನೂರೆಪ್ಪತ್ತು.
ವೃಷಭರಾಶಿಯ ,, ೧೭೯೫ ಸಾವಿರದೇಳನೂರತೊಂಬತ್ತೈದು.
ಮಿಥುನರಾಶಿಯ ,, ೧೯೩೫ ಸಾವಿರದೊಂಬೈನೂರಮೂವತ್ತೈದು.

ಹೀಗೆ ಬರುವುದು. ಇದನ್ನೇ ಸ್ವದೇಶದ ಮೇಷಾದಿಪ್ರಮಾಣವನ್ನಾಗಿ ಬದಲಾಯಿಸಿಕೊಳ್ಳಬೇಕಾದರೆ ಸ್ವದೇಶದ ಚರಖಂಡಗಳನ್ನು ಮೇಷಾದಿ ಮಿಥುನಾಂತವಾಗಿ ಕಳೆದುಕೊಳ್ಳಬೇಕು. ಆಗ ನಮ್ಮದೇಶದ ಲಗ್ನಪ್ರಮಾಣವಾಗುವುದು. ಮೇಷ, ವೃಷಭ, ಮಿಥುನಗಳೇ ವ್ಯುತ್ಕ್ರಮವಾಗಿ ಕಟಕ, ಸಿಂಹ, ಕನ್ಯಾ ರಾಶಿಗಳಾಗುವುವು. ಹೀಗೆ ಲಬ್ಧವಾದ ಮೇಷಾದಿ ಕನ್ಯಾಂತವಾದ ಆರು ರಾಶಿಗಳು ವ್ಯುತ್ಕ್ರಮವಾಗಿ ಅಂದರೆ ಕನ್ಯಾ, ಸಿಂಹ, ಕರ್ಕಟಾದಿರೂಪದಿಂದ ಅವೇ ತುಲಾದಿಷಟ್ಕಗಳಾಗುವುವು.

ಸ್ವೋದಯಾಸುಹತಾ ಭುಕ್ತಭೋಗ್ಯಾ ಭಕ್ತಾ ಖವಹ್ನಿಭಿಃ ।
ಅಭೀಷ್ಟಘಟಿಕಾಸುಭ್ಯೋ ಭೋಗ್ಯಾಸೂನ್ಪ್ರವಿಶೋಧಯೇತ್ ॥ ೧೪೯ ॥

ತದ್ವದೇವೈಷ್ಯಲಗ್ನಾಸೂನೇವಂ ಯಾತಾನ್ತಥೋತ್ಕ್ರಮಾತ್ ।
ಶೇಷಂ ಚೇತ್ತ್ರಿಂಶತಾಭ್ಯಸ್ತಮಶುದ್ಧೇನ ವಿಭಾಜಿತಂ ॥ ೧೫೦ ॥

ಭಾಗಹೀನಂ ಚ ಯುಕ್ತಂ ಚ ತಲ್ಲಗ್ನಂ ಕ್ಷಿತಿಜೇ ತದಾ ।
ಪ್ರಾಕ್ಪಶ್ಚಾನ್ನತನಾಡೀಭ್ಯಸ್ತದ್ವಲ್ಲಂಕೋದಯಾಸುಭಿಃ ॥ ೧೫೧ ॥

---

೧೪೯-೧೫೩. ಅಭೀಷ್ಟಕಾಲಕ್ಕೆ ಸೂರ್ಯನನ್ನು ಚಾಲನೆಮಾಡಿ, ಆ ರಾಶಿಯಲ್ಲಿ ಗತ ಮತ್ತು, ಭೋಗ್ಯವಾದ ಅಸುಗಳನ್ನು ಮೊದಲು ತಿಳಿದುಕೊಳ್ಳಬೇಕು. ಅನಂತರ ಸೂರ್ಯಾಕ್ರಾಂತರಾಶಿಯ ಸ್ವದೇಶೋದಯಾಸುಗಳಿಂದ ಗುಣಿಸಿ ಮೂವತ್ತರಿಂದ ಭಾಗಿಸಿದರೆ ಆ ಲಗ್ನದ ಗತ ಮತ್ತು ಗಮ್ಯವಾದ ಅಸುಗಳು ದೊರೆಯುತ್ತವೆ. ಅಭೀಷ್ಟಕಾಲದಲ್ಲಿ ಸೂರ್ಯೋದಯ ಘಟಿಕೆಗಳಿಂದ ಭೋಗ್ಯಾಸುಗಳನ್ನು ಕಳೆದರೆ ಆ ಲಗ್ನದ ಗತಾಸುಗಳು ಗೊತ್ತಾಗುತ್ತವೆ. ಆ ಲಗ್ನಪ್ರಮಾಣದಿಂದ ಗತಾಸುಗಳನ್ನು ಕಳೆದರೆ ಭೋಗ್ಯಾಸುಗಳು ದೊರೆಯುತ್ತವೆ. ಇಷ್ಟಕಾಲದಿಂದ ಯಾವ ಲಗ್ನದ ಪೂರ್ಣಪ್ರಮಾಣವನ್ನು ಕಳೆಯುವುದಕ್ಕಾಗುವುದಿಲ್ಲವೋ ಅದೇ ಅಭೀಷ್ಟಕಾಲದ ಸೂರ್ಯಾಕ್ರಾಂತಿರಾಶಿ ಎಂದು ತಿಳಿದು ಆ ರಾಶಿಯ ಗತಪ್ರಮಾಣವನ್ನು ಮೂವತ್ತರಿಂದ ಗುಣಿಸಿ, ಅಶುದ್ಧರಾಶಿಮಾನದಿಂದ ಭಾಗಿಸಬೇಕು. ಬಂದ ಲಬ್ಧವನ್ನು ಲಗ್ನದ ಪರಮಭಾಗಗಳಲ್ಲಿ ಕಳೆಯುವುದೋ (ನ್ಯೂನವಾಗಿದ್ದರೆ) ಅಥವ ಕೂಡುವುದೋ (ಅಧಿಕವಾಗಿದ್ದರೆ) ಮಾಡಿದರೆ ಅದು ತಾತ್ಕಾಲಿಕವಾದ ಕ್ಷಿತಿಜಸಂಬಂಧಿಯಾದ ಲಗ್ನವೆನಿಸುವುದು. ಇದರಲ್ಲಿ ಅಯನಾಂಶವನ್ನು ಕಳೆಯಬೇಕೆಂಬುದನ್ನು ಎಂದಿಗೂ ಮರೆಯಬಾರದು. ಇದರಿಂದ ದಶಮಲಗ್ನ ಅಥವ, ಮಧ್ಯಲಗ್ನವನ್ನು ಸಾಧನೆಮಾಡಬೇಕಾದರೆ ಅಭೀಷ್ಟಕಾಲಕ್ಕೆ ಸೂರ್ಯನ ಪೂರ್ವ, ಅಥವ ಪಶ್ಚಿಮನತಾಂಶಗಳನ್ನು ಕಂಡುಹಿಡಿದು, ಅದಕ್ಕೆ ಲಂಕಾದೇಶದ ಲಗ್ನಪ್ರಮಾಣ

ಭಾನೌ ಕ್ಷಯಧನೇ ಕೃತ್ವಾ ಮಧ್ಯಲಗ್ನಂ ತದಾ ಭವೇತ್ ।
ಭೋಗ್ಯಾಸೂನೂನಕಸ್ಯಾಥ ಭುಕ್ತಾಸೂನಧಿಕಸ್ಯ ಚ ॥ ೧೫೨ ॥

ಸಂಪಿಂಡ್ಯಾಂತರಲಗ್ನಾಸೂನೇವಂ ಸ್ಯಾತ್ಕಾಲಸಾಧನಂ ।
ವಿರಾಹ್ವರ್ಕ ಭುಜಾಂಶಾಶ್ಚೇದಿಂದ್ರಾಲ್ಪಾ ಸ್ಯಾದ್ಗ್ರಹೋ ವಿಧೋಃ ॥ ೧೫೩ ॥

ತೇಷಾಂ ಶಿವಘ್ನಾಃ ಶೈಲಾಪ್ತಾ ವ್ಯಾವರ್ಕಾಂಶಃ ಶರೋಂಗುಲ್ಯೈಃ ।
ಅರ್ಕಂ ವಿಧುರ್ವಿಧುಂ ಭೂಭಾ ಛಾದಯತ್ಯಥ ಛನ್ನಕಂ ॥ ೧೫೪ ॥

ಛಾದ್ಯ ಛಾದಕಮಾನಾರ್ಧಂ ಶರೋನಂ ಗ್ರಾಹ್ಯವರ್ಜಿತಂ ।
ತತ್ಸ್ವಚ್ಛನ್ನಂ ಚ ಮಾನೈಕ್ಯಾರ್ಧಾಂಶಷಷ್ಠಂ ದಶಾಹತಂ ॥ ೧೫೫ ॥

---

ವನ್ನು ಪೂರ್ವದಿಕ್ಕಿಗೆ ನತವಾಗಿದ್ದರೆ, ಕಳೆಯಬೇಕು. ಪಶ್ಚಿಮನತವಾಗಿದ್ದರೆ ಕೂಡಬೇಕು. ಈರೀತಿ ಮಾಡಿದರೆ ದಶಮಲಗ್ನ ಅಥವ ಮಧ್ಯಲಗ್ನವನು ಸಾಧನೆಮಾಡಿದಂತಾಗುವುದು.

೧೫೩. ಅನಂತರ ಇಷ್ಟಲಗ್ನ ಮತ್ತು ಸೂರ್ಯಸ್ಫುಟ ಇವುಗಳಿಗೆ ಮಧ್ಯೇ ಇರುವ ಎಲ್ಲಾ ಲಗ್ನಪ್ರಮಾಣಗಳನ್ನೂ ಒಟ್ಟುಗೂಡಿಸಿ, ತಾತ್ಕಾಲಿಕ ಲಗ್ನದ ಭುಕ್ತಾಂಶವನ್ನು ಮಾಡಿ, ಅದನ್ನು ಕೂಡಿ, ಭೋಗ್ಯಾಂಶವನ್ನು ಕಳೆಯಬೇಕು. ಹೀಗೆ ಕಾಲಸಾಧನೆಯನ್ನು ಮಾಡುವ ಕ್ರಮವನ್ನರಿಯಬೇಕು.

೧೫೪. ರಾಹುಸ್ಫುಟ ಮತ್ತು ಸೂರ್ಯಭುಜಾಂಶಗಳ ಅಂತರವು ಹದಿನಾಲ್ಕಕ್ಕೆ ಕಮ್ಮಿಯಾದರೆ ಆಗ ಚಂದ್ರಗ್ರಹಣಕ್ಕೆ ಅವಕಾಶವಿರುವುದು. ಆ ಅಂತರವನ್ನು ಹನ್ನೊಂದರಿಂದ ಗುಣಿಸಿ, ಏಳರಿಂದ ಭಾಗಿಸಿದರೆ ಬರುವುದೇ ಶರಲಿಪ್ತಿಗಳಾಗುವುವು. ಸೂರ್ಯಗ್ರಹಣದಲ್ಲಿ ಸೂರ್ಯನನ್ನು ಚಂದ್ರನೂ, ಚಂದ್ರಗ್ರಹಣದಲ್ಲಿ ಚಂದ್ರನನ್ನು ಭೂಛಾಯೆಯೂ ಆಚ್ಛಾದನೆಮಾಡುವರು.

೧೫೫-೧೫೬. ಸೂರ್ಯಗ್ರಹಣದಲ್ಲಿ, ಛಾದ್ಯ ಸೂರ್ಯ, ಛಾದಕ ಚಂದ್ರ; ಹಾಗೆಯೇ ಚಂದ್ರಗ್ರಹಣದಲ್ಲಿ ಛಾದ್ಯ ಚಂದ್ರ, ಛಾದಕ ಭೂಛಾ;

ಛನ್ನಘ್ನಮಸ್ಮಾನ್ಮೂಲಂ ತು ಖಾಂಗೋನಗ್ನಾ ವಪುರ್ಹೃತಂ ।
ಸ್ಥಿತ್ಯರ್ಧಂ ಘಟಿಕಾದಿಸ್ಸ್ಯಾದ್ವ್ಯಂಗುಬಾಹ್ವಂಶಸಂಮಿತ್ಯೈಃ ॥ ೧೫೬ ॥

ಇಷ್ಟೈಃ ಪಲೈಸ್ತದೂನಾಢ್ಯಂ ವ್ಯಗಾವೂನೇರ್ಕಷಡ್ಗುಣಃ ।
ತದನ್ಯಥಾದಿಕೇ ತಸ್ಮಿನ್ನೇವಂ ಸ್ಪಷ್ಟೇ ಸುಖಾಂತ್ಯಗೇ ॥ ೧೫೭ ॥

---

ಗ್ರಾಸಪ್ರಮಾಣವನ್ನು ಕಂಡುಹಿಡಿಯಬೇಕಾದರೆ ಛಾದ್ಯ ಮತ್ತು ಛಾದಕ ಇವುಗಳ ಮಾನಕಲೆಗಳನ್ನು ಒಟ್ಟುಗೂಡಿಸಿ, ಅದರಲ್ಲಿ ತಾತ್ಕಾಲಿಕವಾದ ಚಂದ್ರವಿಕ್ಷೇಪವನ್ನು ಕಳೆದರೆ ಉಳಿಯುವ ಭಾಗವೇ ಗ್ರಾಸಪ್ರಮಾಣವಾಗುವುದು. ಇನ್ನು ಪೂರ್ಣಗ್ರಹಣದಲ್ಲಿ ಸ್ಥಿತ್ಯರ್ಧ ಮತ್ತು ವಿಮರ್ದಾರ್ಧಗಳನ್ನು ಆನಯನಮಾಡಲು ಈರೀತಿಯಾಗಿ ಗಣಿತಮಾಡಬೇಕು :—

ಛಾದ್ಯ ಮತ್ತು ಛಾದಕಗಳ ಮಾನಯೋಗ ಮತ್ತು ಮಾನಾಂತರ ಇವುಗಳನ್ನು, ಎರಡುಕಡೆ ಇಟ್ಟುಕೊಂಡು, ಕ್ರಮವಾಗಿ ಎರಡನ್ನೂ ಅರ್ಧಮಾಡಿ, ಅವುಗಳ ವರ್ಗದಿಂದ ವಿಕ್ಷೇಪವನ್ನು ಕಳೆಯಬೇಕು. ಅವುಗಳ ಮೂಲವನ್ನು ಕಂಡುಹಿಡಿದು ೬೦ ಅರವತ್ತರಿಂದ ಗುಣಿಸಿ, ಸೂರ್ಯಚಂದ್ರರ ಗತ್ಯಂತರ ಕಲೆಗಳಿಂದ ಭಾಗಿಸಿದರೆ ಬರುವ ಫಲಗಳಲ್ಲಿ ಒಂದು ಸ್ಥಿತ್ಯರ್ಧ, ಒಂದು ವಿಮರ್ದಾರ್ಧವಾಗುವುದು. ಗ್ರಹಣಾರಂಭದಿಂದ ಗ್ರಹಣದ ಕೊನೆಯವರೆಗೆ ಇರುವ ಕಾಲಕ್ಕೆ ಸ್ಥಿತಿಯೆಂದು ಹೆಸರು. ಸ್ಥಿತ್ಯರ್ಧದಿಂದ ಗ್ರಹಣದ ಪ್ರಾರಂಭದಿಂದ ಮಧ್ಯಗ್ರಹಣ ಪರ್ಯಂತವಾಗಿರುವ ಕಾಲವು ತಿಳಿಯಬರುವುದು. ಹಾಗೆಯೇ ಪೂರ್ಣಗ್ರಹಣದಲ್ಲಿ ನಿಮೀಲನ, ಉನ್ಮೀಲನಕಾಲಗಳ ಅಂತರವೇ ವಿಮರ್ದಕಾಲವೆನಿಸುವುದು. ವಿಮರ್ದಾರ್ಧದಿಂದ ನಿಮೀಲನ ಮತ್ತು ಮಧ್ಯಗ್ರಹಣ ಇವುಗಳ ಅಂತರವು ತಿಳಿದುಬರುವುದು. ನಿಮ್ಮೀಲನವೆಂದರೆ ಛಾದ್ಯಮಂಡಲದ ಆಚ್ಛಾದನಸಮಾಪ್ತಿಯೆಂದೂ, ಉನ್ಮೀಲನವೆಂದರೆ ಆಚ್ಛಾದಿತವಾದವಸ್ತುವು ಬಿಡುವುದಕ್ಕೆ ಆರಂಭವಾಗುವ ಕಾಲವೆಂದೂ ಹೆಸರು.

ಗ್ರಾಸೇನ ಸ್ವಾಹತೇ ಜ್ಯಾದ್ಯಮಾನಾರ್ಧೇ ಸ್ಯುರ್ವಿಕೋಟಿಕಾಃ ।
ಗ್ರಾಹ್ಯಗ್ರಾಹಕಯೋಗಾರ್ಧಾಚ್ಛ್ಯೋಧ್ಯಾಃ ಸ್ವಚ್ಛನ್ನಲಿಪ್ತಿಕಾಃ ।
ತದ್ವರ್ಗಾತ್ಪ್ರೋಜ್ಝ್ಯ ತತ್ಕಾಲವಿಕ್ಷೇಪಸ್ಯ ಕೃತಿಂ ಪದಂ ॥ ೧೫೮ ॥

ಕೋಟಿಲಿಪ್ತಾ ರವೇಃ ಸ್ಪಷ್ಟಸ್ಥಿತ್ಯರ್ಧೇನಾಹತಾ ಹೃತಾಃ ।
ಮಧ್ಯೇನ ಲಿಪ್ತಾಸ್ತನ್ನಾಡ್ಯಃ ಸ್ಥಿತಿವದ್ಗ್ರಾಸನಾಡಿಕಾಃ ॥ ೧೫೯ ॥

ನತಜ್ಯಾಕ್ಷಜ್ಯಯಾಭ್ಯಸ್ತಾ ತ್ರಿಜ್ಯಾಪ್ತಾ ತಸ್ಯ ಕಾರ್ಮುಕಂ ।
ವಲನಾಂಶಾಃ ಸೌಮ್ಯಯಾಮ್ಯಾಃ ಪೂರ್ವಾಪರಕಪಾಲಯೋಃ ॥ ೧೬೦ ॥

ರಾಶಿತ್ರಯಯುತಾದ್ಗ್ರಾಹ್ಯಾತ್ಕ್ರಾಂತ್ಯಂಶೈರ್ದಿಕ್ಸಮ್ಯೈರ್ಯುತಾಃ ।
ಭೇದೇಽಂತರಾಜ್ಜ್ಯಾ ವಲನಾ ಸಪ್ತತ್ಯಂಗುಲಭಾಜಿತಾ ॥ ೧೬೧ ॥

೧೫೮-೧೫೯. ಅಭೀಷ್ಟಗ್ರಾಸದಿಂದ ಇಷ್ಟ ಕಾಲಾನಯನ ಕ್ರಮವು ಹೇಗೆಂದರೆ :—ಛಾದ್ಯ, ಛಾದಕ ಮಾನೈಕ್ಯಖಂಡದಿಂದ ಅಭೀಷ್ಟಗ್ರಾಸಗಳನ್ನು ಕಳೆಯಬೇಕು. ಉಳಿದ ಸಂಖ್ಯೆಗೆ ವರ್ಗಮಾಡಿ ಅಭೀಷ್ಟಗ್ರಾಸಕಾಲಿಕವಾದ ವಿಕ್ಷೇಪವರ್ಗವನ್ನು ಕಳೆದು, ಅದಕ್ಕೆ ಮೂಲವನ್ನು ತೆಗೆದರೆ ಬರುವುದೇ ಕೋಟಿಕಲೆಯಾಗುವುದು. ಈ ಕೋಟಿಕಲೆಗಳಿಗೆ ಹಿಂದೆ ಸ್ಥಿತ್ಯರ್ಧಾನಯನ ಮಾಡಿದ ರೀತಿಯಲ್ಲಿ ಸಂಸ್ಕಾರಮಾಡಿದರೆ ಇಷ್ಟಕಾಲವು ಗೋಚರವಾಗುವುದು.

೧೬೦-೧೬೧. ವಲನಸಾಧನಕ್ರಮವು ಹೀಗಿರುವುದು: -ಯಾವಕಾಲಕ್ಕೆ ವಲನಮಾಡಬೇಕೋ ಆಕಾಲದ ನತಾಂಶಕ್ಕೆ ಜ್ಯಾವನ್ನು ಮಾಡಿ, ಅದನ್ನು ಸ್ವದೇಶೀಯ ಅಕ್ಷಜ್ಯೆಯಿಂದ ಗುಣಿಸಿ, ತ್ರಿಜ್ಯೆಯಿಂದ ಭಾಗಿಸಿ, ಬರುವ ಫಲಕ್ಕೆ ಧನುರಾನಯನಮಾಡಿದರೆ ವಲನಾಂಶವು ದೊರೆಯುವುದು. ಸಮವೃತ್ತಾಪೇಕ್ಷಯಾ ಕ್ರಾಂತಿವೃತ್ತದಲ್ಲಿ ವಲಿತವಾಗಿರುವ ದಕ್ಷಿಣೋತ್ತರಾಂತವೇ ವಲನಾಂಶವೆಂದು ವ್ಯವಹರಿಸಲ್ಪಡುವುದು. ಮಧ್ಯಗ್ರಹಣಕಾಲಜ್ಞಾನಾರ್ಥವಾಗಿ ತಿಥಿಗೆ ಲಂಬನಸಂಸ್ಕಾರವನ್ನು ಸ್ಥಿರೀಕರಣಮಾಡಿ ಅನಂತರ ನತ್ಯಂಶವನ್ನು ಕಂಡು

ನತಾಂಶಾಸ್ತ್ರಶಾಂಸಾನೇ ಪ್ರಾಥ್ಯತಸ್ತದ್ವಿವರ್ಜಿತಃ ।
ತದ್ವಿಂದುಲಿಪ್ತೈಃ ಷಡ್ಭಿಸ್ತು ಭಕ್ತಾ ನೇಯಾ ನತಾಂಶದಿಕ್ ॥ ೧೬೨ ॥

ತಯೋರ್ನಾಡ್ಯೋರ್ಹಿ ಭಿನ್ನೈಕದಿಕ್ಕತಃ ಸ್ಫುಟತಾಂ ವ್ರಜೇತ್ ।
ತತಶ್ಛನ್ನಸ್ಥಿತಿದಲೇ ಸಾಧ್ಯೇ ಸ್ಥಿತ್ಯರ್ಧಷಟ್ಕ್ರಭಿಃ ॥ ೧೬೩ ॥

ಅಂತಸ್ತೈರ್ವಿತ್ರಿಭಂ ದ್ವಿಸ್ಥಂ ಪೂರ್ವವಲ್ಲಂಬನೇ ತಯೋಃ ।
ತಿಥಿವತ್ಸಂಸ್ಕೃತೇಸ್ತಾಭ್ಯಾಂ ಸ್ಥಿತ್ಯರ್ಧೇ ಭವತಃ ಸ್ಫುಟೇ ॥ ೧೬೪ ॥

ತಾಭ್ಯಾಂ ಹೀನಯುತೌ ಮಧ್ಯದರ್ಶಕಾಲೌ ಮುಖಾಂತಗೌ ।
ಅರ್ಕಾದ್ಯೂನಾ ಏಕ್ಷ್ಯ ಈಶಾ ನವಪಂಚದಶಾಂಶಕಾಃ ॥ ೧೬೫ ॥

ಕಾಲಾಂಶಾಸ್ತೈರೂನಯುಕ್ತೇ ರವೌ ಹ್ಯಸ್ತೋದಯೌ ವಿಧೋಃ ।
ದೃಷ್ಟ್ವಾ ಹ್ಯಾದೌ ಖೇಟಬಿಂಬಂ ದೃಗೌಚ್ಚ್ಯೇ ಲಂಬಮೀಕ್ಷ್ಯ ಚ ॥ ೧೬೬ ॥

---

ಹಿಡಿಯಬೇಕು. ದೃಕ್ಷೇಪವನ್ನು ಸೂರ್ಯಚಂದ್ರರ ಮಧ್ಯಗತಿಯ ಅಂತರದಿಂದ ಗುಣಿಸಿ, ಹದಿನೈದರಿಂದ ಮತ್ತೆ ಗುಣಿಸಿ, ತ್ರಿಜ್ಯೆಯಿಂದ ಭಾಗಿಸಿದರೆ, ಉಳಿಯುವುದೇ ನತ್ಯಂಶವೆನಿಸುವುದು.

೧೬೩-೧೬೪. ಈ ನತ್ಯಂಶಸಾಧನಾನಂತರದಲ್ಲಿ ಸ್ಥಿತ್ಯರ್ಧ, ವಿಮರ್ದಾರ್ಧಗಳನ್ನು ಸಾಧಿಸಬೇಕು. ಆಕಾಲದ ನತಿ ಮತ್ತು ಶರ ಇವುಗಳನ್ನು ಸಾಧಿಸಿಕೊಂಡು, ಮಧ್ಯಗ್ರಹಣಕಾಲಿಕವಾದ ದಶಮಲಗ್ನದಿಂದ (ವಿತ್ರಿಭಲಗ್ನದಿಂದ) ತಿಥ್ಯಾನಯನರೀತಿಯಲ್ಲಿ ಹಿಂದೆ ಹೇಳಿದ ಕ್ರಮದಿಂದ, ಸ್ಥಿತ್ಯರ್ಧ, ವಿಮರ್ದಾರ್ಧಗಳನ್ನು ಅಸಕೃತ್ ಶೋಧನೆಮಾಡಬೇಕು. ಇದರಿಂದ ಫಲವು ಸ್ಪಷ್ಟವಾಗಿ ಬರುವಂತೆ ಮಾಡಿಕೊಳ್ಳಬೇಕು. ಈ ಸ್ಥಿತ್ಯರ್ಧಾದಿಗಳಿಂದ ಪೂರ್ಣಗ್ರಹಣದ ಸ್ಪರ್ಶಮೋಕ್ಷಾದಿಗಳನ್ನು ಸುಲಭವಾಗಿ ಕಂಡುಹಿಡಿಯಬಹುದು.

೧೬೫-೧೬೬. ಆ ಸ್ಥಿತ್ಯರ್ಧದ ಹೀನದಿಂದ ಮತ್ತು ಯುತಿಯಿಂದ ಗ್ರಹಣದ ಆದ್ಯಂತಕಾಲಗಳು ಕಂಡುಬರುವುವು. ಸೂರ್ಯನಿಗೆ ೧೧ ಹನ್ನೊಂದು, ೧೦ ಹತ್ತು, ೯ ಒಂಬತ್ತು, ಈರೀತಿ ಕಾಲಾಂಶಗಳಿರುವುವು. ಈ ಕಾಲಾಂಶಗಳಿಂದ ಊನಮಾಡಿದ ಕಾಲವೇ ಚಂದ್ರನ ಅಸ್ತೋದಯಕಾಲ

ತಲ್ಲಂಬಜ್ಯಾಹತಬಿಂಬಾಂತರದ್ವಗಾ ವ್ಯಾಪ್ತರವಿಭ್ಯಕ್ತಭಾಃ ।
ಅನ್ಯತ್ರೇ ಸಾವಯವಾ ಜ್ಞೇಯಾ ಗತ್ಯೈಸ್ಯಾಸ್ತಿಥಯೋ ಬುಧೈಃ ॥ ೧೬೭ ॥

ಸ್ಯಸ್ತೇ ಯುಕ್ರಾಂತಿಭಾಗೈಶ್ಚ ದ್ವಿಘ್ನೈ ತಿಥ್ಯಾಹೃತಾ ಸ್ಫುಟಂ ।
ಸಂಸ್ಕಾರದಿಕ್ಕ್ಯಲಂಬನಮಂಗುಲಾದ್ಯಂ ಪ್ರಜಾಯತೇ ॥ ೧೬೮ ॥

ಸೇಷ್ಟಂಶೋನಾಃ ಸಿತಂ ತಿಥ್ಯೋ ವಲನಾಂಶೋನ್ನತಂ ವಿಧೋಃ ।
ಶೃಂಗಮನ್ಯತ್ರ ತದ್ವಾಚ್ಯಂ ವಲನಾಂಗುಲಲೇಖನಾತ್ ॥ ೧೬೯ ॥

ಪೂರ್ವಸ್ಥೇ ಗೋಂಕವಿಶಿಖಾಃ ಶೇಷಕರ್ಣಹತಾಃ ಪೃಥಕ್ ।
ವಿಶ್ವಭ್ಯಕರ್ಣಂಗಸಿದ್ಧಾಗ್ನಿಭಕ್ತಾ ಲಬ್ಧೋನಸಂಯುತಾಃ ॥ ೧೭೦ ॥

ತ್ರಿಜ್ಯಾಧಿಕೋನೇ ಶ್ರವಣೇ ವಪೂಂಷಿ ಸ್ಯ್ಯರ್ಕತಾಃ ಕುಜಾತ್ ।
ಋಜ್ವೋರನ್ಯಜ್ವೋರ್ವಿವರಂ ಗತ್ಯಂತರವಿಭಾಜಿತಂ ॥ ೧೭೧ ॥

ವಾಗುವುದು. ಮೊದಲು ಗ್ರಹಬಿಂಬಪ್ರಮಾಣವನ್ನೂ ಅನಂತರ ದೃಗ್ಜ್ಯಾ ಮತ್ತು ಲಂಬಜ್ಯಾವನ್ನೂ ಕಂಡುಹಿಡಿದು, ಅವೆರಡೂ ಒಂದೇದಿಕ್ಕಿಗೆ ಸಂಬಂಧಿಸಿದರೆ ಆಗ ಲಂಬಜ್ಯಾ ಮತ್ತು ಬಿಂಬಾಂತರಕಲೆಗಳಿಂದ ಗುಣಿಸಿ, ಹನ್ನೆರಡರಿಂದ ಭಾಗಿಸಬೇಕು. ಭಿನ್ನದಿಕ್ಕಾದರೆ ಕ್ರಾಂತ್ಯಂಶಗಳಿಂದ ಗುಣಿಸಿ, ಪುನಃ ಎರಡರಿಂದ ಗುಣಿಸಿ, ಹದಿನೈದರಿಂದ ಭಾಗಿಸಿದರೆ ಆಗ ಬಿಂಬಪ್ರಮಾಣವು ಬರುವುದು. ಈ ಬಿಂಬಪ್ರಮಾಣವು ಅಂಗುಲ್ಯಾತ್ಮಕವಾಗಿರುವುದು. ಇದೇ ಸ್ಫುಟಬಿಂಬಪ್ರಮಾಣಾನಯನಕ್ರಮವೆನಿಸುವುದು.

೧೬೯-೧೭೩. ಸೂರ್ಯಬಿಂಬಮಾನದಿಂದ ಚಂದ್ರಬಿಂಬ ಪ್ರಮಾಣವನ್ನು ಕಳೆದು, ೯೦೦ ಒಂಬೈನೂರರಿಂದ ಭಾಗಿಸಿ, ಚಂದ್ರಬಿಂಬಾಂಗುಲಗಳಿಂದ ಗುಣಿಸಿ, ಹನ್ನೆರಡರಿಂದ ಭಾಗಿಸಿದರೆ ಚಂದ್ರಮಂಡಲದಲ್ಲಿ ಕಂಡುಬರುವ ಶುಕ್ಲಭಾಗಪ್ರಮಾಣವು ತಿಳಿದುಬರುವುದು. ಸೂರ್ಯಚಂದ್ರಕ್ರಾಂತಿಗಳು ಪೂರ್ವದಿಕ್ಕಿನಲ್ಲಿದ್ದರೆ ೫೯೦ ಐನೂರತೊಂಬತ್ತರಿಂದ ಗುಣಿಸಿ ಕರ್ಣಜ್ಯೆಯಿಂದ ಭಾಗಿಸಿ ಬಂದ ಲಬ್ಧವನ್ನು ಸೂರ್ಯಸ್ಫುಟದಿಂದ ಭಾಗಿಸಿ ಮೂರರಿಂದ ಗುಣಿಸಬೇಕು. ಕರ್ಣವು ತ್ರಿಜ್ಯೆಗಿಂತ ಅಧಿಕವಾಗಿದ್ದರೆ ಋಣಮಾಡ

ವಕ್ರರ್ಜ್ವೋರ್ಗತಿಯೋಗೋಽಯಂ ಗಮ್ಯೇಽತೀತೇ ದಿನಾದಿಕಂ ।
ಋನಸ್ಥೌ ಸಂಸ್ಥಿತೌ ಹ್ಯೇಷೂದಕ್ಸಾಮ್ಯೇನ್ಯೇಽಂತರಂ ಯುತಿಃ ॥ ೧೭೩ ॥

ಯಾಮ್ಯೋದಕ್ಸ್ಫೇಟವಿವರಂ ಮಾನೈಕ್ಯಾರ್ಧಾಲ್ಪಕಂ ಯದಾ ।
ಯದಾ ಭೇದೋ ಲಂಬನಾದ್ಯಂ ಸ್ಫುಟಾರ್ಥಂ ಸೂರ್ಯಪರ್ವವತ್ ॥ ೧೭೨ ॥

ಏಕಾಯನಗತೌ ಸ್ಯಾತಾಂ ಸೂರ್ಯಾಚಂದ್ರಮಸೌ ಯದಾ ।
ತದ್ಯುತೌ ಮಂಡಲೇ ಕ್ರಾಂತ್ಯೋಸ್ತುಲ್ಯತ್ವೇ ವೈಧೃತಾಭಿಧಃ ॥ ೧೭೪ ॥

ವಿಪರೀತಾಯನಗತೌ ಚಂದ್ರಾರ್ಕೌ ಕ್ರಾಂತಿಲಿಪ್ತಿಕಾಃ ।
ಸಮಾಸ್ತದಾ ವ್ಯತೀಪಾತೋ ಭಗಣಾರ್ಧೇ ತಯೋರ್ಯುತೌ ॥ ೧೭೫ ॥

---

ಬೇಕು. ಕಮ್ಮಿಯಾಗಿದ್ದರೆ ಧನಮಾಡಬೇಕು. ಋಜುಗತಿಯಲ್ಲಿರುವ ಎರಡು ಗ್ರಹಗಳ ಅಂತರವನ್ನು ಅವರ ಗತ್ಯಂತರದಿಂದ ವಿಭಾಗಿಸಿದರೆ, ಅವರಿಗೆ ಆಗುವ ಯುದ್ಧದಿನದ ಅವಧಿಯು ತಿಳಿದುಬರುವುದು. ಎರಡು ಗ್ರಹಗಳು ವಕ್ರವಾಗಿದ್ದರೆ, ಪರಸ್ಪರವಾಗಿ ಅವುಗಳ ಸ್ಫುಟವನ್ನು ಕೂಡಿಸಿ, ಗತ್ಯಂತರದಿಂದ ಭಾಗಿಸಿ, ಉತ್ತರದಿಕ್ಕ್ರಾಂತಿಯಿದ್ದರೆ ಪರಸ್ಪರವಾಗಿ ಯುತಿಮಾಡಬೇಕು. ದಕ್ಷಿಣಕ್ರಾಂತಿಯಿದ್ದರೆ ಋಣಮಾಡಬೇಕು. ಕುಜಾದಿ ಗ್ರಹಗಳಿಗೆ ಸೂರ್ಯಗ್ರಹಣೋಕ್ತವಾದ ರೀತಿಯಲ್ಲಿಯೇ ಲಂಬನಗಣಿತವನ್ನು ಆನಯನಮಾಡಬೇಕು.

೧೭೪-೧೭೫. ವೈಧೃತಿ ಮತ್ತು ವ್ಯತೀಪಾತನಾಮಕಗಳಾದ ಮಹಾಪಾತಗಳನ್ನು ಆನಯನಮಾಡುವ ಕ್ರಮ ಹೇಗೆಂದರೆ:—ಸೂರ್ಯಚಂದ್ರರು ಒಂದೇ ಅಯನದಲ್ಲಿದ್ದು, ಅವರ ಕ್ರಾಂತಿಯೋಗವು ದ್ವಾದಶರಾಶಿಗಳಿಗೆ ಸಮನಾಗುವ ಕಾಲಕ್ಕೆ ವೈಧೃತಿಯೆಂದು ಹೆಸರು. ಭಿನ್ನಾಯನದಲ್ಲಿರುವ ಸೂರ್ಯಚಂದ್ರರ ಕ್ರಾಂತಿಲಿಪ್ತಗಳ ಯೋಗವು ಭಗಣಾರ್ಧಕ್ಕೆ ಸರಿಸಮನಾದರೆ ಅದೇ ವ್ಯತೀಪಾತವೆನಿಸುವುದು. ಅಯನಾಂಶಸಹಿತವಾಗಿ ದೃಕ್ತುಲ್ಯವಾಗಿರುವ,

ಭಾಸ್ಕರೇಂದ್ವೋರ್ಭಚಕ್ರಾಂತಚಕ್ರಾರ್ಧಾವಧಿಸಂಸ್ಥಯೋಃ ।
ದೃಕ್ತುಲ್ಯಸಾಧಿತಾಂಶಾದಿಯುಕ್ತಯೋಃ ಸ್ವಾವಪಕ್ರಮೌ ॥ ೧೭೬ ॥

ಅಥೋಜಪದಗಸ್ಯೇಂದೋಃ ಕ್ರಾಂತಿರ್ವಿಕ್ಷೇಪಸಂಸ್ಕೃತಾ ।
ಯದಿ ಸ್ಯಾದಧಿಕಾ ಭಾನೋಃ ಕ್ರಾಂತೇಃ ಪಾತೋ ಗತಸ್ತದಾ ॥ ೧೭೭ ॥

ನ್ಯೂನಾ ಚೇತ್ಸ್ಯಾತ್ತದಾ ಭಾವೀ ವಾಮಂ ಯುಗ್ಮಪದಸ್ಯ ಚ ।
ಪದಾನ್ಯತ್ವಂ ವಿಧೋಃ ಕ್ರಾಂತಿಃ ಕ್ಷೇಪಾಚ್ಚೇದ್ಯದಿ ಶುಧ್ಯತಿ ॥ ೧೭೮ ॥

ಕ್ರಾಂತ್ಯೋರ್ಜ್ಯೇ ತ್ರಿಜ್ಯಯಾ ಭಿನ್ನೇ ಪರಮಾಪಕ್ರಮೋದ್ಧೃತೇ ।
ತಚ್ಚಾಪಾಂತರಮರ್ಧಂ ವಾ ಯೋಜ್ಯಂ ಭಾವಿ ಗತೇ ತಗೌ ॥ ೧೭೯ ॥

---

ಸೂರ್ಯಚಂದ್ರರ ಸ್ಫುಟೈಕ್ಯವು ದ್ವಾದಶರಾಶ್ಯಾತ್ಮಕವಾದಾಗ ಅಥವ ಭಚಕ್ರಾರ್ಧಕ್ಕೆ ಸರಿಸಮನಾದಾಗ, ಆ ಎರಡು ಗ್ರಹಗಳಿಗೂ, ಕ್ರಾಂತ್ಯಾನಯನ ಮಾಡಬೇಕು.

೧೭೭-೧೭೮. ಕ್ರಾಂತ್ಯಾನಯನವಮಾಡಿದಮೇಲೆ, ಚಂದ್ರನು ಓಜಪದದಲ್ಲಿದ್ದರೆ, ಚಂದ್ರಕ್ರಾಂತಿಗೆ ವಿಕ್ಷೇಪವನ್ನು ಸೇರಿಸಿ ಸ್ಫುಟವಮಾಡಬೇಕು. ಆಗ ಸೂರ್ಯಕ್ರಾಂತಿಯು ಚಂದ್ರವಿಕ್ಷೇಪಕ್ಕಿಂತ ಅಧಿಕವಾಗಿದ್ದರೆ, ಪಾತವು ಕಳೆದು ಹೋಯಿತೆಂದೂ, ನ್ಯೂನವಾಗಿದ್ದರೆ ಮುಂದೆ ಬರುವುದೆಂದೂ, ತಿಳಿಯಬೇಕು. ಚಂದ್ರವಿಕ್ಷೇಪಾಪೇಕ್ಷೆಯೂ ಸಮೀಪದಲ್ಲಿದ್ದರೆ ಸೂರ್ಯಸ್ಫುಟದ ನ್ಯೂನಾಧಿಕ್ಯವನ್ನು ತಿಳಿದು, ಅದರಿಂದ ಗತಗವ್ಯಜ್ಞಾನವನ್ನು ಸಾಧಿಸಬೇಕು.

೧೭೯-೧೮೧. ಗತೈಷ್ಯಕಾಲವನ್ನು ಸಾಧಿಸುವ ವಿಧಾನ ಹೇಗೆಂದರೆ :— ಮೊದಲು ಎರಡು ಗ್ರಹಗಳಿಗೂ ಸ್ಪಷ್ಟಕ್ರಾಂತಿಯನ್ನು ಆನಯನವಮಾಡಬೇಕು. ನಂತರ ಸೂರ್ಯ, ಚಂದ್ರರ ಕ್ರಾಂತಿಯಿಂದ ಜ್ಯಾಸಾಧಿಸಿ, ತ್ರಿಜ್ಯೆಯಿಂದ ಗುಣಿಸಿ, ಪರಮಕ್ರಾಂತಿಜ್ಯೆಯಿಂದ ಭಾಗಿಸಿ, ಬಂದ ಲಬ್ಧಕ್ಕೆ ಧನುರಾನಯನ ಮಾಡಬೇಕು. ಭವಿಷ್ಯತ್ಪಾತವಾಗಿದ್ದರೆ ಅದನ್ನೂ ಚಂದ್ರಸ್ಫುಟಕ್ಕೆ ಸೇರಿಸಬೇಕು. ಗತಪಾತವಾದರೆ ಚಂದ್ರಸ್ಫುಟದಿಂದ ಕಳೆಯಬೇಕು. ಇದು ಸ್ಪಷ್ಟ

ಕೋಧ್ಯಂ ಚಂದ್ರಾದ್ಗತೇ ಪಾತೇ ತತ್ಪೂರ್ವಪತಿತಾದಿತಂ ।
ಚಂದ್ರಭುಕ್ತ್ಯಾ ಹೃತಂ ಭಾನೌ ಲಿಪ್ತಾದಿ ಶಶಿವತ್ಫಲಂ ॥ ೧೮೦ ॥

ತದ್ವಚ್ಛ್ರಕಾಂತಪಾತಸ್ಯ ಫಲಂ ದೇಯಂ ವಿಪರ್ಯಯಾತ್ ।
ಕರ್ಮೈತದಸಕೃತ್ತಾವತ್ಕ್ರಾಂತೀ ಯಾವತ್ಸಮೇ ತಯೋಃ ॥ ೧೮೧ ॥

ಕ್ರಾಂತ್ಯೋಃ ಸಮತ್ವೇ ಪಾತೋಽಥ ಪ್ರಕ್ಷಿಪ್ತಾಂಶೇ ವಿಧೌ ।
ಹೀನೇರ್ಧರಾತ್ರಿಕಾದ್ಯಾತೋ ಭಾವೀ ತಾತ್ಕಾಲಿಕೇಧಿಕೇ ॥ ೧೮೨ ॥

ಸ್ಥಿರೀಕೃತಾರ್ಧರಾತ್ರ್ಯಾರ್ಧ್ವೌ ದ್ವಯೋರ್ವಿವರಲಿಪ್ತಿಕಾಃ ।
ಷಷ್ಟಿಘ್ನಾ ಚಂದ್ರಭುಕ್ತ್ಯಾಪ್ತಾಃ ಪಾತಕಾಲಸ್ಯ ನಾಡಿಕಾಃ ॥ ೧೮೩ ॥

ರವೀಂದ್ವೋರ್ಮಾನಯೋಗಾರ್ಧಂ ಷಷ್ಟ್ಯಾ ಸಂಗುಣ್ಯ ಭಾಜಯೇತ್ ।
ತಯೋರ್ಭುಕ್ತ್ಯಂತರೇಣಾಪ್ತಂ ಸ್ಥಿತ್ಯರ್ಧಂ ನಾಡಿಕಾದಿ ಯತ್ ॥ ೧೮೪ ॥

---

ಚಂದ್ರನಾಗುವುದು. ಇನ್ನು ಸ್ಫುಟಸೂರ್ಯಾನಯನವಾಡಬೇಕಾದರೆ, ಚಂದ್ರ ಸಂಬಂಧಿಯಾದ ಸಂಸ್ಕೃತಫಲವನ್ನು ಸ್ಫುಟಸೂರ್ಯಗತಿಯಿಂದ ಗುಣಿಸಿ, ಚಂದ್ರ ಗತಿಯಿಂದ ಭಾಗಿಸಿ, ಬಂದ ಫಲವನ್ನು ಚಂದ್ರನಂತೆಯೇ ಸೂರ್ಯಸ್ಫುಟಕ್ಕೆ ಧನರ್ಣಸಂಸ್ಕಾರವಾಡಬೇಕು. ಹಾಗೆಯೇ ಚಂದ್ರಪಾತಕ್ಕೂ ಫಲಾನಯನ ಮಾಡಿ. ಧನರ್ಣದಲ್ಲಿ ಮಾತ್ರ ವ್ಯತ್ಯಸ್ತವಾಗಿ ಸಂಸ್ಕಾರವಾಡಬೇಕು. ಹೀಗೆ ಹೇಳಿದ ಗಣಿತಕ್ರಮವನ್ನು ಅನೇಕಬಾರಿ (ಅಸಕೃತ್) ಸಾಧನೆಮಾಡಿ, ಗಣಿತ ವನ್ನು ನಿರ್ದುಷ್ಟವನ್ನಾಗಿ ಮಾಡಿಕೊಳ್ಳಬೇಕು.

೧೮೨-೧೮೭. ಸೂರ್ಯ, ಚಂದ್ರರ ಸ್ಪಷ್ಟಕ್ರಾಂತಿಯು ಸಮವಾಗಿ ಕಂಡು ಬಂದರೆ, ಆಗಲೇ ಪಾತವು ಸಾಧಿತವಾಗುವುದು. ಆದರೆ ನಿರಯನನಾದ ಚಂದ್ರನು ಅರ್ಧರಾತ್ರಿಕಾಲಿಕನಾದ್ದರಿಂದ, ಸಾಯನಚಂದ್ರನಿಂದ ಆನೀತವಾದ ಕ್ರಾಂತ್ಯಂಶವು ಅರ್ಧರಾತ್ರಿಕನಾದ ಚಂದ್ರನ ಕ್ರಾಂತ್ಯಂಶಕ್ಕಿಂತ ನ್ಯೂನ ವಾಗಿದ್ದರೆ ಪಾತವು ಕಳೆಯಿತೆಂದು ತಿಳಿಯಬೇಕು. ಅಧಿಕವಾಗಿದ್ದರೆ ತಾತ್ಕಾಲಿಕವಾಗಿ ಚಾಲನೆಮಾಡಬೇಕು. ಹೀಗೆ ಸ್ಥಿರೀಕೃತವಾದ ಅರ್ಧ ರಾತ್ರಿಯ ಮತ್ತು ತಾತ್ಕಾಲಿಕಚಂದ್ರರ ಅಂತರಲಿಪ್ತಿಗಳನ್ನು ೬೦ ಅರವತ್ತರಿಂದ ಗುಣಿಸಿ, ಚಂದ್ರಭುಕ್ತಿಯಿಂದ ಭಾಗಿಸಿದರೆ, ಬರುವ ಕಾಲವೇ ಪಾತಕಾಲದ

ಪಾತಕಾಲಃ ಸ್ಫುಟೋ ಮಧ್ಯಃ ಸೋಽಪಿ ಸ್ಥಿತ್ಯರ್ಧವರ್ಜಿತಃ ।
ತಸ್ಯ ಸಂಭವಕಾಲಃ ಸ್ಯಾತ್ತತ್ಸಂಯೋಗೋಕ್ತಸಂಜ್ಞಕಃ ॥ ೧೮೫ ॥

ಆದ್ಯಂತಕಾಲಯೋರ್ಮಧ್ಯೇ ಕಾಲೋ ಜ್ಞೇಯೋತಿದಾರುಣಃ ।
ಪ್ರಜ್ವಲಜ್ಜ್ವಲನಾಕಾರಃ ಸರ್ವಕರ್ಮಸು ಗರ್ಹಿತಃ ॥ ೧೮೬ ॥

ಇತ್ಯೇತದ್ಗಣಿತೇ ಕಿಂಚಿತ್ಪ್ರೋಕ್ತಂ ಸಂಕ್ಷೇಪತೋ ದ್ವಿಜ ।
ಜಾತಕಂ ವಚ್ಮಿ ಸಮಯಾದ್ರಾಶಿಸಂಜ್ಞಾಪುರಸ್ಸರಂ ॥ ೧೮೭ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ದ್ವಿತೀಯಪಾದೇ ಜ್ಯೋತಿಷವರ್ಣನಂ ನಾಮ
ಚತುಃಪಂಚಾಶತ್ತಮೋಽಧ್ಯಾಯಃ

ಘಳಿಗೆಯಾಗುವುದು. ಈ ಪಾತಕಾಲಕ್ಕೆ ಗ್ರಹಣದಂತೆ ಸ್ಥಿತ್ಯರ್ಧವನ್ನೂ ಆನಯನಮಾಡಬೇಕು. ಸೂರ್ಯಚಂದ್ರರ ಪಾನಯೋಗಾರ್ಧವನ್ನು ೬೦ ಅರವತ್ತರಿಂದ ಗುಣಿಸಿ, ಅವರ ಭುಕ್ತ್ಯಂತರದಿಂದ ಭಾಗಿಸಿದರೆ ಬರುವುದೇ ನಾಡೀರೂಪವಾದ ಸ್ಥಿತ್ಯರ್ಧವೆನಿಸುವುದು. ಪಾತಕಾಲದಲ್ಲಿ ಸ್ಥಿತ್ಯರ್ಧವನ್ನು ಕಳೆದರೆ ಪಾತಾದಿಕಾಲವೂ, ಸ್ಥಿತ್ಯರ್ಧವನ್ನು ಕೂಡಿದರೆ ಪಾತಾಂತ್ಯಕಾಲವೂ ತಿಳಿಯುವುದು. ಈ ಆದ್ಯಂತಕಾಲದ ಮಧ್ಯಗತವಾದ ಕಾಲವು ಅತಿಭಯಂಕರವಾದದ್ದು. ಅಗ್ನಿಯಂತೆ ಸರ್ವವನ್ನೂ ದಹಿಸುವ ಕಾಲವಾದ್ದರಿಂದ, ಈಕಾಲದಲ್ಲಿ ಯಾವ ಶುಭಕರ್ಮಗಳನ್ನೂ ಮಾಡಬಾರದು. ಹೀಗೆ ಸಿದ್ಧಾಂತರೂಪವಾಗಿ ತೋರಿಬರುವ ಗಣಿತಕ್ರಮವನ್ನು ನಿನಗೆ ಸಂಕ್ಷೇಪವಾಗಿ ಹೇಳಿರುವೆನು. ಇನ್ನು ಮುಂದೆ ರಾಶಿಸಂಜ್ಞಾಪುರಸ್ಸರವಾಗಿ ಜಾತಕಭಾಗವನ್ನು ವಿವರಿಸುವೆನು ಎಂದು ಸನಂದನಮಹರ್ಷಿಗಳು ಜ್ಯೋತಿಷ್ಯದಲ್ಲಿ ಸಿದ್ಧಾಂತಭಾಗವನ್ನು ಉಪಸಂಹಾರಮಾಡಿದರು.

ಇಂತು ಶ್ರೀನಾರದೀಯಪುರಾಣ ಪೂರ್ವಭಾಗ ಬೃಹದುಪಾಖ್ಯಾನವೆಂಬ
ದ್ವಿತೀಯಪಾದದಲ್ಲಿ ಜ್ಯೋತಿಷವರ್ಣನೆಯೆಂಬ ಐವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

# ಪಂಚಪಂಚಾಶತ್ತಮೋಽಧ್ಯಾಯಃ

---

ಸನಂದನ ಉವಾಚ

ಮೂರ್ದ್ಧಾಸ್ಯ ಬಾಹುಹೃತ್ಕ್ರೋಡಾಂತರ್ಬಸ್ತಿವ್ಯಂಜನೋರವಃ ।
ಜಾನುಜಂಘಾಂಘ್ರಿಯುಗಲಂ ಕಾಲಾಂಗಾನಿ ಕ್ರಿಯಾದಯಃ ॥ ೧ ॥

ಭೌಮಾಸ್ಫುಜಿ ಬುಧೇಂದ್ವರ್ಕ ರವಿಸೌಮ್ಯಸಿತಾಃ ಕುಜಃ ।
ಗುರುಮಂದಾರ್ಕಿಗುರವೋ ಮೇಷಾದೀನಾಮಧೀಶ್ವರಾಃ ॥ ೨ ॥

ಹೋರೇ ವಿಷಮಭೇಽರ್ಕೇಂದ್ವೋಃ ಸಮಭೇ ಶಶಿಸೂರ್ಯಯೋಃ ।
ಆದಿಪಂಚನವಾಧೀಶಾ ದ್ರೇಷ್ಕಾಣೇಶಾಃ ಪ್ರಕೀರ್ತಿತಾಃ ॥ ೩ ॥

## ಐವತ್ತೈದನೆಯ ಅಧ್ಯಾಯವು

೧. ಮುಂದಿನ ವಿಷಯವನ್ನು ಸನಂದನಮಹರ್ಷಿಗಳು ವಿವರಿಸುತ್ತಾ, ಜ್ಯೋತಿಷನಲ್ಲಿ ಜಾತಕಭಾಗವನ್ನು ನಿರೂಪಿಸಿದರು :—ಕಾಲಪುರುಷನಿಗೆ ಮೇಷಾದಿ ದ್ವಾದಶರಾಶಿಗಳು ಕ್ರಮವಾಗಿ ತಲೆ, ಮುಖ, ತೋಳು, ಹೃದಯ, ಜಠರ, ಕಿಬ್ಬೊಟ್ಟೆ, ಗುಹ್ಯ, ಉಗುರು, ಮೊಳಕಾಲು, ಮುಂಗಾಲು, ಎರಡುಕಾಲುಗಳು ಹೀಗೆ ಅವಯವಗಳಾಗಿ ಪರಿಣಮಿಸಿವೆ.

೨. ಕುಜ, ಶುಕ್ರ, ಬುಧ, ಚಂದ್ರ, ಸೂರ್ಯ, ಬುಧ, ಶುಕ್ರ, ಕುಜ. ಗುರು, ಶನಿ, ಶನಿ, ಗುರು ಈರೀತಿ ದ್ವಾದಶರಾಶಿಗಳಿಗೂ ಕ್ರಮವಾಗಿ ಈ ಗ್ರಹಗಳು ಅಧಿಪತಿಗಳಾಗಿರುವರು.

೩-೪. ಒಂದು ಲಗ್ನಕ್ಕೆ ಎರಡು ಹೋರೆಗಳು. ವಿಷಮರಾಶಿಯಲ್ಲಿ ಮೊದಲನೆಯ ಹೋರೆಗೆ ಸೂರ್ಯನೂ, ಎರಡನೆಯದಕ್ಕೆ ಚಂದ್ರನೂ (ಅಧಿಪತಿಗಳು. ಸಮರಾಶಿಯಲ್ಲಿ ಇದಕ್ಕೆ ವಿರುದ್ಧವಾಗಿರುವುದು. ಅಂದರೆ ಮೊದಲನೆಯ ಹೋರೆಗೆ ಚಂದ್ರನೂ, ಎರಡನೆಯ ಹೋರೆಗೆ ಸೂರ್ಯನೂ ಅಧಿಪತಿಗಳು.

**ಪಂಚೇಷ್ವಷ್ಟಾದ್ರಿಪಂಚಾಂಶಾ ಕುಜಾರ್ಕೀಜ್ಯಜ್ಞಶುಕ್ರಗಾಃ ।**
**ಓಜೇ ವಿಪರ್ಯಯಾದ್ಯುಗ್ಮೇ ತ್ರಿಂಶಾಂಶೇಶಾಃ ಸಮೀರಿತಾಃ ॥ ೪ ॥**

---

ಒಂದು ಲಗ್ನಕ್ಕೆ ಮೂವತ್ತುಭಾಗಗಳಿವೆ. ಅವುಗಳಲ್ಲಿ ಹತ್ತು ಹತ್ತು ಭಾಗಗಳಿಗೆ ಒಂದೊಂದು ದ್ರೇಕ್ಕಾಣವೆಂದು ಹೆಸರು. ಅದರಲ್ಲಿ ಮೊದಲನೆಯ ದ್ರೇಕ್ಕಾಣಕ್ಕೆ ಲಗ್ನಾಧಿಪಯೂ, ಎರಡು, ಮೂರನೆಯ ದ್ರೇಕ್ಕಾಣಗಳಿಗೆ ಪಂಚಮ ಮತ್ತು ನವಮರಾಶ್ಯಧಿಪತಿಗಳೂ ಕ್ರಮವಾಗಿ ಒಡೆಯರಾಗುವರು. ಇನ್ನು ತ್ರಿಂಶಾಂಶ ವೆಂದರೆ ಒಂದುರಾಶಿಯ ಮೂವತ್ತನೆಯ ಒಂದುಭಾಗವೆಂದು $\frac{೧}{೩೦}$ ಹೆಸರು. ರಾಶಿಯು ಓಜವಾದಾಗ ಮೊದಲನೆಯ ಐದುಭಾಗಕ್ಕೆ ಕುಜನೂ, ಮುಂದಿನ ಐದುಭಾಗಗಳಿಗೆ ಶನಿಯೂ, ಮುಂದಿನ ಎಂಟುಭಾಗಗಳಿಗೆ ಶನಿಯೂ, ಮುಂದಿನ ಏಳುಭಾಗಗಳಿಗೆ ಶುಕ್ರನೂ, ತ್ರಿಂಶಾಂಶಾಧಿಪತಿಗಳಾಗುವರು. ಯುಗ್ಮರಾಶಿ ಯಾದರೆ ಇದಕ್ಕೆ ವ್ಯತ್ಯಸ್ತವಾಗಿ ಮೊದಲನೆಯ ಆಧಿಪತ್ಯವು ಶುಕ್ರನಿಗೂ, ಮುಂದೆ ಬುಧನಿಗೂ, ನಂತರ ಗುರುವಿಗೂ, ಆಮೇಲೆ ಶನಿಗೂ, ಅದಾದನಂತರ ಕುಜನಿಗೂ, ಅವರವರಿಗೆ ಹೇಳಿರುವ ಭಾಗಗಳಿಂದಲೇ ಆಧಿಪತ್ಯವು ಬರುವುದು.

### — ತ್ರಿಂಶಾಂಶಗಳ ಪಟ್ಟಿ —

| ಹೋರೆ | ಅಧಿಪತಿಗಳು | | ಭಾಗಗಳು | | |
|---|---|---|---|---|---|
| (1) | ಕುಜ | — | ೫ | ಐದು | ಇದು ಓಜರಾಶಿಯಲ್ಲಿ ತ್ರಿಂಶಾಂಶಗಳು. |
| (2) | ಶನಿ | — | ೫ | ಐದು | |
| (3) | ಗುರು | — | ೮ | ಎಂಟು | |
| (4) | ಬುಧ | — | ೭ | ಏಳು | |
| (5) | ಶುಕ್ರ | — | ೫ | ಐದು | |

### — ಯುಗ್ಮರಾಶಿಯಲ್ಲಿ —

| | | | | |
|---|---|---|---|---|
| (1) | ಶುಕ್ರ | — | ೫ | ಐದು |
| (2) | ಬುಧ | — | ೭ | ಏಳು |
| (3) | ಗುರು | — | ೮ | ಎಂಟು |
| (4) | ಶನಿ | — | ೫ | ಐದು |
| (5) | ಕುಜ | — | ೫ | ಐದು |

ತ್ರಿಯೈಣಶೌಲಿಕರ್ಕಾದ್ಯಾ ಮೇಷಾದಿಷು ನವಾಂಶಕಾಃ ।
ಸ್ವಭಾದ್ದ್ವಾದಶಭಾಗೇಶಾಃ ಷಡ್ವರ್ಗಂ ರಾಶಿಪೂರ್ವಕಂ ॥ ೫ ॥

ಗೋಜಾಶ್ವಿಕರ್ಕಯುಗ್ಮೇನ ರಾತ್ರ್ಯಾಖ್ಯಾ ಪೃಷ್ಠಕೋದಯಾಃ ।
ಶೇಷಾ ದಿನಾಖ್ಯಾಸ್ತೂಭಯಂ ತಿಮಿಃ ಕ್ರೂರಃ ಸೌಮ್ಯಃ ಪುಮಾನ್ ॥ ೬ ॥

ಪುಮಾನ್ ಸ್ತ್ರೀ ಚ ಕ್ಲೀಬಶ್ಚರಸ್ಥಿರದ್ವಿಸ್ವಭಾವಕಾಃ ।
ಮೇಷಾದ್ಯಾಃ ಪೂರ್ವತೋ ದಿಕ್ಸ್ಥಾಃ ಸ್ವಸ್ವಸ್ಥಾನಚರಾಸ್ತಥಾ ॥ ೭ ॥

೫. ಮೇಷ, ಮಕರ, ಕಟಕ ಮತ್ತು ತುಲಾ ಈ ರಾಶಿಗಳನ್ನೇ ಮೊದಲುಮಾಡಿಕೊಂಡು ನವಗ್ರಹಗಳು ನವಾಂಶಾಧಿಪತಿಗಳಾಗುವರು. ದ್ವಾದಶಾಂಶಗಳಿಗೆ ರಾಶ್ಯಾದಿಯಾಗಿ ಆಯಾ ರಾಶ್ಯಧಿಪತಿಗಳೇ ಒಡೆಯರಾಗುವರು. ಹೀಗೆ ಲಗ್ನ, ಹೋರಾ, ದ್ರೇಕ್ಕಾಣ, ನವಾಂಶ, ದ್ವಾದಶಾಂಶ ತ್ರಿಂಶಾಂಶ ಈ ಆರು ವಿಭಾಗಗಳಿಗೆ ಷಡ್ವರ್ಗಗಳೆಂದು ಹೆಸರು.

೬-೭. ಮೇಷ, ವೃಷಭ, ಮಿಥುನ, ಕಟಕ, ಧನುಸ್ಸು ಇವು ಪೃಷ್ಠೋದಯರಾಶಿಗಳು. ಇವುಗಳಿಗೆ ರಾತ್ರಿಸಂಜ್ಞೆಗಳೂ ಉಂಟು. ಉಳಿದ ರಾಶಿಗಳು ಅಂದರೆ ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಏಳು ರಾಶಿಗಳು ಶೀರ್ಷೋದಯರಾಶಿಗಳೆಂದು ಸಂಜ್ಞೆಯನ್ನು ಹೊಂದುವುವು. ಇವುಗಳಲ್ಲಿ ಮೀನರಾಶಿಗೆ ಉಭಯೋದಯರಾಶಿಯೆಂದು ಸಂಜ್ಞೆಯಿದೆ. (ಮಿಥುನವೂ ಉಭಯೋದಯರಾಶಿಯೆಂದು ಇತರ ಗ್ರಂಥಗಳು ಹೇಳುತ್ತವೆ.) ಮೇಷಾದಿಯಾಗಿ ಕ್ರೂರ, ಸೌಮ್ಯ ಎಂಬ ವಿಭಾಗದಿಂದ ಕ್ರೂರ ಸೌಮ್ಯರಾಶಿಗಳನ್ನು ತಿಳಿಯಬೇಕು. ಹಾಗೆಯೇ ಯಥಾಕ್ರಮವಾಗಿ ಪುಮಾನ್, ಸ್ತ್ರೀ, ನಪುಂಸಕ ಎಂಬ ಭೇದವೂ, ಚರ, ಸ್ಥಿರ ಮತ್ತು ದ್ವಿಸ್ವಭಾವ ಎಂಬ ಸಂಕೇತಗಳೂ, ಪೂರ್ವಾದಿ ನಾಲ್ಕುದಿಕ್ಕುಗಳೂ, ಮೇಷಾದಿರಾಶಿಗಳಿಗೆ ಕ್ರಮವಾಗಿ ವ್ಯವಸ್ಥಿತವಾಗಿವೆ.

**ಅಜೋಕ್ಷಮೃಗಾಂಗನಾಕರ್ಕಟೇರ್ಝಷಜೂಕಾ ಇನಾದಿತಃ ।**
**ಉಚ್ಚಾನಿ ದ್ವಿತ್ರಿಮನುಯುಕ್ತಿಥೀಷು ಭನಖಾಂಶಕೈಃ ॥ ೮ ॥**

**ತತ್ತತ್ಸಪ್ತಮನೀಚಾನಿ ಪ್ರಾಙ್ಮಧ್ಯಾನ್ತ್ಯಾಂಶಕಾಃ ಕ್ರಮಾತ್ ।**
**ವರ್ಗೋತ್ತಮಾಶ್ಚರಾರ್ಥೇಷು ಭಾವಾದ್ವಾದಶ ಮೂರ್ತಿಮಾನ್ ॥ ೯ ॥**

**ಸಿಂಹೋಕ್ಷಾವಿಸ್ತ್ರೀಕ್ಷತೌಲಿಕುಂಭಾಃ ಸೂರ್ಯಾತ್ತ್ರಿಕೋಣಭಂ ।**
**ಚತುರಸ್ರಂ ತುರ್ಯಮೃತ್ಯುತ್ರಿಕೋಣಂ ನವಪಂಚಮಂ ॥ ೧೦ ॥**

---

೮-೧೦. ಸೂರ್ಯನಿಗೆ—ಮೇಷರಾಶಿಯಲ್ಲಿ ೧೦ ಹತ್ತನೆಯ ಭಾಗವು.
ಚಂದ್ರನಿಗೆ—ವೃಷಭರಾಶಿಯಲ್ಲಿ ೩ ಮೂರನೆಯ ಭಾಗವು.
ಕುಜನಿಗೆ—ಮಕರರಾಶಿಯಲ್ಲಿ ೨೮ ಇಪ್ಪತ್ತೆಂಟನೆಯ ಭಾಗವು.
ಬುಧನಿಗೆ—ಕನ್ಯಾರಾಶಿಯಲ್ಲಿ ೧೫ ಹದಿನೈದನೆಯ ಭಾಗವು.
ಗುರುವಿಗೆ—ಕಟಕದಲ್ಲಿ ೫ ಐದನೆಯ ಭಾಗವು.
ಶುಕ್ರನಿಗೆ—ಮೀನದಲ್ಲಿ ೨೭ ಇಪ್ಪತ್ತೇಳನೆಯ ಭಾಗವು.
ಶನಿಗೆ—ತುಲಾರಾಶಿಯಲ್ಲಿ ೨೦ ಇಪ್ಪತನೆಯ ಭಾಗವೂ

ಪರಮೋಚ್ಚಾಂಶವಾಗಿರುತ್ತದೆ. ಈ ಗ್ರಹಗಳಿಗೆ ಆ ರಾಶಿಗಳು ಉಚ್ಚರಾಶಿಗಳೆಂದೂ, ಅದಕ್ಕೆ ಏಳನೆಯರಾಶಿಗಳು ನೀಚರಾಶಿಗಳೆಂದೂ ಅದರಲ್ಲಿ ಹಿಂದೆ ಹೇಳಿದಂತೆಯೇ ಅಷ್ಟಷ್ಟುಭಾಗಗಳು ಪರಮನೀಚಾಂಶವೆಂದೂ ವ್ಯವಹಾರವಿರುವುದು. ಸೂರ್ಯನಿಗೆ ಮೇಷರಾಶಿಯು ಉಚ್ಚ. ಅದರಲ್ಲಿ ೧೦ ನೆಯ ಭಾಗವು ಪರಮೋಚ್ಚವೆನಿಸುವುದು. ಹೀಗೆಯೇ ಎಲ್ಲಕ್ಕೂ ತಿಳಿಯಬೇಕು.

**— ಸೂರ್ಯಾದಿಗಳಿಗೆ ಉಚ್ಚನೀಚಾಂಶಗಳನ್ನು ತೋರಿಸುವ ಪಟ್ಟಿ —**

| | ಗ್ರಹಗಳು. | ಉಚ್ಚ. | ಪರಮೋಚ್ಚ(ಭಾಗಗಳು) | ನೀಚ. | ಪರಮನೀಚಭಾಗ |
|---|---|---|---|---|---|
| (1) | ಸೂರ್ಯ | ಮೇಷರಾಶಿ | ಇದರಲ್ಲಿ ೧೦ನೆಯ ಭಾಗ | ತುಲಾರಾಶಿ | ೧೦ನೆಯ ಭಾಗ |
| (2) | ಚಂದ್ರ | ವೃಷಭ ,, | ,, ೩ನೆಯ ,, | ವೃಶ್ಚಿಕರಾಶಿ | ೩ನೆಯ ,, |
| (3) | ಕುಜ | ಮಕರ ,, | ,, ೨೮ನೆಯ ,, | ಕಟಕ ,, | ೨೮ನೆಯ ,, |
| (4) | ಬುಧ | ಕನ್ಯಾ ,, | ,, ೧೫ನೆಯ ,, | ಮೀನ ,, | ೧೫ನೆಯ ,, |
| (5) | ಗುರು | ಕಟಕ ,, | ,, ೫ನೆಯ ,, | ಮಕರ ,, | ೫ನೆಯ ,, |
| (6) | ಶುಕ್ರ | ಮೀನ ,, | ,, ೨೭ನೆಯ ,, | ಕನ್ಯಾ ,, | ೨೭ನೆಯ ,, |
| (7) | ಶನಿ | ತುಲಾ ,, | ,, ೨೦ನೆಯ ,, | ಮೇಷ ,, | ೨೦ನೆಯ ,, |

**ರಿಃಫಾಷ್ಟಷಷ್ಠಂ ತ್ರಿಕಭಂ ಕೇಂದ್ರಂ ಪ್ರಾಕ್ತುರ್ಯಸಪ್ತಖಂ ।**
**ನೃಪಾದಃ ಕೀಟಪಶವೋ ಬಲಾಢ್ಯಾಃ ಕೇಂದ್ರಗಾಃ ಕ್ರಮಾತ್ ॥ ೧೧ ॥**

**ಕೇಂದ್ರಾತ್ಪರಂ ಪಣಪರಮಾಪೋಕ್ಲಿಮಮತಃ ಪರಂ ।**
**ರಕ್ತಃ ಶ್ವೇತಃ ಶುಕನಿಭಃ ಪಾಟಲೋ ಧೂಮ್ರಪಾಂಡರೌ ॥ ೧೨ ॥**

**ಚಿತ್ರಃ ಕೃಷ್ಣಃ ಪೀತಪಿಂಗೌ ಬಭ್ರುಃ ಸ್ವಚ್ಛಃ ಪ್ರಭಾ ಕ್ರಿಯಾತ್ ।**
**ಸ್ವಾಮ್ಯಾಕಾಖ್ಯಪ್ಲವತ್ವಂ ಸ್ಯಾದ್ದ್ವಿತೀಯೋ ವೇಶಿರರ್ಕಭಾತ್ ॥ ೧೩ ॥**

**ಕಾಲಾತ್ಮಾರ್ಕೋ ಮನಶ್ಚಂದ್ರಃ ಕುಜಃ ಸತ್ವಂ ವಚೋ ಬುಧಃ ।**
**ಜೀವೋ ಜ್ಞಾನಸುಖೇ ಶುಕ್ರಃ ಕಾಮೋ ದುಃಖಂ ದಿನೇಶಜಃ ॥ ೧೪ ॥**

ಸೂರ್ಯನಿಗೆ ಸಿಂಹವೂ, ಚಂದ್ರನಿಗೆ ವೃಷಭವೂ, ಕುಜನಿಗೆ ಮೇಷವೂ, ಬುಧನಿಗೆ ಕನ್ಯೆಯೂ, ಗುರುವಿಗೆ ಧನುಸ್ಸೂ, ಶುಕ್ರನಿಗೆ ತುಲಾರಾಶಿಯೂ, ಶನಿಗೆ ಕುಂಭವೂ ಮೂಲತ್ರಿಕೋಣರಾಶಿಗಳಾಗುವುವು. ಇವುಗಳಲ್ಲಿ ಕ್ರಮವಾಗಿ ೨೦ ಇಪ್ಪತ್ತು, ೨೭ ಇಪ್ಪತ್ತೇಳು, ೧೨ ಹನ್ನೆರಡು, ೫ ಐದು, ೨೦ ಇಪ್ಪತ್ತು ಈ ಸಂಖ್ಯೆಯ ಅಂಶಗಳು ಮೂಲತ್ರಿಕೋಣಾಂಶಗಳೆನಿಸಿವೆ. ಈ ರಾಶಿಗಳಲ್ಲಿ ಮೇಷ, ಮಿಥುನ, ಕನ್ಯಾ, ಧನುಸ್ಸುಗಳು ಚತುರಶ್ರರಾಶಿಗಳು. ಒಂದು, ಐದು, ಒಂಬತ್ತನೆಯ ರಾಶಿಗಳಿಗೆ ತ್ರಿಕೋಣರಾಶಿಗಳೆಂತಲೂ, ಒಂದು, ನಾಲ್ಕು, ಏಳು ಮತ್ತು ಹತ್ತನೆಯ ರಾಶಿಗಳಿಗೆ ಕೇಂದ್ರರಾಶಿಗಳೆಂಬ ಸಂಕೇತವಿರುವುದು. ಕೇಂದ್ರಸ್ಥಾನವಾಗಿರುವ ನರ, ಕೀಟ, ಪಶು ಈ ರಾಶಿಗಳು ಉತ್ತರೋತ್ತರ ಬಲಿಷ್ಠವಾದುವುಗಳೆಂದು ತಿಳಿಯಬೇಕು.

೧೧–೧೫. ಕೇಂದ್ರರಾಶಿಯ ಮುಂದಿನ ರಾಶಿಗೆ ಫಣಪರವೆಂತಲೂ, ಆದರ ಮುಂದಿನ ರಾಶಿಗೆ ಆಪೋಕ್ಲಿಮವೆಂತಲೂ ಸಂಕೇತವಿರುವುದು. ಮೇಷಾದಿ ರಾಶಿಗಳು ಕ್ರಮವಾಗಿ ಕೆಂಪು, ಬಿಳುಪು, ಗಿಳಿಯಹಸರು, ಪಾಟಲ, ಧೂಮವರ್ಣ, ಪಾಂಡುರ, ಚಿತ್ರವರ್ಣ, ಕಪ್ಪು, ಹಳದಿ, ಪಿಂಗಳ, ಬೂದುಬಣ್ಣ, ಬಿಳುಪು ಈ ಬಣ್ಣಗಳಿಂದ ಕೂಡಿರುವುವು. ನವಗ್ರಹಗಳಲ್ಲಿ ಸೂರ್ಯನು ಕಾಲರೂಪನು, ಚಂದ್ರನು ಮನೋಧಿದೇವತೆ, ಕುಜನು ಶಕ್ತ್ಯಭಿಮಾನಿ,

ನೃಪೌ ರವೀಂದೂ ನೇತಾಸೃಕ್ ಕುಮಾರೋಜ್ಞಃ ಕವೀಜ್ಯಕೌ ।
ಸಚಿವೌ ಸೂರ್ಯಜಃ ಪ್ರೇಷ್ಯೋ ಮತೋ ಜ್ಯೋತಿರ್ವಿದಾಂ ವರೈಃ ॥ ೧೫ ॥

ತಾಮ್ರಶುಕ್ಲೇ ರಕ್ತಹರಿತ್ಪೀತಚಿತ್ರಾಸಿತಾ ರವೇಃ ।
ವರ್ಣಾಃ ವಹ್ನ್ಯಂಬ್ವಗ್ನಿಜಹರೀಂದ್ರಾಃ ಶಚೀಕೌ ಚ ಸ್ವಾಮಿಪಾಃ ॥ ೧೬ ॥

ರವಿಶುಕ್ರಾರರಾಹ್ವರ್ಕೇಂದುವಿದೀಜ್ಯಾ ದಿಗೀಶ್ವರಾಃ ।
ಕ್ಷೀಣೇಂದ್ವರ್ಕಾರರವಿಜಾಃ ಪಾಪಾ ಪಾಪಯುತೋ ಬುಧಃ ॥ ೧೭ ॥

ಕ್ಲೀಬೌ ಬುಧಾರ್ಕೀ ಶುಕ್ರೇಂದೂ ಸ್ತ್ರಿಯೌ ಶೇಷಾಃ ನರಾಃ ಸ್ಮೃತಾಃ ।
ಶಿಖಿಭೂಮಿಪಯೋವಾರಿವಾಸಿನೋ ಭೂಸುತಾದಯಃ ॥ ೧೮ ॥

---

ಬುಧನು ವಾಗಧಿಪತಿ, ಜ್ಞಾನಾಧಿಪತಿಯೇ ಗುರು, ಸುಖದಾಯಕನೇ ಶುಕ್ರ, ಶನಿಯು ದುಃಖವನ್ನುಂಟುಮಾಡುವವನು. ಹೀಗೆ ಪ್ರತಿಯೊಂದು ಗ್ರಹಗಳಿಗೂ ಪ್ರತ್ಯೇಕಪ್ರತ್ಯೇಕವಾಗಿ ಅಧಿಕಾರಗಳಿವೆ.

ಸೂರ್ಯಚಂದ್ರರು ರಾಜರು, ಕುಜನು ಸೇನಾಧಿಪತಿ, ಬುಧನೇ ಯುವರಾಜ, ಗುರುಶುಕ್ರರು ಮಂತ್ರಿಗಳು, ಶನಿಯು ಸೇವಕ ಹೀಗೆ ಈ ಗ್ರಹಗಳಲ್ಲಿಯೇ ಗ್ರಹರಾಜಸಂಸಾರವೊಂದು ಏರ್ಪಟ್ಟಿದೆ.

೧೬-೧೯. ಕೆಂಪು, ಬಿಳುಪು, ಹಸುರು, ಹಳದಿ, ಚಿತ್ರ, ಕಪ್ಪು ಈ ವರ್ಣಗಳು ಕ್ರಮವಾಗಿ ಆದಿತ್ಯಾದಿ ಶನಿಯವರೆಗೆ ಇರುವ ಏಳುಗ್ರಹಗಳಿಗೂ ಉಕ್ತವಾಗಿವೆ. ಈ ವರ್ಣದ ವಸ್ತುಗಳಿಗೆಲ್ಲಾ ಆಯಾಗ್ರಹಗಳು ಅಧಿಪತಿಗಳಾಗುವರು. ಇಂದ್ರಾದ್ಯಷ್ಟದಿಕ್ಕುಗಳಿಗೂ ಕ್ರಮವಾಗಿ ಸೂರ್ಯ, ಶುಕ್ರ, ಕುಜ, ರಾಹು, ಶನಿ, ಚಂದ್ರ, ಬುಧ ಮತ್ತು ಗುರು ಈ ಗ್ರಹಗಳು ಅಧಿಪತಿಗಳಾಗಿರುವರು. ಕ್ಷೀಣಚಂದ್ರ, ಸೂರ್ಯ, ಕುಜ, ಶನಿ ಈ ಗ್ರಹಗಳು ಪಾಪಗ್ರಹಗಳೆನಿಸುವರು. ಬುಧನು ಪಾಪಗ್ರಹದೊಡನೆ ಯುತನಾಗಿದ್ದರೆ ಆಗ ಪಾಪಿಯೆನಿಸುವನು. ಉಳಿದವರು ಶುಭಗ್ರಹಗಳು. ಬುಧ, ಶನಿಗಳು ನಪುಂ

ಕವೀಜ್ಯೌ ಕುಜಸೂರ್ಯೌ ಚ ವೇದೋ ಚ್ಯೋ ವರ್ಣಪಾಃ ಕ್ರಮಾತ್ ।
ಸೌರೋಽಂತ್ಯಜಾಧಿಪಃ ಪ್ರೋಕ್ತೋ ರಾಹುರ್ಮ್ಲೇಚ್ಛಾಧಿಪಸ್ತಥಾ ॥ ೧೯ ॥

ಚಂದ್ರಾರ್ಕಜೀವಾ ಜ್ಞಸಿತೌ ಕುಜಾರ್ಕೀ ಸಾತ್ತ್ವಿಕಾದಿಕಾಃ ।
ಅಂಬ್ವಗ್ನಿವಿಹಾರಕೋಶಕಯನಕ್ಷತ್ರಕ್ಷರೇಶಾಃ ಸ್ಮೃತಾಃ ॥ ೨೦ ॥

ವಸ್ತ್ರಂ ಸ್ಥೂಲಂ ನವಂ ವಹ್ನಿಕಹತಂ ಮದ್ಯದಂ ತಥಾ ।
ಸ್ಫುಟಿತಂ ರವಿತಸ್ತಾಮ್ರಂ ತಾರಂ ತಾಮ್ರತ್ರಪುಸ್ತಥಾ ॥ ೨೧ ॥

---

ಸಕರು. ಶುಕ್ರ, ಚಂದ್ರರು ಸ್ತ್ರೀಯರು. ಉಳಿದ ಗ್ರಹಗಳು ಪುರುಷಗ್ರಹಗಳು. ಕುಜಾದಿಯಾದ ಗ್ರಹಗಳಿಗೆ ಅಗ್ನಿ, ಭೂಮಿ, ಹಾಲು, ನೀರು, ಆಕಾಶ ಇವುಗಳೇ ವಾಸಸ್ಥಾನಗಳು. ಗುರು, ಶುಕ್ರರು ಬ್ರಾಹ್ಮಣವರ್ಗಕ್ಕೆ ಸೇರಿದವರು. ಕುಜ ಮತ್ತು ಸೂರ್ಯ ಇವರು ಕ್ಷತ್ರಿಯರು. ಚಂದ್ರನು ವೈಶ್ಯನು, ಬುಧನು ಶೂದ್ರನು, ಅಂತ್ಯಜವರ್ಗಕ್ಕೆ ಶನಿಯು ಅಧಿಪತಿಯು. ಮ್ಲೇಚ್ಛರಿಗೆ ರಾಹುವು ಅಧಿಪತಿಯೆನಿಸುವನು.

೨೦-೨೨. ಚಂದ್ರ, ಸೂರ್ಯ, ಗುರು ಇವರು ಸಾತ್ವಿಕರು. ಕುಜ ಮತ್ತು ಶನಿಗಳು ತಾಮಸರು. ಬುಧ, ಶುಕ್ರರು ರಾಜಸರು (ರಜೋಗುಣವುಳ್ಳವರು.)

ಸೂರ್ಯಾದಿಯಾದ ಏಳುಗ್ರಹಗಳೂ ಕ್ರಮವಾಗಿ ದೇವಲೋಕ, ಚಂದ್ರಲೋಕ, ಅಗ್ನಿಲೋಕ, ಶೈಲ, ಭೂ, ಬ್ರಹ್ಮ ಮತ್ತು ಅಂತರಿಕ್ಷ ಇವುಗಳಿಗೆ ಅಭಿವಾಸಿಗಳಾಗಿರುವರು. ಸೂರ್ಯಾದಿಯಾದ ಗ್ರಹಗಳಿಗೆ ಸ್ಥೂಲವಸ್ತ್ರ, ಹೊಸಬಟ್ಟೆ, ಅಗ್ನಿದಗ್ಧವಾದದ್ದು, ಮದ್ಯದಿಂದ ಮಿಶ್ರಿತವಾದದ್ದು, ಹರಿದ ವಸ್ತ್ರ, ಬಿಸಿಲಿನಲ್ಲಿ ಒಣಗಿದ ಬಟ್ಟೆ, ಚಿತ್ರವಸ್ತ್ರ ಹೀಗೆ ಬೇರೆಬೇರೆ ವಿಧವಾದ ವಸ್ತ್ರಗಳು ಉಕ್ತವಾಗಿವೆ. ತಾಮ್ರ, ಬೆಳ್ಳಿ, ತಾಮ್ರ, ಸೀಸ, ಚಿನ್ನ, ಕಂಚು, ಕಬ್ಬಿಣ ಈ ಧಾತುಗಳು ಸೂರ್ಯಾದಿಗ್ರಹಗಳಿಗೆ ಕ್ರಮವಾಗಿ ಉಕ್ತವಾಗಿವೆ. (ಚಂದ್ರ, ಶುಕ್ರರಿಗೆ ಮಾತ್ರ ಪರಸ್ಪರ ಬದಲಾವಣೆಯಿಂದ ಇಲ್ಲಿ ಲೋಹಧಾತುಗಳು ಉಕ್ತವಾಗಿದೆ.)

ಹೇಮಕಾಂಸ್ಯಾಯಸೀ ತ್ರ್ಯಂಶ್ಯಃ ಶಿಶಿರಾದ್ಯಾ ಪ್ರಕೀರ್ತಿತಾಃ ।
ಸೌರಶುಕ್ರಾರಚಂದ್ರಜ್ಞಗುರುಷೂದ್ಯತ್ತು ಚ ಕ್ರಮಾತ್ ॥ ೨೨ ॥

ತ್ರ್ಯಂಶತ್ರಿಕೋಣಚತುರ್ಯಾಷ್ಟ ಸಪ್ತಮಾನ್ಯೇನ ವೃದ್ಧಿತಃ ।
ಸೌರೇಜ್ಯಾರಾಪರೇ ಪೂರ್ಣೇ ಕ್ರಮಾತ್ಪಶ್ಯಂತಿ ನಾರದ ॥ ೨೩ ॥

ಅಯನಕ್ಷಣ ಘಸ್ರರ್ತುಮಾಸಾರ್ಧ್ವಶರದೋ ರವೇಃ ।
ಕಟುತಿಕ್ತಕ್ಷಾರಮಿಶ್ರಮಧುರಾಮ್ಲಾ ಕಷಾಯಕಾಃ ॥ ೨೪ ॥

ತ್ರಿಕೋಣಾತ್ಸ್ವಂತ್ಯಧೀಧರ್ಮಸ್ವೋಚ್ಚಾಯುಃ ಸುಖಪಾ ಸುಹೃತ್ ।
ಜೀವೋ ಜೀವಜ್ಞೌ ಸಿತೇಂದೂ ವ್ಯರ್ಕಾ ವ್ಯಾರಾಃ ಕ್ರಮಾದಮೀ ॥ ೨೫ ॥

---

ಶಿಶಿರಋತುವಿನಿಂದ ಪ್ರಾರಂಭವಾಗಿ ಒಂದೊಂದು ಋತುವಿಗೆ ಕ್ರಮವಾಗಿ ಸೂರ್ಯ, ಶುಕ್ರ, ಅಂಗಾರಕ, ಚಂದ್ರ, ಬುಧ ಮತ್ತು ಗುರುಗಳು ಅಧಿಪತಿಗಳಾಗಿರುವರು.

೨೩-೨೪. ಶನಿಯು ತಾನಿರುವ ಸ್ಥಾನದಿಂದ ಮೂರು ಮತ್ತು ಹತ್ತನೆಯ ರಾಶಿಗಳನ್ನೂ, ಗುರುವು ೫-೯ ಐದು ಮತ್ತು ಒಂಬತ್ತನೆಯ ರಾಶಿಗಳನ್ನೂ, ಅಂಗಾರಕನು ೪-೮ ನಾಲ್ಕು ಮತ್ತು ಎಂಟನೆಯ ಮನೆಗಳನ್ನೂ ವಿಶೇಷವಾಗಿ ನೋಡುವರು. ಸಾಮಾನ್ಯವಾಗಿ ಎಲ್ಲಾ ಗ್ರಹಗಳೂ ಏಳನೆಯ ರಾಶಿಯನ್ನು ನೋಡುವರು. ಎಲ್ಲಾ ಗ್ರಹಗಳಿಗೂ ಸಾಮಾನ್ಯವಾಗಿ ಸಪ್ತಮ ದೃಷ್ಟಿಯೇ ಪೂರ್ಣದೃಷ್ಟಿಯೆಂದು ತಿಳಿಯಬೇಕು. ಅಯನ, ಕ್ಷಣ, ದಿನ, ಋತು, ಮಾಸ, ಪಕ್ಷ, ವರ್ಷ ಈ ರೀತಿಯಾದ ಕಾಲಗಳಿಗೆ ಕ್ರಮವಾಗಿ ಸೂರ್ಯಾದಿಯಾದ ಗ್ರಹಗಳು ಒಡೆಯರಾಗಿರುವರು. ಕಟು, ತಿಕ್ತ, ಕ್ಷಾರ, ಮಿಶ್ರ, ಮಧುರ, ಆಮ್ಲ, ಕಹಿ ಈ ವಿಧವಾದ ರಸಗಳಿಗೂ ಸೂರ್ಯಾದಿ ಸಪ್ತಗ್ರಹಗಳೇ ಯಜಮಾನರು.

೨೫-೨೬. ಪ್ರತಿಯೊಂದು ಗ್ರಹಗಳಿಗೂ ತ್ರಿಕೋಣಾಧಿಪತಿಗಳೂ, ದ್ವಿತೀಯ ಮತ್ತು ವ್ಯಯಾಧಿಪತಿಗಳೂ, ಸುಖ ಮತ್ತು ದಶಮಸ್ಥಾನಗಳ

ವೀಂದ್ವರ್ಕಾ ವಿಕುಜೇಂದ್ವರ್ಕಾಃ ಸುಹೃದೋಽನ್ಯೈ ರವೇರ್ಧೃತಾಃ ।
ಮಿಥೋ ಧನವ್ಯಯಾಯತ್ರಿಬಂಧು ವ್ಯಾಪಾರಗಃ ಸುಹೃತ್ ॥ ೨೬ ॥

ದ್ವ್ಯೇಕಾನುಕ್ತಭಪಾನ್ ಜ್ಞಾತ್ವಾ ಮಿತ್ರಾದೀನ್ಸಹಜಾನ್ಮುನೇ ।
ತತ್ಕಾಲೇಽಧಿ ಸುಹೃನ್ಮಿತ್ರ ಪೂರ್ವಕಾನ್ಕಲ್ಪಯೇತ್ಪುನಃ ॥ ೨೭ ॥

ಸ್ವೋಚ್ಚತ್ರಿಕೋಣ ಗೇಹೇ ಸ್ವನವಾಂಶೈಃ ಸ್ಥಾನಜಂ ಬಲಂ ।
ದಿಕ್ಷು ಸೌಮ್ಯೇಜ್ಯಯೋಃ ಸೂರ್ಯಾರಯೋಃ ಸೌರೇಃ ಸಿತಾಬ್ಜಯೋಃ ೨೮॥

ಚಂದ್ರಸೂರ್ಯಾವುದಗಯನೇ ಶೇಷಾ ವಕ್ರೇ ಸಮಾಗಮೇ ।
ಉತ್ತರಸ್ಥಾ ದೀಪ್ತಕರಾಶ್ಚೇಷ್ಟಾವೀರ್ಯಯುತಾ ಮತಾಃ ॥ ೨೯ ॥

ಅಧಿಪತಿಗಳೂ ಮಿತ್ರರೆನಿಸುವರು. ಸೂರ್ಯನಿಗೆ ಶನಿ, ಶುಕ್ರರೂ, ಕುಜನಿಗೆ ಬುಧನೂ, ಬುಧನಿಗೆ ಚಂದ್ರನೂ, ಗುರುವಿಗೆ ಶುಕ್ರ ಮತ್ತು ಬುಧರೂ, ಶುಕ್ರನಿಗೆ ಸೂರ್ಯಚಂದ್ರರೂ, ಶನಿಗೂ ಸೂರ್ಯಚಂದ್ರರೂ ಶತ್ರುಗಳಾಗುವರು. ಉಳಿದವರು ಮಿತ್ರರೆನಿಸುವರು. ಇವರು ನೈಸರ್ಗಿಕ ಮಿತ್ರರು. ಇನ್ನು ಗ್ರಹಗಳಿಗಿರುವ ಸ್ಥಾನಕ್ಕಿಂತ ಮುಂದಿನ ಮೂರುಸ್ಥಾನ ಮತ್ತು ಹಿಂದಿನ ಮೂರು ಸ್ಥಾನಗಳಲ್ಲಿರುವ ಇತರ ಗ್ರಹಗಳು ತಾತ್ಕಾಲಿಕಮಿತ್ರರೆನಿಸುವರು. ಒಂದೇ ಗ್ರಹಕ್ಕೆ ತಾತ್ಕಾಲಿಕಮಿತ್ರತ್ವ ಮತ್ತು ನೈಸರ್ಗಿಕಮಿತ್ರತ್ವ ಇವೆರಡೂ ಒದಗಿದರೆ, ಆಗ್ರಹವು ಅಧಿಮಿತ್ರನೆನಿಸುವುದು. ಹೀಗೆಯೇ ಅಧಿಶತ್ರು, ಮಿತ್ರಶತ್ರು, ಶತ್ರುಮಿತ್ರ ಇತ್ಯಾದಿ ವಿಭಾಗಗಳನ್ನು ಊಹಿಸಿ ತಿಳಿದುಕೊಳ್ಳಬೇಕು.

೨೮–೨೯. ಗ್ರಹಗಳಿಗೆ ಇನ್ನು ಬಲಾಬಲಗಳು ನಿರೂಪಿಸಲ್ಪಡುವುದು. ಉಚ್ಚ, ಮೂಲತ್ರಿಕೋಣ, ಸ್ವಕ್ಷೇತ್ರ, ಸ್ವನವಾಂಶ ಈ ಸ್ಥಾನಗಳಲ್ಲಿರುವ ಗ್ರಹಗಳು ಸ್ಥಾನಬಲದಿಂದ ಬಲಿಷ್ಠವೆನಿಸುವುವು. ದಶಮಸ್ಥಾನದಲ್ಲಿರುವ ಸೂರ್ಯ, ಕುಜರೂ, ನಾಲ್ಕನೆಯ ಸ್ಥಾನದಲ್ಲಿರುವ ಚಂದ್ರ, ಶುಕ್ರರೂ, ಲಗ್ನದಲ್ಲಿರುವ ಬುಧ, ಗುರುಗಳೂ, ಸಪ್ತಮದಲ್ಲಿರುವ ಶನಿಯೂ ಕ್ರಮವಾಗಿ ದಿಗ್ಬಲವನ್ನು ಹೊಂದುವರು. ಇದಲ್ಲದೇ ವಕ್ರಗ್ರಹಗಳೂ ಯುದ್ಧದಲ್ಲಿ ಗೆದ್ದು ಉತ್ತರದಿಕ್ಕಿನಲ್ಲಿ ಅತಿಯಾಗಿ ಪ್ರಕಾಶಿಸುವಂತಹ ವಿಜಯಿಗ್ರಹಗಳೂ ದಿಗ್ಬಲವಿಶಿಷ್ಟರಾದವರೆಂದೇ ತಿಳಿಯಬೇಕು.

ನಿಶೀಂದುಕುಜಸೌರಾಶ್ಚ ಸರ್ವದಾ ಜ್ಞೋಽಹ್ನಿ ಚಾಪರೇ
ಕ್ರೂರಾಃ ಕೃಷ್ಣೇ ಸಿತೇ ಸೌಮ್ಯಾಃ ಮತಂ ಕಾಲಬಲಂ ಬುಧೈಃ ॥ ೩೦ ॥

ಸೌರಾರಜ್ಞೇಜ್ಯಶುಕ್ರೇಂದಸೂರ್ಯಾಧಿಕ್ಯಂ ಪರಸ್ಪರಂ ।
ಪಾಪಾಸ್ತು ಬಲಿನಃ ಸೌಮ್ಯಾ ವಿವರ್ಗಾಃ ಕಂಟಕೋಪಗೇ ॥ ೩೧ ॥

ಕ್ಲೀಬೇ ತದ್ದರ್ಶನಾದ್ವಾಪಿ ಚಂದ್ರಾರ್ಕಾಂಶಸಮಂ ಜನುಃ ।
ಸ್ವಾಂಶೇ ಪಾಪಾಃ ಪರಾಂಶಸ್ಥಾಃ ಸೌಮ್ಯಾ ಲಗ್ನಂ ವಿಯೋನಿಜಂ ॥ ೩೨ ॥
ನಿರ್ಬಲಂ ಚ ತದಾದೇಶ್ಯಂ ವಿಯೋನೇರ್ಜನ್ಮ ಪಂಡಿತೈಃ ॥ ೩೩ ॥

---

೩೦-೩೧. ರಾತ್ರಿಯಲ್ಲಿ ಚಂದ್ರ, ಕುಜ, ಶನಿ, ಈ ಮೂರುಗ್ರಹಗಳೂ ಬಲಿಷ್ಠರು. ಬುಧನು ಅಹೋರಾತ್ರಿಗಳೆರಡರಲ್ಲೂ ಸಮಾನವಾದ ಬಲವುಳ್ಳವನು. ಉಳಿದ ಗ್ರಹಗಳು ಹಗಲಿನಲ್ಲಿ ಮಾತ್ರ ಬಲಶಾಲಿಗಳು. ಶುಭಗ್ರಹಗಳು ಶುಕ್ಲಪಕ್ಷದಲ್ಲಿಯೂ, ಕ್ರೂರಗ್ರಹಗಳು ಕೃಷ್ಣಪಕ್ಷದಲ್ಲಿಯೂ ಬಲಿಷ್ಠರಾಗುವರು. ಈ ವಿಧವಾದ ಬಲವನ್ನೇ ಕಾಲಬಲವೆಂದು ಹೇಳುವರು. ಇದಲ್ಲದೇ ನೈಸರ್ಗಿಕಬಲದಲ್ಲಿ ಶನಿ, ಕುಜ, ಬುಧ, ಗುರು, ಶುಕ್ರ, ಚಂದ್ರ, ಸೂರ್ಯ ಈ ಕ್ರಮದಲ್ಲಿ ಗ್ರಹಗಳು ಉತ್ತರೋತ್ತರ ಬಲಿಷ್ಠರಾಗುವರು. ಬಲಾಧಿಕನೇ ಸೂರ್ಯನಾಗುವನು. ಹೀಗೆ ಷಡ್ವಿಧಬಲಗಳಿಂದ ಕೂಡಿದ ಪಾಪಗ್ರಹಗಳೂ ಸಹ ಸೌಮ್ಯಗ್ರಹಗಳಂತೆಯೇ ಫಲಕೊಡುವರು. ದುರ್ಬಲನಾದ ಶುಭಗ್ರಹಗಳೂ ಪಾಪಫಲಗಳನ್ನು ಕೊಡುವರು.

೩೨-೩೩. ಇನ್ನು ವಿಯೋನಿಜನ್ಮಗಳ ಸ್ವರೂಪಕ್ಕೂ ಸೂರ್ಯಾದಿಗ್ರಹಗಳಿಗೂ ಮೇಷಾದಿರಾಶಿಗಳಿಗೂ ಸಂಬಂಧವನ್ನು ಕಲ್ಪಿಸುತ್ತಾ ಶಾಸ್ತ್ರವು ಮುಂದುವರಿಯುವುದು. ನಪುಂಸಕಗ್ರಹಗಳ ದೃಷ್ಟಿಯನ್ನು ಪಡೆದ ಸೂರ್ಯಚಂದ್ರರೇ ವಿಯೋನಿಜನ್ಮಗಳ ಉತ್ಪತ್ತಿಗೆ ಕಾರಣರು. ಪಾಪಗ್ರಹಗಳು ಪರಾಂಶಗತರಾದರೆ ಆಗ ಜನಿಸುವ ಪ್ರಾಣಿಗಳು ಕ್ರೂರಪ್ರಾಣಿಗಳಾಗುವುವು. ಹಾಗೆಯೇ ಸೌಮ್ಯಗ್ರಹಗಳಿಂದ ಸಾಧುಪ್ರಾಣಿಗಳು ಉದಯಿಸುವುವು. ಆಯಾ ಗ್ರಹಗಳ ಬಲಾಬಲಗಳಂತೆ ವಿಯೋನಿಗಳ ಬಲಾಬಲಗಳನ್ನೂ ಊಹಿಸಿ ತಿಳಿದುಕೊಳ್ಳಬೇಕು.

ಶೀರ್ಷಂ ವಕ್ತ್ರಗಲೇ ಪಾದಾವಂಸೌ ಪೃಷ್ಠಮುರಸ್ತಥಾ ।
ಪಾರ್ಶ್ವೇ ಕುಕ್ಷೀ ತ್ವಪಾನಾಂಘ್ರೀ ಮೇಢ್ರಮುಷ್ಕೌ ತಥಾ ಸ್ಫಿಜೌ ।
ಪುಚ್ಛಂ ಚತುಷ್ಪದಾಂಗೇಷು ಮೇಷಾದ್ಯಾ ರಾಶಯಃ ಸ್ಮೃತಾಃ ॥ ೩೪ ॥

ಲಗ್ನಾಂಶಾದ್ಗ್ರಹಯುಗ್ದೃಷ್ಟ್ಯಾ ವರ್ಣಾನ್ಬಲಯುತಾದ್ವದೇತ್ ।
ದೃಕ್ಸಮಾನಪ್ರಮಾಣಾಂಶ್ಚ ಪೃಷ್ಠೇ ರೇಖಾಂ ಸ್ಮರಸ್ಥಿತೈಃ ॥ ೩೫ ॥

ಖಗತ್ರ್ಯಂಶೇ ಬಲೈರ್ಯುಕ್ತೇ ಚರಮಾಂಶೇ ಗ್ರಹಾನ್ವಿತೇ ।
ವಾಂಶೇ ಸ್ಥಲಾಂಬುಜಃ ಸೌರೇಂದ್ವೀಕ್ಷ್ಯಾ ಯೋಗಭವಾ ದ್ವಿಜಾಃ ॥ ೩೬ ॥

ವಿಬಲೈಸ್ತನುಚಂದ್ರೇಜ್ಯಾರ್ಕೈಸ್ತರೂಣಾಂ ಜನಿಂ ವದೇತ್ ।
ಸ್ಥಲಾಂಬುಭೇದೋಽಂಶಕೃತಶ್ಚೇತರೇಷಾಮುದಾಹೃತಃ ॥ ೩೭ ॥

---

೩೪-೩೫. ವಿಯೋನಿಜನ್ಮವುಳ್ಳ ಪ್ರಾಣಿಗಳ ಅಂಗವನ್ನು ಮೇಷಾದಿ ದ್ವಾದಶರಾಶಿಗಳಿಗೆ ಈರೀತಿ ವಿಭಾಗಮಾಡಬೇಕು. ಮೇಷಾದಿ ದ್ವಾದಶರಾಶಿಗಳಿಗೆ ಕ್ರಮವಾಗಿ ತಲೆ, ಮುಖ ಮತ್ತು ಗಂಟಲು, ಮುಂಗಾಲು ಮತ್ತು ಭುಜ, ಬೆನ್ನು, ಎದೆ, ಪಕ್ಕೆಗಳು, ಕುಕ್ಷಿ, ಅಪಾನ, ಹಿಂಗಾಲು, ಭಗ ಶಿಶ್ನವೃಷಣಾದಿಗಳು, ಕಟಿಪಶ್ಚಾದ್ಭಾಗಗಳು, ಬಾಲ ಈರೀತಿಯಾಗಿ ಹನ್ನೆರಡುಭಾಗಗಳಿಗೂ ಹನ್ನೆರಡು ಅವಯವಗಳಿಗೆ ಮೇಷಾದಿಯಾಗಿ ಹನ್ನೆರಡು ರಾಶಿಗಳು ಉಕ್ತವಾಗಿರುವುವು. ಬಲಯುಕ್ತವಾದ ತಾತ್ಕಾಲಿಕನವಾಂಶಲಗ್ನದಿಂದಲೂ, ಗ್ರಹಯೋಗ, ದೃಷ್ಟಿ, ಇವುಗಳಿಂದಲೂ ಪ್ರಾಣಿಗಳ ವರ್ಣವನ್ನು ತಿಳಿಯಬೇಕು. ಏಳನೆಯರಾಶಿಯಲ್ಲಿರುವ ಗ್ರಹದವರ್ಣವನ್ನೇ ಪ್ರಾಣಿಯ ಬೆನ್ನುಮೇಲಿರುವ ರೇಖೆಯನ್ನಾಗಿ ಹೇಳಬೇಕು.

೩೬. ಪಕ್ಷಿದ್ರೇಕ್ಕಾಣದಲ್ಲಿ ಬಲಯುತವಾದ ಗ್ರಹಗಳಿದ್ದು ಚರನವಾಂಶೋದಯವಾದರೆ ಅಥವ ಬುಧನವಾಂಶವು ಲಗ್ನಕ್ಕೆ ಸಂಬಂಧಿಸಿದ್ದರೂ ಶನಿ, ಚಂದ್ರರ ದೃಷ್ಟಿಯಿಂದಲೂ ಪಕ್ಷಿಜನ್ಮವಾಗುವುದೆಂದು ತಿಳಿಯಬೇಕು.

೩೭. ಬಲವಿಲ್ಲದ ಲಗ್ನ, ಚಂದ್ರ, ಗುರು, ಸೂರ್ಯ, ಇವರುಗಳ ಉದಯವು ಪ್ರಶ್ನಕಾಲದಲ್ಲಿ ಬಂದರೆ ವೃಕ್ಷಾದಿಗಳ ಜನ್ಮವಿಷಯವೆಂದು ನಿರ್ಧ

ಸ್ಥಲಾಂಬ್ವಧಿಪತೇಃ ಖೇಟೋ ಲಗ್ನಾದ್ಯಾವನ್ಮಿತೇ ಗೃಹೇ ।
ತಾವಂತ ಏವ ತರವಃ ಸ್ಥಲಜಾ ಜಲಜಾಸ್ತಥಾ ॥ ೩೮ ॥

ಅಂತಃಸಾರಾ ರವೌ ಸೌರೇ ದುರ್ಭಗಾಃ ಕ್ಷೀರಿಣೋ ವಿಧೌ ।
ಭೌಮೇ ಕಂಟಕಿನೋ ವೃಕ್ಷಾ ಈಜ್ಯೇ ಜ್ಞೇ ಸಫಲಾಫಲಾ ॥ ೩೯ ॥

ಪುಷ್ಪಿತಾ ಭಾರ್ಗವೇ ಸ್ನಿಗ್ಧಾಶ್ಚಂದ್ರೇಽಥ ಕಟುಕಾಃ ಕುಜೇ ।
ಅಶುಭರ್ಕ್ಷೇ ಶುಭಃ ಖೇಟಃ ಶುಭಂ ವೃಕ್ಷಂ ಕುಭೂಮಿಜಂ ॥ ೪೦ ॥

ರಿಸಬೇಕು. ಅದರಲ್ಲಿ ಭೂಮಿ, ಜಲ,ಹುಲ್ಲುಮುಂತಾದ ಬೆಳೆಯುವ ಪ್ರದೇಶಗಳನ್ನು ಸ್ಥಲ, ಜಲರಾಶಿಗಳು, ಅವುಗಳ ಅಂಶಗಳು ಇವುಗಳಿಂದ ಕಂಡುಹಿಡಿಯಬೇಕು.

೩೮. ತಾತ್ಕಾಲಿಕಲಗ್ನದಿಂದ ಸ್ಥಲಾಧಿಪತಿ ಅಥವ ಜಲಾಧಿಪತಿಯು ಎಷ್ಟನೆಯ ಸ್ಥಾನದಲ್ಲಿರುವನೋ ಅಷ್ಟು ಸ್ಥಲಜವಾದ ಅಥವ ಜಲಜವಾದ ವೃಕ್ಷ ಸಂಖ್ಯೆಯನ್ನು ಹೇಳಬೇಕು.

೩೯-೪೦. ನವಾಂಶಾಧಿಪತಿಗಳಾದ ಸೂರ್ಯಾದಿಗ್ರಹಗಳಿಂದ ವೃಕ್ಷ ಭೇದಗಳನ್ನು ವಿವರಿಸಬೇಕು. ಅಂತಸ್ಸಾರವಾದ ವೃಕ್ಷಗಳು ಸೂರ್ಯನಿಂದಲೂ, ಶನಿಯಿಂದ ಸೌಂದರ್ಯವಿಲ್ಲದ ವೃಕ್ಷಗಳೂ, ಚಂದ್ರನಿಂದ ಹಾಲುಳ್ಳ ಮರಗಳೂ, ಅಂಗಾರಕನಿಂದ ಮುಳ್ಳುಗಿಡಗಳೂ, ಗುರುವಿನಿಂದ ಫಲವೃಕ್ಷಗಳೂ, ಬುಧನಿಂದ ವಂಧ್ಯಾವೃಕ್ಷಗಳೂ (ಹಣ್ಣನ್ನು ಬಿಡದ ಗೊಡ್ಡುಮರಗಳೂ), ಶುಕ್ರನಿಂದ ಪುಷ್ಪಿತವಾದ (ಹೂಬಿಟ್ಟಿರುವ) ವೃಕ್ಷಗಳೂ, ಚಂದ್ರನಿಂದ ಎಣ್ಣೇಕೊಡುವ ಮರಗಳೂ ಹುಟ್ಟುತ್ತವೆಂದು ತಿಳಿಯಬೇಕು. ಕಹಿ ಮತ್ತು ಒಗರುಳ್ಳ ಮರಗಳು ಕುಜನಿಂದ ಜನಿಸುತ್ತವೆ. ಶುಭಗ್ರಹವು ಪಾಪಾಂಶದಲ್ಲಿದ್ದರೆ ಕೆಟ್ಟಭೂಮಿಯಲ್ಲಿ ಹುಟ್ಟಿದ ಮರವು ಫಲಭರಿತವಾಗಿ ಸುಂದರವಾಗಿರುವುದು. ಪಾಪಗ್ರಹವು ಶುಭಾಂಶದಲ್ಲಿದ್ದರೆ ಸುಂದರಪ್ರದೇಶದಲ್ಲಿ ಹುಟ್ಟಿದ ಮರವೂ ಫಲರಹಿತವಾಗಿ ಅಸುಂದರವಾಗಿ ಕಾಣುವುದು.

ಕುರ್ಯಾದ್ವಿಲೋಮಗೋ ವಾऽಪಿ ಸ್ವಾಂಶೋಕ್ತಪರಗೈಃ ಸಮಂ ।
ಕುಜೇಂದುಹೇತುಕಂ ಸ್ತ್ರೀಣಾಂ ಪ್ರತಿಮಾಸಮಿಹಾರ್ತವಂ ॥ ೪೧ ॥

ಜೀವೇऽಶುಭೇ ತದಾ ನಾರೀ ರತಿಸೌಖ್ಯವಿವರ್ಜಿತಾ ।
ಸಪ್ತಮಸ್ಥೇನ ಸದೃಶಂ ಜಂತುನಾ ಸುಖಮಶ್ನುತೇ ॥
ಪಾಪಯುಕ್ತೇಕ್ಷಿತೇ ದ್ಯೂನೇ ರುಷಾ ಪ್ರೀತ್ಯಾ ಶುಭಗ್ರಹೈಃ ॥ ೪೨ ॥

ರವೀಂದುಶುಕ್ರಾವನಿಜೈಃ ಸ್ವಭಾಗಗೈಃ
ಗುರೌ ತ್ರಿಕೋಣೋದಯಸಂಸ್ಥಿತೇऽಪಿ ವಾ ।
ಭವತ್ಯಪತ್ಯಂ ಹಿ ವಿವೀಜಿನಾಮಿಮೇ
ಕರಾ ಹಿಮಾಂಶೋರ್ವಿದೃಶಾಮಿವಾಫಲಾಃ ॥ ೪೩ ॥

ದ್ಯೂನೇऽರ್ಕೇಂದ್ವೋಃ ಕುಜಾರ್ಕೀ ಚೇತ್ಪುಂಸ್ತ್ರಿಯೋರಾಮಯಪ್ರದೌ ।
ವ್ಯಯಸ್ವಗಾ ಯುತೌ ಚೈಕದೃಷ್ಟ್ಯಾ ಮೃತ್ಯುಪ್ರದೌ ತಯೋಃ ॥ ೪೪ ॥

೪೧-೪೪. ಸ್ತ್ರೀಯರ ಪ್ರತಿತಿಂಗಳಿನ ಆರ್ತವಕ್ಕೂ ಕುಜ ಮತ್ತು ಚಂದ್ರ ಈ ಗ್ರಹಗಳೇ ಕಾರಣವೆಂದ ತಿಳಿಯಬೇಕು. ಗುರುವು ಶುಭಸ್ಥಾನಗಳಲ್ಲಿಲ್ಲದಿದ್ದರೆ ಸ್ತ್ರೀಯು ಸುರತಸುಖವನ್ನು ಪಡೆಯಲಾರಳು. ಸಪ್ತಮಭಾಗದಲ್ಲಿರುವ ಪ್ರಾಣಿಯು ಯಾವರೀತಿ ಸಂಭೋಗಸುಖವನ್ನು ಹೊಂದುವುದೋ ಅದರಂತೆಯೇ ಈ ಹೆಂಗಸೂ ಸುರತಸುಖವನ್ನು ಪಡೆಯುವಳೆಂದು ತಿಳಿಯಬೇಕು. ಸಪ್ತಮಭಾವವು ಪಾಪಗ್ರಹದಿಂದ ದೃಷ್ಟವಾಗಿದ್ದರೆ ಕೋಪವುಳ್ಳ ಪತಿಯಿಂದ ಸುರತವನ್ನು ಹೊಂದುವಳು. ಶುಭಗ್ರಹದ ದೃಷ್ಟಿಯಿದ್ದರೆ ಸಂತೋಷದಿಂದ ವಿಲಾಸಸುಖವನ್ನನುಭವಿಸುವಳು. ಗರ್ಭಾಧಾನಕಾಲದಲ್ಲಿ ಸೂರ್ಯ, ಚಂದ್ರ, ಶುಕ್ರ, ಕುಜರು ಸ್ವಾಂಶದಲ್ಲಿದ್ದು, ಗುರುವು ತ್ರಿಕೋಣದಲ್ಲಿದ್ದರೆ ಸ್ತ್ರೀಯು ಗರ್ಭವತಿಯಾಗುವಳು. ಹಾಗೆಯೇ ಸೂರ್ಯಚಂದ್ರರಿರುವ ರಾಶಿಗಿಂತ ಏಳನೆಯ ಮನೆಯಲ್ಲಿ ಕುಜ, ಶನಿಗಳಿದ್ದರೆ ದಂಪತಿಗಳು ವ್ಯಾಧಿಪೀಡಿತರಾಗುವರು. ಹಾಗೆಯೇ ದ್ವಾದಶ, ದ್ವಿತೀಯರಾಶಿಗಳಲ್ಲಿ ಕುಜ, ಶನಿಗಳಿದ್ದರೆ ದಂಪತಿಗಳಿಗೆ ಮೃತ್ಯು ಸಂಭವಿಸುವುದು.

ಶುಕ್ರಾರ್ಕೌ ಮಾತೃಪಿತರೌ ದಿವಾ ನಕ್ತಂ ಶಶೀನಜೌ ।
ಮಾತೃಷ್ವಸೃಪಿತೃವ್ಯಾಖ್ಯೌ ಭವೇತಾಂ ತೌ ವಿಪರ್ಯಯಾತ್ ॥ ೪೫ ॥

ಪಾಪದೃಷ್ಟೇ ಶುಭೇ ಕ್ಷೀಣೇ ತುಂಗೇ ವಾ ಲಗ್ನಗೇ ಯಮೇ ।
ಕ್ಷೀಣೇಂದುಕುಜಸಂದೃಷ್ಟೇ ಮೃತ್ಯುಮೇತಿ ಗತಾ ಧ್ರುವಂ ॥ ೪೬ ॥

ಯುಗಪದ್ವಾ ಪೃಥಕ್ಸಂಸ್ಥೌ ಲಗ್ನೇಂದೂ ಪಾಪಮಧ್ಯಗೌ ।
ಯದಾ ತದಾ ಗರ್ಭಯುತಾ ನಾರೀ ಮೃತ್ಯುಮವಾಪ್ನುಯಾತ್ ॥ ೪೭ ॥

ಲಗ್ನಾಚ್ಚಂದ್ರಾಚ್ಚ ತುರ್ಯಸ್ಥೈಃ ಪಾಪೈರ್ನಿಧನಗೇ ಕುಜೇ ।
ನಷ್ಟೇಂದೌ ಕುಜರವ್ಯೋಶ್ಚ ಬಂಧುನಿಷ್ಠಗಯೋರ್ಮೃತಿಃ ॥ ೪೮ ॥

---

೪೫. ಹಗಲು ಆವಿರ್ಭವಿಸುವ ಜಾತಕಕ್ಕೆ ಸೂರ್ಯನು ಪಿತೃಕಾರಕನಾಗಿಯೂ, ಶುಕ್ರನು ಮಾತೃಕಾರಕನಾಗಿಯೂ, ರಾತ್ರಿಯಲ್ಲಿ ಜನಿಸುವವರಿಗೆ ಶನಿಯು ಪಿತೃಕಾರಕನಾಗಿಯೂ, ಚಂದ್ರನು ಮಾತೃಕಾರಕನಾಗಿಯೂ ಆಗುವರು. ಅದಕ್ಕೆ ವಿರುದ್ಧವಾಗಿ ಪೂರ್ವೋಕ್ತಗ್ರಹಗಳೇ ತಂದೆಯ ಸೋದರರಿಗೂ, ತಾಯಿಯ ಸೋದರಿಯರಿಗೂ ಕಾರಕರಾಗುವರು. ಅಂದರೆ ರಾತ್ರಿಜನನದಲ್ಲಿ ರವಿಯು ಪಿತೃವ್ಯಕಾರಕನೆಂದೂ, ಶುಕ್ರನು ಮಾತೃಷ್ವಸೃಕಾರಕನೆಂದೂ ತಿಳಿಯಬೇಕು.

೪೬. ಶುಭಗ್ರಹಗಳಿಂದ ನೋಡಲ್ಪಡದಿರುವ ಆಧಾನಲಗ್ನಕ್ಕೆ ದ್ವಾದಶದಲ್ಲಿ ಪಾಪಗ್ರಹಗಳಿದ್ದರೆ, ಗರ್ಭಿಣಿಯಾಗಿ ಮೃತಳಾಗುವಳು. ಅಥವ ಲಗ್ನದಲ್ಲಿರುವ ಶನಿಯು ಕ್ಷೀಣಚಂದ್ರ ಅಥವ ಕುಜನಿಂದ ದೃಷ್ಟವಾದರೂ ಗರ್ಭಿಣಿಯು ಮೃತಿಹೊಂದುವಳು.

೪೭. ಆಧಾನಲಗ್ನ ಮತ್ತು ಚಂದ್ರ ಇವರಿಬ್ಬರೂ, ಪಾಪಗ್ರಹಮಧ್ಯವರ್ತಿಗಳಾಗಿ ಶುಭಗ್ರಹಗಳಿಂದ ವೀಕ್ಷಿತರಾಗದಿದ್ದರೂ ಗರ್ಭಿಣಿಗೆ ವಿಪತ್ತು ಸಂಭವಿಸುವುದು.

೪೮-೪೯. ಲಗ್ನ ಅಥವ ಚಂದ್ರನಿಂದ ಚತುರ್ಥದಲ್ಲಿ ಪಾಪಗ್ರಹಗಳೂ ಅಷ್ಟಮದಲ್ಲಿ ಅಂಗಾರಕನಿರುವುದೂ, ಹಾಗೆಯೇ ಕುಜಸೂರ್ಯರು ಕ್ರಮವಾಗಿ

ತನ್ವಸ್ತಸಂಸ್ಥಯೋರ್ಭೌಮರವ್ಯೋಃ ಶಸ್ತ್ರಭವಃ ಕ್ಷಯಃ ।
ನಿಪೀಡನೇ ಮಾಸಪತೇಸ್ತತ್ಕಾಲೇ ಸ್ರವಣಂ ವದೇತ್ ॥ ೪೯ ॥

ಶಶಾಂಕಲಗ್ನೋಪಗತೈಃ ಶುಭಗ್ರಹೈ
ಸ್ತ್ರಿಕೋಣಜಾಯಾರ್ಥಸುಖಾಸ್ಪದಸ್ಥಿತೈಃ ।
ತೃತೀಯಲಾಭರ್ಕ್ಷಗತೈಶ್ಚ ಪಾಪಕೈಃ
ಸುಖೀ ತು ಗರ್ಭೋ ರವಿಣಾ ನಿರೀಕ್ಷಿತಃ ॥ ೫೦ ॥

ಓಜಭೇ ಪುರುಷಾಂಶೇಷ್ವರ್ಕೇ ಲಗ್ನೇಂದ್ವಿಜ್ಯೈರ್ಬಲಾನ್ವಿತೈಃ ।
ಗುರ್ವರ್ಕೌ ವಿಷಮಸ್ಥೌ ವಾ ಪುಂಜನ್ಮ ಪ್ರವದೇತ್ತದಾ ॥ ೫೧ ॥

ಚತುರ್ಥ ಮತ್ತು ದ್ವಾದಶಸ್ಥಾನಗಳಲ್ಲಿರುವುದೂ. ಕುಜನು ಚತುರ್ಥದಲ್ಲಿದ್ದು ಚಂದ್ರನು ಕ್ಷೀಣನಾಗಿರುವುದೂ, ಗರ್ಭಿಣೀಸ್ತ್ರೀಯ ಮರಣಕ್ಕೆ ಸಾಧಕವಾದ ಯೋಗಗಳೆನಿಸುವುವು. ಕುಜ ಸೂರ್ಯರು ಲಗ್ನ ಸಪ್ತಮಗಳಲ್ಲಿದ್ದರೆ ಶಸ್ತ್ರ ನಿಮಿತ್ತವಾಗಿ ಮರಣವೊಂದುವಳೆಂದು ತಿಳಿಯಬೇಕು. ಕುಜಾದಿಗ್ರಹಗಳು ಯುದ್ಧದಲ್ಲಿ ಪರಾಜಿತರಾದರೂ ಧೂಮಕೇತ್ವಾದ್ಯುಪಗ್ರಹಗಳಿಂದ ಪೀಡಿತರಾದರೂ ಪಾಪಯುತದೃಷ್ಟರಾದರೂ ಅದೇ ಗ್ರಹವು ಅಧಿಪತಿಯಾಗಿರುವ ತಿಂಗಳಲ್ಲಿ ನಾರಿಯರಿಗೆ ಗರ್ಭಸ್ರಾವವುಂಟಾಗುವುದೆಂದು ನಿರ್ಧರಿಸಬೇಕು.

೫೦. ಶುಭಗ್ರಹಗಳು ಲಗ್ನದಲ್ಲಿಯೂ ಚಂದ್ರನೊಡನೆಯೂ ಸೇರಿದ್ದರೆ ಗರ್ಭಕ್ಕೆ ಕ್ಷೇಮವಾಗುವುದು. ಲಗ್ನ ಮತ್ತು ಚಂದ್ರ ಇವುಗಳಿಂದ ಎರಡು ನಾಲ್ಕು, ಐದು, ಏಳು, ಒಂಭತ್ತು ಮತ್ತು ಹತ್ತನೆಯ ರಾಶಿಗಳಲ್ಲಿ ಶುಭಗ್ರಹಗಳಿದ್ದು ಮೂರು, ಆರು ಮತ್ತು ಹನ್ನೊಂದರಲ್ಲಿ ಪಾಪಗ್ರಹಗಳಿದ್ದರೂ, ಸೂರ್ಯ ದೃಷ್ಟಿ ಪಡೆದಿದ್ದರೆ ಗರ್ಭವು ಪುಷ್ಟವಾಗಿ ಬೆಳೆಯುವುದೆಂದು ತಿಳಿಯಬೇಕು.

೫೧-೫೪. ಆಧಾನ ಅಥವ ಪ್ರಶ್ನಲಗ್ನದಲ್ಲಿ ವಿಷಮರಾಶಿಗಳಲ್ಲಿ ಅವರಲ್ಲೂ ಪುರುಷಾಂಶಗಳಲ್ಲಿ ಬಲಿಷ್ಠವಾದ ಲಗ್ನ ಸೂರ್ಯ, ಗುರು, ಚಂದ್ರ ಇವರಿದ್ದರೆ ಪುಂಜನ್ಮವಾಗುವುದೆಂದೂ, ಸಮರಾಶಿಯಾಗಿ ಯುಗ್ಮಾಂಶಗಳಲ್ಲಿ ಅದೇ ಲಗ್ನ, ಗುರು, ಅರ್ಕ, ಚಂದ್ರ ಇವರಿದ್ದರೂ ಸ್ತ್ರೀಜನನವಾಗುವುದೆಂದೂ

ಯುಗ್ಮಭಾಂಶಸ್ಥಿತೈಸ್ತೈಸ್ತು ವಕ್ರೇಂದುಭೃಗುಭಿಸ್ತಥಾ ।
ಯಮಸ್ಥಾನಗತೈರ್ವಾಚ್ಯಂ ಸ್ತ್ರಿಯೋ ಜನ್ಮ ಮನೀಷಿಭಿಃ ॥ ೫೨ ॥

ದ್ವ್ಯಂಗಸ್ಥಾ ಬುಧಸಂದೃಷ್ಟಾಃ ಸ್ವಪಕ್ಷೇ ಯಮಳಂಕರಾಃ ।
ಲಗ್ನಂ ವಿನೌಜಭಾವಸ್ಥಃ ಸೌರಃ ಪುಂಜನ್ಮಕೃತ್ತಥಾ ॥ ೫೩ ॥

ಅನ್ಯೋನ್ಯಂ ರವಿಶಶಿನೌ ವಿಷಮೌ ವಿಷಮರ್ಕ್ಷಗೌ ನಿರೀಕ್ಷ್ಯೇತೇ ।
ಇಂದುಜರವಿಪುತ್ರೌ ವಾ ತಥೈವ ನಪುಂಸಕಂ ಕುರುತಃ ॥ ೫೪ ॥

ಸಮೇ ಸಿತೇಂದೂ ಓಜ ಸ್ಥ ಜ್ಞಾರಾಂಗೇಜ್ಯಾ ನೃವೀಕ್ಷಿತೌ ।
ಲಗ್ನೇಂದುಸಮಗೌ ಯುಗ್ಮಸ್ಥಾನೇ ವಾ ಯಮಳಂಕರಾಃ ॥ ೫೫ ॥

ತಿಳಿಯಬೇಕು. ಮತ್ತು ಚಂದ್ರ ಶುಕ್ರರೂ, ವಕ್ರಿಯಾದ ಕುಜನೂ ಬಲಿಷ್ಠರಾಗಿದ್ದು ದ್ವಿಸ್ವಭಾವರಾಶಿಗತರಾಗಿ ಬುಧದೃಷ್ಟಿಯನ್ನು ಪಡೆದಿದ್ದರೆ, ಅವಳಿಮಕ್ಕಳು ಹುಟ್ಟುವುವೆಂದೂ ಅರಿಯಬೇಕು. ಅಲ್ಲದೆ ಶನಿಯು ಆಧಾನಲಗ್ನವಲ್ಲಿಲ್ಲದೇ ವಿಷಮರಾಶಿಯಲ್ಲಿದ್ದರೆ ಪುರುಷಜನನಕ್ಕೆ ಕಾರಣವಾಗುವುದು. ಸೂರ್ಯಚಂದ್ರರು ಪರಸ್ಪರವಾಗಿ ನೋಡುತ್ತಾ ಚಂದ್ರನು ಸಮರಾಶಿಯಲ್ಲಿಯೂ, ಸೂರ್ಯನು ವಿಷಮರಾಶಿಯಲ್ಲಿಯೂ ಇದ್ದರೆ ಜನಿಸುವವನು ನಪುಂಸಕನಾಗುವನು. ಹಾಗೆಯೇ ಶನಿ ಬುಧರು ಕ್ರಮವಾಗಿ ಸಮ ವಿಷಮರಾಶಿಗಳಲ್ಲಿದ್ದುಕೊಂಡು ಪರಸ್ಪರವಾಗಿ ನೋಡಿದರೂ ನಪುಂಸಕಜನನಕ್ಕೆ ಅವಕಾಶವಿರುವುದು. ಚಂದ್ರ ಶುಕ್ರರು ಯುಗ್ಮರಾಶಿಯಲ್ಲಿದ್ದು ಬುಧ, ಕುಜ, ಗುರುಗಳು ವಿಷಮರಾಶಿಯಲ್ಲಿದ್ದರೆ ಒಂದುಗಂಡು, ಒಂದುಹೆಣ್ಣು ಹೀಗೆ ಎರಡು ಮಕ್ಕಳು ಜನಿಸುವರೆಂದು ತಿಳಿಯಬೇಕು.

೫೫-೫೭. ಚಂದ್ರ ಶುಕ್ರರು ಯುಗ್ಮರಾಶಿಯಲ್ಲಿದ್ದು ಬುಧ, ಗುರು, ಕುಜರು ವಿಷಮರಾಶಿಯಲ್ಲಿರುವವರಾದರೆ ಆಗಲೂ ಪುಂಸ್ತ್ರೀಸಂಬಂಧವಾದ ಯಮಳಪುತ್ರರುದಯಿಸುವರೆಂದು ತಿಳಿಯಬೇಕು. ಲಗ್ನ ಮತ್ತು ಚಂದ್ರ ಇವರು ಸಮರಾಶಿಯಲ್ಲಿದ್ದು ಪುರುಷಗ್ರಹಗಳಿಂದ ವೀಕ್ಷಿತರಾದರೂ ಯಮಳ

ಗ್ರಹೋದಯುಸ್ಥಾನ್ದ್ವ್ಯಂಗಾಂಶಾನ್ಸಕ್ತಿ ಜ್ಞೇ ಸ್ವಭಾಗಗೇ ।
ತ್ರಿತಯಂ ಜ್ಞಾಂಶಕಾದ್ಯುಗ್ಮಮಿಶ್ರೈಃ ಸಮಮಾದಿಶೇತ್ ॥ ೫೬ ॥

ಲಗ್ನೇ ಚಾಪಾಂತ್ಯಭಾಗಸ್ಥೇ ತದಂಶಸ್ಥಬಲಗ್ರಹೈಃ ।
ವೀರ್ಯಾಢ್ಯಜ್ಞಾರ್ಕಿಸಂದೃಷ್ಟ್ಯೈಃ ಕೋಶಸ್ಥಾನಧಿಕಾನ್ವದೇತ್ ॥ ೫೭ ॥

ಸಿತಾರೇಜ್ಯಾರ್ಕಜಚಂದ್ರಾರ್ಕಿಬುಧಸೂರ್ಯೇಂದವೋಽಧಿಪಾಃ ।
ಮಾಸಾನಾಂ ತತ್ಸಮಂ ವಾಚ್ಯಂ ಗರ್ಭಸ್ಥಸ್ಯ ಶುಭಾಶುಭಂ ॥ ೫೮ ॥

ತ್ರಿಕೋಣೇ ಜ್ಞೇ ಪರೈರ್ದುರ್ಬಲೇ ದ್ವಿಮುಖಾಂಘ್ರಿಕರಾನ್ವಿತಾಃ ॥ ೫೯ ॥

ಕುಲೀರಾಲಿಝಷಾಂತಸ್ಥೈಃ ಪಾಪೈಶ್ಚಂದ್ರೇ ವೃಷೋಪಗೇ ।
ಮೂಕಃ ಪ್ರಜಾಯತೇ ಸೌಮ್ಯೈಃ ಶ್ಚಿರೇಣ ಲಭತೇ ಗಿರಂ ॥ ೬೦ ॥

ಪುತ್ರರು ಜನಿಸುವರು. ಅಥವ ಬುಧ, ಗುರು, ಕುಜರು ಸಮರಾಶಿಯಲ್ಲಿಯೇ ಇದ್ದು ಬಲಿಷ್ಠರಾಗಿದ್ದರೂ ದ್ವಿಸ್ವಭಾವನವಾಂಶದಲ್ಲಿರುವ ಕುಜ, ಗುರು, ಚಂದ್ರರನ್ನು ತನ್ನ ನವಾಂಶದಲ್ಲಿರುವ ಬುಧನು ನೋಡಿದರೂ ಮೂರು ಮಂದಿ ಮಕ್ಕಳು ಹುಟ್ಟುವರೆಂದು ತಿಳಿಯಬೇಕು. ಇನ್ನು ಲಗ್ನವು ಧನುರ್ಲಗ್ನದ ಅಂತ್ಯನವಾಂಶದಲ್ಲಿದ್ದು ಬಲಿಷ್ಠರಾದ ಬುಧ, ಶನಿ ಇವರಿಂದಲೂ ಇನ್ನೂ ಬಲಿಷ್ಠರಾದ ಕೆಲವು ಗ್ರಹಗಳಿಂದಲೂ ವೀಕ್ಷಿತವಾದರೆ ಮೂರಕ್ಕಿಂತ ಹೆಚ್ಚಾದ ಗರ್ಭಗಳು ಸಂಭವಿಸುವುವೆಂದು ನಿರ್ಧರಿಸಬೇಕು.

೫೮-೬೦. ಗರ್ಭಮಾಸಗಳಿಗೆ ಕ್ರಮವಾಗಿ ಶುಕ್ರ, ಕುಜ, ಗುರು ಚಂದ್ರ, ಶನಿ, ಬುಧ, ಸೂರ್ಯ, ಚಂದ್ರ ಈ ಗ್ರಹಗಳು ಅಧಿಪತಿಗಳಾಗಿರುವರು. ಆಯಾಗ್ರಹಗಳ ಬಲಾಬಲಗಳಮೇಲೆ ಆಯಾ ತಿಂಗಳ ಗರ್ಭಪೋಷಣೆಯನ್ನರಿಯಬೇಕು. ಬುಧನು ತ್ರಿಕೋಣರಾಶಿಯಲ್ಲಿದ್ದು ದುರ್ಬಲರಾದ ಬೇರೆ ಗ್ರಹಗಳಿಂದ ನೋಡಲ್ಪಟ್ಟರೆ ತಲೆ, ಕಾಲು, ಕೈಗಳು ಇಮ್ಮಡಿಯಾಗಿ ಜನಿಸುವುವು. ವೃಷಭರಾಶಿಯಲ್ಲಿ ಚಂದ್ರನಿದ್ದು ಪಾಪಗ್ರಹಗಳು ಭಸಂಧಿಯಲ್ಲಿ ಅಂದರೆ ಕರ್ಕಾಟಕ, ಮೀನ, ವೃಶ್ಚಿಕ ಈ ರಾಶಿಗಳ ಸಂಧಿಯಲ್ಲಿ ಸೇರಿದ್ದರೆ ಹುಟ್ಟುವ ಮಗುವು ಮೂಕನಾಗುವುದು. ಅದೇ ಚಂದ್ರನಿಗೆ ಶುಭಗ್ರಹಗಳ ದೃಷ್ಟಿಯಿದ್ದರೆ ಬಹು ಕಾಲದಮೇಲೆ ಮಾತು ಬರುವುದೆಂದು ಹೇಳಬೇಕು.

**ಆರಾರ್ಕೀ ಚೇಜ್ಜ್ಯಭಾಂಶಸ್ಥೌ ಸದಂಶೋ ಗರ್ಭಕಸ್ತಥಾ**
**ಸ್ವಬೇಂದೌ ಭುವಿ ಮಂದಾರದೃಷ್ಟೇ ಕುಬ್ಜಸ್ತು ಗರ್ಭಗಃ ॥**
**ಪಂಗುರ್ಮೀನೇ ಯಮೇಂದ್ವಾರೈರ್ದೃಷ್ಟೇಽಥಾಂಗೇ ಭಸಂಧಿಗೇ ॥ ೬೧ ॥**

**ಪಾಪೈರ್ಜಡೋ ವಿಧೌ ಗರ್ಭಃ ಶುಭದೃಷ್ಟಿವಿವರ್ಜಿತೇ**
**ಮೃಗಾಂತ್ಯಗೇ ವಾಮನಕಃ ಸೌರೇಂದ್ವರ್ಕನಿರೀಕ್ಷಿತೇ ॥**
**ಪಾಪೈರ್ಧೀಭಾಗ್ಯಗೈಸ್ತ್ರ್ಯಂಶೈರಭುಜಾಂಘ್ರಿಶಿರಾಃ ಸ್ಮೃತಃ ॥ ೬೨ ॥**

**ರವಿಶಶಿಯುತೇ ಸಿಂಹಲಗ್ನೇ ಮಾಹೇಽಯಾರ್ಕನಿರೀಕ್ಷಿತೇ ।**
**ನೇತ್ರಹೀನಾ ಮಿಶ್ರಖೇಟೈರ್ದೃಷ್ಟೇ ಬುದ್ಬುದಲೋಚನಾಃ ॥**
**ವ್ಯಯೇಂದುರ್ವಾಮನಯನಮಿತರಂ ಸೂರ್ಯೋ ವಿನಾಶಯೇತ್ ॥ ೬೩ ॥**

---

೬೧-೬೨. ಶನ್ಯಂಗಾರಕರು ಯಾವ ರಾಶಿಯಲ್ಲಾದರೂ ಗುರುವಿನ ನವಾಂಶದಲ್ಲಿದ್ದರೆ ಮಗುವು ದಂತಸಹಿತವಾಗಿ ಜನಿಸುವುದು. ಚಂದ್ರನು ತನ್ನ ರಾಶಿಯಲ್ಲಿದ್ದು ಅದೇ ರಾಶಿಯೇ ಲಗ್ನವಾಗಿ ಶನ್ಯಂಗಾರಕರ ದೃಷ್ಟಿಯು ಚಂದ್ರನಿಗಿದ್ದರೆ ಕುಬ್ಜವಾದ ಶಿಶುವು ಜನಿಸುವುದು. ಮೀನಲಗ್ನಕ್ಕೆ ಶನಿ ಚಂದ್ರಾಂಗಾರಕರಿಂದ ದೃಷ್ಟಿಯಿದ್ದರೆ, ಕುಂಟುಮಗುವು ಹುಟ್ಟುವುದು. ಭಸಂಧಿಯ ಅಂಶಗಳಲ್ಲಿ ಪಾಪಗ್ರಹಗಳಾಗಲೀ ಚಂದ್ರನಾಗಲೀ ಇದ್ದು ಶುಭಗ್ರಹಗಳಿಂದ ವೀಕ್ಷಿತನಾಗದಿದ್ದರೆ, ಜಡಶಿಶುವು ಆವಿರ್ಭವಿಸುವುದೆಂದು ತಿಳಿಯಬೇಕು. ಲಗ್ನವು ಮಕರಾಂತ್ಯನವಾಂಶವಾಗಿದ್ದು ಶನಿ, ಚಂದ್ರ, ಸೂರ್ಯರಿಂದ ನೋಡಲ್ಪಟ್ಟರೆ ವಾಮನಾಕಾರದ ಶಿಶುವು ಜನಿಸುವುದು. ಪಂಚಮ ಮತ್ತು ನವಮರಾಶಿಗಳನ್ನು ಹೊಂದಿದ ಪಾಪಗ್ರಹಗಳಿಂದಲೂ, ಅದೇ ದ್ರೇಕ್ಕಾಣಗಳು ಪಾಪಗ್ರಹಾಕ್ರಾಂತವಾಗಿದ್ದರೂ ಹುಟ್ಟುವ ಶಿಶುವು, ಕೈ, ಕಾಲು, ಶಿರಸ್ಸು ಇವುಗಳಿಲ್ಲದೇ ಜನಿಸುವುದು.

೬೩-೬೪. ಸಿಂಹಲಗ್ನವಾಗಿದ್ದು, ಆ ಲಗ್ನದಲ್ಲಿ ಸೂರ್ಯ ಚಂದ್ರರಿಬ್ಬರೂ ಇದ್ದು ಶನ್ಯಂಗಾರಕರಿಂದ ವೀಕ್ಷಿತರಾಗಿದ್ದರೆ ಕಣ್ಣಿಲ್ಲದ ಮಗುವು ಹುಟ್ಟುವುದು. ಒಂದೇಸಲ ಶುಭ ಮತ್ತು ಪಾಪಗ್ರಹಳೆರಡರಿಂದಲೂ ದೃಷ್ಟವಾದರೆ ಪೊಳ್ಳೆಗಣ್ಣಿನ ಮಗುವು ಜನಿಸುವುದು. ವ್ಯಯಭಾವದಲ್ಲಿ ಚಂದ್ರನಿದ್ದರೆ ಎಡಗಣ್ಣಿಗೂ ಸೂರ್ಯ

ನೇಷ್ಟಾ ಯೋಗಾಃ ಶುಭೈರ್ದೃಷ್ಟಾಃ ಪಾಪಾಃ ಸ್ಯುರ್ನಾತ್ರ ಸಂಶಯಃ ।
ಮಂದೇಽಸ್ತೇ ಮಂದಭಾಂಶೇ ಚ ನಿಶೇಕೇಽಬ್ದತ್ರಯೇ ಜನಿಃ ॥ ೬೪ ॥

ದ್ವಾದಶಾಬ್ದೇ ಸುತಂ ಚೈವಂ ಸಪ್ತಮೇಽಬ್ದೇ ವಿಚಿಂತಯೇತ್ ॥ ೬೫ ॥

ಯಸ್ಮಿನ್ದ್ವಾದಶಭಾಗೇ ಗರ್ಭಾಧಾನೇ ವ್ಯವಸ್ಥಿತಶ್ಚಂದ್ರಃ ।
ತತ್ತುಲ್ಯರ್ಕ್ಷೇ ಪ್ರಸವಂ ಗರ್ಭಸ್ಯ ಸಮಾದಿಶೇತ್ಪ್ರಾಜ್ಞಃ ॥ ೬೬ ॥

ಆಧಾನಕಾಲಿಕಾಚ್ಚಾಂದ್ರದ್ವಾದಶಾಂಶಪ್ರಮಾಣತಃ ।
ಜನ್ಮಕಾಲೀನೇಷ್ಟಕಲಾ ಜ್ಞಾಯಂತೇ ಚಾನುಪಾತತಃ ॥ ೬೭ ॥

ಪಿತುಃ ಪರೋಕ್ಷೇ ಜನ್ಮ ಸ್ಯಾದಿಂದೌ ಲಗ್ನಮಪಶ್ಯತಿ ।
ವಿದೇಶಸ್ಥಸ್ಯ ಚರಭೇ ಮಧ್ಯಾದ್ಭ್ರಷ್ಟೇ ದಿವಾಕರೇ ॥ ೬೮ ॥

ನಿದ್ದರೆ ಬಲಗಣ್ಣಿಗೂ ತೊಂದರೆಯುಂಟೆಂದು ತಿಳಿಯಬೇಕು. ಆದರೆ ಇಲ್ಲಿನ ವರೆಗೆ ಹೇಳಿದ ದುರ್ಯೋಗಗಳಲ್ಲೆಲ್ಲ ಶುಭಗ್ರಹದೃಷ್ಟಿಯಿದ್ದರೆ ಅವುಗಳ ಚಿಹ್ನೆ ಮಾತ್ರ ಇರುತ್ತದೆಯೇ ಹೊರತು, ಫಲವು ಪೂರ್ಣವಾಗಿ ತೋರುವುದಿಲ್ಲ. ನಿಷೇಕ ಲಗ್ನದಲ್ಲಿ ಶನಿಯು ಸಪ್ತಮದಲ್ಲಿದ್ದು ಸ್ವಾಂಶದಲ್ಲಿದ್ದರೆ ನಿಷೇಕವಾದ ಮೂರು ವರ್ಷದಲ್ಲಿ ಶಿಶುವು ಜನಿಸುವುದೆಂದು ತಿಳಿಯಬೇಕು.

೬೫-೬೭. ಸಪ್ತಮಭಾವದಲ್ಲಿ ಚಂದ್ರನಿದ್ದರೆ ಹನ್ನೆರಡನೆಯ ವರ್ಷದಲ್ಲಿ ಮಗುವಾಗುವುದು. ಅಲ್ಲದೇ ಆಧಾನಕಾಲದಲ್ಲಿ ಚಂದ್ರನಿಂದ ಕೂಡಿದ ದ್ವಾದಶಾಂಶವು ಪ್ರಸವಯೋಗ್ಯವಾದ ಹತ್ತನೆಯ ತಿಂಗಳಿನಲ್ಲಿ ಯಾವಾಗ ಮತ್ತೆ ಚಂದ್ರನಿಂದ ಆಕ್ರಾಂತವಾಗುವುದೋ ಆಗ ಪ್ರಸವವಾಗುವುದೆಂದು ಹೇಳಬಹುದು. ಆಧಾನಕಾಲದ ಚಂದ್ರ, ದ್ವಾದಶಾಂಶ ಪ್ರಮಾಣದಿಂದಲೇ ಜನನಕಾಲದ ಇಷ್ಟ ಕಲೆಯನ್ನೂ ಅನುಪಾತಾದಿಗಳಿಂದ ತಿಳಿಯಬಹುದು.

೬೮-೭೦. ಚಂದ್ರನು ಪ್ರಸವಲಗ್ನವನ್ನು ನೋಡದಿದ್ದರೆ ಜನನಕಾಲದಲ್ಲಿ ತಂದೆಯು ಪರೋಕ್ಷದಲ್ಲಿದ್ದನೆಂದು ತಿಳಿಯಬೇಕು. ಸೂರ್ಯನು ಚರರಾಶಿಯಲ್ಲಿದ್ದು ದಶಮಭಾವಕ್ಕಿಂತ ಕಮ್ಮಿ ಇದ್ದರೆ ಮಗುವು ಹುಟ್ಟಿದಾಗ ತಂದೆಯು

ಉದಯಸ್ಥೇಽಪಿ ವಾ ಮಂದೇ ಕುಜೇ ವಾಸ್ತಂ ಸಮಾಗತೇ ।
ಸ್ಥಿತೇ ವಾಂತಃ ಕ್ಷಪಾನಾಥೇ ಶಶಾಂಕಸುತಶುಕ್ರಯೋಃ ॥ ೭೯ ॥

ಶಶಾಂಕೇ ಪಾಪಲಗ್ನೇ ವಾ ವೃಶ್ಚಿಕೇಶತ್ರಿಭಾಗಗೇ ।
ಶುಭೈಃ ಸ್ವಾಯಸ್ಥಿತೈರ್ಜಾತಃ ಸರ್ಪಸ್ತದ್ವೇಷ್ಟಿತೋಽಪಿ ವಾ ॥ ೮೦ ॥

ಚತುಷ್ಪಾದಗತೇ ಭಾನೌ ಶೇಷೈರ್ವೀರ್ಯಸಮನ್ವಿತೈಃ ।
ದ್ವಿತನುಸ್ಥೈಶ್ಚ ಯಮಲೌ ಭವತಃ ಕೋಶವೇಷ್ಟಿತೌ ॥ ೮೧ ॥

ಭಾಗೇ ಸಿಂಹೇ ವೃಷೇ ಲಗ್ನೇ ತತ್ಸ್ಥೇ ಸೌರೇಽಥವಾ ಕುಜೇ ।
ರಾಶ್ಯಂಶಸದೃಶೇ ಗಾತ್ರೇ ಜಾಯತೇ ನಾಲವೇಷ್ಟಿತಃ ॥ ೮೨ ॥

ದೇಶಾಂತರದಲ್ಲಿದ್ದನೆಂದು ತಿಳಿಯಬೇಕು. ಹಾಗೆಯೇ ಶನಿಯು ಲಗ್ನದಲ್ಲಿರುವಾಗಲೂ, ಅಂಗಾರಕನು ಸಪ್ತಮಭಾವದಲ್ಲಿರುವಾಗಲೂ, ಚಂದ್ರನು ಬುಧ ಶುಕ್ರರ ಮಧ್ಯವರ್ತಿಯಾಗಿದ್ದರೂ, ಜನನ ಕಾಲದಲ್ಲಿ ಆ ಶಿಶುವಿನ ತಂದೆಯು ಮನೆಯಲ್ಲಿರುವುದಿಲ್ಲವೆಂದು ಊಹಿಸಬೇಕು. ಚಂದ್ರನು ಪಾಪಲಗ್ನದಲ್ಲಾಗಲೀ ಕುಜದ್ರೇಕ್ಕಾಣದಲ್ಲಾಗಲೀ ಇದ್ದು ಲಗ್ನಾತ್ ಎರಡು ಮತ್ತು ಹನ್ನೊಂದನೆಯ ಮನೆಯಲ್ಲಿದ್ದರೆ ಸರ್ಪಾಕಾರದ ಶಿಶುವು ಜನಿಸುವುದು ಅಥವ ಸರ್ಪವೇಷ್ಟಿತವಾದ ಶಿಶುವಾಗಲೀ ಹುಟ್ಟುವುದು.

೮೧-೮೨. ಸೂರ್ಯನು ಚತುಷ್ಪಾದರಾಶಿಯಲ್ಲಿದ್ದು ಉಳಿದ ಗ್ರಹಗಳು ದ್ವಿಸ್ವಭಾವರಾಶಿಗತರಾಗಿ ಬಲಿಷ್ಠರಾಗಿದ್ದರೆ, ಒಂದೇ ಜರಾಯುಕೋಶದಲ್ಲಿ ಯಮಳಪುತ್ರರು ಜನಿಸುವರು ಎಂದು ತಿಳಿಯಬೇಕು. ಮೇಷ, ವೃಷಭ ಸಿಂಹ ಇವು ಲಗ್ನವಾಗಿ ಅದರಲ್ಲಿ ಶನಿ ಅಥವ ಕುಜರಿದ್ದರೆ ಆಯಾರಾಶಿಗೆ ಉಕ್ತವಾದ ಅಂಗಗಳಲ್ಲಿ ನಾಳವೇಷ್ಟನವಾಗಿರುವುದು. ಹಾಗೆಯೇ ಲಗ್ನಕ್ಕೆ ಗುರು ದೃಷ್ಟಿಯಿಲ್ಲದೇ, ಚಂದ್ರನು ಪಾಪಗ್ರಹಗಳ ಸಂಪರ್ಕವುಳ್ಳವನಾದರೆ ಮಗುವು ವ್ಯಭಿಚಾರದಿಂದ ಜನಿಸಿರುವುದೆಂದು ತಿಳಿಯಬೇಕು ಮತ್ತು ಸೂರ್ಯನಿಂದ

ನ ಲಗ್ನಮಿಂದುಂ ಚ ಗುರುರ್ನಿರೀಕ್ಷತೇ
ನವಾ ಶಶಾಂಕಂ ರವಿಣಾ ಸಮಾಗತಂ ।
ಸಪಾಪಕೋಽರ್ಕೇಣ ಯುತೋಽಥವಾ
ಶಶೀ ಪರೇಣ ಜಾತಂ ಪ್ರವದಂತಿ ನಿಶ್ಚಯಾತ್ ॥ ೭೩ ॥

ಕ್ರೂರರ್ಕ್ಷಗತಾವಶೋಭನೌ ಸೂರ್ಯಾದ್ದ್ಯೂನನವಾತ್ಮಜಸ್ಥಿತೌ ।
ಬದ್ಧಸ್ತು ಪಿತಾ ವಿದೇಶಗಃ ಸ್ವೇ ವಾ ರಾಶಿವಶಾದಥೋ ಪಥಿ ॥ ೭೪ ॥

ಪೂರ್ಣೇ ಶಶಿನಿ ಸ್ವರಾಶಿಗೇ ಸೌಮ್ಯೇ ಲಗ್ನಗತೇ ಶುಭೇ ಸುಖೇ ।
ಲಗ್ನೇ ಜಲಜೇಽಸ್ತಗೇಽಪಿವಾ ಚಂದ್ರೇ ಪೋತಗತಾ ಪ್ರಸೂಯತೇ ॥ ೭೫ ॥

ಕೂಡಿದ ಚಂದ್ರನಿಗಾದರೂ ಗುರುದೃಷ್ಟಿಯಿಲ್ಲದೇ ಚಂದ್ರನಿಗೆ ಪಾಪಗ್ರಹಗಳ ಸಂಪರ್ಕವಿದ್ದರೂ ಮಗುವು ವ್ಯಭಿಚಾರದಿಂದ ಜನಿಸಿರುವುದೆಂದು ತಿಳಿಯಬೇಕು.

೭೪-೭೫. ಪಾಪಗ್ರಹಗಳು ಪಾಪಕ್ಷೇತ್ರಗಳಲ್ಲಿದ್ದು ಸೂರ್ಯನಿಗಿಂತ ಐದು, ಏಳು, ಒಂಭತ್ತನೆಯ ಭಾವಗಳಲ್ಲಿದ್ದರೆ ಮಗುವು ಹುಟ್ಟಿದಾಗ ತಂದೆಯು ದೇಶಾಂತರದಲ್ಲಾಗಲೀ ಅಥವ ಅರ್ಧದಾರಿಯಲ್ಲಾಗಲೀ ಬಂಧಿಸಲ್ಪಡುವನು. ಪೂರ್ಣಚಂದ್ರನು ತನ್ನ ರಾಶಿಯಲ್ಲಿದ್ದು ಬುಧನು ಲಗ್ನಗತನಾಗಿ ಶುಭಗ್ರಹವು ಸುಖಸ್ಥಾನದಲ್ಲಿರುವಾಗಲಾದರೂ ಅಥವ ಲಗ್ನವು ಜಲರಾಶಿಯಾಗಿದ್ದರೂ ಜಲದಲ್ಲಿ ಪ್ರಯಾಣಮಾಡುತ್ತಿರುವಾಗಲೇ ತಾಯಿಯು ಈ ಶಿಶುವನ್ನು ಪಡೆದಿರುವಳೆಂದು ತಿಳಿಯಬೇಕು. ಜಲರಾಶಿಯಲ್ಲಿರುವ ಪೂರ್ಣಚಂದ್ರನು ಜಲರಾಶಿಯಾದ ಜನ್ಮಲಗ್ನವನ್ನು ನೋಡುತ್ತಿದ್ದರೆ ನೀರಿನ ಬಳಿಯಲ್ಲಿಯೋ ಜನನವಾಗಿರುವುದೆಂದರಿಯಬೇಕು. ಶನಿಯು ಲಗ್ನ ಚಂದ್ರರಿಗೆ ವ್ಯಯಭಾವದಲ್ಲಿದ್ದು ಪಾಪಗ್ರಹದಿಂದ ನೋಡಲ್ಪಟ್ಟಿದ್ದರೆ ಬಂಧನಾಗಾರದಲ್ಲಿ ಜನಿಸಿರುವನು. ಶನಿಯು ಕರ್ಕಾಟಕ ಅಥವ ವೃಶ್ಚಿಕರಾಶಿಯಲ್ಲಿದ್ದು ಚಂದ್ರನಿಂದ ನೋಡಲ್ಪಟ್ಟರೆ ಹಳ್ಳದಲ್ಲಿ ಹುಟ್ಟಿದವನೆಂದು ತಿಳಿಯಬೇಕು. ಜಲರಾಶಿಯಲ್ಲಿರುವ ಶನಿಯು ಲಗ್ನ

ಸಲಿಲಭಲಗ್ನಂ ಚಂದ್ರೋ ಜಲಚರರಾಶೌ ತು ವೀಕ್ಷತೇ ಪೂರ್ಣಃ ।
ಪ್ರಸವಂ ಸಲಿಲೇ ನಿದ್ಯಾದ್ವಂಧೂದಯುದಶಮಗಶ್ಚ ಯದಾ ॥ ೭೬ ॥

ಪಾಪದೃಷ್ಟೇ ಯಮೇ ಗುಪ್ತ್ಯಾಂ ಜನ್ಮಾಂಗಾಬ್ಜವ್ಯಯಸ್ಥಿತೇ ।
ಕರ್ಕಾಲಿಲಗ್ನಗೇ ಸೌರೇ ವಟೇ ಜನ್ಮಾಬ್ಜವೀಕ್ಷಿತೇ ॥ ೭೭ ॥

ಮಂದೇ ಜನ್ಮಗತೇ ಲಗ್ನೇ ಬುಧಸೂರ್ಯೇಂದುವೀಕ್ಷಿತೇ ।
ಕ್ರೀಡಾಸ್ಥಾನೇ ದೇವಗೇಹೇ ವ್ಯೂಷರೇ ಚಕ್ರಮಾಜ್ಞನಿಃ ॥ ೭೮ ॥

ನೃಲಗ್ನಗಂ ಪ್ರೇಕ್ಷ್ಯ ಕುಜಃ ಶ್ಮಶಾನೇ
ರಮ್ಯೇ ಸಿತೇಂದೂ ಗುರುರಗ್ನಿಹೋತ್ರೇ ।
ರವಿರ್ನರೇಂದ್ರಾನುರಗೋಕುಲೇಷು
ಶಿಲ್ಪಾಲಯೇ ಜ್ಞಃ ಪ್ರಸವಂ ಕರೋತಿ ॥ ೭೯ ॥

ತ್ರಿಕೋಣಗೇಬ್ಜ ಆರಾಕರ್ಯೋಃ ಶಿಶುಸ್ಸಂತ್ಯಜ್ಯತೇಽಂಬಯಾ ॥ ೮೦ ॥

---

ದಲ್ಲಿದ್ದು ಬುಧ, ಸೂರ್ಯ, ಚಂದ್ರರಿಂದ ನೋಡಲ್ಪಟ್ಟರೆ ಕ್ರಮವಾಗಿ ಕ್ರೀಡಾ ಭವನ, ಸುರಾಲಯ, ಚೌಳುಭೂಮಿ ಮುಂತಾದ ಪ್ರದೇಶಗಳಲ್ಲಿ ಹುಟ್ಟಿದವ ನೆಂದು ತಿಳಿಯಬೇಕು.

೭೮-೭೯. ನರರಾಶಿಯಲ್ಲಿ ಶನಿಯಿದ್ದು ಅವನನ್ನು ಕುಜನು ನೋಡಿದರೆ ಸ್ಮಶಾನದಲ್ಲಿ ಜನಿಸಿರುವನೆಂದೂ, ರವಿಯು ನೋಡಿದರೆ ರಾಜಗೃಹ, ದೇವಾಲಯ ಗೋಶಾಲೆ ಇವುಗಳಲ್ಲಿ ಹುಟ್ಟಿರುವನೆಂದೂ, ಶುಕ್ರ ಮತ್ತು ಚಂದ್ರ ಇವರು ನೋಡಿದರೆ ಒಳ್ಳೆಯ ಮನೋಹರವಾದ ಪ್ರದೇಶಗಳಲ್ಲಿ ಜನಿಸಿರುವನೆಂದೂ ಬುಧನು ನೋಡಿದರೆ ಶಿಲ್ಪಾಲಯದಲ್ಲಿ ಜನಿಸಿರುವನೆಂದೂ ತಿಳಿಯಬೇಕು.

೮೦-೮೩. ಚಂದ್ರನು ಕುಜ, ಶನಿಗಳಿಗೆ ತ್ರಿಕೋಣದಲ್ಲಿದ್ದರೆ ಶಿಶುವು ತಾಯಿಯಿಂದ ಬಿಡಲ್ಪಡುವನು. ಅದೇ ಚಂದ್ರನು ಬೃಹಸ್ಪತಿಯಿಂದ ನೋಡ ಲ್ಪಟ್ಟರೆ ಆ ಶಿಶುವು ದೀರ್ಘಾಯುವೆನಿಸಿಕೊಳ್ಳುವನು. ಚಂದ್ರನು ಪಾಪಗ್ರಹ ದಿಂದ ನೋಡಲ್ಪಟ್ಟರೆ ಮತ್ತು ಕುಜನು ಸಪ್ತಮದಲ್ಲಿದ್ದರೆ ಮಗುವು ನಷ್ಟವಾಗು

**ಗುರುದೃಷ್ಟೇ ತು ದೀರ್ಘಾಯುಃ ಪರಂ ಚ ಪ್ರಾಪ್ನುತೇ ಪುನಃ ।**
**ಪಾಪದೃಷ್ಟೇ ವಿಧೌ ಲಗ್ನೇಽಸ್ತೇ ಕುಜೇ ಚ ವಿನಶ್ಯತಿ ॥ ೮೧ ॥**

**ಭವೇ ಕುಜಾರ್ಕ್ಯೋಃ ಸಂದೃಷ್ಟೇ ಪರಹಸ್ತಗತಃ ಸುಖೀ ।**
**ಪಾಪೇ ಯುತಾಯುರ್ಭವತಿ ಮಾಸಃ ಸಾರ್ಧೈಃ ಪರೈರಪಿ ॥ ೮೨ ॥**

**ಪಿತೃಮಾತೃಗೃಹೇ ಜನ್ಮ ತದಧೀಶಬಲಾನ್ಮುನೇ ।**
**ತರುಗೇಹೇ ಶುಭೇ ನೀಚೇ ದುರ್ಗೇ ಪ್ರಾಕಾರಪಂಕ್ತಿಷು ॥ ೮೩ ॥**

**ನೈಕಸ್ಥದೃಷ್ಟೌ ಲಗ್ನೇಂದೂ ವಿಜನೇ ತು ಜನಿರ್ಭವೇತ್ ।**
**ಮಂದರ್ಕ್ಷಾಂಶೇ ವಿಧೌ ತುರ್ಯೇ ಮಂದದೃಷ್ಟೇಽಬ್ಜಗೇಽಪಿ ವಾ ॥ ೮೪ ॥**

ವುದು. ಲಗ್ನದಿಂದ ಲಾಭಸ್ಥಾನದಲ್ಲಿ ಕುಜ, ಶನಿಗಳಿದ್ದರೆ ಮಾತೃವಿಯುಕ್ತನಾಗಿ ಶಿಶುವು ಸಾಕಪೊಂದುವುದು. ಹಾಗೆಯೇ ಲಾಭಸ್ಥನಾದ ಚಂದ್ರನು ಬಲವಿಲ್ಲದ ಪಾಪಗ್ರಹಗಳಿಂದ ನೋಡಲ್ಪಟ್ಟರೆ ಆ ಮಗುವು ಪರಹಸ್ತಗತವಾಗಿ ಜೀವಿಸುವುದು.

೮೩-೮೪. ಹಿಂದೆ ಹೇಳಿದ ಪಿತೃಮಾತೃವಿಚಾರಕಗ್ರಹಗಳು ಬಲಿಷ್ಠರಾಗಿದ್ದರೆ ಶಿಶುವು ತಂದೆತಾಯಿಗಳ ಬಂಧುಗಳ ಮನೆಯಲ್ಲಿ ಹುಟ್ಟುವುದೆಂದು ತಿಳಿಯಬೇಕು. ಶುಭಗ್ರಹಗಳಿದ್ದರೂ ನೀಚರಾಶಿಗತರಾಗಿದ್ದರೆ ವೃಕ್ಷಸಮೂಹ (ತೋಪುಗಳು) ಕೋಟೆ, ಪೌಳಿ ಮುಂತಾದ ಪ್ರದೇಶಗಳಲ್ಲಿ ಶಿಶುವು ಜನಿಸುವುದು. ಲಗ್ನ, ಚಂದ್ರರು ಯಾವ ಗ್ರಹಗಳಿಂದಲೂ ನೋಡಲ್ಪಡದಿದ್ದರೆ ಜನಶೂನ್ಯವಾದ ಪ್ರದೇಶದಲ್ಲಿ ಮಗುವು ಜನಿಸುವುದೆಂದು ಹೇಳಬೇಕು. ಚಂದ್ರನು ಶನ್ಯಂಶಗತನಾಗಿದ್ದರೆ ಮಗುವು ಅಂಧಕಾರದಲ್ಲಿ (ಕತ್ತಲೆಯಲ್ಲಿ) ಜನಿಸುವುದು. ಚತುರ್ಥದಲ್ಲಿರುವ ಚಂದ್ರನು ಮಂದದೃಷ್ಟನಾದರೂ, ಜಲರಾಶಿಗಳಲ್ಲಿ ಚಂದ್ರನು ಸಂಚರಿಸಿದರೂ, ಚಾಂದ್ರನು ಶನಿ ಸಂಬಂಧಿಯಾಗಿದ್ದರೂ ಸೂತಿಕಾಶಯನವು ಅಂಧಕಾರದಲ್ಲಿರುವುದು. ನೀಚಗ್ರಹಗಳು ಲಗ್ನಗತವಾದರೆ ನೆಲದಮೇಲೆ ಸೂತಿಕಾ

ತದ್ಯುಕ್ತೇ ಚೈವ ತಮಸಿ ಶಯನಂ ನೀಚಗೇ ಭುವಿ ।
ಶೀರ್ಷೋ ಪೃಷ್ಠೋದಯೇ ಜನ್ಮ ತದ್ವದೇವ ವಿನಿರ್ದಿಶೇತ್ ॥ ೮೫ ॥

ಚಂದ್ರಾಸ್ತಸುಖಗೈಃ ಪಾಪೈರ್ಮಾತುಃ ಪೀಡಾಂ ಸಮಾದಿಶೇತ್ ।
ಜೀರ್ಣೋದ್ಧೃತಂ ಗೃಹಂ ಮಂದೇಽಸೃಜಿ ದಗ್ಧಂ ನವಂ ವಿಧೌ ॥ ೮೬ ॥

ಕಾಷ್ಠಾಢ್ಯಮದೃಢಂ ಸೂರ್ಯೇ ಬಹುಶಿಲ್ಪಯುತಂ ಬುಧೇ
ಚಿತ್ರಯುಕ್ತಂ ನವಂ ಶುಕ್ರೇ ದೃಢೇ ರಮ್ಯೇ ಗುರೌ ಗೃಹಂ ॥ ೮೭ ॥

ಧಟಾಜಕರ್ಕ್ಯಲಿಘಟೇ ಪೂರ್ವೇ ಜ್ಞೇಜ್ಯಗೃಹೇ ಹ್ಯುದಕ್ ।
ವೃಷೇ ಪಶ್ಚಾನ್ಮೃಗೇ ಸಿಂಹೇ ದಕ್ಷಿಣೇ ವಸತಿರ್ಭವೇತ್ ॥ ೮೮ ॥

ಶಯನವಿರುವುದು. ಜನನ ಲಗ್ನವು ಶೀರ್ಷೋದಯಾದಿ ಯಾವ ಲಗ್ನದಲ್ಲಿರು ತ್ತದೆಯೋ ಅದೇ ರೀತಿ ಶಿಶುವೂ ಉದಯಿಸುತ್ತದೆಂದು ಹೇಳಬೇಕು.

೮೬–೮೭. ಚಂದ್ರನಿಗಿಂತ ಏಳು, ನಾಲ್ಕನೆಯ ಮನೆಗಳಲ್ಲಿ ಪಾಪಗ್ರಹ ಗಳಿದ್ದರೆ ತಾಯಿಗೆ ಬಹುವಾಗಿ ವ್ಯಥೆಯಾಗುವುದು. ಜಾತಕದಲ್ಲಿ ಎಲ್ಲಾ ಗ್ರಹ ಗಳಿಗಿಂತ ಶನಿಯು ಬಲಿಷ್ಠನಾಗಿದ್ದರೆ ಜೀರ್ಣಗೃಹದಲ್ಲಿ ಜನನವಾಗುವುದು. ಅಂಗಾರಕನು ಬಲಿಷ್ಠನಾಗಿದ್ದರೆ ದಗ್ಧಗೃಹದಲ್ಲಿಯೂ, ಸೂರ್ಯನು ಬಲಿಷ್ಠನಾಗಿ ದ್ದರೆ ಮರಗಳು ಹೆಚ್ಚಾಗಿರುವ ಮನೆಯಲ್ಲಿಯೂ, ಚಂದ್ರನು ಬಲಿಷ್ಠನಾದರೆ ಹೊಸಮನೆಯಲ್ಲಿಯೂ, ಬುಧನು ಬಲಿಷ್ಠನಾಗಿದ್ದರೆ ಶಿಲ್ಪಮಯವಾದ ಗೃಹ ದಲ್ಲಿಯೂ, ಗುರುಶುಕ್ರರು ಬಲಿಷ್ಠರಾಗಿದ್ದರೆ ರಮ್ಯವಾದ ಮತ್ತು ಚಿತ್ರಯುಕ್ತ ವಾದ ಮನೆಯಲ್ಲಿಯೂ ಜನನವಾಗುವುದು.

೮೮. ಮೇಷ, ಕಟಕ, ತುಲಾ, ವೃಶ್ಚಿಕ, ಕುಂಭ ಈ ರಾಶಿಗಳು ಲಗ್ನ ವಾದರೆ ಸೂತಿಕಾಗೃಹವು ಪೂರ್ವದಿಕ್ಕಿನಲ್ಲಿರುವುದು. ಗುರು ಬುಧರ ರಾಶಿಗಳು ಲಗ್ನವಾದರೆ ಉತ್ತರದಿಕ್ಕಿನಲ್ಲಿಯೂ ವೃಷಭಲಗ್ನವಾದರೆ ಪಶ್ಚಿಮದಲ್ಲಿಯೂ ಮೃಗ, ಸಿಂಹಗಳು ಲಗ್ನವಾದರೆ ದಕ್ಷಿಣಭಾಗದಲ್ಲಿಯೂ ಸೂತಿಕಾಗೃಹವಿರುವು ದೆಂದು ತಿಳಿಯಬೇಕು.

ಗೃಹಪ್ರಾಚ್ಯಾದಿಗೌ ದ್ವೌ ದ್ವೌ ದ್ವ್ಯಂಗಾಃ ಕೋಣೇಷ್ವಜಾದಯಃ ।
ಪರ್ಯಂಕೇ ವಾಸ್ತುವತ್ಪಾದಾಸ್ತ್ರಿಷಡಂಕಾಂತ್ಯರಾಶಯಃ ॥ ೮೯ ॥

ಚಂದ್ರಾಂಗಾಂತರಗೈಃ ಖೇಟೈಃ ಸೂತಿಕಾಃ ಸಮುದಾಹೃತಾಃ ।
ಚಕ್ರಾರ್ಧಾದ್ಬಹಿರಂತಶ್ಚ ದೃಶ್ಯಾದೃಶ್ಯೇಽಪರೋಽನ್ಯಥಾ ॥ ೯೦ ॥

ಲಗ್ನಾಂಶಪತುಲ್ಯವರ್ಣಃ ಬಾಲಃ ಖೇಟಾಸನೋಽಪಿ ವಾ ।
ಇಂದೋರ್ನವಾಂಶವರ್ಣೋ ವಾ ಶೀರ್ಷಾದ್ಯಂಗವಿಭಾಗಯುಕ್ ॥ ೯೧ ॥

ಶೀರ್ಷಕಂ ದೃಕ್ಶ್ರವೇ ನಾಸಾ ಕಪೋಲಹನವೋ ಮುಖಂ ।
ಕಂಠಾಂಸಪಾರ್ಶ್ವಹೃದ್ದೋಷಃ ಕ್ರೋಡಂ ನಾಭಿಶ್ಚ ಬಸ್ತಿಕಃ ॥ ೯೨ ॥

೮೯-೯೦. ಸೂತಿಕಾಗೃಹದಲ್ಲಿ ಮೇಷಾದಿಯಾದ ಎರಡೆರಡು ರಾಶಿಗಳನ್ನು ಒಂದೊಂದು ದಿಕ್ಕಿನಂತೆ ಭಾವಿಸಬೇಕು. ದ್ವಿಸ್ವಭಾವರಾಶಿಗಳನ್ನು ಮಾತ್ರ ನಾಲ್ಕುಮೂಲೆ ದಿಕ್ಕುಗಳಂತೆ ಭಾವಿಸಬೇಕು. ಹೀಗೆ ಎಂಟು ದಿಕ್ಕುಗಳಿಗೂ ಹನ್ನೆರಡು ರಾಶಿಗಳನ್ನು ಗುರ್ತಿಸಿಕೊಳ್ಳಬೇಕು. ವಾಸ್ತುವಿನ ರಾಶಿವಿಭಾಗದಂತೆಯೇ ಸೂತಿಕಾಶಯನದಲ್ಲಿಯೂ ಮೂರು, ಆರು, ಒಂಭತ್ತು ಮತ್ತು ಹನ್ನೆರಡನೆಯ ರಾಶಿಗಳಿಂದ ಮಂಚದ ಶಿರಸ್ಸು, ಕಾಲು ಮುಂತಾದುವುಗಳನ್ನು ಊಹಿಸಿಕೊಳ್ಳಬೇಕು. ಇದರಿಂದ ಸೂತಿಕಾಶಯನದ ಮೂಲಭಾಗವನ್ನು ತಿಳಿಯಬಹುದು. ಲಗ್ನ, ಚಂದ್ರರಿಗೆ ಮಧ್ಯೇ ಎಷ್ಟು ಗ್ರಹಗಳಿರುವುವೋ ಅಷ್ಟು ಜನ ಸೂಲಗಿತ್ತಿಯರು ಪ್ರಸವಕಾಲದಲ್ಲಿದ್ದರೆಂದು ಊಹಿಸಿ ತಿಳಿದುಕೊಳ್ಳಬೇಕು. ಆರು ರಾಶಿಗಳಿಗಿಂತ ಮುಂದಿನ ರಾಶಿಗಳಲ್ಲಿ ಗ್ರಹಗಳಿದ್ದರೆ ಅಷ್ಟು ಜನರು ಪರೋಕ್ಷದಲ್ಲಿರುತ್ತಾರೆಂದೂ ತಿಳಿಯಬೇಕು.

೯೧-೯೨. ಮಗುವಿನ ದೇಹವು, ಲಗ್ನನವಾಂಶಾಧಿಪತಿಯಂತೆ ವರ್ಣಾದಿಗಳಿಂದ ಕೂಡಿರುವುದೆಂದು ತಿಳಿಯಬೇಕು. ಲಗ್ನಾಧಿಪತಿಯ ಬಲಾಬಲಗಳಿಂದ ಮಗುವಿನ ದೇಹಶಕ್ತಿಯನ್ನು ಊಹಿಸಬೇಕು. ಅಥವ ಚಂದ್ರನವಾಂಶಾಧಿಪತಿಯಂತೆಯೂ ಮಗುವಿನ ಬಣ್ಣವನ್ನು ಹೇಳಬಹುದು. ಲಗ್ನಾದಿಗಳಿಗೆ ವಿಭಕ್ತವಾಗಿರುವ ಅಂಗಗಳ ಹ್ರಸ್ವ ದೀರ್ಘಾದಿಗಳನ್ನು ಆಯಾರಾಶಿ

**ಗುದಶಿಶ್ನೇ ಚ ವೃಷಣೌ ಜಘನೇ ಜಾನುನೀ ತಥಾ ।**
**ಜಂಘೇ ಪಾದೌ ಚೋಭಯತ್ರ ತ್ರ್ಯಂಶೈಃ ಸಮುದಿತೈರ್ವದೇತ್ ॥ ೯೩ ॥**

**ಪಾಪಯುಕ್ತೇ ವ್ರಣಸ್ತಸ್ಮಿನ್ನಂಗೇ ಲಕ್ಷ್ಮ ಚ ತದ್ಯುತೇ ।**
**ಸ್ವರ್ಕ್ಷಾಂಶೇ ಸ್ಥಿರಯುಕ್ತೇ ತು ನೈಜ ಆಗಂತುಕೋಽನ್ಯಥಾ ॥ ೯೪ ॥**

**ಮಂದೇಽನಿಲಾಶ್ಮಜೋ ಭೌಮೇ ವಿಷಶಸ್ತ್ರಾಗ್ನಿಜೋ ಬುಧೇ ।**
**ಭೂಜೋಽರ್ಕೇ ಕಾಷ್ಠಪಶುಜೋ ಚೇತುಃ ಶೃಂಗ್ಯಪ್ಸುಜೋವ್ರಣಃ ॥ ೯೫ ॥**

**ಯಸ್ಮಿನ್ಸಜ್ಞಾಸ್ತ್ರಯಃ ಖೇಟಾಃ ಅಂಗೇ ಸ್ಯುಸ್ತತ್ರ ನಿಶ್ಚಿತಂ ।**
**ವ್ರಣೋ ಶುಭಕೃತಃ ಪೃಷ್ಟೇ ತನೌ ರಾಶಿಸಮಾಶ್ರಿತೇ ॥ ೯೬ ॥**

---

ಗಳ ಬಲಾಬಲಗಳಿಂದ ಕಂಡುಹಿಡಿಯಬೇಕು. ಉದಯಲಗ್ನದಿಂದ ೧೮೦ ನೂರೆಂಬತ್ತು ಭಾಗಗಳವರೆಗೆ ಆರು ರಾಶಿಗಳನ್ನು ಸವ್ಯಭಾಗವನ್ನಾಗಿಯೂ, ೧೮೦ ನೂರೆಂಬತ್ತು ಭಾಗದಿಂದ ಮುಂದಿನ ಭಾಗವನ್ನು ಪಕ್ಷಿಣಭಾಗವನ್ನಾಗಿಯೂ ತಿಳಿದು, ಆಯಾ ರಾಶಿಗಳ ದ್ರೇಕ್ಕಾಣಗಳಿಗೆ ಹೇಳಿರುವ ಅವಯವಗಳನ್ನು ಸವ್ಯ, ದಕ್ಷಿಣ ಅವಯವಗಳೆಂದು ಗ್ರಹಿಸಬೇಕು. ಅವಯವಗಳನ್ನು ದ್ರೇಕ್ಕಾಣಗಳಿಗೆ ವಿಭಾಗಿಸಿಕೊಳ್ಳಬೇಕು. ಅದರಲ್ಲಿ ಲಗ್ನದಲ್ಲಿ ಪ್ರಥಮದ್ರೇಕ್ಕಾಣ ಉದಯವಾದರೆ ಶಿರಸ್ಸು ಕಣ್ಣು, ಕಿವಿ, ಮೂಗು ಕಪೋಲ, ದವಡೆ ಮುಂತಾದ ಅಂಗವಿಭಾಗವನ್ನೂ ದ್ವಿತೀಯದ್ರೇಕ್ಕಾಣೋದಯವಾದರೆ ಕಂಠ ಭುಜ, ತೋಳು, ಪಕ್ಕೆ, ಹೃದಯ, ಉದರ, ನಾಭಿ ಎಂಬ ಅಂಗವಿಭಾಗವನ್ನೂ, ತೃತೀಯದ್ರೇಕ್ಕಾಣವು ಉದಯವಾದರೆ ವಸ್ತಿ, ಶಿಶ್ನ, ಗುದ, ವೃಷಣ, ಊರು ಮೊಳಕಾಲು, ಜಂಘೇ, ಪಾದ ಮುಂತಾದ ಅವಯವಗಳನ್ನೂ ಎಲ್ಲಾ ದ್ರೇಕ್ಕಾಣಗಳಿಗೂ ಹಂಚಿ ಅದರ ಬಲಾಬಲಗಳಿಂದ ಆಯಾ ಅಂಗಗಳ ಬಲಾಬಲಗಳನ್ನೂ ತಿಳಿಯಬೇಕು.

೯೪-೯೬. ಆ ಅಂಗರಾಶಿಯಲ್ಲಿ ಪಾಪಗ್ರಹಗಳಿದ್ದರೆ ಆಯಾ ಅವಯವಗಳಲ್ಲಿ ವ್ರಣವಾಗುತ್ತದೆಯೆಂದು ತಿಳಿಯಬೇಕು. ಪಾಪಗ್ರಹಗಳ ದೃಷ್ಟಿಯಿದ್ದರೆ ಮಚ್ಚೆಯುಂಟಾಗುತ್ತದೆ. ಸ್ವಕ್ಷೇತ್ರದಲ್ಲಾಗಲೀ ಸ್ವಾಂಶದಲ್ಲಾಗಲೀ ಗ್ರಹಗಳಿದ್ದು

ತಿಲಕೃನ್ಮಶಕೃದಷ್ಟಸೌಮ್ಯೈರ್ಯುಕ್ತಶ್ಚ ಲಕ್ಷ್ಮವಾನ್ ।
ಚತುರಸ್ರಃ ಪಿಂಗದೃಕ್ಚ ಪೈತ್ತಿಕೋಽಲ್ಪಕಚೋ ರವಿಃ ॥ ೯೭ ॥

ವೃತ್ತೋ ವಾತಕಫೀ ಪ್ರಾಜ್ಞೋ ಮಂದವಾಕ್ ಶುಭದೃಕ್ಶಶೀ ।
ಕ್ರೂರದೃಕ್ತರುಣೋ ಭೌಮಃ ಪೈತ್ತಿಕಶ್ಚಪಲಸ್ತಥಾ ॥ ೯೮ ॥

ತ್ರಿಧಾತು ಪ್ರಕೃತಿರ್ಹಾಸ್ಯರುಚಿಜ್ಞಃ ಶ್ಲಿಷ್ಟವಾಕ್ತಥಾ ।
ಪಿಂಗಕೋ ಶ್ಲಕ್ಷ್ಣಕೋ ದೀರ್ಘಃ ಕಫೀ ಧೀಮಾನ್ಗುರುರ್ಮತಃ ॥ ೯೯ ॥

ಇದು ಸ್ಥಿರರಾಶಿಯಾದರೆ, ವ್ರಣಾದಿಗಳು ಆಗಂತುಕವೆಂದು ತಿಳಿಯಬೇಕು. ಆ ರೀತಿಯಲ್ಲಿ ಶನಿಯು ವ್ರಣಕಾರಕನಾಗಿದ್ದರೆ ಕಲ್ಲು, ವಾಯು ಈ ನಿಮಿತ್ತವಾದ ವ್ರಣಾದಿಗಳೂ, ಕುಜನು ವ್ರಣಕಾರಕನಾದರೆ, ವಿಷ, ಶಸ್ತ್ರ, ಅಗ್ನಿ ಇವುಗಳಿಂದಲೂ ಬುಧನಾದರೆ ಮಣ್ಣಿನಿಂದಲೂ, ಸೂರ್ಯನಾದರೆ ಕಟ್ಟಿಗೆ ಕ್ರೂರಪ್ರಾಣಿ ಇವುಗಳಿಂದಲೂ, ಚಂದ್ರನಾದರೆ ಶೃಂಗಿಗಳಿಂದಲೂ (ಕೊಂಬುಳ್ಳ ಪ್ರಾಣಿಗಳಿಂದಲಾದರೂ) ಮತ್ತು ನೀರಿನಿಂದಲೂ ವ್ರಣಾದಿಗಳುಂಟಾಗುವುದೆಂದು ತಿಳಿಯಬೇಕು. ಯಾವ ರಾಶಿಯಲ್ಲಿ ಬುಧ ಸಹಿತನಾದ ಗ್ರಹತ್ರಯಗಳಿರುವುವೋ ಅವು ಶುಭಗ್ರಹಗಳಾಗಿರಲಿ ಅಥವಾ ಪಾಪಗ್ರಹಗಳಾಗಿರಲಿ ಆ ಅಂಗದಲ್ಲಿ ವ್ರಣಾದಿಗಳು ಉಂಟಾಗಿಯೇ ತೀರುವುವು. ವ್ರಣಕಾರಕಗ್ರಹವು ಸ್ವಸ್ಥಾನದಲ್ಲಿದ್ದರೆ ಶುಭನಾಗುವುದಿಲ್ಲ. ಆ ಪಾಪಗ್ರಹವು ಸ್ವಸ್ಥಾನದಲ್ಲಿದ್ದು ಶುಭಗ್ರಹಗಳಿಂದ ವೀಕ್ಷಿತನಾದರೆ ತಿಲಕಾಕಾರವಾದ ಮಚ್ಚೆಯುಂಟಾಗುವುದು. ಅಶುಭಗ್ರಹ ದೃಷ್ಟನಾದರೆ ಸ್ಥಿರವಾದ ಕಪ್ಪುಮಚ್ಚೆಯು ಅದರ ಅಂಗದಲ್ಲಿ ನಿಲ್ಲುವುದು.

೯೭-೧೦೦. ರವಿಯು ಸ್ವಭಾವದಲ್ಲಿ ಚತುರಸ್ರಾಕಾರನು. ಪಿಂಗಲವಾದ ಕಣ್ಣು, ಪಿತ್ತಶರೀರ, ಸ್ವಲ್ಪಕೂದಲು ಇವು ಸೂರ್ಯನ ಚಿಹ್ನೆಗಳು. ಚಂದ್ರನು ವರ್ತುಲಾಕಾರನು, ವಾತ ಕಫಾತ್ಮಕನು, ಪ್ರಾಜ್ಞನು, ಸದಾ ನವಾದ ಮಾತು, ಶುಭದೃಷ್ಟಿ ಇವುಗಳುಳ್ಳವನು. ಕುಜನ ದೃಷ್ಟಿಯು ಕ್ರೂರ ಕೆಂಪುಬಣ್ಣ, ಪಿತ್ತವಿಕಾರದವನು ಮತ್ತು ಚಪಲಸ್ವಭಾವದವನು. ಬುಧನು ವಾತಪಿತ್ತಾದಿ ತ್ರಿಧಾತುಗಳಲ್ಲಿಯೂ ಸಮನಾದವನು. ಹಾಸ್ಯ, ರುಚಿ ಇವುಗಳನ್ನು ತಿಳಿಯುವವನು. ಅರ್ಥದ್ವಯಬೋಧಕವಾದ ಮಾತುಗಳುಳ್ಳವನು.

ಸುವಪುರ್ಲೋಚನಃ ಕೃಷ್ಣವಕ್ರಕೇಶೌ ಭೃಗುಃ ಸುಖೀ ।
ದೀರ್ಘಃ ಕಪಿಲದೃಙ್ಮಂದೋ ನೀಲೀ ಖರಕಲೋಚನಃ ॥ ೧೦೦ ॥

ಸ್ನಾಯ್ವಸ್ಥಿರಕ್ತತ್ವಕ್ ಶುಕ್ರವಸಾಮಜ್ಜಾಸ್ತು ಧಾತವಃ ।
ಮಂದಾರ್ಕಚಂದ್ರಸೌಮ್ಯಾಸ್ಫುಜಿಜೀವಕುಭುವಃ ಕ್ರಮಾತ್ ॥ ೧೦೧ ॥

ಚಂದ್ರಾಂಗಪಾಪೈರ್ಬಾಂತ್ಯಸ್ಥೈಃ ಸೇಂದುಪಾಪಚತುಷ್ಟಯೈಃ ।
ಚಕ್ರಪೂರ್ವಾಪರೇ ಪಾಪಸೌಮ್ಯೈಃ ಕೀಟತನೌ ಮೃತಿಃ ॥ ೧೦೨ ॥

ಉದಯಾಸ್ತಗತೌ ಪಾಪೌ ಚಂದ್ರಃ ಕ್ರೂರಯುತೈಃ ಶುಭೈಃ ।
ನ ಚೇದ್ದೃಷ್ಟಸ್ತದಾ ಮೃತ್ಯುರ್ಜಾತಸ್ಯ ಭವತಿ ಧ್ರುವಂ ॥ ೧೦೩ ॥

ಗುರುವು ಪಿಂಗಲವಾದ ಮೃದುಕವಚವುಳ್ಳವನು. ದೀರ್ಘಾಕಾರನು. ಕಫಸ್ವಭಾವದವನು. ಬುದ್ಧಿವಂತನು. ಶುಕ್ರನು ಸುಂದರನು. ದುಂಡಾದ ಕಣ್ಣುಗಳುಳ್ಳವನು. ಕಪ್ಪಾದ ಮತ್ತು ಗುಂಗುರಾದಕೂದಲುಳ್ಳವನು. ಸುಖಿಯಾಗಿರುವವನು. ಶನಿಯು ದೀರ್ಘಾಕಾರಿಯು ಕಪಿಲದೃಷ್ಟಿಯುಳ್ಳವನು. ಚಂಚಲ ಮತ್ತು ಸೋಮಾರಿಯೆನಿಸಿದವನು. ಹೀಗೆ ಏಳು ಗ್ರಹಗಳಿಗೂ ಬೇರೆಬೇರೆ ಲಕ್ಷಣಗಳಿವೆ. ಇದರಿಂದ ಹುಟ್ಟಿದ ಮಗುವಿನ ಲಕ್ಷಣಗಳನ್ನು ಅರಿಯಬೇಕು.

೧೦೧-೧೦೫. ಶನಿ, ರವಿ, ಚಂದ್ರ, ಬುಧ, ಶುಕ್ರ, ಗುರು, ಕುಜ ಇವರು ಕ್ರಮವಾಗಿ ನರ, ಮೂಳೆ, ರಕ್ತ, ಚರ್ಮ, ಶುಕ್ರ, ವಸ, ಮಜ್ಜ ಮುಂತಾದ ಏಳು ಧಾತುಗಳಿಗೆ ಅಧಿಪತಿಗಳೆನಿಸಿರುವರು. ಪಾಪಗ್ರಹಗಳು ಲಗ್ನ ಮತ್ತು ಸಪ್ತಮಭಾವದಲ್ಲಿದ್ದು ಚಂದ್ರನು ಕ್ರೂರಯುತನಾಗಿ ಶುಭಗ್ರಹಗಳಿಂದ ನೋಡಲ್ಪಡದೇ ಇದ್ದರೆ ಹುಟ್ಟಿದ ಮಗುವಿಗೆ ಮೃತ್ಯುಸಂಭವಿಸುವುದು. ಹಾಗೆಯೇ ಕ್ಷೀಣಚಂದ್ರನು ದ್ವಾದಶರಾಶಿಯಲ್ಲಿಯೂ ಒಂದು ಎಂಟನೆಯ ರಾಶಿಗಳಲ್ಲಿ ಪಾಪಗ್ರಹಗಳೂ, ಕೇಂದ್ರದಲ್ಲಿ ಶುಭಗ್ರಹಗಳ ಸಂಬಂಧವಿಲ್ಲದಿರುವಿಕೆಯೂ ಬಾಲಾರಿಷ್ಟಕ್ಕೆ ಕಾರಣಗಳೆಂದು ತಿಳಿಯಬೇಕು. ಮೊದಲನೆಯ ಆರುರಾಶಿಗಳಲ್ಲಿ ಅಂದರೆ ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ

ಕ್ಷೀಣೇಬ್ಜೇ ವ್ಯಯಗೇ ಪಾಪೈರ್ಲಗ್ನಾಷ್ಟಸ್ಥೈಃ ಶುಭಾ ನ ಚೇತ್ ।
ಕೇಂದ್ರೇಷು ವಾಬ್ಜೋ ಸಂಯುಕ್ತಃ ಸ್ಮರಾಂತ್ಯಮೃತಿಲಗ್ನಗಃ ॥ ೧೦೪ ॥

ಕೇಂದ್ರಾದ್ಬಾಹ್ಯಸ್ತ ಸನ್ವೇಟೈರದೃಷ್ಟೇ ಮೃತ್ಯುದಸ್ತಥಾ ।
ಷಷ್ಠೇಷ್ಟಮೇಽಬ್ಜೇಽಸದ್ದೃಷ್ಟೇ ಸದ್ಯೋ ಮೃತ್ಯುಃ ಶುಭೇಕ್ಷಿತೌ ॥ ೧೦೫ ॥

ಸಮಾಷ್ಟಕೇ ಮಿಶ್ರಖೇಟೈರ್ದೃಷ್ಟೇಽದೃಷ್ಟೇ ಮೃತಿಃ ಶಿಶೋಃ ।
ಕ್ಷೀಣೇಬ್ಜೇಂಗೇ ರಂಧ್ರಕೇಂದ್ರೇ ಪಾಪೇ ಪಾಪಾಂತರಸ್ಥಿತೇ ॥ ೧೦೬ ॥

ಭೂಮ್ಯೂನಂ ನಿಧನೇ ವಾಬ್ಜೇ ಲಗ್ನೇಷ್ವೇವಂ ಶಿಶೋರ್ಮೃತಿಃ ।
ಪಾಪೈಶ್ಚಂದ್ರಾಸ್ತಗೈರ್ಮಾತ್ರಾ ಸಾರ್ಧಂ ಸದ್ದೃಷ್ಟಿಮಂತರಾ ॥ ೧೦೭ ॥

---

ಮತ್ತು ಕನ್ಯಾ ಈ ರಾಶಿಗಳಲ್ಲಿ ಕ್ರೂರಗ್ರಹಗಳೂ, ಬಾಕೀ ಆರುರಾಶಿಗಳಲ್ಲಿ ಅಂದರೆ ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ ಮತ್ತು ಮೀನ ಈ ಆರು ರಾಶಿಗಳಲ್ಲಿ ಪಾಪಗ್ರಹಗಳೂ ಇದ್ದು ವೃಶ್ಚಿಕಲಗ್ನವಾಗಿ ಪಾಪಗ್ರಹ ಮಧ್ಯಸ್ಥಿತಿಯೊದಗಿದರೆ ಬಾಲಾರಿಷ್ಟವು ಸಂಭವಿಸುವುದು. ಚಂದ್ರನು ಪಾಪಗ್ರಹಸಂಬಂಧಿಯಾಗಿ ಏಳು, ಹನ್ನೆರಡು ಎಂಟು, ಒಂದು ಈ ರಾಶಿಗಳಲ್ಲಿದ್ದು ಕೇಂದ್ರಾತಿರಿಕ್ತವಾದ ಸ್ಥಾನಗಳಲ್ಲಿಲ್ಲದ ಶುಭಗ್ರಹಗಳಿಂದ ವೀಕ್ಷಿತನಾಗದಿದ್ದರೆ ಬಾಲಾರಿಷ್ಟಪ್ರಾಪ್ತವಾಗುವುದು. ಮತ್ತು ಚಂದ್ರನು, ಆರು, ಎಂಟು ಈ ಮನೆಗಳಲ್ಲಿದ್ದು ಪಾಪಗ್ರಹಗಳಿಂದ ನೋಡಲ್ಪಟ್ಟರೂ ಮತ್ತು ಯುತನಾದರೂ ಸಹ ಬಾಲಾರಿಷ್ಟದೋಷವುಂಟೆಂದು ತಿಳಿಯಬೇಕು.

೧೦೬-೧೦೭. ಸಪ್ತಾಷ್ಟಮದಲ್ಲಿರುವ ಚಂದ್ರನು ಪಾಪ ಮತ್ತು ಸೌಮ್ಯಗ್ರಹಗಳಿಂದ ಮಿಶ್ರಿತನಾಗಿ ದೃಷ್ಟನಾದರೆ ಮಗುವಿಗೆ ಎಂಟುವರ್ಷ ಆಯುಸ್ಸೆಂದು ಹೇಳಬಹುದು. ಕ್ಷೀಣಚಂದ್ರನು ಕೇಂದ್ರದಲ್ಲಾಗಲೀ, ಅಷ್ಟಮದಲ್ಲಾಗಲೀ, ಪಾಪಯುಕ್ತನಾಗಲೀ ಅಥವಾ ಪಾಪದೃಷ್ಟನೇ ಆಗಲಿ ಆಗಿದ್ದರೆ, ಬಾಲಾರಿಷ್ಟವುಂಟೆಂದು ತಿಳಿಯಬೇಕು. ಲಗ್ನ, ಸಪ್ತಮ, ಅಷ್ಟಮ ಈ ರಾಶಿಗಳಲ್ಲಿ ಚಂದ್ರನು ಪಾಪಿಯಾಗಿದ್ದರೂ, ಶಿಶುವು ಮರಣಹೊಂದುವುದೆಂದು ತಿಳಿಯಬೇಕು.

ಶುಭಾದೃಷ್ಟೇ ಥಾಂತ್ಯಗೋಽಬ್ಜೇ ತ್ರಿಕೋಣೋಪರತೈಃ ಖಲೈಃ ।
ಲಗ್ನಸ್ಥೇ ವಾ ವಿಧೌ ಪಾಪೈರಸ್ತಸ್ಥೈರ್ಮೃತಿಮಾಪ್ನುಯಾತ್ ॥ ೧೦೮ ॥

ಗ್ರಸ್ತೇಽಬ್ಜೇಽಸದ್ಭಿರಷ್ಟಸ್ಥೈರಸೃಗ್ಮಾತೃಜಯೋರ್ಮೃತಿಃ ।
ಲಗ್ನೇ ರವೌ ತು ಶಸ್ತ್ರೇಣ ಸವೀರ್ಯಾಸದ್ಭಿರಷ್ಟಗೈಃ ॥ ೧೦೯ ॥

ಕರ್ಕೇಂದ್ವಿಜ್ಯಯುತೇ ಲಗ್ನೇ ಕೇಂದ್ರೇ ಸೌಮ್ಯೇ ಚ ಭಾರ್ಗವೇ ।
ಶೇಷೈಸ್ತ್ರ್ಯರೀಶಗೈರಾಯುರಮಿತಂ ಭವತಿ ಧ್ರುವಂ ॥ ೧೧೦ ॥

ವರ್ಗೋತ್ತಮೇ ಮೀನಲಗ್ನೇ ವೃಷೇಽಬ್ಜೇ ತತ್ಪಲಿಪ್ತಿಕೇ ।
ಸ್ವತುಂಗಸ್ಥೇಷ್ವಶೇಷೇಷು ಪೂರ್ಣಮಾಯುಃ ಪ್ರಕೀರ್ತಿತಂ ॥ ೧೧೧ ॥

---

ಚಂದ್ರನಿಂದ ಅಥವ ಲಗ್ನದಿಂದ ನಾಲ್ಕು ಮತ್ತು ಏಳನೆಯ ರಾಶಿಗಳಲ್ಲಿ ಪಾಪ ಗ್ರಹಗಳಯೋಗ ಅಥವ ದೃಷ್ಟಿಯಿದ್ದರೆ ಮಗುವು ತನ್ನ ತಾಯಿಯೊಡನೆ ಮರಣಹೊಂದುವುದು. ಚಂದ್ರನು ರಾಶ್ಯಂತದಲ್ಲಿದ್ದು ಶುಭಗ್ರಹಗಳಿಂದ ನೋಡಲ್ಪಡದೇ ಸವನು, ಪಂಚಮಸ್ಥಾನಗಳಲ್ಲಿ ಕ್ರೂರಗ್ರಹಗಳಿಂದ ನೋಡಲ್ಪಟ್ಟರೆ ಮಗುವು ಮರಣಹೊಂದುವುದು. ಸಪ್ತಮದಲ್ಲಿರುವ ಪಾಪಗ್ರಹಗಳೊಡನೆ ಚಂದ್ರಸಹಿತನಾಗಿರುವ ಲಗ್ನದಲ್ಲಿ ಹುಟ್ಟಿದ ಮಗುವಿಗೆ ಸದ್ಯೋಮರಣವಾಗುವುದು (ಅಂದರೆ ಹುಟ್ಟಿದ ಕೂಡಲೆ ಮರಣವಾಗುವುದೆಂದು ತಿಳಿಯಬೇಕು).

೧೦೯. ಚಂದ್ರನು ಶುಭಸಹಿತನಾಗಿ ರಾಹುಗ್ರಸ್ತನಾದರೂ, ಕುಜನು ಅಷ್ಟಮದಲ್ಲಿದ್ದರೂ, ತಾಯಿ ಮತ್ತು ಮಗುವಿಗೆ ಅನಿಷ್ಟ ಸಂಭವಿಸುವುದೆಂದು ತಿಳಿಯಬೇಕು. ಲಗ್ನದಲ್ಲಿ ಸೂರ್ಯನಿದ್ದರೆ ಶಸ್ತ್ರಸಂಬಂಧವಾಗಿ ತೊಂದರೆಯಾಗುವುದು. ಸೂರ್ಯಚಂದ್ರರು ಉದಯಲಗ್ನದಲ್ಲಿದ್ದು ಐದು, ಒಂಭತ್ತು ಹನ್ನೆರಡು ಈ ರಾಶಿಗಳಲ್ಲಿರುವ ಪಾಪಗ್ರಹಗಳಿಂದ ವೀಕ್ಷಿತನಾದರೆ ಜಾತಕನಿಗೆ ಮರಣವನ್ನು ಹೇಳಬೇಕು.

೧೧೦-೧೧೧. ಕಟಕದಲ್ಲಿ ಚಂದ್ರನೂ, ಗುರುವೂ ಇದ್ದು, ಲಗ್ನಕೇಂದ್ರಗಳಲ್ಲಿ ಬುಧಶುಕ್ರರಿದ್ದು, ಉಳಿದ ಗ್ರಹಗಳೆಲ್ಲಾ ಉಚ್ಚರಾಶಿಗತರಾದರೆ ಮಗು

ಶುಭೈರ್ದೃಷ್ಟಃ ಸವೀರ್ಯೋಽಂಗೇ ಕೇಂದ್ರಸ್ಥೇ ಚಾಯುರರ್ಥದಃ ।
ಸ್ವೋಚ್ಚೇಽಬ್ಜೇ ಸ್ವರ್ಕ್ಷಗೈಃ ಸೌಮ್ಯೈಃ ಸವೀರ್ಯೇಽಂಗಾಧಿಪೇ ತನೌ ॥ ೧೧೨ ॥

ಷಷ್ಟ್ಯಬ್ದಕೇಂದ್ರಸೌಮ್ಯೇಽಭೇಷ್ಟಶುದ್ಧೇ ಸಪ್ತತಿರ್ಗುರೌ ।
ಮೂಲತ್ರಿಕೋಣಗೈಸ್ಸೌಮ್ಯೈರ್ಗುರೌ ಸ್ವೋಚ್ಚಸಮನ್ವಿತೇ ॥ ೧೧೩ ॥

ಲಗ್ನಾಧಿಪೇ ಬಲಯುತೇಽಶೀತ್ಯಬ್ದಂ ತ್ವಾಯುರೀರಿತಂ ।
ಸವೀರ್ಯೇ ಸತ್ಸು ಕೇಂದ್ರೇಷು ತ್ರಿಂಶಚ್ಛುದ್ಧಿಯುತೇಽಷ್ಟಮೇ ॥ ೧೧೪ ॥

ಲಯೇಶೇ ಧರ್ಮಗೇ ಜೀವೇಽಷ್ಟಸ್ಥೇ ಕ್ರೂರೇಕ್ಷಿತೇ ಜಿತಾಃ ।
ಲಗ್ನಾಷ್ಟಮೇಶಾವಷ್ಟಸ್ಥೌ ಥಾಬ್ದಮಾಯುಃ ಕರೌ ಮತೌ ॥ ೧೧೫ ॥

ವಿಗೆ ಪೂರ್ಣಾಯುರ್ಯೋಗವಿರುವುದೆಂದು ತಿಳಿಯಬೇಕು. ಅಥವಾ ಮೀನ ಲಗ್ನವು ವರ್ಗೋತ್ತಮಾಂಶದಲ್ಲಿದ್ದು ವೃಷಭರಾಶಿಯಲ್ಲಿ ಚಂದ್ರನು ಮೂರನೆಯ ಅಂಶದಲ್ಲಿದ್ದು ಉಳಿದ ಗ್ರಹಗಳೆಲ್ಲಾ ಉಚ್ಚರಾಶಿಯಲ್ಲಿದ್ದರೂ ಮಗುವಿಗೆ ಪೂರ್ಣಾಯುರ್ದಾಯವಿರುವುದೆಂದು ಹೇಳಬೇಕು. ಚಂದ್ರನು ಶುಭದೃಷ್ಟನೂ, ಬಲಿಷ್ಠನೂ ಆಗಿ, ಕೇಂದ್ರದಲ್ಲಿದ್ದರೆ ಆ ಜಾತಕನಿಗೆ ಚಂದ್ರನು ಆಯುಸ್ಸು, ಧನ ಇವುಗಳನ್ನು ಕೊಡುತ್ತಾನೆ. ಚಂದ್ರನು ಉಚ್ಚದಲ್ಲಿಯೂ ಸೌಮ್ಯಗ್ರಹಗಳು ಸ್ವಕ್ಷೇತ್ರಗಳಲ್ಲಿಯೂ, ಲಗ್ನದಲ್ಲಿ ಉಚ್ಚರಾಶಿಗತವಾದ ಗ್ರಹವೂ ಇದ್ದರೆ ಆ ಮಗುವಿಗೆ ೬೦ ಅರವತ್ತು ವರ್ಷ ಆಯುಸ್ಸೆಂದು ಹೇಳಬೇಕು. ಕೇಂದ್ರಗಳಲ್ಲಿ ಸೌಮ್ಯಗ್ರಹಗಳಿದ್ದು ಅಷ್ಟಮದಲ್ಲಿ ಗುರುವಿದ್ದರೆ ಜಾತಕನಿಗೆ ೭೦ ಎಪ್ಪತ್ತುವರ್ಷ ಆಯುಷ್ಯವೆಂದು ತಿಳಿಯಬೇಕು. ಸೌಮ್ಯಗ್ರಹಗಳೆಲ್ಲಾ ಮೂಲತ್ರಿಕೋಣದಲ್ಲಿದ್ದು ಗುರುವೂ ಉಚ್ಚನಾಗಿದ್ದು ಲಗ್ನಾಧಿಪತಿಯು ಬಲಿಷ್ಠನಾಗಿದ್ದರೆ ಆ ಶಿಶುವಿಗೆ ೮೦ ಎಂಭತ್ತುವರ್ಷ ಆಯುಷ್ಯವೆಂದು ನಿರ್ಧಾರಮಾಡಬೇಕು. ವ್ಯಯಾಧಿಪನು ನವಮದಲ್ಲಿಯೂ, ಗುರುವು ಅಷ್ಟಮದಲ್ಲಿಯೂ ಇದ್ದು ಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿಗಳು ಕ್ರೂರಯುತರಾಗಿ ಪರಾಜಿತರಾಗಿದ್ದರೆ ಜಾತಕನಿಗೆ ೮೦ ಎಂಭತ್ತುವರ್ಷ ಆಯುಸ್ಸೆಂದು ತಿಳಿಯಬೇಕು. ಲಗ್ನದಲ್ಲಿ ಅಶುಭಗ್ರಹಗಳೂ ಮತ್ತು ಗುರುವೂ ಇದ್ದು ಅವರು ಚಂದ್ರನಿಂದ ದೃಷ್ಟರಾಗಿ

**ಲಗ್ನೇಶುಭೇಜ್ಞೌ ಗ್ಲೌದೃಷ್ಟ್ವಾ ಮೃತ್ಯಾ ಕಶ್ಚನ ಚಾಕೃತಿಃ ।**
**ಧರ್ಮಾಂಗಸ್ಥೇ ಶನೌ ಶುಕ್ರೇ ಕೇಂದ್ರೇಽಬ್ಜೇ ವ್ಯಯಧರ್ಮಗೇ ॥ ೧೧೬ ॥**

**ಶತಾಬ್ದಂ ಗೀಷ್ಪತೌ ಕರ್ಕೇ ಕಂಟಕಸ್ಥ ಸಿತೇಜ್ಯಯೋಃ ।**
**ಲಯೇಶೇಂಗೇ ಶುಭೈರ್ಹೀನೇಽಷ್ಟಮೇ ಖಾಬ್ಧಿಮಿತಂ ವಯಃ ॥ ೧೧೭ ॥**

**ಲಗ್ನೇಶೇಷ್ಟಮಗೇಷ್ಟೇಶೇ ತನುಸ್ಥೇ ಪಂಚವತ್ಸರಂ ।**
**ಕವೀಜ್ಯಯೋಗೇ ಸೌಮ್ಯಾಬ್ಜಾ ಲಗ್ನೇ ವ್ಯತ್ಯಾ ಚ ಸ್ವೇಷವ ॥ ೧೧೮ ॥**

**ಏತದ್ಯೋಗಜಮಾಯುಃಸ್ಯಾದಥ ಸ್ಪಷ್ಟಮುದೀರ್ಯತೇ ।**
**ಸೂರ್ಯಾಧಿಕಬಲೇ ಪೈಂಡಂ ನಿಸರ್ಗಾಚ್ಚ ವಿಧೋರ್ಬಲೇ ॥ ೧೧೯ ॥**

---

ಅಷ್ಟಮದಲ್ಲಿ ಯಾವ ಗ್ರಹಗಳೂ ಇಲ್ಲದೇ ನವಮ ಅಥವ ಸಪ್ತಮದಲ್ಲಿ ಶನಿಯಿದ್ದು ಚಂದ್ರನು ಕೇಂದ್ರದಲ್ಲೂ ಇದ್ದರೆ, ಶಿಶುವಿಗೆ ನೂರುವರ್ಷ ಆಯುಷ್ಯವಿರುವುದು. ಗುರುವು ಕಟಕರಾಶಿಯಲ್ಲಿದ್ದು ಲಗ್ನಕೇಂದ್ರಗಳಲ್ಲಿ ಗುರು ಶುಕ್ರರಿರುತ್ತಾ ವ್ಯಯದಲ್ಲಿ ಮತ್ತು ಅಷ್ಟಮದಲ್ಲಿ ಶುಭಗ್ರಹಗಳಿಲ್ಲದೇಹೋದರೆ ಜಾತಕನಿಗೆ ೧೪೦. ನೂರನಲವತ್ತು ವರ್ಷ ಆಯುಷ್ಯವಿರುವುದೆಂದು ತಿಳಿಯಬೇಕು.

೧೧೮-೧೨೧. ಲಗ್ನಾಧಿಪತಿಯು ಅಷ್ಟಮದಲ್ಲಿಯೂ, ಅಷ್ಟಮಾಧಿಪತಿಯು ಲಗ್ನದಲ್ಲಿಯೂ ಇದ್ದರೆ ಮಗುವಿಗೆ ಐದುವರ್ಷ ಮಾತ್ರ ಆಯುಸ್ಸೆಂದು ಹೇಳಬೇಕು. ಲಗ್ನದಲ್ಲಿ ಗುರು ಶುಕ್ರರೂ, ಅಷ್ಟಮದಲ್ಲಿ ಬುಧ ಚಂದ್ರರೂ ಇದ್ದರೂ ಮಗುವಿಗೆ ಐದೇ ವರ್ಷ ಆಯುಸ್ಸೆಂದು ತಿಳಿಯಬೇಕು. ಇಲ್ಲಿನವರೆಗೆ ಹೇಳಿದ ಆಯುಷ್ಯವೆಲ್ಲ ಯೋಗದಿಂದ ಹುಟ್ಟುವ ಆಯುರ್ದಾಯವಾದನವೆಂದು ತಿಳಿಯಬೇಕು. ಇನ್ನು ಗಣಿತದಿಂದ ಬರುವ ಆಯುರ್ದಾಯವನ್ನು ಹೇಳುವೆನು. ಜಾತಕದಲ್ಲಿ ಸೂರ್ಯನು ಬಲಿಷ್ಠನಾದರೆ ಪೈಂಡಾಯುರ್ದಾಯವನ್ನೂ, ಚಂದ್ರನು ಬಲಿಷ್ಠನಾದರೆ ನೈಸರ್ಗಿಕಾಯುರ್ದಾಯವನ್ನೂ, ಲಗ್ನವು ಬಲಾಧಿಕವಾದರೆ ಅಂಶಾಯುರ್ದಾಯವನ್ನೂ ಸಾಧಿಸಬೇಕು. ಪೈಂಡಾಯುರ್ದಾಯದಲ್ಲಿ ಉಚ್ಚಗತರಾದ ಸೂರ್ಯಾದಿ ಸಪ್ತಗ್ರಹಗಳಿಗೂ. ಕ್ರಮವಾಗಿ ೧೯

**ಅಂಶಾಯುಃ ಸಬಲೇ ಲಗ್ನೇ ತತ್ಸಾಧನಮಥೋಃ ಶೃಣು ।**
**ಗೋಬ್ಧಾಸ್ತತ್ವತಿಥೀ ಸೂರ್ಯಾಸ್ತಿಥಿಃ ಸ್ವರ್ಗಾ ನಖಾಃ ಕ್ರಮಾತ್ ॥ ೧೨೦ ॥**

**ನಖಾ ವಿಧುರ್ದ್ವಾವಂಕಾಶ್ಚ ಧೃತಿಃ ಸ್ವಾಕ್ಷಿಖಮಾರ್ಗಣಾಃ । ॥ ೧೨೧ ॥**

**ಪಿಂಡೇ ನಿಸರ್ಗೇ ಸ್ವೋಚ್ಚೇ ನೋ ಗ್ರಹಃ ಷಡ್ಭಾಲ್ಪಕೋ ಯದಾ ।**
**ಚಕ್ರಶುದ್ಧಸ್ತದಾ ಗ್ರಾಹ್ಯಾಸ್ಯಾಂಶಾ ಆಯುಷಿ ಸಂಮತಾಃ ॥ ೧೨೨ ॥**

**ಅಂಶೋನಾಃ ಶತ್ರುಭೇ ಕಾರ್ಯಾ ಗ್ರಹಂ ವಕ್ರಗತಿಂ ವಿನಾ ।**
**ಮಂದಶುಕ್ರೌ ವಿನಾರ್ಧೋನಾ ಗ್ರಹಸ್ಯಾಸ್ತಂಗತಸ್ಯ ಚ ॥ ೧೨೩ ॥**

---

ಹತ್ತೊಂಭತ್ತು, ೨೫ ಇಪ್ಪತ್ತೈದು, ೧೫ ಹದಿನೈದು, ೧೨ ಹನ್ನೆರಡು, ೧೫ ಹದಿನೈದು, ೨೧ ಇಪ್ಪತ್ತೊಂದು, ೨೦ ಇಪ್ಪತ್ತು ಇಷ್ಟು ವರ್ಷಗಳು ಉಕ್ತವಾಗಿರುವುವು. ನೈಸರ್ಗಿಕಾಯುರ್ದಾಯದಲ್ಲಿ ಚಂದ್ರ, ಕುಜ, ಬುಧ, ಶುಕ್ರ, ಗುರು, ರವಿ, ಶನಿ ಇವರಿಗೆ ಕ್ರಮವಾಗಿ ೧ ಒಂದು, ೨ ಎರಡು, ೯ ಒಂಭತ್ತು ೨೦ ಇಪ್ಪತ್ತು, ೧೮ ಹದಿನೆಂಟು, ೨೦ ಇಪ್ಪತ್ತು ೫೦ ಐವತ್ತು ಈರೀತಿಯಾಗಿ ವರ್ಷಗಳು ಉಕ್ತವಾಗಿವೆ.

೧೨೨-೧೨೪. ಹೀಗೆ ಹೇಳಿದ ಪರಮಾಯುರ್ದಾಯಗಳು, ಗ್ರಹವು ಉಚ್ಚದಲ್ಲಿದ್ದಾಗ ಮಾತ್ರ ಸಂಘಟಿಸುವುದು- ಗ್ರಹಸ್ಫುಟವು ಆರುರಾಶಿಗಿಂತ ಕಮ್ಮಿಯಾಗಿದ್ದರೆ ದ್ವಾದಶರಾಶಿಸಂಖ್ಯೆಯಲ್ಲಿ ಕಳೆದುಕೊಳ್ಳಬೇಕು. ನೀಚ ರಾಶಿಯಲ್ಲಿರುವ ಗ್ರಹವು ಅರ್ಧ ಆಯುಸ್ಸನ್ನು ಮಾತ್ರ ಕೊಡುತ್ತದೆ ಮಧ್ಯೆ ಇರುವ ಭಾಗಕ್ಕೆ ಅನುಪಾತದಿಂದ ಆಯುರ್ದಾಯವನ್ನು ತಿಳಿಯಬೇಕು. ಇದಕ್ಕೆ ನೀಚಾರ್ಧಹರಣವೆಂದು ಹೆಸರು. ಶತ್ರುಕ್ಷೇತ್ರದಲ್ಲಿರುವ ಗ್ರಹಕ್ಕೆ ಮೂರನೆಯ ಒಂದುಭಾಗವು ಕಮ್ಮಿಯಾಗುವುದು. ಆದರೆ ವಕ್ರವಾಗಿರುವ ಗ್ರಹಕ್ಕೆ ಮಾತ್ರ ಈ ಹರಣವಿಲ್ಲ. ಸೂರ್ಯನೊಡಗೂಡಿ ಅಸ್ತವಾಗಿರುವ ಗ್ರಹವು ಅರ್ಧಭಾಗವನ್ನು ಮಾತ್ರ ಕೊಡುವುದು. ಶುಕ್ರ ಮತ್ತು ಶನಿಗಳಿಗೆ ಈ ಹರಣವಿಲ್ಲ. ಒಂದೇ ಗ್ರಹಕ್ಕೆ ಎರಡು, ಮೂರುರೀತಿ ಹರಣ ಬಂದರೆ ಅಧಿಕ ವಾದ ಒಂದು ಹರಣವನ್ನು ಮಾತ್ರ ಮಾಡಬೇಕು. ಜನ್ಮ ಲಗ್ನದಲ್ಲಿ ಕ್ರೂರ ಗ್ರಹವಿದ್ದರೆ ಲಗ್ನಸ್ಫುಟದಿಂದ ಸಕಲಾಯುರ್ದಾಯವನ್ನೂ ಗುಣಿಸಿ ನೂರಿಂಟ

ಹಾನಿದ್ವಯೇಧಿಕಾಃ ಕಾರ್ಯಾ ಉದಾ ಕ್ರೂರಸ್ತನೌ ತದಾ ।
ವಿಹಾಯಾರೀನಂಶಾದ್ಯೈರ್ಹನ್ಯಾದಾಯುರ್ಲವಾನ್ ಭಜೇತ್ ॥ ೧೨೪ ॥

ಭಗಣಾಂಶೈರ್ಲಬ್ಧಹೀನಾಸ್ತೇಷಾಂ ಕಾರ್ಯಾ ವಿಚಕ್ಷಣೈಃ ।
ಪಾಪಸ್ಯಾಂಶಾಃ ಸಮಗ್ರೋನಾ ಸೌಮ್ಯಸ್ಯಾರ್ಧಪಿವರ್ಜಿತಾಃ ॥ ೧೨೫ ॥

ಸ್ಪಷ್ಟಾಸ್ತೇಂಶಾಃ ಖಷಟ್ಘ್ನಾ ಸಾ ಗುಣಯಿತ್ವಾ ಸ್ವಕೈರ್ಗಣೈಃ ।
ವರ್ಷಾಣಿ ಶೇಷಮರ್ಕಘ್ನಂ ಹಾರಾತ್ಸಂಮಾಸಕಾಃ ಸ್ಮೃತಾಃ ॥ ೧೨೬ ॥

ತಚ್ಛೇಷಶ್ಚ ತ್ರಿಗುಣಿತಃ ಶೇನ್ನೈವಾಪ್ತಂ ದಿನಾನಿ ಚ ।
ಶೇಷೇ ಷಷ್ಟ್ಯಾ ಹತೇ ಭಕ್ತೇ ಹಾರೇಣ ಘಟಿಕಾದಿಕಂ ॥ ೧೨೭ ॥

ಹಿತ್ವಾ ಭಾಜ್ಯಂಗಭಾಗಾದೀನ್ಕಲೀಕೃತ್ಯ ಖಖಾಕ್ಷಿಭಿಃ ।
ಭಜೇದ್ವರ್ಷಾಣಿ ಶೇಷೇತು ಗುಣಿತೇ ದ್ವಾದಶಾದಿಭಿಃ ॥ ೧೨೮ ॥

---

ರಿಂದ ಭಾಗಿಸಿ, ಬಂದ ಲಬ್ಧವನ್ನು ಸಕಲಾಯುರ್ದಾಯದಲ್ಲಿ ಕಳೆಯಬೇಕು. ಶುಭಗ್ರಹದೃಷ್ಟಿಯಿದ್ದರೆ, ಆ ಲಬ್ಧದಲ್ಲಿ ಅರ್ಧಭಾಗವನ್ನು ಮಾತ್ರ ಕಳೆಯಬೇಕು. ಇದಕ್ಕೆ ಕ್ರೂರೋದಯಹರಣವೆಂದು ಹೆಸರು.

೧೨೫. ಲಗ್ನಾತ್ ಪಶ್ಚಾರ್ಧದಲ್ಲಿರುವ (ಉತ್ತರಾರ್ಧದಲ್ಲಿರುವ) ಪಾಪಗ್ರಹಗಳಿಗೆ ಕ್ರಮವಾಗಿ (೧, ೨, ೩, ೪, ೫, ೬) ಒಂದು, ಎರಡು, ಮೂರು ನಾಲ್ಕು, ಐದು ಮತ್ತು ಆರು ಈ ಭಾಗಗಳನ್ನು ಅವರ ಆಯುರ್ದಾಯದಲ್ಲಿ ಕಳೆಯಬೇಕು. ಶುಭಗ್ರಹಗಳಿಗೆ ಮಾತ್ರ ಅರ್ಧಭಾಗವನ್ನು ಕಳೆಯಬೇಕು. ಇದಕ್ಕೆ ಚಕ್ರಾರ್ಧಹರಣವೆಂದು ಹೆಸರು.

೧೨೬–೧೨೮. ಈಗ ಅಂಶಾಯುರ್ದಾಯಕ್ರಮವು ನಿರೂಪಿತವಾಗುವುದು. ಬೇಕಾದ ಗ್ರಹಸ್ಫುಟವನ್ನು ೬೦ ಅರವತ್ತರಿಂದ ಗುಣಿಸಿ, ಲಿಪ್ತಿಗಳನ್ನಾಗಿ ಮಾಡಿಕೊಂಡು ಬಂದದ್ದನ್ನು ೨೦೦ ಇನ್ನೂರರಿಂದ ಭಾಗಿಸಿ, ಬಂದ ಲಬ್ಧವನ್ನು ೧೨ ಹನ್ನೆರಡರಿಂದ ಭಾಗಿಸಿದರೆ ಬರುವುದೇ ವರ್ಷವಾಗುವುದು. ಉಳಿದ ಶೇಷವನ್ನು ೧೨ ಹನ್ನೆರಡರಿಂದ ಗುಣಿಸಿ ತಿಂಗಳುಗಳನ್ನಾಗಿಯೂ, ಶೇಷವನ್ನು ೩೦ ಮೂವತ್ತರಿಂದ ಗುಣಿಸಿ, ದಿನಗಳನ್ನಾಗಿಯೂ ಮಾಡಿಕೊಳ್ಳಬೇಕು. ಉಳಿದುದನ್ನು ೬೦ ಅರವತ್ತರಿಂದ ಗುಣಿಸಿ ೨೦೦ ಇನ್ನೂರರಿಂದ ಭಾಗಿಸಿದರೆ ಬರುವ ಲಬ್ಧವು ಘಟಿಕಾರೂಪವಾಗುವುದು.

ದ್ವಿಸಪ್ತಾಂಶೇ ಚ ಮಾಸಾದಿಲಗ್ನಾಯುರ್ಜಾಯತೇ ಸ್ಫುಟಂ ।
ಅಂಶಾಯುಷಿ ಸಲಗ್ನಾನಾಂ ಖೇಟಾನಾಮಂಶಕಾ ಹೃತಾಃ ॥ ೧೨೯ ॥

ಖಯುಗ್ಮೈರಾಯುರಂಶಾಃ ಸ್ಯುಸ್ತತ್ಸಂಸ್ಕಾರಂ ವದಾಮಿ ತೇ ।
ಗ್ರಹೋನಲಗ್ನಂ ಷಡ್ರಾಶ್ಯಂ ಚೇತ್ಸಂಸ್ಕಾರೋಽನ್ಯಥಾ ನ ಹಿ ॥ ೧೩೦ ॥

ತದಂಶೈಃ ಸ್ವಾಗ್ನಯೋ ಭಕ್ತಾ ಲಬ್ಧೋನೋ ಭೂರ್ಗುಣೋ ಭವೇತ್ ।
ಯದ್ಯೈಕಾಲ್ಪಂ ತದಾಸ್ವಾಂಶಾ ಸ್ವಾಗ್ನ್ಯಾಪ್ತೋನಾ ಚ ಭೂರ್ಗುಣಃ ॥ ೧೩೧ ॥

ಸೌಮ್ಯಸ್ವಾರ್ಧೇನ ಪಾಪಸ್ಯ ಸಮಗ್ರೇಣೇತಿ ನಿಶ್ಚಯಃ ।
ಗುಣಕಘ್ನಾಶ್ಚಾಯುರಂಶಾಃ ಸಂಸ್ಕಾರೋಽಯಮುದಾಹೃತಃ ॥ ೧೩೨ ॥

ಆಯುರಂಶಕಲಾಭಕ್ತಾದ್ವಿಂಶತ್ಯಾಬ್ದಾ ಇನಾಹತಂ ।
ಶೇಷಂ ದ್ವಿಶತಭಕ್ತಂ ಸ್ಯುರ್ಮಾಸಾಃ ಶೇಷಾ ದಿನಾದಿಕಂ ॥ ೧೩೩ ॥

---

೧೨೯-೧೩೦. ಏಳನೆಯ ಎರಡು ಭಾಗವು (೨/೭) ಲಗ್ನದಿಂದ ಬರುವ ಆಯುರ್ದಾಯವಾಗುವುದು. ಇದನ್ನೂ ಮಾಸಾದಿಯಾಗಿ ಆನಯನಮಾಡಬಹುದು. ಗ್ರಹಗಳ ಅಂಶದಿಂದ ಬರುವ ಆಯುರ್ದಾಯವಾದ್ದರಿಂದ ಇದಕ್ಕೆ ಅಂಶಾಯುರ್ದಾಯವೆಂಬ ಹೆಸರು ಬಂದಿರುವುದು. ಈ ಅಂಶಾಯುರ್ದಾಯಗಳಲ್ಲಿ ಚಕ್ರಪಾತಾದಿ ಹರಣಗಳಿಲ್ಲ. ಇಲ್ಲಿ ಲಗ್ನವು, ಮೇಷ ಮೊದಲುಗೊಂಡು ಎಷ್ಟನೆಯ ರಾಶಿಯ ನವಾಂಶವು ಲಗ್ನದಲ್ಲಿ ಕಳೆದಿದೆಯೋ ಅಷ್ಟು ಸಂಖ್ಯೆಗಳ ಆಯುರ್ದಾಯವನ್ನೂ ಕೊಡುತ್ತದೆ. ಲಗ್ನವು ಬಲಿಷ್ಠವಾಗಿದ್ದರೆ ಅನುಪಾತದಿಂದ ಲಗ್ನರಾಶಿಸಂಖ್ಯೆಗೆ ಸರಿಯಾಗುವಷ್ಟು ವರ್ಷಗಳ ಆಯುರ್ದಾಯವನ್ನು ಕೊಡುತ್ತದೆ. ಇದರಲ್ಲಿ ಮಾತ್ರ ಲಗ್ನದಲ್ಲಿ ಕ್ರೂರಗ್ರಹವಿದ್ದರೂ ಕ್ರೂರೋದಯಹರಣವಿಲ್ಲ. ಕೆಲವರಮತದಲ್ಲಿ ಸೌಮ್ಯಗ್ರಹವಿದ್ದರೆ ಅರ್ಧಹರಣವೆಂದೂ ಪಾಪಗ್ರಹವಿದ್ದರೆ ಪೂರ್ಣಹರಣವೆಂದೂ ಹೇಳುವಂತೆ ತೋರಿಬರುತ್ತಿದೆ. ಈ ಹರಣಾದಿಗಳನ್ನೂ ತ್ರೈರಾಶಿಕರೀತಿಯಾಗಿ ಸಂಸ್ಕಾರಮಾಡಬೇಕಾಗುತ್ತದೆ.

೧೩೧-೧೩೩. ಅಂಶಾಯುರ್ದಾಯಾನಯನದಲ್ಲಿ ಗಣಿತಕ್ರಮವು ಹೇಗೆಂದರೆ—ಗ್ರಹಸ್ಫುಟಕಲೆಗಳನ್ನು ಇನ್ನೂರರಿಂದ ಭಾಗಿಸಿದರೆ ಲಬ್ಧವು ವರ್ಷ

ಲಗ್ನಾಯುರಂಶಾಸ್ತ್ರಿಗುಣಾ ದಿಗ್ಭಕ್ತಾ ಸ್ಯುಃ ಸಮಾಸ್ತತಃ ।
ಶೇಷೇsರ್ಕಾದಿಗುಣೇ ಭಕ್ತೇ ದಿಗ್ಭಿರ್ಮಾಸಾದಿಕಂ ಭವೇತ್ ॥ ೧೩೪ ॥

ಸಬಲೇಂಗೇ ಭತುಲ್ಯಾಬ್ದೈರ್ಯುತಮಾಯುರ್ಭವೇತ್ಸ್ಫುಟಂ ।
ಅಂಶಾದ್ವಿಘ್ನಮುಕ್ತಾಂಶಂ ಮಾಸಾಃ ಖತ್ರ್ಯಾದಿಸಂಗುಣಾತ್ ॥ ೧೩೫ ॥

ಶೇಷಾ ದಿನಾದಿಕಂ ಯೋಜ್ಯಂ ನೈತತ್ಪಿಂಡನಿಸರ್ಗಯೋಃ
ಲಗ್ನಾರ್ಕಚಂದ್ರಮಧ್ಯೇ ತು ಯೋ ಬಲೀ ತದ್ದಶಾ ಪುರಾ ॥ ೧೩೬ ॥

---

ವಾಗುವುದು. ಉಳಿದ ಶೇಷವನ್ನು ಹನ್ನೆರಡರಿಂದ ಗುಣಿಸಿ, ಇನ್ನೂರರಿಂದ ಭಾಗಿಸಿದರೆ ಬರುವ ಲಬ್ಧವು ತಿಂಗಳಾಗುವುದು. ಉಳಿದ ಶೇಷವನ್ನು ಮೂವತ್ತರಿಂದ ಗುಣಿಸಿ, ಇನ್ನೂರರಿಂದ ಭಾಗಿಸಿದರೆ ಬರುವುದು ದಿನವಾಗುವುದು. ಲಗ್ನವು ಬಲಿಷ್ಠವಾಗಿದ್ದರೆ ಅದರ ಅಂಶದಷ್ಟು (ಮೇಷಾದಿಯಾಗಿ) ಆಯುಸ್ಸು ಲಗ್ನಕ್ಕೆ ಬರುವುದು. ಯಥಾಪ್ರಕಾರ ಹನ್ನೆರಡು, ಮೂವತ್ತು ಇವುಗಳಿಂದ ಗುಣಿಸಿಕೊಂಡು ಮಾಸ ಮತ್ತು ದಿನ ಇವುಗಳನ್ನು ಆನಯನಮಾಡಿಕೊಳ್ಳಬೇಕು. ಇದು ಪೈಂಡಾಯುರ್ದಾಯ ಮತ್ತು ನೈಸರ್ಗಿಕಾಯುರ್ದಾಯಗಳಲ್ಲಿಲ್ಲವೆಂದು ತಿಳಿಯಬೇಕು. ಲಗ್ನ ಮತ್ತು ಸೂರ್ಯ, ಚಂದ್ರ ಇವರಲ್ಲಿ ಬಲಿಷ್ಠರಾದವರ ದೆಸೆಯೇ ಮೊದಲನೆಯ ದೆಸೆ (ದಶೆ) ಯೆಂದು ಕಲ್ಪಿಸಿಕೊಂಡು ಆಯುರ್ದಾಯಾನಯನಮಾಡುವುದು ಮತ್ತೊಂದು ವಿಧ. ಆದರಲ್ಲಿ ಪ್ರಥಮದಶೆ ಆರೀತಿಯಾದಮೇಲೆ ಪ್ರಥಮದಶಾಧಿಪತಿಗ್ರಹಕ್ಕೆ ಕೇಂದ್ರದಲ್ಲಿರುವ ಗ್ರಹವನ್ನು ದ್ವಿತೀಯದಶಾಧಿಪತಿಯನ್ನಾಗಿ ಭಾವಿಸಿಕೊಳ್ಳಬೇಕು. ಕೇಂದ್ರಗಳಲ್ಲಿ ಅನೇಕ ಗ್ರಹಗಳಿದ್ದರೆ ಅವರಲ್ಲಿ ಬಲಾಧಿಕಗ್ರಹದ ದೆಸೆಯು ಪೂರ್ವದಲ್ಲಿಯೂ, ಬಲಹೀನವಾದ ಗ್ರಹದ ದಶೆಯು ಅನಂತರದಲ್ಲಿಯೂ, ಆಗುವುದೆಂದು ಕಲ್ಪಿಸಿಕೊಳ್ಳಬೇಕು. ಎರಡು ಗ್ರಹಗಳ ಬಲವೂ ಒಂದೇ ಸಮನಾಗಿದ್ದರೆ ಅಧಿಕವರ್ಷಗಳನ್ನು ಕೊಡುವ ಗ್ರಹದ ದಶೆಯು ಮೊದಲೆಂತಲೂ ನ್ಯೂನವರ್ಷಪ್ರದಗ್ರಹಗಳ ದಶೆಯು ಮುಂದೆ ಎಂದೂ ಭಾವಿಸಿಕೊಳ್ಳಬೇಕು. ಬಲವೂ, ಆಯುರ್ದಾಯವೂ, ಸಾಮ್ಯವಾಗಿರುವ

ತತಃ ಕೇಂದ್ರಾದಿಗಾನಾಂ ತು ದ್ವಿತ್ರ್ಯಾದೌ ಸಬಲಸ್ಯ ಚ ।
ಬಾಹ್ವಯುರ್ಯೋ ವೀರ್ಯಸಾಮ್ಯೇರ್ಶಾದ್ಯುತಸ್ಯ ಪ್ರಾಗ್ಯಾಚಕಃ ॥ ೧೩೭ ॥

ಸದ್ವಾರ್ಗಾರ್ಧಸ್ಯ ತ್ರಿಂಶಸ್ಯ ತ್ರಿಕೋಣಗಶ್ಚ ಸ್ಮರಗಃ ।
ಸಪ್ತಮಾಸಸ್ಯ ತೂರ್ಯಸ್ಯ ಚತುರಸ್ರಗತಸ್ಯ ಚ ॥ ೧೩೮ ॥

ಕ್ರಮಃ ಕೇಂದ್ರಾದಿಕೋಣಾಪಿ ದ್ವಿತ್ರ್ಯಾದೌ ಸಬಲಸ್ಯ ಚ ।
ಪಾಕಪಸ್ಯಾಬ್ಧಿನಾಗಾಶ್ಚ ಹ್ಯರ್ಣವಾ ಸಹಗಸ್ಯ ಚ ॥ ೧೩೯ ॥

ತ್ರಿಕೋಣಸ್ಥಸ್ಯ ಚಾಷ್ಟಾಕ್ಷಿಸೂರ್ಯಾದ್ಯೂನಗತಸ್ಯ ಚ ।
ತುರ್ಯಾಷ್ಟಗಸ್ಯ ತು ಸ್ವರ್ಗಾ ಗುಣಕಾಃ ಪರಿಕೀರ್ತಿತಾಃ ॥ ೧೪೦ ॥

---

ಗ್ರಹಗಳಲ್ಲಿ ಪ್ರಥಮೋದಿತಗ್ರಹದಶೆಗಳನ್ನು ಪ್ರಥಮತಃ ಕಲ್ಪಿಸಿಕೊಳ್ಳಬೇಕು. ಹೀಗೆ ಕೇಂದ್ರಸ್ಥಗ್ರಹಗಳ ದಶೆಗಳಾದಮೇಲೆ ಫಣಪರ, ಆಪೋಕ್ಲಿಮಸ್ಥಾನಗಳ ದಶೆಗಳು ಯಥಾಕ್ರಮವಾಗಿ ನಡೆಯಬೇಕು. ಕೇಂದ್ರದಲ್ಲಿ ಗ್ರಹವಿಲ್ಲದಿದ್ದರೆ ಫಣಪರದಲ್ಲಿಯೂ ಅಲ್ಲಿಯೂ ಗ್ರಹವಿಲ್ಲದಿದ್ದರೆ ಆಪೋಕ್ಲಿಮದಲ್ಲಿಯೂ, ಅಲ್ಲಿಯೂ ಅಧಿಕಗ್ರಹಗಳಿದ್ದರೆ ಹಿಂದೆ ಹೇಳಿದಂತೆಯೂ ದಶಾವರ್ಷಗಳನ್ನು ಸಾಧಿಸಬೇಕು.

೧೩೮-೧೪೧. ಹೀಗೆ ದಶಾವ್ಯವಸ್ಥೆಯಾದಮೇಲೆ ಅಂತರ್ದಶೆಗಳನ್ನು ತಿಳಿಯುವ ಕ್ರಮವು ಹೀಗಿರುವುದು. ದಶಾಧಿಪತಿಯೊಂದಿಗೆ ಒಂದೇರಾಶಿಯಲ್ಲಿರುವ ಗ್ರಹವು ದಶಾಧಿಪತಿ ಕೊಟ್ಟ ಫಲಕಾಲದಲ್ಲಿ ಅರ್ಧವನ್ನು ತನ್ನ ಅಂತರ್ದಶೆಯನ್ನಾಗಿ ಕೊಡುವನು. ಪಂಚಮ ಮತ್ತು ನವಮಸ್ಥಾನಗಲ್ಲಿರುವ ಗ್ರಹವು ದಶೆಯ ಮೂರನೆಯ ಒಂದು ಭಾಗವನ್ನೂ, ಸಪ್ತಮದಲ್ಲಿರುವ ಗ್ರಹವು ಏಳನೆಯ ಒಂದಂಶವನ್ನೂ ಚತುರ್ಥಾಷ್ಟಮದಲ್ಲಿರುವ ಗ್ರಹಗಳು ದಶಾಫಲದ ಚತುರ್ಥಾಂಶವನ್ನೂ (ನಾಲ್ಕನೆಯ ಒಂದು ಭಾಗವನ್ನೂ) ತಮ್ಮ ಗುಣಗಳಿಂದ ಕೂಡಿಸಿಕೊಡುತ್ತಾರೆ. ಆದರ ಗಣಿತಕ್ರಮವು ಹೇಗೆಂದರೆ—ಅರ್ಧಾಂಶ, ತೃತೀಯಾಂಶ, ಸಪ್ತಮಾಂಶಾದಿಸ್ಥಾನಗಳನ್ನು ಸಮಚ್ಛೇದಗಳಾಗಿ ಮಾಡಿ,

**ದಶಾಗುಣೈರ್ದಶಾ ಭಕ್ತಾ ಗುಣೈಕ್ಯೇನ ಸಮಾಗತಾಃ ।**
**ಶೇಷೇಽರ್ಕಾದಿಹತೇ ಭಕ್ತೇ ಮಾಸಾದ್ಯೈಕ್ಯೇನ ನಾರದ ॥ ೧೪೧ ॥**

**ಅಂತರ್ದಶಾಸು ವಿದಶಾಸ್ತಾಸು ಚೋಪದಶಾಸ್ತಥಾ ।**
**ದಶೇಶಮಿತ್ರಸ್ವೋಚ್ಚರ್ಕ್ಷಗೋಚ್ಚೋಬ್ಧ್ಯಂಶಾದ್ರಿವೃದ್ಧಿಗಃ ॥ ೧೪೨ ॥**

**ಶುಭಗೋ ಯದ್ಭಗಸ್ತದ್ಧಿಸ್ತನ್ವಾದಿಸ್ಥೇನ ತದ್ಧಿಕೃತ್ ।**
**ಪ್ರೋಕ್ತೇತರಸ್ಥಾನಗತಸ್ತತ್ತದ್ಭಾವಕ್ಷಯಂಕರಃ ॥ ೧೪೩ ॥**

**ಖಗಸ್ಯ ಯದ್ಭವೇದ್ದ್ರವ್ಯಂ ಭಾವಭೇ ಕ್ಷಣಯೋಗಜಂ ।**
**ಜೀವಿಕಾದಿಫಲಂ ಸರ್ವಂ ದಶಾಯಾಂ ತಸ್ಯ ಯೋಜಯೇತ್ ॥ ೧೪೪ ॥**

ಅದರ ಕೆಳಗಿರುವ ಶೇಷ ಸಂಖ್ಯೆಯನ್ನು ತೆಗೆದುಹಾಕಿ, ಸಕಲಸ್ಥಾನಗಳನ್ನೂ ಮೂಲದಶಾವತ್ಸರಗಳಿಂದ ಗುಣಿಸಿ, ಶೇಷಸಂಖ್ಯಾವಿಹೀನಗಳಾಗಿ ಸೇರಿಸಿ ಇರುವ ಸಂಖ್ಯೆಗಳೆಲ್ಲವನ್ನೂ ಕೂಡಿ ಆ ಒಟ್ಟಿನಿಂದ ಭಾಗಿಸಲಾಗಿ ಏಕರಾಶ್ಯಾದಿಗತಗ್ರಹಗಳ ಅಂತರ್ದಶಾಕಾಲಗಳು ಯಥಾಂಶವಾಗಿ ಬರುವುವು. ಅದನ್ನೇ ಮಾಸಾದಿಯಾಗಿಯೂ ಆನಯನಮಾಡಬೇಕು.

೧೪೨-೧೪೪. ಹೀಗೆ ಅಂತರ್ದಶಾನಯನ ಮಾಡಿ, ಅದರಲ್ಲಿಯೂ ದಶಾವಿಧಿಯನ್ನೇ ಅನುಸರಿಸಿ, ವಿದಶೆ, ಉಪದಶೆ ಇವುಗಳನ್ನು ಆನಯನಮಾಡಬಹುದು. ಈ ಅಂತರ್ದಶಾಧಿಪತಿಗಳು ದಶಾಧಿಪತಿಗೆ ಶತ್ರುವೇ, ಮಿತ್ರನೇ ಉಚ್ಚದಲ್ಲಿದ್ದಾನೆಯೇ ಅಥವಾ ನೀಚದಲ್ಲಿದ್ದಾನೆಯೇ ಎಂಬುದನ್ನು ತಿಳಿದು ಫಲಾಫಲಗಳನ್ನು ಊಹಿಸಬೇಕು. ಉಚ್ಚಾದಿರಾಶಿಗಳಲ್ಲಿರುವ ಗ್ರಹಗಳು, ನಾಲ್ಕರಷ್ಟು ಮತ್ತು ಏಳರಷ್ಟು ಹೆಚ್ಚಾಗಿ ಒಳ್ಳೆಯ ಫಲಗಳನ್ನು ಕೊಡುವವರಾಗುತ್ತಾರೆ. ಶುಭಗ್ರಹಗಳು ತನ್ವಾದಿಭಾವಗಳಲ್ಲಿದ್ದರೆ, ಆ ಗ್ರಹಗಳು ಆಯಾ ಭಾವದ ಫಲವನ್ನು ಅಭಿವೃದ್ಧಿಗೊಳಿಸಿ, ಫಲಗಳನ್ನು ಕೊಡುವರು. ಅದೇ ಗ್ರಹಗಳು ದುರ್ಬಲರಾಗಿದ್ದರೆ ತಮ್ಮತಮ್ಮ ಭಾವದ ಫಲವನ್ನು ನಾಶಮಾಡುವುದೂ ಉಂಟೆಂದು ತಿಳಿಯಬೇಕು. ಗ್ರಹಗಳಿಗೆ ಹಿಂದೆ ಹೇಳಿದ ದ್ರವ್ಯಾದಿಗಳು ಕಾಲದೇಶಾದಿಗಳು ಇವೆಲ್ಲವೂ ಜಾತಕನಿಗೆ ಆಯಾ ಗ್ರಹಗಳ ದಶಾಕಾಲದಲ್ಲಿ ಲಭಿಸುವುವು.

ವಿಶನ್ನಾಪದಶಾಯಾಂ ಯೋ ವೈರಿದೃಷ್ಟೋ ವಿಪತ್ತಿಕೃತ್ ।
ಶುಭಮಿತ್ರೇಕ್ಷಿತಶ್ಚೇಷ್ಟಸದ್ವರ್ಗಸ್ಥಶ್ಚ ಯೋ ಗ್ರಹಃ ॥ ೧೪೫ ॥

ತತ್ಕಾಲೇ ಬಲವಾನಾಪನ್ನಾ ಶಕ್ಯೈತ್ಸಮುದಾಹೃತಃ ।
ಯಸ್ಯಾಷ್ಟವರ್ಗಜಂ ಚಾಪಿ ಫಲಂ ಪೂರ್ಣಶುಭಂ ಭವೇತ್ ॥ ೧೪೬ ॥

ಯಶ್ಚ ಮೂರ್ತಿತನುಗ್ಲಾವೋ ವೃದ್ಧಿಗಃ ಸ್ವೋಚ್ಚಭಸ್ಥಿತಃ ।
ಸ್ವತ್ರಿಕೋಣಸುಹೃದ್ಭಸ್ಥಸ್ತಸ್ಯ ಮಧ್ಯಮಸತ್ಫಲಂ ॥ ೧೪೭ ॥

ಶ್ರೇಷ್ಠಂ ಶುಭತರಂ ವಾಚ್ಯಂ ವಿಪರೀತಗತಸ್ಯ ತು ।
ನೇಷ್ಟಮುತ್ಕಟಮಿಷ್ಟಂ ತು ಸ್ವಲ್ಪಂ ಜ್ಞಾತ್ವಾ ಬಲಂ ವದೇತ್ ॥ ೧೪೮ ॥

ಚರೇ ಸನ್ಮಧ್ಯದುಷ್ಟಾಖ್ಯಾಮಂಗಭಂಗೇ ವಿಪರ್ಯಯಾತ್ ।
ಸ್ಥಿತೇ ನೇಷ್ಟೇಷ್ಟಮಧ್ಯಾ ಚ ಹೋರಾಯಾಸ್ತ್ರ್ಯಂಶಕೈಃ ಫಲಂ ॥ ೧೪೯ ॥

---

೧೪೫-೧೪೯. ನೀಚಾಂಶಗತರಾದ ಗ್ರಹಗಳು ಶತ್ರುಗ್ರಹಗಳಿಂದ್ರ ನೋಡಲ್ಪಟ್ಟರೆ ಪಾಪಫಲವನ್ನು ಹೆಚ್ಚಾಗಿ ಕೊಡುವರು. ಗ್ರಹವು ಮಿತ್ರಕ್ಷೇತ್ರದಲ್ಲಿದ್ದು ಶುಭಾಂಶಸ್ಥರಾಗಿದ್ದರೆ ಶುಭಫಲವನ್ನೇ ತಮ್ಮ ದಶಾಕಾಲದಲ್ಲಿ ಕೊಡುತ್ತಾರೆ. ಯಾವ ಗ್ರಹವು ಅಸ್ತವಾಗದ ಉಚ್ಚರಾಶಿಯಲ್ಲಿದ್ದು ಅಷ್ಟಕವರ್ಗದಿಂದ ಪೂರ್ಣಬಿಂದುಗಳನ್ನು ಪಡೆದಿರುವುದೋ ಆ ಗ್ರಹವು ಸಂಪೂರ್ಣವಾಗಿ ಶುಭಫಲವನ್ನೇ ಕೊಡುತ್ತದೆ. ಯಾವ ಗ್ರಹವು ಸ್ವತ್ರಿಕೋಣ, ಮಿತ್ರಕ್ಷೇತ್ರ, ಸ್ವಕ್ಷೇತ್ರಗಳಲ್ಲಿರುವುದೋ ಅದು ಮಧ್ಯಮವಾದ ಫಲವನ್ನೇ ಕೊಡುವುದು. ಇವುಗಳಿಂದ ಬರುವ ಫಲವು ಶ್ರೇಷ್ಠವಾದದ್ದು. ಇದಕ್ಕೆ ವಿರುದ್ಧವಾಗಿ ನೀಚರಾಶಿ, ನೀಚಾಂಶ, ಶತ್ರುಕ್ಷೇತ್ರ ಮುಂತಾದ ಸ್ಥಾನಗಳಲ್ಲಿರುವ ಗ್ರಹಗಳು ಅಲ್ಪವಾದ ಶುಭವನ್ನೂ ಅತಿಯಾದ ಅಶುಭಫಲವನ್ನೂ ಕೊಡುವವರಾಗುವರು. ದ್ವಿಸ್ವಭಾವರಾಶಿಯು ಲಗ್ನವಾಗಿದ್ದರೆ ದ್ರೇಕ್ಕಾಣಾನುಸಾರವಾಗಿ ಅನಿಷ್ಟ, ಮಿಶ್ರ, ಶ್ರೇಷ್ಠ ಈರೀತಿಯಾಗಿ ಫಲವನ್ನು ಕೊಡುವುವು. ಚರರಾಶಿಯಲ್ಲಾದರೋ ಇದಕ್ಕೆ ವಿರುದ್ಧವಾಗಿ ಫಲವು ದೊರೆಯುವುದು. ಸ್ಥಿರರಾಶಿಯಾದರೆ ಕ್ರಮವಾಗಿ ಅಶುಭ, ಶುಭ ಮತ್ತು ಮಿಶ್ರ ಈರೀತಿಯಾಗಿ ಫಲವು ದೊರೆಯುವುದೆಂದು ಹೇಳಬೇಕು.

ಸ್ವಾಮಿಜ್ಞಜ್ಞಯುತಾ ಹೋರಾ ವೃಷ್ಟಾ ವಾ ಸತ್ಫಲಾವಹಾ ।
ವಿನಾಶದೃಷ್ಟಯುಕ್ತಾ ಚ ಪಾಪಾಂತರಗತಾನ್ಯಥಾ ॥ ೧೫೦ ॥

ಪ್ರಾಗ್ಭ್ಯಂಕ್ತಾ ಬಂಧುವ್ಯತ್ಯಾಯತಯೋರ್ದ್ಯೂನೇ ರವಿಃ ಸ್ವಭಾತ್ ।
ವಕ್ತ್ರಾತ್ಸ್ವದಿವಸಾಚ್ಚಾರ್ಕೇ ಶುಕ್ರಾದ್ಯೂನಾಂ ತು ಷಡ್ರ್ಯತಃ ॥ ೧೫೧ ॥

ಧರ್ಮಧ್ಯಾಯಾರಿಗೋ ಜೀವಾದಿಕತ್ರ್ಯಾಯಾರಿಗೋ ವಿಧೋಃ ।
ಪೃಥ್ಯಂತಧೀತಪಾಃ ಸುಜ್ಞಾ ತತೋ ವೃದ್ಧ್ಯಂತ್ಯಬಂಧುರಾಃ ॥ ೧೫೨ ॥

ವೃದ್ಧಿಗೋಗಾತ್ಸಧನಧೀತಪಃ ಸ್ವಾರಾಚ್ಛೃಶೀ ಶುಭಃ ।
ಸ್ವದ್ವ್ಯಧ್ಯಸ್ತಾದಿಷು ಪೃಥಾತ್ಸಸಾಷ್ಟೌ ಪಂಚಯೋಪಗಃ ॥ ೧೫೩ ॥

ಷಟ್ತ್ರ್ಯಯಧೀಸ್ಥೋ ಮಂದಾಚ್ಚ ಜ್ಞಾದ್ವಿತ್ರ್ಯಯಾಷ್ಟಕೇಂದ್ರಗಃ ।
ಕೇಂದ್ರಾಷ್ಟಾಯಾಂತ್ಯ ಇಚ್ಯಾದ್ವಾ ಜ್ಞಜ್ಯಾಯಾಸ್ತತ್ರ ಸ್ವೇಕವೇಃ ॥ ೧೫೪ ॥

---

೧೫೦. ಜನ್ಮಲಗ್ನವು, ಲಗ್ನಾಧಿಪತಿ, ಗುರು, ಬುಧ ಇವರಿಂದ ಯುಕ್ತವಾಗಿದ್ದರೆ ತನ್ನ ದಶಾಕಾಲದಲ್ಲಿ ಶುಭ ಫಲವನ್ನೇ ಕೊಡುವುದು. ಪಾಪಾಂತರವರ್ತಿಯಾಗಿದ್ದು ಪಾಪಗ್ರಹಗಳಿಂದಲೇ ಕೂಡಿದ್ದರೆ ಆಗ ಅಶುಭ ಫಲಗಳನ್ನೇ ಕೊಡುವುದು.

೧೫೧-೧೬೫. ಇನ್ನು ಮುಂದೆ ಅಷ್ಟಕವರ್ಗಪ್ರಕರಣವು ನಿರೂಪಿತವಾಗುವುದು. ಲಗ್ನಸಹಿತವಾದ ಸೂರ್ಯಾದಿ ಸಪ್ತಗ್ರಹಗಳೇ ಅಷ್ಟಕವೆನಿಸುವುದು. ಇವುಗಳಿಂದ ರಾಶಿಗಳಲ್ಲಿ ಕೊಡಲ್ಪಡುವ ಬಿಂದು (o) ರೇಖಾ (।) ಈ ರೂಪವಾದ ಚಿಹ್ನೆಗಳ ಸಮುದಾಯವೇ ಅಷ್ಟಕವರ್ಗವೆನಿಸುವುದು. ಜನ್ಮಕಾಲಗಳಲ್ಲಿರುವ ಗ್ರಹಗಳು ಗೋಚಾರರೀತಿಯಾಗಿ ಜಾತಕನಿಗೆ ಶುಭಾಶುಭಫಲಗಳನ್ನು ಕೊಡುವುವು. ಆ ಫಲಗಳು ಎಷ್ಟರಮಟ್ಟಿಗೆ ಬರುತ್ತವೆಯೆಂಬುದನ್ನು ತಿಳಿಯಲು ಈ ಅಷ್ಟಕವರ್ಗಗಳು ಸಹಾಯಕಗಳಾಗುವುವು. ಬಿಂದುವು ಅಧಿಕವಾಗಿದ್ದರೆ ಒಳ್ಳೆಯ ಫಲವು ದೊರೆಯುವುದೆಂದೂ ರೇಖೆಯು ಅಧಿಕವಾಗಿದ್ದರೆ ಕೆಟ್ಟ ಫಲಗಳು ಲಭಿಸುವುವೆಂದೂ ತಿಳಿಯಬೇಕು. ಈಗ ಸೂರ್ಯಾದಿಗ್ರಹಗಳಿಗೆ ದೊರೆಯುವ ಬಿಂದುಗಳನ್ನು ಅಥವಾ ರೇಖೆಗೆ ಸರಿಯಾಗಿ ಹೇಳಲಾಗಿದೆ.

ವೃದ್ಧ್ಯಾ ವಿನಾತ್ಸ್ಯಾದಿಧಿಯೋ ಮಂಗಾ ಆಯಾರಿಗೋ ವಿಧೋಃ ।
ಕೇಂದ್ರಾಷ್ಟಾಪಾರ್ಥಗಃ ಸ್ವಕ್ಸಾನ್ಮಂದಾದ್ಯೋಽಷ್ಟಾಯಕೇಂದ್ರಗಃ ॥ ೧೫೫ ॥

ಷಟ್ತ್ರಿಧೀ ಭವತಃ ಸೌಮ್ಯಾಚ್ಛಿದ್ಯಾಂಶಾಷ್ಟನುಗೋ ಭೃಗೋಃ ।
ಕರ್ಮಾಯವ್ಯಯಷಷ್ಠಸ್ಥೋ ಜೀವಾದ್ಭೌಮಃ ಶುಭಃ ಸ್ಮೃತಃ ॥ ೧೫೬ ॥

ಕವೇರ್ದ್ವ್ಯರ್ಕಷಷ್ಠಮೋಽಧ್ಯಾಯೇ ಸಂಜ್ಞೋ ಮಂದಾನ್ನಧೀತ್ರಯೇ ।
ಸಾಕ್ಸಾಸ್ತೇ ಭೂಮಿಜಾಜ್ಜೀವಾದ್ಯಯಾರಿಭವಮೃತ್ಯುಗಃ ॥ ೧೫೭ ॥

ಧರ್ಮಾಯಾದಿಸತಾಂತ್ಯೇಽರ್ಕಾತ್ಸ್ಯಾದ್ಯತ್ರಿಸ್ವಗತಃ ಸ್ವಥಾತ್ ।
ಷಟ್ಪಾಯಾಷ್ಟಾಬ್ಧಿಖೇಷ್ವಿಜ್ಯಾತ್ಸಹಾದ್ಯೇಷು ವಿಲಗ್ನತಃ ॥ ೧೫೮ ॥

ದಿಗ್ವಾಷ್ಟಾದ್ಯಸ್ತಬಂದ್ವಾಯೇ ಕುಜಾತ್ಪಾತ್ಸತ್ರಿಕೇ ಗುರುಃ ।
ಸಾತ್ರ್ಯಂಕೇ ಸನ್ರವೇಃ ಶುಕ್ರಾದ್ಧೀಖಗೋ ದಿಗ್ಭವಾರಿಗಃ ॥ ೧೫೯ ॥

---

ಉಳಿದ ರಾಶಿಗಳಲ್ಲಿ ರೇಖಾಯೋಜನಮಾಡಬೇಕು. ಸೂರ್ಯನು ತಾನಿರುವ ಸ್ಥಾನದಿಂದ

೧ ಒಂದು　೧೧ ಹನ್ನೊಂದು　೪ ನಾಲ್ಕು　೮ ಎಂಟು
೨ ಎರಡು　೧೦ ಹತ್ತು　೯ ಒಂಬತ್ತು　೭ ಏಳು

ಈ ಸ್ಥಾನಗಳಲ್ಲಿ ಬಂದಾಗ ಶುಭಫಲವನ್ನು ಕೊಡುತ್ತಾನೆ. ಅದಕ್ಕೆ ವಿರುದ್ಧವಾಗಿ ಅಂದರೆ ಕೆಟ್ಟ ಫಲಗಳನ್ನೇ ಕೊಡುತ್ತಾನೆ. ಅಂದರೆ ಶುಭಫಲಗಳನ್ನು ಕೊಡುವ ರಾಶಿಗಳಲ್ಲಿ ಬಿಂದು ಚಿಹ್ನೆಯನ್ನೂ ಅಶುಭಪ್ರದರಾಶಿಗಳಲ್ಲಿ ರೇಖಾ ಚಿಹ್ನೆಯನ್ನೂ ವಿನ್ಯಾಸಮಾಡಬೇಕು. ಎಲ್ಲಾ ಗ್ರಹಗಳಿಗೂ ಮುಂದೆ ಇದೇ ರೀತಿ ಮಾಡಬೇಕೆಂಬುದನ್ನು ಅರಿಯಬೇಕು. ಹೀಗೆ ಸೂರ್ಯನು ತಾನಿರುವ ಸ್ಥಾನದಿಂದ ಮೇಲೆ ಹೇಳಿದಂತೆ ಫಲವನ್ನು ಕೊಟ್ಟು ಅಂಗಾರಕ ಮತ್ತು ಶನಿ ಇವರಿರುವ ಸ್ಥಾನದಿಂದಲೂ ಮೇಲೆ ಹೇಳಿದಂತೆಯೇ ಒಂದು, ಹನ್ನೊಂದು ಮುಂತಾದ ರಾಶಿಗಳಲ್ಲಿ ಬಿಂದುಗಳನ್ನೂ ಉಳಿದ ರಾಶಿಗಳಲ್ಲಿ ರೇಖೆಯನ್ನೂ ಇಡಿಸುತ್ತಾನೆ. ಶುಕ್ರನಿರುವ ಸ್ಥಾನದಿಂದ ೭ ಏಳು, ೧೨ ಹನ್ನೆರಡು, ೬ ಆರು ಈ ರಾಶಿಗಳಲ್ಲಿಯೂ, ಗುರುವಿನ ರಾಶಿಯಿಂದ ೯ ಒಂಭತ್ತು ೫ ಐದು, ೧೧

ಚಂದ್ರಾದ್ವೀಶಾರ್ಥಗೋಸ್ತೇಷು ಮಂದಾದ್ವೀತ್ರಿಷಡಂತ್ಯಗಃ ।
ಗೋಽಬ್ಧಿಧೀಷಟ್ಸುಖಾದ್ಯಾ ಯೇ ಜ್ಞಾತ್ಸಾದ್ಯೂನೇ ವಿಲಗ್ನತಃ ॥ ೧೬೦ ॥

ಆಶು ತೇಶಾಷ್ಟಗೋಷ್ವಂಗಾತ್ಸಾಂಶೇಷ್ವಬ್ಜಾತ್ರಿತಃ ಶುಭಃ ।
ಸ್ವಾತ್ಸಜ್ಞೇಷು ತ್ರಿಧೀಗೋಬ್ಧೀ ದಿಕ್ಪದ್ರಾಸಿಗತೋಽರ್ಕಭಾತ್ ॥ ೧೬೧ ॥

ರಂಧ್ರಾಯವ್ಯಯಗಃ ಸೂರ್ಯಾದೋಷ್ಟಧೀಷೇ ಸಗೋರ್ಗುರೋ ।
ಜ್ಞಾಬ್ಧಿತ್ರ್ಯಾಯಾರಿಗೋರಾತ್ರಿಷಡ್ಧ್ಯಧ್ಯಾಂತ್ಯಗೋಷು ಚ ॥ ೧೬೨ ॥

ತ್ರಿಧೀಶಾರಿಷು ಮಂದಃ ಖಾತ್ಸಾಕ್ಸಾಂತ್ಯೇಷು ಶುಭೋಽಸ್ಯಜಃ ।
ಕೇಂದ್ರಾಯಾಷ್ಟಧನೇಷ್ವರ್ಕಾ ಲಗ್ನಾದ್ವ್ಯದ್ಯಾಧ್ಯದ್ಯಬಂಧುಷು ॥ ೧೬೩ ॥

---

ಹನ್ನೊಂದು, ೬ ಆರು ಈ ರಾಶಿಗಳಲ್ಲಿಯೂ ಚಂದ್ರನಿರುವ ರಾಶಿಯಿಂದ ೧೦ ಹತ್ತು, ೩ ಮೂರು, ೧೧ ಹನ್ನೊಂದು, ೬ ಆರು ಈ ರಾಶಿಗಳಲ್ಲಿಯೂ, ಬುಧನಿರುವ ಸ್ಥಾನದಿಂದ ೧೦ ಹತ್ತು, ೩ ಮೂರು, ೧೧ ಹನ್ನೊಂದು, ೬ ಆರು ಈ ಸ್ಥಾನಗಳಲ್ಲಿಯೂ, ೧೨ ಹನ್ನೆರಡು, ೯ ಒಂಭತ್ತು, ೫ ಐದನೆಯ ಸ್ಥಾನಗಳಲ್ಲಿಯೂ, ಚಂದ್ರಸ್ಥಾನದಿಂದ ೧೦ ಹತ್ತು, ೩ ಮೂರು, ೧೧ ಹನ್ನೊಂದು, ೬ ಆರು, ೪ ನಾಲ್ಕು, ೧೨ ಹನ್ನೆರಡು ಈ ರಾಶಿಗಳಲ್ಲಿಯೂ ಸೂರ್ಯನು ಶುಭಫಲವನ್ನು ಕೊಡುತ್ತಾನೆ. ಇದು ಸೂರ್ಯಾಷ್ಟಕವರ್ಗವೆನಿಸುವುದು. ಚಂದ್ರನು ಲಗ್ನದಿಂದ ೬ ಆರು, ೩ ಮೂರು, ೧೦ ಹತ್ತು, ೧೧ ಹನ್ನೊಂದನೆಯ ಸ್ಥಾನ, ಕುಜಸ್ಥಾನದಿಂದ ೬ ಆರು, ೩ ಮೂರು, ೧೦ ಹತ್ತು, ೧೧ ಹನ್ನೊಂದು, ೨ ಎರಡು ೫ ಐದು, ೯ ಒಂಭತ್ತು (ಈ ಸ್ಥಾನಗಳು), ತಾನಿರುವ (ಚಂದ್ರನಿರುವ) ಸ್ಥಾನದಿಂದ ೬ ಆರು, ೩ ಮೂರು, ೧೦ ಹತ್ತು, ೧೧ ಹನ್ನೊಂದು, ೭ ಏಳು, ೧ ಒಂದು (ಈ ಸ್ಥಾನಗಳು), ಸೂರ್ಯನಿರುವ ಸ್ಥಾನದಿಂದ ೬ ಆರು, ೩ ಮೂರು ೧೦ ಹತ್ತು, ೧೧ ಹನ್ನೊಂದು, ೮ ಎಂಟು, ೭ ಏಳು; ಶನಿಯಿರುವ ಸ್ಥಾನದಿಂದ ೬ ಆರು, ೩ ಮೂರು, ೧೧ ಹನ್ನೊಂದು, ೫ ಐದು; ಬುಧಸ್ಥಾನದಿಂದ ೫ ಐದು ೩ ಮೂರು, ೧೧ ಹನ್ನೊಂದು, ೮ ಎಂಟು, ೧ ಒಂದು, ೪ ನಾಲ್ಕು, ೭ ಏಳು ೧೦ ಹತ್ತು ; ಗುರುಸ್ಥಾನದಿಂದ ೧೨ ಹನ್ನೆರಡು, ೧೧ ಹನ್ನೊಂದು, ೮ ಎಂಟು

**ಗೋಧ್ವಸ್ವಾಪಾರಿಖಾಂತ್ಯೇ ಜ್ಞಾಚ್ಚಂದ್ರಾಲ್ಲಾಭತ್ರಿಷಡ್ಘತಃ ।**
**ಷಡಷ್ಟಾಂತ್ಯಗತಃ ಶುಕ್ರಾದ್ಗುರೋರ್ದ್ವಿಃಶಾಂತ್ಯಶತ್ರುಷು ॥ ೧೬೪ ॥**

**ಉಕ್ತಸ್ಥಾನೇಷು ರೇಖಾದೌ ಹ್ಯನುಕ್ತೇಷು ತು ಬಿಂದುದಾಃ ।**
**ಜನ್ಮಭಾದ್ವದ್ವಿಮಿತ್ರೋಚ್ಚಸ್ವಭೇಧಿಷ್ಟಂ ಪರೇಷ್ವಸತ್ ॥ ೧೬೫ ॥**

೧ ಒಂದು, ೪ ನಾಲ್ಕು, ೭ ಏಳು, ೧೦ ಹತ್ತು; ಶುಕ್ರಸ್ಥಾನದಿಂದ ೭ ಏಳು, ೯ ಒಂಭತ್ತು, ೪ ನಾಲ್ಕು, ೫ ಐದು, ೩ ಮೂರು, ೧೧ ಹನ್ನೊಂದು, ೧೦ ಹತ್ತು ಈ ಸ್ಥಾನಗಳಲ್ಲಿ ಶುಭಫಲಗಳನ್ನು ಕೊಡುವನು. ಕುಜನು ಸೂರ್ಯನಿಂದ ೩ ಮೂರು, ೬ ಆರು, ೧೦ ಹತ್ತು, ೧೧ ಹನ್ನೊಂದು, ೫ ಐದು, ಲಗ್ನದಿಂದ ೩ ಮೂರು, ೬ ಆರು, ೧೦ ಹತ್ತು, ೧೧ ಹನ್ನೊಂದು, ೧ ಒಂದು; ಚಂದ್ರನಿಂದ ೩ ಮೂರು, ೬ ಆರು ೧೧ ಹನ್ನೊಂದು, ತಾನಿರುವ ರಾಶಿಯಿಂದ ೧ ಒಂದು ೪ ನಾಲ್ಕು, ೭ ಏಳು, ೧೦ ಹತ್ತು, ೮ ಎಂಟು, ೧೧ ಹನ್ನೊಂದು, ೨ ಎರಡು ಶನಿಸ್ಥಾನದಿಂದ ೯ ಒಂಭತ್ತು, ೧೧ ಹನ್ನೊಂದು, ೮ ಎಂಟು, ೧ ಒಂದು, ೪ ನಾಲ್ಕು, ೭ ಏಳು, ೧೦ ಹತ್ತು; ಬುಧನಿಂದ ೬ ಆರು, ೩ ಮೂರು ೫ ಐದು; ಶುಕ್ರನಿಂದ ೬ ಆರು, ೧೨ ಹನ್ನೆರಡು, ೧೧ ಹನ್ನೊಂದು, ೮ ಎಂಟು; ಗುರುವಿನಿಂದ ೧೦ ಹತ್ತು, ೧೨ ಹನ್ನೆರಡು, ೧೧ ಹನ್ನೊಂದು, ೬ ಆರು; ಈ ರಾಶಿಗಳಲ್ಲಿ ಶುಭಫಲಗಳನ್ನು ಕೊಡುತ್ತಾನೆ.

ಬುಧನು ಶುಕ್ರಸ್ಥಾನದಿಂದ ೨ ಎರಡು, ೧ ಒಂದು, ೧೧ ಹನ್ನೊಂದು ೮ ಎಂಟು, ೯ ಒಂಭತ್ತು, ೪ ನಾಲ್ಕು, ೩ ಮೂರು, ೫ ಐದು; ಶನಿ ಮತ್ತು ಅಂಗಾರಕಸ್ಥಾನದಿಂದ ೨ ಎರಡು, ೧ ಒಂದು, ೧೧ ಹನ್ನೊಂದು, ೮ ಎಂಟು ೯ ಒಂಭತ್ತು, ೪ ನಾಲ್ಕು, ೧೦ ಹತ್ತು, ೭ ಏಳು; ಗುರುಸ್ಥಾನದಿಂದ ೧೨ ಹನ್ನೆರಡು, ೬ ಆರು, ೧೧ ಹನ್ನೊಂದು, ೮ ಎಂಟು; ಸೂರ್ಯನಿಂದ ೯ ಒಂಭತ್ತು ೧೧ ಹನ್ನೊಂದು, ೬ ಆರು, ೫ ಐದು, ೧೨ ಹನ್ನೆರಡು; ತನ್ನ ಸ್ಥಾನದಿಂದ ೯ ಒಂಭತ್ತು, ೧೧ ಹನ್ನೊಂದು, ೬ ಆರು, ೫ ಐದು, ೧೨ ಹನ್ನೆರಡು, ೧ ಒಂದು ೧೦ ಹತ್ತು, ೩ ಮೂರು; ಚಂದ್ರಸ್ಥಾನದಿಂದ ೬ ಆರು, ೨ ಎರಡು, ೧೧ ಹನ್ನೊಂದು, ೮ ಎಂಟು, ೪ ನಾಲ್ಕು, ೧೦ ಹತ್ತು; ಲಗ್ನದಿಂದ ೬ ಆರು, ೨

ಎರಡು, ೧೧ ಹನ್ನೊಂದು, ೮ ಎಂಟು, ೪ ನಾಲ್ಕು, ೧೦ ಹತ್ತು, ೧ ಒಂದು ಈ ರಾಶಿಗಳಲ್ಲಿ ಶುಭಫಲವನ್ನು ಕೊಡುವನು.

ಗುರುವು ಕುಜಸ್ಥಾನದಿಂದ ೧೦ ಹತ್ತು, ೨ ಎರಡು, ೧ ಒಂದು, ೮ ಎಂಟು, ೭ ಏಳು, ೧೧ ಹನ್ನೊಂದು, ೪ ನಾಲ್ಕು; ತನ್ನ ಸ್ಥಾನದಿಂದ ೧೦ ಹತ್ತು ೨ ಎರಡು, ೧ ಒಂದು, ೮ ಎಂಟು, ೭ ಏಳು, ೧೧ ಹನ್ನೊಂದು, ೪ ನಾಲ್ಕು ೩ ಮೂರು; ಸೂರ್ಯನಿಂದ ೧೦ ಹತ್ತು, ೨ ಎರಡು, ೧ ಒಂದು, ೮ ಎಂಟು, ೭ ಏಳು, ೧೧ ಹನ್ನೊಂದು, ೪ ನಾಲ್ಕು, ೩ ಮೂರು, ೯ ಒಂಭತ್ತು; ಶುಕ್ರನಿಂದ ೫ ಐದು, ೨ ಎರಡು, ೯ ಒಂಭತ್ತು, ೧೦ ಹತ್ತು, ೧೧ ಹನ್ನೊಂದು, ೬ ಆರು; ಚಂದ್ರನಿಂದ ೭ ಏಳು, ೧೧ ಹನ್ನೊಂದು, ೨ ಎರಡು, ೯ ಒಂಭತ್ತು, ೫ ಐದು; ಶನಿಯಿಂದ ೩ ಮೂರು, ೬ ಆರು, ೫ ಐದು, ೧೨ ಹನ್ನೆರಡು; ಬುಧನಿಂದ ೧೦ ಹತ್ತು, ೫ ಐದು, ೬ ಆರು, ೨ ಎರಡು, ೪ ನಾಲ್ಕು, ೧೧ ಹನ್ನೊಂದು ೧ ಒಂದು, ೯ ಒಂಭತ್ತು; ಲಗ್ನದಿಂದ ೧೦ ಹತ್ತು, ೫ ಐದು, ೬ ಆರು, ೨ ಎರಡು, ೪ ನಾಲ್ಕು, ೧೧ ಹನ್ನೊಂದು, ೯ ಒಂಭತ್ತು, ೧ ಒಂದು, ೭ ಏಳು ಈ ರಾಶಿಗಳಲ್ಲಿ ಶುಭಫಲಗಳನ್ನು ಕೊಡುತ್ತಾನೆ.

ಶುಕ್ರನು ಲಗ್ನದಿಂದ ೧ ಒಂದು, ೨ ಎರಡು, ೩ ಮೂರು, ೪ ನಾಲ್ಕು ೫ ಐದು, ೧೧ ಹನ್ನೊಂದು, ೮ ಎಂಟು, ೯ ಒಂಭತ್ತು; ಚಂದ್ರನಿಂದ ೧ ಒಂದು ೨ ಎರಡು, ೩ ಮೂರು, ೪ ನಾಲ್ಕು, ೫ ಐದು, ೧೧ ಹನ್ನೊಂದು, ೮ ಎಂಟು ೯ ಒಂಭತ್ತು, ೧೨ ಹನ್ನೆರಡು; ತನ್ನ ಸ್ಥಾನದಿಂದ ೧ ಒಂದು, ೨ ಎರಡು, ೩ ಮೂರು, ೪ ನಾಲ್ಕು, ೫ ಐದು, ೧೧ ಹನ್ನೊಂದು, ೮ ಎಂಟು, ೯ ಒಂಭತ್ತು ೧೦ ಹತ್ತು; ಶನಿಯಿಂದ ೪ ನಾಲ್ಕು, ೩ ಮೂರು, ೫ ಐದು, ೯ ಒಂಭತ್ತು, ೧೦ ಹತ್ತು, ೮ ಎಂಟು, ೧೧ ಹನ್ನೊಂದು; ಸೂರ್ಯನಿಂದ ೮ ಎಂಟು, ೧೧ ಹನ್ನೊಂದು, ೧೨ ಹನ್ನೆರಡು; ಗುರುವಿನಿಂದ ೯ ಒಂಭತ್ತು, ೧೦ ಹತ್ತು, ೧೧ ಹನ್ನೊಂದು, ೮ ಎಂಟು, ೫ ಐದು; ಬುಧನಿಂದ ೫ ಐದು, ೩ ಮೂರು, ೧೧ ಹನ್ನೊಂದು, ೯ ಒಂಭತ್ತು, ೭ ಏಳು; ಕುಜನಿಂದ ೩ ಮೂರು, ೯ ಒಂಭತ್ತು ೬ ಆರು, ೫ ಐದು, ೧೧ ಹನ್ನೊಂದು, ೧೨ ಹನ್ನೆರಡು ಈ ಸ್ಥಾನಗಳಲ್ಲಿ ಶುಭ ಫಲವನ್ನು ಕೊಡುತ್ತಾನೆ.

ಕಷ್ಟಮರ್ಥಕ್ಷಯಃ ಕ್ಲೇಶಃ ಸಮುತಾರ್ಥಸುಖಾಗಮಃ ।
ಧನಾಪ್ತಿಃ ಸುಖಮಿಷ್ಟಾಪ್ತಿರಿತಿ ರೇಖಾಫಲಂ ಕ್ರಮಾತ್ ॥ ೧೬೬ ॥

ಪಿತೃಮಾತೃದ್ವಿಷನ್ಮಿತ್ರಭ್ರಾತೃಸ್ತ್ರೀಭೃತಕಾದ್ರವೇಃ ।
ಸ್ವಾಮಿಲಗ್ನಾ ಜಯೋಃ ಸ್ವಸ್ಥಾದ್ಧೇಂದ್ವರ್ಕಸ್ವಯಶೋಕಯೋಃ ॥ ೧೬೭ ॥

ತೃಣಸ್ವರ್ಣಾಶ್ವಜೋರ್ಣಾದ್ಯೈರರ್ಕಾಂಶೇ ವೃತ್ತಿಮಾದಿಶೇತ್ ।
ಕೃಷ್ಯಂಬುಜಸ್ತ್ರೀಭ್ಯೋऽಬ್ಜಾಂಶೇ ಕೌಜೇ ಧಾತ್ವಸ್ತ್ರಸಾಹಸೈಃ ॥ ೧೬೮ ॥

---

ಶನಿಯು ತನ್ನ ಸ್ಥಾನದಿಂದ ೫ ಐದು, ೩ ಮೂರು, ೧೧ ಹನ್ನೊಂದು ೬ ಆರು; ಕುಜನಿಂದ ೩ ಮೂರು, ೫ ಐದು, ೧೧ ಹನ್ನೊಂದು, ೬ ಆರು, ೧೦ ಹತ್ತು ೧೨ ಹನ್ನೆರಡು; ಸೂರ್ಯನಿಂದ ೧ ಒಂದು, ೪ ನಾಲ್ಕು, ೭ ಏಳು, ೧೦ ಹತ್ತು, ೧೧ ಹನ್ನೊಂದು, ೮ ಎಂಟು, ೨ ಎರಡು; ಲಗ್ನದಿಂದ ೩ ಮೂರು, ೬ ಆರು, ೧೦ ಹತ್ತು, ೧೧ ಹನ್ನೊಂದು, ೧ ಒಂದು, ೪ ನಾಲ್ಕು; ಬುಧನಿಂದ ೯ ಒಂಭತ್ತು, ೧೧ ಹನ್ನೊಂದು, ೬ ಆರು, ೧೦ ಹತ್ತು, ೧೨ ಹನ್ನೆರಡು, ೮ ಎಂಟು; ಚಂದ್ರನಿಂದ ೩ ಮೂರು, ೬ ಆರು, ೧೧ ಹನ್ನೊಂದು; ಶುಕ್ರನಿಂದ ೬ ಆರು, ೧೨ ಹನ್ನೆರಡು, ೧೧ ಹನ್ನೊಂದು; ಗುರುವಿನಿಂದ ೧೧ ಹನ್ನೊಂದು, ೧೨ ಹನ್ನೆರಡು, ೫ ಐದು, ೬ ಆರು ಈ ರಾಶಿಗಳಲ್ಲಿ ಶುಭಫಲಗಳನ್ನು ಕೊಡುತ್ತಾನೆ-

ಮೇಲೆ ಹೇಳಿದ ಶುಭಫಲಪ್ರದರಾಶಿಗಳಲ್ಲಿ ಬಿಂದುಗಳನ್ನೂ ಉಳಿದ ರಾಶಿಗಳಲ್ಲಿ ರೇಖೆಗಳನ್ನೂ ಹಾಕಬೇಕು.

೧೬೬. ಈ ಅಷ್ಟಕವರ್ಗದಿಂದ ಬಿಂದು ಅಧಿಕವಾಗಿ ಕಂಡು ಬಂದ ರಾಶಿಗಳಲ್ಲಿ ಸಂಚರಿಸುವ ಗ್ರಹವು ಧನಪ್ರಾಪ್ತಿ, ಸುಖ, ಇಷ್ಟಾರ್ಥಸಿದ್ಧಿ ಮುಂತಾದ ಶುಭಫಲಗಳನ್ನು ಕೊಡುವುದು. ರೇಖಾಧಿಕವಾದ ರಾಶಿಗಳಲ್ಲಿ ಸಂಚರಿಸುವ ಗ್ರಹವು ಕಷ್ಟ, ಅರ್ಥಕ್ಷಯ, ಕ್ಲೇಶ ಮುಂತಾದ ದುಷ್ಫಲಗಳನ್ನು ಕೊಡುವುದು.

೧೬೭-೧೭೯. ಇನ್ನು ಮುಂದೆ ಕರ್ಮಾಜೀವ ಪ್ರಕಾರವು ವಿವರಿಸಲ್ಪಡುವುದು- ಲಗ್ನದಿಂದ ಹತ್ತನೆಯ ಸ್ಥಾನವೇ ಕರ್ಮಸ್ಥಾನ. ಮಾನವನು

ಕಾವ್ಯಶಿಲ್ಪಾದಿಭಿರ್ಬೌಧೇ ಜೈವೇ ದೇವದ್ವಿಜಾಕರ್ಯೈಃ ।
ಶೌಕ್ರೇ ರಜತಗೋರತ್ನೈರ್ವಾಂದೇ ಹಿಂಸಾಶ್ರಮಾಧಮ್ಯೈಃ ॥ ೧೬೯ ॥

ಸ್ವೋಚ್ಚೇಷ್ವಾರ್ಕೇ ತಥಾ ಜ್ಯಾರ್ಕೈರುಕ್ತ್ಯಕಾಂಗೇ ನೃಪಾಧಿಪಾಃ ।
ಲಗ್ನೇ ವರ್ಗೋತ್ತಮೇಽಬ್ಜೇ ವಾ ಚತುರಾದಿಗ್ರಹೇಕ್ಷಿತೇ ॥ ೧೭೦ ॥

ದ್ವಾವಿಂಶಭೂಪಾಸ್ತುಂಗೇಽಸೃಕ್ಚಾಪೇಽರ್ಕೇಂದೂಯಮಸ್ತನೌ ।
ಭೂಪಕೃತ್ತುಂಗಗೋಽರ್ಕೋಂಗೇಸ್ತೇಸಾಜಾಕೋಂಕುಭೇ ಗುರೌ ॥ ೧೭೧ ॥

---

ತನ್ನ ಜೀವನವನ್ನು ಯಾವರೀತಿಯಿಂದ ಮುಂದುವರಿಸುವನೆಂಬ ಪ್ರಶ್ನೆಗೆ ಉತ್ತರ ಹೇಳಲು ಗ್ರಹಸ್ಥಿತಿಯಿಂದ ಈರೀತಿ ಫಲವನ್ನು ತಿಳಿಯಬೇಕು. ಲಗ್ನ ಅಥವ ಚಂದ್ರರಾಶಿ ಇವುಗಳಿಂದ ದಶಮಭಾವದಲ್ಲಿರುವ ಗ್ರಹವು ಧನವನ್ನು ಕೊಡುತ್ತದೆ. ಅಲ್ಲಿ ಯಾವ ಗ್ರಹವೂ ಇಲ್ಲದಿದ್ದರೆ ಲಗ್ನ, ಚಂದ್ರ, ಸೂರ್ಯರಿಗೆ ದಶಮಾಧಿಪತಿಗಳು ಇರುವ ನವಾಂಶಾಧಿಪತಿಗಳು ಧನಪ್ರದರಾಗುತ್ತಾರೆಂದು ತಿಳಿಯಬೇಕು. ದಶಮಭಾವದಲ್ಲಿರುವ ಸೂರ್ಯಾದಿ ಗ್ರಹಗಳು ಕ್ರಮವಾಗಿ ತಂದೆ, ತಾಯಿ, ಶತ್ರು, ಮಿತ್ರ, ಭ್ರಾತೃ, ಸ್ತ್ರೀ, ಸೇವಕ ಇವರ ಮೂಲಕ ಧನವನ್ನು ಕೊಡಿಸುತ್ತಾರೆ. ಸೂರ್ಯಾಂಶದಲ್ಲಿದ್ದರೆ ಹುಲ್ಲು, ಕಡ್ಡಿ, ಬಂಗಾರ, ಉಣ್ಣೆ, ಔಷಧ ಮುಂತಾದುವುಗಳಿಂದಲೂ ಧನಪ್ರಾಪ್ತಿಯಾಗುವುದು. ಹಾಗೆಯೇ ಚಂದ್ರಾಂಶದಲ್ಲಿದ್ದರೆ ಕೃಷಿ, ಜಲಜ ವಸ್ತುಗಳು, ಸ್ತ್ರೀಯ ಆಶ್ರಯ ಇವುಗಳಿಂದ ಧನವು ಲಭಿಸುವುದು. ಕುಜಾಂಶದಲ್ಲಿದ್ದರೆ ಧಾತುಗಳು, ಅಸ್ತ್ರ ಶಸ್ತ್ರಗಳು, ಸಾಹಸ ಪ್ರದರ್ಶನ ಇವುಗಳಿಂದ ಜೀವನ ನಡೆಯುವುದು. ಬುಧಾಂಶದಲ್ಲಿ ಕಾವ್ಯ ಶಿಲ್ಪಾದಿಗಳಿಂದಲೂ, ಗುರ್ವಂಶದಲ್ಲಿ ದೇವ ದ್ವಿಜಾಶ್ರಯದಲ್ಲಿಯೂ, ಶುಕ್ರಾಂಶದಲ್ಲಿ ಬೆಳ್ಳಿ, ಗೋವುಗಳು, ರತ್ನ ಇವುಗಳಿಂದಲೂ, ಶನ್ಯಂಶದಲ್ಲಿ ಹಿಂಸಾದಿಗಳು, ನೀಚಾಶ್ರಯ ಮುಂತಾದುವುಗಳಿಂದಲೂ ಜೀವನ ನಡೆಯುವುದು.

೧೭೦-೧೭೧. ಇನ್ನು ರಾಜಯೋಗಗಳ ಲಕ್ಷಣವು ವಿವರಿಸಲ್ಪಡುವುದು. ಕುಜ, ಶನಿ, ಸೂರ್ಯ, ಗುರು ಈ ನಾಲ್ವರಲ್ಲಿ ಮೂವರು ಉಚ್ಚರಾಗಿದ್ದರೆ

ಯಮೇಂದುತುಂಗಗೌ ಲಗ್ನೇ ಷಷ್ಠೇಽರ್ಕಜ್ಞೌ ತುಲಾಜಗೌ ।
ಸಿತಾಸೃಜೌ ಗುರೌ ಕರ್ಕೇ ಸೌರಾಬ್ಜೌ ಲಗ್ನಗೌ ನೃಪಾಃ ॥ ೧೭೨ ॥

ವೃಷೇಂಗೇಬ್ಜೇಽರ್ಕೇಽಬ್ಜಸೌರ್ಯೈಃ ಸುಹೃಜ್ಞಾಯಾಖಗೈರ್ನೃಪಃ ।
ಮಂದೇ ಮೃಗಾಂಗೇ ತ್ರ್ಯರ್ಯಕಾಂಶಸ್ಥೈರಜಾದಿಭಿರ್ನೃಪ ॥ ೧೭೩ ॥

ಸೇಜ್ಯಾಜೇಽಶ್ವೇ ಮೃಗಮುಖೇ ಕುಜೇ ತುಂಗೇಽರ್ಕ್ಷಭಾರ್ಗವೌ ।
ಲಗ್ನೇಽಥ ಸೇಜ್ಯಕರ್ಕೇಽಂಗೇ ಜ್ಞಾಜಶುಕ್ರೈರ್ಭವೋಪಗೈಃ ॥ ೧೭೪ ॥

ಅದು ರಾಜಯೋಗವೆನಿಸುವುದು. ಲಗ್ನವು ಸ್ವನವಾಂಶವುಳ್ಳದ್ದಾಗಿ ಚಂದ್ರ ವರ್ಜಿತಗಳಾದ ೪ ನಾಲ್ಕು, ೫ ಐದು, ೬ ಆರು ಗ್ರಹಗಳಿಂದ ನೋಡಲ್ಪಟ್ಟರೆ ಪ್ರತ್ಯೇಕವಾಗಿ ೨೨ ಇಪ್ಪತ್ತೆರಡು ರಾಜಯೋಗಗಳು ಹುಟ್ಟುತ್ತವೆ. ಶನಿಯು ಕುಂಭದಲ್ಲಿಯೂ, ವೃಷಭದಲ್ಲಿ ಚಂದ್ರನೂ ಇದ್ದು, ಆ ರಾಶಿಗಳೇ ಲಗ್ನವಾಗಿರುವಾಗ ಬುಧ, ಗುರು, ಕುಜ ಇವರು ಮಿಥುನ, ಸಿಂಹ ಮತ್ತು ವೃಶ್ಚಿಕರಾಶಿಗಳಲ್ಲಿರುವಾಗ ಹುಟ್ಟಿದವರು ರಾಜರಾಗುವರು.

೧೭೨–೧೭೩. ಶನಿ ಚಂದ್ರರು ಉಚ್ಚರಾಗಿ ಲಗ್ನದಲ್ಲಿರುವಾಗಲೂ, ಷಷ್ಠರಾಶಿಯಲ್ಲಿ ಸೂರ್ಯ ಬುಧರಿದ್ದು ಶುಕ್ರಾಂಗಾರಕರು ತುಲಾ ಮತ್ತು ಮೇಷಗತರಾಗಿದ್ದಾಗ ಮತ್ತು ಗುರುವು ಕಟಕದಲ್ಲಿದ್ದಾಗ ಜನಿಸಿದವರು ರಾಜಸದೃಶರಾಗುವರು. ಲಗ್ನವು ವೃಷಭವಾಗಿ ಅಲ್ಲಿ ಚಂದ್ರನೂ, ಸಿಂಹದಲ್ಲಿ ಸೂರ್ಯನೂ, ವೃಶ್ಚಿಕದಲ್ಲಿ ಗುರುವೂ, ಕುಂಭದಲ್ಲಿ ಶನಿಯೂ ಈರೀತಿಯಲ್ಲಿ ಗ್ರಹಗಳಿದ್ದರೂ, ಮಕರಲಗ್ನದಲ್ಲಿ ಶನಿ, ಮೀನದಲ್ಲಿ ಚಂದ್ರ, ಮಿಥುನದಲ್ಲಿ ಕುಜ, ಕನ್ಯೆಯಲ್ಲಿ ಬುಧ, ಧನುಸ್ಸಿನಲ್ಲಿ ಗುರು ಈರೀತಿಯಲ್ಲಿದ್ದರೂ ರಾಜಯೋಗವೆಂದು ತಿಳಿಯಬೇಕು.

೧೭೪. ಧನುಸ್ಸಿನಲ್ಲಿ ಗುರು ಚಂದ್ರರೂ, ಮಕರದಲ್ಲಿ ಕುಜ, ಮೀನದಲ್ಲಿ ಬುಧ ಶುಕ್ರರೂ ಹೀಗಿದ್ದರೂ ಅಥವ ಕನ್ಯಾಲಗ್ನವಾಗಿ ಅಲ್ಲಿ ಬುಧ, ಶುಕ್ರರೂ, ಪಂಚಮದಲ್ಲಿ ಕುಜ ಶನಿಗಳೂ, ಕಟಕದಲ್ಲಿ ಗುರುವೂ, ಲಾಭಸ್ಥಾನದಲ್ಲಿ ಬುಧ ಶುಕ್ರರಿದ್ದರೂ ಆ ಜಾತಕನಿಗೆ ರಾಜಯೋಗವಿದೆಯೆಂದು ತಿಳಿಯಬೇಕು.

ಮೇಷೇಽರ್ಕೇ ಭೂಮಿಪಃ ಸೇಂದೌ ವೃಷಭೇ ಬುಧಭಾರ್ಗವೌ ।
ಕಟಕೇ ಗುರುಚಂದ್ರೌ ಚ ರಾಜಯೋಗಪ್ರದಾಯಕೌ ।
ಸಿಂಹಕುಂಭಮೃಗಸ್ಥಾಶ್ಚೇತ್ ಭೂಪೋಽರ್ಕರವಿಭೂಮಿಜಾಃ ॥ ೧೭೫ ॥

ಆರ್ಕೇ ಜೀವೇ ತನೌ ವಾಪಿ ಸೃಪೋಽಥೋ ಕುಜಭಾಸ್ಕರೌ ।
ಧೀಸ್ಥೌ ಗುರ್ವಿಂದುಕವಯೋ ಭೂಪೌ ಸ್ತ್ರ್ಯಗೇ ಬುಧೈರ್ನೃಪಃ ॥ ೧೭೬ ॥

ಮೃಗಾಸ್ಯಲಗ್ನಗೇ ಸೌರೀಜಾಬ್ಜ ಕ್ಷ್ಮಾಹರಯುಃ ಸಯೂಃ ।
ಕವಿಜ್ಞಾ ತುಲಯುಗ್ಮಸ್ಥೌ ನೈ ಭೂಪಃ ಕೀರ್ತಿಮಾನ್ಭವೇತ್ ॥ ೧೭೭ ॥

ಯಸ್ಯ ಕಸ್ಯಾಪಿ ತನಯಃ ಪ್ರೋಕ್ತೈರ್ಯೋಗೈರ್ನೃಪೋ ಭವೇತ್ ।
ವಕ್ಷ್ಯಮಾಣೈರ್ನೃಪಸುತೋ ಜ್ಞೇಯೋ ಭೂಯೋ ಮುನೀಶ್ವರ ॥ ೧೭೮ ॥

೧೭೫. ಮೇಷದಲ್ಲಿ ಸೂರ್ಯ, ವೃಷಭದಲ್ಲಿ ಚಂದ್ರ ಶುಕ್ರ ಬುಧರು, ಕಟಕದಲ್ಲಿ ಗುರು ಚಂದ್ರರಿದ್ದರೂ ರಾಜಯೋಗವೆಂದರಿಯಬೇಕು. ಹಾಗೆಯೇ ರವಿ, ಕುಜ, ಶನಿಗಳು ಕ್ರಮವಾಗಿ ಸಿಂಹ, ಮಕರ, ಕುಂಭರಾಶಿಗಳಲ್ಲಿದ್ದು ಲಗ್ನವು ಉಚ್ಚಗ್ರಹಯುಕ್ತವಾಗಿದ್ದರೂ ರಾಜಯೋಗವುಂಟೆಂದು ತಿಳಿಯಬೇಕು.

೧೭೬. ಶನಿ, ಗುರುಗಳು ಲಗ್ನದಲ್ಲಿದ್ದು ಕುಜ, ರವಿಗಳು ಪಂಚಮದಲ್ಲಿಯೂ, ಗುರು, ಶುಕ್ರ, ಚಂದ್ರರು ತೃತೀಯದಲ್ಲಿಯೂ ಇದ್ದರೆ ರಾಜಯೋಗವಿರುವುದೆಂದು ಹೇಳಿದೆ.

೧೭೭. ಲಗ್ನವು ಧನುಸ್ಸಾಗಿ ಅಲ್ಲಿಯೇ ಶನಿ, ಗುರುಗಳಿದ್ದು ಮೇಷದಲ್ಲಿ ಕುಜನೂ, ವೃಷಭದಲ್ಲಿ ಶುಕ್ರನೂ, ಮಿಥುನದಲ್ಲಿ ಬುಧನೂ ಇದ್ದರೆ ಅದೂ ರಾಜಯೋಗವೆನಿಸುವುದು.

೧೭೮. ಇಲ್ಲಿನವರೆಗೆ ಹೇಳಿದ ರಾಜಯೋಗಗಳಿಂದ ರಾಜವಂಶೀಯನಾಗದಿದ್ದರೂ ಜಾತಕನು ರಾಜನಾಗುವನು. ಮುಂದೆ ಹೇಳುವ ಯೋಗಗಳು ರಾಜಪುತ್ರನಾಗಿದ್ದರೆ ಮಾತ್ರ ಅವನಿಗೆ ಅಧಿಕಾರಪ್ರಾಪ್ತಿ. ಸಾಮಾನ್ಯರಿಗೆ ಇವು ರಾಜಯೋಗಗಳಲ್ಲವೆಂದು ತಿಳಿಯಬೇಕು.

ಸ್ವೋಚ್ಚ ತ್ರಿಕೋಣಭಗತೈಃ ಸ್ತ್ರ್ಯಾದ್ಯೈರ್ಬಲಯುತೈರ್ನೃಪಃ ।
ಸಿಂಹೇಽರ್ಕೇ ಮೇಷಲಗ್ನೇಽಜೇ ಮೃಗೇ ಭೌಮೇ ಘಟೇಽಷ್ಟಮೇ ॥೧೭೯॥

ಚಾಪೇ ಜೀವೇ ಧರಾನಾಥಃ ಸ್ಯಾದಥ ಸ್ವರ್ಕ್ಷಗೇ ಭೃಗೌ ।
ಪಾತಾಲಗೇ ಧರ್ಮಗೇಽಬ್ಜೇ ಶುಭದೃಷ್ಟೇ ಯುತೇ ಮುನೇ ॥ ೧೮೦ ॥

ತ್ರಿಲಗ್ನಭವಗೈಃ ಶೇಷೈರ್ಧರಾಧೀಶಃ ಪ್ರಜಾಯತೇ ।
ಸೌಮ್ಯೇ ವೀರ್ಯಯುತೇಽಂಗಸ್ಥೇ ಬಲಾಢ್ಯೇ ಶುಭಗೇ ಶುಭೇ ॥ ೧೮೧ ॥

ಧರ್ಮಾರ್ಥೋಪಚಯಸ್ಥೈಶ್ಚ ಶೇಷೈರ್ಧರ್ಮಯುತೋ ನೃಪಃ ।
ಮೇಷೂರಣಾಯತನುಗಾಃ ಶಶಿಸೂರ್ಯಜಸೂರಯಃ ॥ ೧೮೨ ॥

---

೧೭೯-೧೮೦. ತಮ್ಮ ಉಚ್ಚಕ್ಷೇತ್ರಗಳಲ್ಲಿಯೂ, ಮೂಲತ್ರಿಕೋಣಸ್ಥಾನಗಳಲ್ಲಿಯೂ, ಕಾಲಾದಿಬಲಯುತರಾದ ಮೂರಕ್ಕೆ ಕಡಿಮೆಯಿಲ್ಲದ ೩ ಮೂರು, ೫ ಐದು, ೪ ನಾಲ್ಕು, ೬ ಆರು, ೭ ಏಳು ಗ್ರಹಗಳಿಂದ ರಾಜವಂಶದವರಿಗೆ ರಾಜಯೋಗವು ಬರುವುದು. ಸಿಂಹದಲ್ಲಿ ರವಿಯೂ, ಮೇಷಲಗ್ನದಲ್ಲಿ ಜನನವೂ, ಮಕರದಲ್ಲಿ ಕುಜನೂ, ಕುಂಭದಲ್ಲಿ ಶನಿಯೂ ಇದ್ದರೆ ಅದು ರಾಜಯೋಗವೆನಿಸುವುದು. ಧನುಸ್ಸಿನಲ್ಲಿ ಗುರುವೂ, ಸ್ವಕ್ಷೇತ್ರಗಳಲ್ಲಿ ಕುಜನೂ ಇದ್ದು, ಶುಕ್ರನು ಚತುರ್ಥದಲ್ಲಿಯೂ, ನವಮದಲ್ಲಿ ಶುಭದೃಷ್ಟಯುತನಾದ ಚಂದ್ರನೂ ಇದ್ದರೆ ಅದೂ ರಾಜಯೋಗವೆಂದು ತಿಳಿಯಬೇಕು.

೧೮೧-೧೮೩. ಎಲ್ಲಾ ಗ್ರಹಗಳೂ ಮೂರು, ಹನ್ನೊಂದು ಮತ್ತು ಲಗ್ನ ಈ ಮೂರು ರಾಶಿಗಳಲ್ಲಿದ್ದರೂ ರಾಜಯೋಗವಾಗುವುದಿಲ್ಲ. ಬುಧನು ವೀರ್ಯಯುತನಾಗಿ ಶುಭಗ್ರಹಗಳೆಲ್ಲಾ ಬಲಿಷ್ಠರಾಗಿದ್ದು ಎರಡು, ಒಂಭತ್ತು ಈ ಮನೆಗಳಲ್ಲಿಯೂ ಮೂರು, ಆರು, ಹತ್ತು, ಹನ್ನೊಂದನೆಯ ಉಪಚಯಸ್ಥಾನಗಳಲ್ಲಿಯೂ ಉಳಿದ ಗ್ರಹಗಳೆಲ್ಲಾ ಇದ್ದರೆ ರಾಜಯೋಗವೆನಿಸುವುದು. ಶನಿ, ಚಂದ್ರ, ಗುರುಗಳು ಕ್ರಮವಾಗಿ ೧೦ ಹತ್ತು, ೧೧ ಹನ್ನೊಂದು, ೧೨ ಹನ್ನೆರಡ

ಜ್ಞಾರೌ ಧನೇ ಸಿತರವೀ ಹಿಬುಕೇ ಭೂಪತಿಸ್ತದಾ ।
ವೃಷೇಽಂಗೇಬ್ಜೋ ಧನಾರಿಸ್ಥೌ ಜೀವಾರ್ಕೀ ಲಾಭಗಾಽಪರೇ ॥ ೧೮೩ ॥

ಸುಖೇ ಗುರುಃ ಖೇ ರವೀಂದೂ ಯಮೋ ಲಗ್ನೇ ಭವೇನ್ನೃಪಃ ।
ಲಗ್ನೇ ವಕ್ರಾಸಿತೌ ಚಂದ್ರೇಜ್ಯಾಸಿತಾರ್ಕಬುಧಾಃ ಕ್ರಮಾತ್ ॥ ೧೮೪ ॥

ಸುಖಾಸ್ತು ಶುಭಖಾಸ್ತಿಸ್ಥಾ ನರೇಶಂ ಜನಯಂತ್ಯಪಿ ।
ಕರ್ಮಲಗ್ನಗಖೇಟಸ್ಯ ದಶಾಯಾಂ ರಾಜ್ಯಸಂಗತಿಃ ॥ ೧೮೫ ॥

ಪ್ರಬಲಸ್ಯ ದಶಾಯಾಂ ವಾ ಶತ್ರುನೀಚಾ ದಿಗಾರ್ತಿದಾಃ ।
ಆಸನ್ನಕೇಂದ್ರದ್ವಯಗೈರ್ವರ್ಗದಾಖ್ಯಃ ಸಕಲಗ್ರಹೈಃ ॥ ೧೮೬ ॥

ನೆಯ ಭಾವದಲ್ಲಿದ್ದು ಬುಧ, ಕುಜರು ದ್ವಿತೀಯದಲ್ಲಿಯೂ, ಶುಕ್ರ, ಸೂರ್ಯರು ಚತುರ್ಥದಲ್ಲಿಯೂ ಇದ್ದಾಗ ಜನಿಸಿದವರು ರಾಜರು ಅಥವ ಧನಿಕರಾಗುವರು. ವೃಷಭದಲ್ಲಿ ಚಂದ್ರನೂ, ಗುರು ಶನಿಗಳು ದ್ವಿತೀಯ ಷಷ್ಠ ಸ್ಥಾನಗಳಲ್ಲಿಯೂ ಉಳಿದವರು ಲಾಭಸ್ಥಾನದಲ್ಲಿಯೂ ಇದ್ದರೆ ಅದೂ ರಾಜಯೋಗವೆನಿಸುವುದು.

೧೮೪-೧೮೫. ನಾಲ್ಕನೆಯ ಸ್ಥಾನದಲ್ಲಿ ಗುರುವೂ, ಹತ್ತರಲ್ಲಿ ರವಿ ಚಂದ್ರರೂ ಲಗ್ನದಲ್ಲಿ ಶನಿಯೂ ಇದ್ದರೆ ಅಥವ ಲಗ್ನದಲ್ಲಿ ಕುಜ ಶನಿಗಳು ಇದ್ದು ಚಂದ್ರ, ಗುರು, ಶುಕ್ರ, ರವಿ, ಬುಧ ಇವರು ಸುಖಸ್ಥಾನದಿಂದ ಶುಭ ಭಾವಗಳಲ್ಲಿದ್ದರೂ ಅದು ರಾಜಯೋಗವೆನಿಸುವುದು. ಈ ರಾಜಯೋಗವು ಯೋಗಕಾರಕರಾದ ಗ್ರಹಗಳ ದಶಾಭುಕ್ತಿಕಾಲಗಳಲ್ಲಿ ಸಂಭವಿಸುತ್ತದೆ. ಯೋಗವು ಪ್ರಬಲವಾಗಿದ್ದು ಗ್ರಹಗಳು ಶತ್ರುಕ್ಷೇತ್ರಗತರಾಗಿದ್ದರೆ, ಸಾಮಾನ್ಯ ಜನ ವರ್ಗಕ್ಕೆ ಮುಖಂಡನೆನಿಸಿ ಈ ಯೋಗಫಲವನ್ನು ಹೊಂದುವನು.

೧೮೬-೧೮೭. ಈಗ ನಾಭಸಯೋಗಗಳ ವಿಚಾರವನ್ನು ನಿರೂಪಿಸುವೆನು :—ಗ್ರಹಗಳು ಜನ್ಮಕಾಲಗಳಲ್ಲಿ ಚಾರವಶದಿಂದ ಸೇರುವ ಯೋಗಗಳಿಗೆ ನಾಭಸಯೋಗಗಳೆಂದು ಹೆಸರು. ಲಗ್ನಕ್ಕೆ ಹತ್ತಿರವಿರುವ ಎರಡು ಕೇಂದ್ರಗಳಲ್ಲಿಯೇ ಎಲ್ಲಾ ಗ್ರಹಗಳೂ ಇದ್ದರೆ ಆಗ ಗದಯೋಗವೆನಿಸುವುದು. ಎಲ್ಲಾ

ತನ್ವಸ್ತಗೈಶ್ಚ ಶಕಟಂ ವಿಹಗೋ ರಾಜ್ಯಬಂಧುಗೈಃ ।
ಶೃಂಗಾಟಕಂ ಧಿಗೌಗಸ್ಥೈರ್ಲಗ್ನಾನ್ಯಸ್ಥೈರ್ಹಲಂ ಮತಂ ॥ ೧೮೭ ॥

ವಜ್ರೋಽಂಗಸ್ಥೇ ಸತ್ಸ್ವಸತ್ಸು ತುರ್ಯಗಸ್ಥೈರ್ಯವೋಽನ್ಯಥಾ ।
ವಿಮಿಶ್ರೈಃ ಕಮಲಂ ಪ್ರಾಹುರ್ವಾಪೀಂ ಕಂಟಕಬಾಹ್ಯಗೈಃ ॥ ೧೮೮ ॥

ಲಗ್ನಾಚ್ಚತುರ್ಥಗೈರ್ಯೂಪಃ ಶರಸ್ತುರ್ಯಾಚ್ಚತುರ್ಥಗೈಃ ।
ದ್ಯೂನಾದ್ವೇದಕ್ಷಗೈಃ ಶಕ್ತಿಂ ದಂಡಂ ಖಾದಿಚತುರ್ಥಗೈಃ ॥ ೧೮೯ ॥

ಲಗ್ನಾತ್ಕ್ರಮಾತ್ಸಪ್ತಭಗೈರ್ನೌಕಾ ಕೂಟಸ್ತು ತುರ್ಯತಃ ।
ಛತ್ರಮಸ್ತಾತ್ಸ್ವಭಾದ್ಯಾಯೋಽನ್ಯಸ್ಮಾದರ್ಧೇಂದುನಾಮಕಃ ॥ ೧೯೦ ॥

ಗ್ರಹಗಳೂ ಲಗ್ನ ಮತ್ತು ಸಪ್ತಮದಲ್ಲಿದ್ದರೆ ಶಕಟಯೋಗವೆನಿಸುವುದು. ಗ್ರಹಗಳೆಲ್ಲಾ ದಶಮ, ಚತುರ್ಥಗಳಲ್ಲಿದ್ದರೆ ಆಗ ವಿಹಗಯೋಗವೆಂದು ತಿಳಿಯಬೇಕು. ಗ್ರಹಗಳು ಒಂಭತ್ತು, ಐದು, ಒಂದು ಈ ರಾಶಿಗಳಲ್ಲಿದ್ದರೆ ಆಗ ಶೃಂಗಾಟಕಯೋಗವೊದಗುವುದು. ಲಗ್ನವನ್ನು ಬಿಟ್ಟು ಎಲ್ಲಾ ಗ್ರಹಗಳೂ ಪರಸ್ಪರ ತ್ರಿಕೋಣರಾಶಿಗಳಲ್ಲಿದ್ದರೆ ಅದನ್ನು ಹಲಯೋಗವೆನ್ನುವರು.

೧೮೮-೧೯೦. ಶಕಟಯೋಗದಂತೆ ಶುಭಗ್ರಹಗಳೂ, ವಿಹಗಯೋಗದಂತೆ ಪಾಪಗ್ರಹಗಳೂ ಸೇರಿದ್ದರೆ ವಜ್ರಯೋಗವೆನಿಸುವುದು. ಇದಕ್ಕೆ ವಿರುದ್ಧವಾಗಿದ್ದರೆ ಯವಯೋಗವಾಗುವುದು. ನಾಲ್ಕು ಕೇಂದ್ರಗಳಲ್ಲಿಯೂ ಶುಭ ಮತ್ತು ಪಾಪಗ್ರಹಗಳು ಮಿಶ್ರರಾಗಿ ಸೇರಿದ್ದರೆ ಕಮಲಯೋಗವೆಂತಲೂ, ಅದೇ ಗ್ರಹಗಳು ಕೇಂದ್ರಾತಿರಿಕ್ತಸ್ಥಳಗಳಲ್ಲಿ ಸೇರಿದ್ದರೆ ವಾಪೀಯೋಗವೆಂತಲೂ ವ್ಯವಹರಿಸುವರು. ಹಾಗೆಯೇ ಆ ಗ್ರಹಗಳೇ ಲಗ್ನ, ದ್ವಿತೀಯ, ತೃತೀಯ ಮತ್ತು ಚತುರ್ಥರಾಶಿಗಳಲ್ಲಿದ್ದರೆ ಯೂಪಯೋಗವೆನ್ನುವರು. ನಾಲ್ಕು, ಐದು, ಆರು, ಏಳು ಈ ಸ್ಥಾನಗಳಲ್ಲಿ ಗ್ರಹಗಳು ಮಿಶ್ರವಾಗಿದ್ದರೆ ಶರಯೋಗ ಅಥವ ಇಷುಯೋಗವೆನಿಸುವುದು. ಏಳು, ಎಂಟು, ಒಂಭತ್ತು, ಹತ್ತು ಈ ಮನೆಗಳಲ್ಲಿ ಎಲ್ಲಾ ಗ್ರಹಗಳೂ ಇದ್ದರೆ ಶಕ್ತಿಯೋಗವೆಂದು ಕರೆಯುವರು. ಹತ್ತು, ಹನ್ನೊಂದು, ಹನ್ನೆರಡು ಮತ್ತು ಒಂದು ಈ ರಾಶಿಗಳಲ್ಲಿ ಎಲ್ಲಾ ಗ್ರಹಗಳೂ

ಲಗ್ನಾದೇಕಾಂತರಗತೈಶ್ಚಕ್ರಮರ್ಥಾತ್ಸರಿತ್ಪತಿಃ ।
ಸಪ್ತಸ್ಥಾನೇಷು ವೀಣಾದ್ಯಾಃ ಸಮುಸಪ್ತರ್ಕ್ಷಸಂಸ್ಥಿತೈಃ ॥ ೧೯೧ ॥

ವೀಣಾ ದಾಮುಸಾಶಕೇದಾರ ಭೂಶೂಲಯುಗಗೋಲಕಾಃ ।
ಗ್ರಹೈಃ ಸರ್ವೈರ್ಶ್ವರಭಗೈ ರಾಜಯೋಗಃ ಪ್ರಕೀರ್ತಿತಃ ॥ ೧೯೨ ॥

ಸ್ಥಿರಸ್ಥೈರ್ಮುಸಲಂ ನಾಮ ಚರಸ್ಥೈ ರಜ್ಜುಸಂಜ್ಞಕಃ ।
ದ್ವಿಸ್ವಭಾವಗತೈಃ ಸರ್ವೈರ್ನಲಯೋಗಃ ಪ್ರಕೀರ್ತಿತಃ ।
ಮಾಲಾ ಕೇಂದ್ರಸ್ಥಿತೈಸ್ಸೌಮ್ಯೈಃ ಪಾಪೈಃ ಸರ್ಪ ಉದಾಹೃತಃ ॥ ೧೯೩ ॥

ಇದ್ದರೆ ಅದನ್ನು ದಂಡಯೋಗವೆನ್ನುವರು. ಒಂದೊಂದು ಕೇಂದ್ರದಿಂದಲೂ ಕ್ರಮವಾದ ಏಳು ರಾಶಿಗಳಲ್ಲಿ ಸರ್ವಗ್ರಹಗಳೂ ಇದ್ದರೆ ನಾಲ್ಕು ಕೇಂದ್ರಗಳಿಂದಲೂ ನೌಕ, ಕೂಟ, ಛತ್ರ, ಚಾಪ ಎಂಬ ನಾಲ್ಕು ಯೋಗಗಳು ಹುಟ್ಟುವುವು.

೧೯೧-೧೯೩. ಲಗ್ನಾತ್ ದ್ವಿತೀಯ ಸ್ಥಾನದಿಂದ ಒಂದು ಮನೆಯನ್ನು ಬಿಟ್ಟು, ಒಂದು ಮನೆಯಲ್ಲಿ ಒಟ್ಟು ಆರು ರಾಶಿಗಳಲ್ಲಿ ಏಳು ಗ್ರಹಗಳಿದ್ದರೆ ಅದನ್ನು ಸಮುದ್ರಯೋಗವೆಂದು ಹೇಳಿರುವರು. ಸೂರ್ಯಾದಿ ಸಪ್ತಗ್ರಹಗಳೂ, ಒಬ್ಬರ ಜತೆಯಲ್ಲೊಬ್ಬರು ಸೇರದ ಸಾಲಾಗಿದ್ದರೆ ವೀಣಾಯೋಗವೆಂದೂ, ಆರು ರಾಶಿಗಳಲ್ಲಿ ಏಳು ಗ್ರಹಗಳಿದ್ದರೆ ದಾಮನೀಯೋಗವೆಂದೂ, ಐದು ರಾಶಿಗಳಲ್ಲಿದ್ದರೆ, (ಅಂದರೆ ಏಳು ಗ್ರಹಗಳೂ ಐದು ರಾಶಿಗಳಲ್ಲಿದ್ದರೆ) ಪಾಶಯೋಗವೆಂದೂ, ಅದೇ ಏಳು ಗ್ರಹಗಳು ನಾಲ್ಕೇ ರಾಶಿಗಳಲ್ಲಿದ್ದರೆ ಕೇದಾರಯೋಗವೆಂದೂ, ಮೂರು ರಾಶಿಗಳಲ್ಲೇ ಎಲ್ಲಾ ಗ್ರಹಗಳೂ ಇದ್ದರೆ ಶೂಲಯೋಗವೆಂದೂ, ಎರಡು ರಾಶಿಗಳಲ್ಲೇ ಗ್ರಹಗಳೆಲ್ಲಾ ಇದ್ದರೆ ಯುಗಯೋಗವೆಂದೂ, ಒಂದೇ ರಾಶಿಯಲ್ಲಿ ಏಳು ಗ್ರಹಗಳೂ ಇದ್ದರೆ ಗೋಳಯೋಗವೆಂದೂ ಸಂಜ್ಞೆಗಳಿರುವುವು. ಸ್ಥಿರರಾಶಿಗಳಲ್ಲೇ ಎಲ್ಲಾ ಗ್ರಹಗಳೂ ಇದ್ದರೆ ಮುಸಲಯೋಗವೆನಿಸುವುದು. ಅದೇ ಗ್ರಹಗಳು ಚರರಾಶಿಗಳಲ್ಲಿದ್ದರೆ ರಜ್ಜುಯೋಗವಾಗುವುದು. ಸಪ್ತಗ್ರಹಗಳೂ ದ್ವಿಸ್ವಭಾವರಾಶಿಗಳಲ್ಲೇ ಇದ್ದರೆ ನಲಯೋಗವೆನಿಸುವುದು. ಕೇಂದ್ರಸ್ಥಾನಗಳಲ್ಲಿ ಮಾತ್ರ ಗ್ರಹಗಳೆಲ್ಲಾ ಇದ್ದರೆ ಆಗ ಮೂಲಾಯೋಗವಾಗುವುದು. ಪಾಪಗ್ರಹಗಳು ಮಾತ್ರ ಕೇಂದ್ರಸ್ಥಾನಗಳಲ್ಲಿದ್ದರೆ ಅವನ್ನು ಸರ್ಪಯೋಗವೆಂದು ವ್ಯವಹರಿಸುವರು.

ಅಸೂಯಾಧ್ವರುಚೀ ರಜ್ಜ್ವಾಂ ಮುಸಲೇ ಧನಮಾನಯುಕ್ ।
ವ್ಯಂಗಾ ಸ್ಥಿರಾಶ್ಚ ನಲಜಾ ಭೋಗೀ ಸ್ರಗ್ವೀ ಹಿ ಜೋऽರ್ದಿತಃ ॥ ೧೯೪ ॥

ವೀಣೋತ್ಥೋऽತಿನಿಪುಣೋ ಗೀತನೃತ್ಯರುಚಿರ್ಭೃಶಂ ।
ದಾತಾ ಸಮೃದ್ಧೋ ದಾಮೋತ್ಥಃ ಪಾಶಜೋ ಧನಶೀಲಯುಕ್ ॥ ೧೯೫ ॥

ಕೇದಾರೋತ್ಥಃ ಕೃಷಿಕರಃ ಶೂಲೇ ಶೂರೋऽಕ್ಷತೋ ಧನಃ ।
ಯುಗಂ ಪಾಷಂಡಯುಗ್ಗೋಲೇ ವಿಧನೋ ಮಲಿನಸ್ತಥಾ ॥ ೧೯೬ ॥

ಭೂಪವಂದ್ಯಪದಶ್ಚಕ್ರೇ ಸಮುದ್ರೇ ನೃಪಭೋಗಯುಕ್ ।
ಸುಭಗಾಂಗಶ್ಚಾರ್ಧಚಂದ್ರಾತ್ಸ್ವಮೀ ಶೂರಶ್ಚ ಚಾಮರಾತ್ ॥ ೧೯೭ ॥

ಮಿತ್ರೋಪಕಾರಕೃಚ್ಛತ್ರೇ ಕೂಟೇ ಚಾನೃತಬಂಧರಾಟ್ ।
ನೌಜಃ ಸುಕೀರ್ತಿಃ ಸುಖಭಾಕ್ ಮಾನವೋ ಭವತಿ ಧ್ರುವಂ ॥ ೧೯೮ ॥

---

೧೯೪-೧೯೫. ರಜ್ಜುಯೋಗದಲ್ಲಿ ಹುಟ್ಟಿದವನು ತುಂಬಾ ಅಸೂಯಾಪರನು ಮತ್ತು ಮಾರ್ಗಗಮನಾಭಿಲಾಷೆಯುಳ್ಳವನು. ಮುಸಲಯೋಗದಲ್ಲಿ ಜನಿಸಿದವನಿಗೆ ಧನ, ಮಾನ ಇವುಗಳು ಲಭಿಸುತ್ತವೆ. ನಲಯೋಗದಲ್ಲಿ ಹುಟ್ಟಿದವರು ಅಂಗಹೀನರಾಗಿ ಸ್ಥಿರಬುದ್ಧಿಯುಳ್ಳವರಾಗುವರು. ಸರ್ಪಯೋಗದಲ್ಲಿ ಹುಟ್ಟಿದವರು ಭೋಗಿಗಳಾಗುವರು. ವೀಣಾಯೋಗದಲ್ಲಿ ಹುಟ್ಟಿದವನು ತುಂಬಾ ನಿಪುಣನಾಗುವನು ಮತ್ತು ಗೀತವಾದ್ಯಾದಿಗಳಲ್ಲಿ ಇವನಿಗೆ ಆಸಕ್ತಿಯುಂಟಾಗುವುದು. ದಾಮಯೋಗಜಾತನು ದಾನಶೀಲನಾಗುವನು. ಪಾಶಯೋಗದಿಂದ ಧನ, ಶೀಲ, ಇವುಗಳು ಚೆನ್ನಾಗಿ ಲಭಿಸುವುವು.

೧೯೬-೧೯೯. ಕೇದಾರಯೋಗದಲ್ಲಿ ಜನಿಸಿದವನು ಕೃಷಿಯಿಂದ ಜೀವಿಸುವನು. ಶೂಲಯೋಗದಲ್ಲಿ ಹುಟ್ಟಿದವನು ಶೂರನಾಗುವನು. ಯುಗಯೋಗ ಸಂಜಾತನು ನಪುಂಸಕನಾಗುವನು. (ಪಾಷಂಡಿಯಾಗುವನು.) ಗೋಲಯೋಗದಲ್ಲಿ ಹುಟ್ಟಿದವನು ದರಿದ್ರನೂ, ಕೊಳಕನೂ ಆಗುವನು. ಚಕ್ರಯೋಗದಲ್ಲಿ ಜನಿಸಿದವನು ರಾಜವಂದ್ಯನಾಗುವನು. ಸಮುದ್ರಯೋಗದಲ್ಲಿ ಹುಟ್ಟಿದವನು ರಾಜಭೋಗವನ್ನು ಪಡೆಯುವನು. ಅರ್ಧಚಂದ್ರಯೋಗದಲ್ಲಿ ಜನಿಸಿ

**ತ್ಯಾಗೀ ಯಜ್ವಾತ್ಮವಾನ್ಯೂಥೇ ಹಿಂಸ್ರೋ ಗುಹ್ಯಾಧಿಪಃ ಶರೈಃ ।**
**ಶಕ್ತೌ ನೀಚೋಽಲಸೋ ನಿಸ್ವೋ ದಂಡೇ ಪ್ರಿಯವಿಯೋಗಭಾಕ್ ॥ ೧೯೯ ॥**

**ವ್ಯರ್ಕೈಃ ಸ್ವಾಂತ್ಯೋಭಯಗತೈಃ ಖೇಟೈಃ ಸ್ಯಾತ್ಸುನಫಾನಫಾ ।**
**ಧುರಧುರಾ ಚೈವ ವಿಧೋರ್ಜ್ಞೇಯಃ ಕೇಮದ್ರುಮೋಽನ್ಯಥಾ ॥ ೨೦೦ ॥**

**ಸ್ವೋಪಾರ್ಜಿತಾರ್ಥಭುಗ್ದಾತಾ ಸುನಫಾಯಾಂ ಧನೀ ಸುಖೀ ।**
**ನೀರೋಗಃ ಶೀಲವಾನ್ಖ್ಯಾತಃ ಸುವೇಷಶ್ಚಾನಫಾಭವಃ ॥ ೨೦೧ ॥**

ದವನು ಸುಂದರಾಂಗನಾಗುವನು. ಚಾಮರಯೋಗದಲ್ಲಿ ಹುಟ್ಟಿದರೆ ಸುಖಿಯೂ, ಶೂರನೂ ಆಗುವನು. ಛತ್ರಯೋಗದಲ್ಲಿ ಜನಿಸಿದರೆ ಮಿತ್ರರಿಗೆ ಉಪಕಾರಿಯಾಗುವನು. ಕೂಟಯೋಗಜಾತನು ಸುಳ್ಳು ಹೇಳುವವನಾಗುತ್ತಾನೆ. ನೌಕಾಯೋಗದಲ್ಲಿ ಹುಟ್ಟಿದವನು ಕೀರ್ತಿಶಾಲಿಯಾಗುವನು. ಯೂಥಯೋಗದಲ್ಲಿ ಜನಿಸಿದವನು ತ್ಯಾಗಿಯಾಗಿರುವನು. ಶರಯೋಗದಿಂದ ಹಿಂಸ್ರಜಂತುಗಳನ್ನು ಕೊಲ್ಲುವವರಿಗೆ ರಾಜನಾಗುವನು. ಶಕ್ತಿಯೋಗವು ನೀಚನನ್ನಾಗಿಯೂ, ಆಲಸನನ್ನಾಗಿಯೂ ಮಾಡುವುದು. ದಂಡಯೋಗವುಳ್ಳವನು ದರಿದ್ರನಾಗಿ ಪ್ರಿಯಾವಿರಹಿತನಾಗುವನು.

೨೦೦-೨೦೧. ಸೂರ್ಯನನ್ನು ಬಿಟ್ಟು ಚಂದ್ರನಿಗೆ ದ್ವಿತೀಯ, ದ್ವಾದಶಗಳಲ್ಲಿರುವ ಕುಜಾದಿ ಪಂಚಗ್ರಹಗಳಿಂದ ಸುನಫಾದಿಯೋಗಗಳು ಹುಟ್ಟುತ್ತವೆ. ಚಂದ್ರನಿಗೆ ದ್ವಿತೀಯದಲ್ಲಿ ತಾರಾಗ್ರಹವಿದ್ದರೆ ಸುನಫಾಯೋಗವುಂಟಾಗುವುದು. ದ್ವಾದಶದಲ್ಲಿ ತಾರಾಗ್ರಹವಿದ್ದರೆ ಅನಫಾಯೋಗವುಂಟಾಗುವುದು. ದ್ವಿತೀಯ ಮತ್ತು ದ್ವಾದಶ ಎರಡು ಕಡೆಯಲ್ಲಿಯೂ ತಾರಾಗ್ರಹವಿದ್ದರೆ ಧುರಧುರಾಯೋಗವು ಹುಟ್ಟುವುದು. ಮೂರು ರೀತಿಯಲ್ಲಿಯೂ ಅಂದರೆ ದ್ವಿತೀಯ, ದ್ವಾದಶ ಮತ್ತು ದ್ವಿತೀಯ, ದ್ವಾದಶ ಈರೀತಿ ಗ್ರಹಗಳಿಲ್ಲದಿದ್ದರೆ ಆಗ ಕೇಮದ್ರುಮಯೋಗವುಂಟಾಗುವುದೆಂದು ತಿಳಿಯಬೇಕು. ಕೇಮದ್ರುಮ ಮತ್ತು ಸುನಫಾಯೋಗದಲ್ಲಿ ಜನಿಸಿದವನು ತ್ಯಾಗಿ, ಭೋಗಿ ಅಲ್ಲದೆ ಸ್ವಯಾರ್ಜಿತವಾದ ದ್ರವ್ಯದಿಂದ ಜೀವಿಸುವವನೂ ಆಗುವನು. ಅನಫಾಯೋಗೋದ್ಭವನು ನೀರೋಗಿಯಾಗಿ (ರೋಗರಹಿತನಾಗಿ) ಸಚ್ಚರಿತ್ರನೆನಿಸುವನು. ಧುರಧುರಾಯೋಗದಲ್ಲಿ

ಭೋಗೀ ಸುಖೀ ಧನೀ ದಾನೀ ತ್ಯಾಗೀ ಧುರಧುರೋದ್ಭವಃ ।
ಕೇಮದ್ರುಮೇಽತಿಮಲಿನೋ ದುಃಖೀ ನೀಚೋಽಥ ನಿರ್ಧನಃ ॥ ೨೦೨ ॥

ಯಂತ್ರಾಶ್ಮಕರ್ಮಾಭಿರುಚಿರರ್ಕಶ್ಚಂದ್ರಯುತೋ ಯದಿ ।
ಭೌಮಯುಕ್ತೇ ಯದಾ ಸೂರ್ಯೇ ಪಾಪಿಷ್ಠಂ ಕುರುತೇ ಧ್ರುವಂ ॥ ೨೦೩ ॥

ಬುಧಯೋಗೋಽತಿನಿಪುಣಂ ಗುರುಯೋಗಸ್ತು ಕ್ರೂರಿಣಂ ।
ಅನ್ಯಕಾರ್ಯರತಂ ಚೈವ ಕುರುತೇ ತೀಕ್ಷ್ಣದೀಧಿತಿಃ ॥ ೨೦೪ ॥

ಶಸ್ತ್ರಾಗಾರಸ್ಯ ಭರಣಂ ಕುರುತೇ ಶುಕ್ರಯೋಗಯುಕ್ ।
ಸಮಂದೋ ಧಾತುಕುಶಲಂ ತಥಾ ಭಾಂಡವಿದಂ ಮುನೇ ॥ ೨೦೫ ॥

---

ಹುಟ್ಟಿದವನು ತ್ಯಾಗಿಯೂ, ಸುಖಿಯೂ, ಧನಿಕನೂ ಮತ್ತು ದಾನಶೀಲನೂ ಆಗುವನು. ಕೇಮದ್ರುಮಯೋಗದಲ್ಲಿ ಹುಟ್ಟಿದವನು ಅತಿ ಮಲಿನನಾಗಿ ದರಿದ್ರನಾಗುವನು.

೨೦೩-೨೦೪. ಜಾತಕದಲ್ಲಿ ಸೂರ್ಯನು ಚಂದ್ರನಿಂದ ಕೂಡಿದ್ದರೆ ಯಂತ್ರ ಮತ್ತು ಕಲ್ಲು ಈ ಕೆಲಸಗಳಲ್ಲಿ ಅಭಿರುಚಿಯುಳ್ಳವನಾಗುವನು. ಕುಜನಿಂದ ಯುಕ್ತನಾಗಿದ್ದರೆ ಪಾಪಿಷ್ಠನಾಗಿಯೂ, ಬುಧನಿಂದ ಕೂಡಿದ್ದರೆ ನಿಪುಣನಾಗಿಯೂ ಆಗುವನು. ಗುರುವಿನೊಡಗೂಡಿದ ಸೂರ್ಯನು ಕ್ರೂರನನ್ನಾಗಿಯೂ, ಅನ್ಯಕಾರ್ಯನಿರತನನ್ನಾಗಿಯೂ ಮಾಡುವನು. ಶುಕ್ರಸಹಿತನಾದ ಸೂರ್ಯನು ಶಸ್ತ್ರಾಗಾರ ರಕ್ಷಕನನ್ನಾಗಿಯೂ, ಶನಿಸಹಿತನಾಗಿದ್ದರೆ ಧಾತುಕುಶಲಿಯನ್ನಾಗಿಯೂ ಮತ್ತು ಕುಂಬಾರನ ಕೆಲಸದಲ್ಲಿ ಆಸಕ್ತಿಯುಳ್ಳವನನ್ನಾಗಿಯೂ ಮಾಡುವನು.

೨೦೫-೨೦೬. ಚಂದ್ರನು ಕುಜಸಂಬಂಧಿಯಾದರೆ ದ್ರವ್ಯಗಳನ್ನು ಬದಲಾಯಿಸುವುದು, ಒತ್ತೇ ಇಡುವುದೂ (ಅಡವು ಇಡುವುದೂ), ಸ್ತ್ರೀ ವಿಕ್ರಯ ಮುಂತಾದ ಕಾರ್ಯಗಳಲ್ಲಿ ತೊಡಗುವನು. ಬುಧಯುಕ್ತನಾದರೆ (ಚಂದ್ರನು) ಪ್ರಿಯವಾದಿಯಾಗುವನು. ಗುರುಯುಕ್ತನಾದರೆ ಶತ್ರುಸಂಹಾರಕನಾಗುವನು.

ಕುಟಿಸ್ಥಾಕ್ಯಶವಪಣ್ಯಾದಂ ಸಾಸ್ಯಗಿಂದುಃ ಪ್ರಸೂದ್ವಿಷಂ ।
ಕುರ್ಯಾತ್ಸಜ್ಞೋಽರ್ಥನಿಪುಣಂ ನಮ್ರಂ ಸತ್ಕೀರ್ತಿಸಂಯುತಂ ॥ ೨೦೬ ॥

ಸೇಜ್ಯೋ ಸ್ಥಿರವಯಂ ವಂಶ್ಯಂ ವಿಕ್ರಾಂತಂ ಚ ಸಮರ್ಥಿನಂ ।
ಸನಿತೋ ಸುತವೇತ್ತಾರಂ ಸಾರ್ಕಿಃ ಪೌನರ್ಭವಂ ಮುನೇ ।
ಆರೇ ಸಜ್ಞೇ ಬಾಹುಯೋಧೀ ಪುರಾಧ್ಯಕ್ಷಃ ಸಗೀಷ್ಪತೌ ॥ ೨೦೭ ॥

ಸಶುಕ್ರೇ ದ್ಯೂತವಿಕ್ರಯೋ ನೃತೀ ದ್ಯೂತೀ ಸಮಂವಕೇ ।
ಸೇಜ್ಯೇ ಜ್ಞೇ ನೃತ್ಯಗೀತಾಢ್ಯೋ ಮಾಯಾದಕ್ಷಃ ಸಭಾರ್ಗವೇ ।
ಸಮಂದೇ ಲುಬ್ಧಕಃ ಕ್ರೂರೋ ನರೋ ಭವತಿ ನಾರದ ॥ ೨೦೮ ॥

ಸಶುಕ್ರೇ ವಾಕ್ಪತೌ ವಿದ್ವಾನ್ಸಾಸಿತೇನ್ನ ಘಟಂಕರಃ ।
ಕವೌ ಸಮಂದೇಽಧಿಕಾರಭೂಮ್ಯಾಶ್ರಯಯುತೋ ಧನೀ ॥ ೨೦೯ ॥

---

ಮತ್ತು ಕುಲಮುಖ್ಯನಾಗುವನು. ಶುಕ್ರನೊಡಗೂಡಿದ ಚಂದ್ರನು ವಸ್ತ್ರ ನಿರ್ಮಾಣಾದಿ ಕುಶಲವಿದ್ಯೆಗಳಲ್ಲಿ ಪರಿಣತನನ್ನಾಗಿ ಮಾಡುವನು. ಜಾತಕನು ಶನಿಯೊಡನಿರುವ ಚಂದ್ರನಿಂದ ಪುನರ್ಭೂಸುತನಾಗುವನು. (ಪುನರ್ಭೂಸುತನೆಂದರೆ ಎರಡನೆಯ ಮದುವೆ ಮಾಡಿಕೊಂಡ ಹೆಂಡತಿಯಲ್ಲಿ ಹುಟ್ಟಿದವನು.)

೨೦೭-೨೦೯. ಕುಜನು ಬುಧಯುಕ್ತನಾಗಿದ್ದರೆ ವರ್ತಕನಾಗುವನು ಮತ್ತು ಮಲ್ಲಯುದ್ಧದಲ್ಲಿ ಸಮರ್ಥನಾಗುವನು. ಗುರುಯುಕ್ತನಾಗಿದ್ದರೆ ಪುರಾಧ್ಯಕ್ಷನಾಗುವನು. ಶುಕ್ರಸಹಿತನಾದರೆ ದ್ಯೂತಾಸಕ್ತನಾಗುವನು. ಶನಿಸಂಬಂಧಿಯಾಗಿದ್ದರೆ ಅನೃತವಾದಿಯಾಗುತ್ತಾನೆ.

ಬುಧನು ಗುರುಸಂಬಂಧಿಯಾಗಿದ್ದರೆ ನೃತ್ಯ, ಗೀತಾದಿಗಳಲ್ಲಿ ಮನಸ್ಸುಂಟಾಗುವುದು. ಶುಕ್ರಸಂಬಂಧಿಯಾದರೆ ಮಾಯಾವಿದ್ಯೆಯಲ್ಲಿ ಅತಿನಿಪುಣನಾಗುವನು. ಶನಿಯುಕ್ತನಾಗಿದ್ದರೆ ಲುಬ್ಧಕನೂ, (ಜಿಪುಣ) ಕ್ರೂರನೂ ಆಗುವನು.

ಗುರುವು ಶುಕ್ರಯುಕ್ತನಾಗಿದ್ದರೆ ವಿದ್ವಾಂಸನಾಗುವನು. ಶನಿಸಹಿತನಾಗಿದ್ದರೆ ಅಘಟಿತಘಟನಾಸಾಮರ್ಥ್ಯವುಳ್ಳವನಾಗುವನು. (ಅಂದರೆ ಯಾರು ಮಾಡಲು ಸಾಧ್ಯವಿಲ್ಲದ ಕೆಲಸಗಳನ್ನೂ ಸಹ ಮಾಡಿಬಿಡುವನೆಂದು ಭಾವವು.)

ಶುಕ್ರನು ಶನಿಯಿಂದ ಕೂಡಿದ್ದರೆ ಭೂಮಿ, ಅಧಿಕಾರ ಮತ್ತು ಹಣ ಇವುಗಳಿಂದ ಕೂಡಿರುವನು.

ಏಕಸ್ಥೈಶ್ಚತುರಾದ್ಯೈಸ್ತು ಬಲಿಷ್ಠೈಃ ಖಚರೈಃ ಪೃಥಕ್ ।
ಕುಜಜ್ಞೇಜ್ಯಾಬ್ಜಶುಕ್ರಾರ್ಕಿಸೂರ್ಯೈಃ ಪರಿವ್ರಜೇನ್ನರಃ ॥ ೨೧೦ ॥

ಶಾಕ್ಯಾಜೀವಕವೃದ್ಧಾರ್ಥಿಚರಕಾಖಫಲಾಶನಃ ।
ತತ್ಸ್ವಾಮಿಭಿಃ ಪರಿಜಿತೈಃ ಪ್ರವ್ರಜ್ಯಾಪ್ರಚ್ಯುತಿರ್ಭವೇತ್ ॥ ೨೧೧ ॥

ಅದೀಕ್ಷಿತಾಲ್ಪಾಸ್ತಗತೈಃ ಸಬಲೈಸ್ತತ್ಸ್ವಭಕ್ತಯಃ ।
ಜನ್ಮಪೋಽನ್ಯೈರ್ಯದ್ಯದೃಷ್ಟೋ ಮಂದಂ ಪಶ್ಯತಿ ನಾರದ ॥ ೨೧೨ ॥

ಮಂದೋ ವಾ ಜನ್ಮಪಂ ನಷ್ಟಂ ತಥಾ ಚ ಮಂದಕಾಗತೇ ।
ಭೌಮಾರ್ಕಾಂಶೇ ಸರದೃಷ್ಟೇ ಚಂದ್ರೇ ವಾ ದೀಕ್ಷಿತೋ ಭವೇತ್ ॥ ೨೧೩ ॥

ಸುರೂಪೋ ಭೂಷಿತೋಽಶ್ವಿನ್ಯಾಂ ದಕ್ಷಃ ಸತ್ಯವಚಾ ಯಮೇ ।
ಬಹುಭುಕ್ಪರದಾರರತಶ್ಚಾಗ್ನೌ ಸ್ಥಿರಧೀಃ ಪ್ರಿಯವಾಕ್ತಥಾ ॥ ೨೧೪ ॥

---

೨೧೦-೨೧೩. ಒಂದೇ ರಾಶಿಯಲ್ಲಿ ಬಲಿಷ್ಠರಾದ ನಾಲ್ಕು, ಐದು, ಆರು, ಏಳು ಈ ಸಂಖ್ಯೆಯ ಗ್ರಹಗಳು ಸೇರುವುದರಿಂದ ಜಾತಕನು ಸಂನ್ಯಾಸಿಯಾಗುವನೆಂದು ತಿಳಿಯಬೇಕು. ಅದರಲ್ಲಿಯೂ ಅತಿಬಲಿಷ್ಠರಾದ ಕುಜ, ಬುಧ, ಗುರು, ಚಂದ್ರ, ಶುಕ್ರ ಮತ್ತು ಶನಿ ಈ ಗ್ರಹಗಳಿಂದ ಕ್ರಮವಾಗಿ ಬೌದ್ಧದೀಕ್ಷೆ, ವೈಷ್ಣವದೀಕ್ಷೆ, ಸಂನ್ಯಾಸ, ಕಾಪಾಲಿಕಾದಿ ಶೈವದೀಕ್ಷೆ, ಚಕ್ರಧರ ಸನ್ಯಾಸವೆಂಬ ಚರಕದೀಕ್ಷೆ, ನಗ್ನದೀಕ್ಷೆ, ವಾನಪ್ರಸ್ಥದೀಕ್ಷೆ ಎಂಬ ಪ್ರವ್ರಜ್ಯಾಯೋಗಗಳು ಲಭಿಸುವುವು. ಆದರೆ ಈ ಗ್ರಹಗಳು ದುರ್ಬಲರಾದಾಗ ಆ ಪ್ರವ್ರಜ್ಯೆಯು (ಸಂನ್ಯಾಸವು) ಚ್ಯುತಿಹೊಂದುವುದು. ಮೇಲೆ ಹೇಳಿದ ಗ್ರಹಗಳು ಅಸ್ತರಾಗಿದ್ದರೆ ಅವರು ದೀಕ್ಷೆಯನ್ನು ಪಡೆಯದೇ ಆ ದೀಕ್ಷೆಯನ್ನು ಪಡೆದಿರುವವರ ಹತ್ತಿರ ವಿನಯದಿಂದ ಸೇರುವರು. ಶನಿಯು ಲಗ್ನಾಧಿಪತಿಯನ್ನು ನೋಡಿದರೂ, ಚಂದ್ರನು ಶನಿಯನ್ನು ನೋಡಿದರೂ, ಚಂದ್ರನು ಕುಜ ಅಥವ ಸೂರ್ಯರ ಅಂಶದಲ್ಲಿದ್ದು ಶನಿಯಿಂದ ನೋಡಲ್ಪಟ್ಟರೂ ತಾನೇ ಸಂನ್ಯಾಸದೀಕ್ಷೆಯನ್ನು ಹೊಂದುವನು.

೨೧೪-೨೨೦. ಇನ್ನು ಮುಂದೆ ನಕ್ಷತ್ರದಲ್ಲಿ ಜನಿಸಿದ ಫಲವನ್ನು ನಿರೂಪಣೆ ಮಾಡುವೆನು :—

ಬ್ರಾಹ್ಮೇ ಧನೀ ಮೃಗೇ ಭೋಗೀ ರೌದ್ರೇ ಹಿಂಸ್ರಃ ಶಠೋಽಘಕೃತ್ ।
ದಾಂತೋ ರೋಗೀ ಶುಭೋಽದಿತ್ಯಾಂ ಪುಷ್ಯಜನ್ಮಾ ಕವಿಃ ಸುಖೀ ॥ ೨೧೫ ॥

ಧೂರ್ತಃ ಶಠಃ ಕೃತಘ್ನೋಽಹೌ ಪಾಪಃ ಸರ್ವಾಶನೋ ಭವೇತ್ ।
ಪೈತ್ರೇ ಭೋಗೀ ಧನೀ ಭಕ್ತೋ ದಾತಾ ಪ್ರಿಯವಚಾ ಭಗೇ ॥ ೨೧೬ ॥

ವಿದ್ಯಾಧನಶ್ಚ ಸುಭಗಃ ಭೋಗೀ ಸುಖೀ ಚೋತ್ತರೇಚಾರ್ಯ್ಮೇ ।
ಚಿತ್ರಾಂಬರಃ ಸುದೃಕ್ತ್ವಾಷ್ಟ್ರೇ ನ ಚ ಧರ್ಮದಯಾಪರಃ ॥ ೨೧೭ ॥

ಅಶ್ವಿನೀನಕ್ಷತ್ರದಲ್ಲಿ ಜನಿಸಿದವನು ಸುರೂಪಿಯೂ ಮತ್ತು ಅಲಂಕಾರ ಪ್ರಿಯನೂ ಆಗುವನು. ಭರಣೀನಕ್ಷತ್ರದಲ್ಲಿ ಜನಿಸಿದವನು ವಕ್ತನೂ ಮತ್ತು ಸತ್ಯವಾದಿಯೂ ಆಗುವನು. ಕೃತ್ತಿಕಾನಕ್ಷತ್ರ ಸಂಜಾತನು ಬಹಳ ಭೋಗವುಳ್ಳವನು ಮತ್ತು ಪರದಾರರಲ್ಲಿ ಸದಾ ಪ್ರೀತಿಯುಳ್ಳವನು. ರೋಹಿಣೀ ನಕ್ಷತ್ರದಲ್ಲಿ ಹುಟ್ಟಿದವನು ಸ್ಥಿರವಾದ ಬುದ್ಧಿಯುಳ್ಳವನಾಗಿಯೂ ಯಾವಾಗಲೂ ಹಿತವನ್ನೇ ನುಡಿಯುವನಾಗಿಯೂ ಆಗುವನು. ಮೃಗಶಿರಾನಕ್ಷತ್ರದಲ್ಲಿ ಜನಿಸಿದವನು ಧನಿಕನಾಗಿಯೂ ಮತ್ತು ಭೋಗಿಯೂ ಆಗುವನು. ಆದ್ರಾನಕ್ಷತ್ರದಲ್ಲಿ ಹುಟ್ಟಿದವನು ಹಿಂಸಕನಾಗಿಯೂ ಮತ್ತು ಮೋಸಗಾರನಾಗಿಯೂ ಆಗುವನು. ಪುನರ್ವಸೂನಕ್ಷತ್ರದಲ್ಲಿ ಹುಟ್ಟಿದವನು ದಾಂತನು ಇಂದ್ರಿಯನಿಗ್ರಹವುಳ್ಳವನು ಮತ್ತು ರೋಗಿಯು. ಪುಷ್ಯನಕ್ಷತ್ರದಲ್ಲಿ ಹುಟ್ಟಿದವನು ಕವಿಯೂ ಮತ್ತು ಸುಖಿಯೂ ಆಗುವನು. ಆಶ್ಲೇಷಾನಕ್ಷತ್ರದಲ್ಲಿ ಹುಟ್ಟಿದವನು ಧೂರ್ತನೂ ಮತ್ತು ಮೋಸಗಾರನೂ ಆಗುವನು. ಅಲ್ಲದೇ ಪಾಪಿಷ್ಠನೂ ಸರ್ವಭಕ್ಷಕನೂ ಆಗುವನು. ಮಖಾನಕ್ಷತ್ರದಲ್ಲಿ ಹುಟ್ಟಿದವನು ಅನೇಕಮಂದಿ ಸೇವಕರು ಮತ್ತು ಹಣ ಇವುಗಳಿಂದ ಯುಕ್ತನಾಗಿ ಸದಾ ಭೋಗಿಯಾಗಿರುವನು. ಪುಬ್ಬಾನಕ್ಷತ್ರದಲ್ಲಿ ಹುಟ್ಟಿದವನು ಪ್ರಿಯವಾದಿಯಾಗಿಯೂ, ದಾತೃವಾಗಿಯೂ ಮತ್ತು ರಾಜಸೇವಾನುರಕ್ತನಾಗಿಯೂ ಇರುವನು. ಉತ್ತರಾನಕ್ಷತ್ರವಲ್ಲಿ ಹುಟ್ಟಿದವನು ಸೌಭಾಗ್ಯಶಾಲಿಯು ಮತ್ತು ವಿದ್ಯಾಧನ ಇವುಗಳುಳ್ಳವನಾಗಿ ಭೋಗಿಯಾಗುವನು. ಹಸ್ತನಕ್ಷತ್ರದಲ್ಲಿ ಹುಟ್ಟಿದವನು ಉತ್ಸಾಹ

ದ್ವೀಶೇ ಲುಬ್ಧಃ ಪಟುಃ ಕ್ರೋಧೀ ಮಿತ್ರೇ ಚಾಢ್ಯೋ ವಿದೇಶಗಃ ।
ಜ್ಯೇಷ್ಠೇ ಧರ್ಮಪರಸ್ತುಷ್ಟೋ ಮೂಲೇ ಮಾನೀ ಧನೀ ಸುಖೀ ॥ ೨೧೮ ॥

ಆಷ್ಯೇ ಮಾನೀ ಸುಖೀ ಹೃಷ್ಟೋ ವೈಶ್ವೇ ನಮ್ರಶ್ಚ ಧಾರ್ಮಿಕಃ ।
ಶ್ರೀಶೇ ಧನೀ ಸುಖೀ ಖ್ಯಾತೋ ದಾತಾ ಶೂರೋ ಧನೀ ವಸೌ ॥ ೨೧೯ ॥

ಶತೇಽರಿಹಂತಾ ವ್ಯಸನೀ ಸ್ತ್ರೀಜಿತೋ ಚಾಹಿಭೇದಿನಿ ।
ಬುಧ್ನೇ ವಕ್ತಾ ಸುಖೀ ಕಾಂತಃ ಪೌಷ್ಣೇ ಶೂರೋ ಧನೀ ಶುಚಿಃ ॥ ೨೨೦ ॥

ಶೀಲನಾಗಿಯೂ, ಒರಟನಾಗಿಯೂ (ಧೃಷ್ಟ) ಮತ್ತು ಮದ್ಯಪಾಯಿಯಾಗಿಯೂ ಆಗುವನು. ಚಿತ್ತಾನಕ್ಷತ್ರದಲ್ಲಿ ಜನಿಸಿದವನು ಸುಲೋಚನಾಂಶವುಳ್ಳವನಾಗಿಯೂ ಅಂದರೆ ಒಳ್ಳೆಯ ನೇತ್ರಪಾಟವವುಳ್ಳವನಾಗಿಯೂ, ಚಿತ್ರಾಂಬರಧಾರಿಯಾಗಿಯೂ ಆಗುತ್ತಾನೆ. ಸ್ವಾತೀನಕ್ಷತ್ರದಲ್ಲಿ ಜನಿಸಿದವನು ವಿನೀತನಾಗಿಯೂ, ಕೃಪಾಳುವಾಗಿಯೂ ಇರುವನು. ಆದರೆ ಧರ್ಮದಲ್ಲಿ ಆಸಕ್ತನಾಗುವುದಿಲ್ಲ. ವಿಶಾಖೆಯಲ್ಲಿ ಹುಟ್ಟಿದವನು ಜಿಪುಣನಾಗಿಯೂ, ಪಟುವಾಗಿಯೂ ಮತ್ತು ಕೋಪಿಷ್ಠನಾಗಿಯೂ ಆಗುವನು. ಅನೂರಾಧಾನಕ್ಷತ್ರದಲ್ಲಿ ಹುಟ್ಟಿದವನು ಧನಿಕನೂ, ದೇಶಾಂತರನಾಗಿಯೂ ಆಗುವನು. ಜ್ಯೇಷ್ಠಾನಕ್ಷತ್ರದಲ್ಲಿ ಜನಿಸಿದವನು ಧರ್ಮನಿರತನಾಗಿಯೂ, ಸಂತೋಷಯುಕ್ತನಾಗಿಯೂ ಇರುವನು. ಮೂಲಾನಕ್ಷತ್ರದಲ್ಲಿ ಹುಟ್ಟಿದವನು ಮಾನಯುಕ್ತನಾಗಿಯೂ, ಸುಖಿಯಾಗಿಯೂ ಮತ್ತು ಧನಿಕನಾಗಿಯೂ ಆಗುವನು. ಪೂರ್ವಾಷಾಢಾನಕ್ಷತ್ರದಲ್ಲಿ ಹುಟ್ಟಿದವನು ಮಾನಶೀಲನೂ, ಸುಖಯುಕ್ತನೂ ಮತ್ತು ಸಂತುಷ್ಟನೂ ಆಗುವನು. ಉತ್ತರಾಷಾಢಾನಕ್ಷತ್ರದಲ್ಲಿ ಹುಟ್ಟಿದವನು ನಮ್ರನಾಗಿಯೂ ಮತ್ತು ಧಾರ್ಮಿಕನಾಗಿಯೂ ಇರುವನು. ಶ್ರವಣನಕ್ಷತ್ರದಲ್ಲಿ ಹುಟ್ಟಿದವನು ಧನಿಕನಾಗಿಯೂ ಭೋಗಿಯಾಗಿಯೂ ಮತ್ತು ಖ್ಯಾತಿಶೀಲನಾಗಿಯೂ ಆಗುವನು. ಧನಿಷ್ಠಾನಕ್ಷತ್ರದಲ್ಲಿ ಜನಿಸಿದವನು ದಾನಿಯಾಗಿಯೂ ಮತ್ತು ಶೂರನಾಗಿಯೂ ಆಗುವನು. ಶತಭಿಷನಕ್ಷತ್ರದಲ್ಲಿ ಹುಟ್ಟಿದವನು ಶತ್ರುನಾಶಕನಾಗಿಯೂ ಮತ್ತು ವ್ಯಸನಿಯಾಗಿಯೂ ಆಗುವನು. ಪೂರ್ವಾಭಾದ್ರಾನಕ್ಷತ್ರದಲ್ಲಿ ಹುಟ್ಟಿದವನು ವಾಚಾಳಿಯಾಗಿಯೂ, ಸುಖಿಯಾಗಿಯೂ ಮತ್ತು ಸುಂದರನೂ ಆಗುವನು.

**ಕಾಮೀ ಶೂರಃ ಕೃತಜ್ಞೋಽಜೇ ಕಾಂತಸ್ತ್ಯಾಗೀ ಕ್ಷಮೀ ವೃಷೇ ।**
**ಯುಗ್ಮೇ ಸ್ತ್ರೀದ್ಯೂತಶಾಸ್ತ್ರಜ್ಞಃ ಸ್ತ್ರೈಣೋ ಹ್ರಸ್ವಃ ಸ್ವಭೇ ವಿಧೌ ॥ ೨೨೧ ॥**
**ಸ್ತ್ರೀದ್ವಿಟ್ ಕ್ರೋಧೀ ಹರೌ ಮಾನೀ ವಿಕ್ರಾಂತಃ ಸ್ಥಿರಧೀಃ ಸುಖೀ ।**
**ಧರ್ಮೀ ಶ್ಲಕ್ಷ್ಣಃ ಸುಧೀಃ ಷಷ್ಠೇ ಪ್ರಾಜ್ಞಃ ಪ್ರಾಂಶುರ್ಧನೀ ಧಟೇ ॥ ೨೨೨ ॥**

---

ಉತ್ತರಾಭಾದ್ರಾನಕ್ಷತ್ರದಲ್ಲಿ ಹುಟ್ಟಿದವನು ಶೂರನೂ ಮತ್ತು ಧನಿಕನೂ ಆಗುವನು. ರೇವತೀನಕ್ಷತ್ರದಲ್ಲಿ ಹುಟ್ಟಿದವನು ಸೌಂದರ್ಯ, ಶೌರ್ಯ ಇವುಗಳಿಂದ ಯುಕ್ತನಾಗಿ ಯಾವಾಗಲೂ ಶುಚಿಯಾಗಿರುವನು.

೨೨೧-೨೨೨. ಈಗ ಮೇಷಾದಿರಾಶಿಗಳಲ್ಲಿ ಚಂದ್ರನಿರುವಾಗ ಹುಟ್ಟಿದವನ ಲಕ್ಷಣಗಳನ್ನು ವಿವರಿಸುವೆನು :—

೧. ಮೇಷರಾಶಿಯಲ್ಲಿ ಜನಿಸಿದವನು ಕಾಮಾಸಕ್ತನು ಶೂರನು ಮತ್ತು ಕೃತಜ್ಞನೂ ಆಗಿರುವನು.

೨. ವೃಷಭದಲ್ಲಿ ಜನಿಸಿದವನು ಸುಂದರನೂ ತ್ಯಾಗಿಯೂ ಮತ್ತು ಶಾಂತನೂ ಆಗುವನು.

೩. ಮಿಥುನರಾಶಿಯಲ್ಲಿ ಜನಿಸಿದವನು ಸ್ತ್ರೀ, ದ್ಯೂತ, ಶಾಸ್ತ್ರ, ಇವುಗಳಲ್ಲಿ ಆಸಕ್ತನಾಗಿ ಕಾಲವನ್ನು ಕಳೆಯುವನು.

೪. ಕಟಕರಾಶಿಯಲ್ಲಿ ಉದಯಿಸಿದವನು ಸ್ತ್ರೀಲಂಪಟನೂ, ಕುಳ್ಳನೂ ಆಗುವನು. (೫) ಸಿಂಹರಾಶಿಯಲ್ಲಿ ಜನಿಸಿದವನು ಸ್ತ್ರೀದ್ವೇಷಿಯೂ, ಕೋಪಿಷ್ಠನೂ, ಶೂರನೂ, ಸ್ಥಿರಬುದ್ಧಿಯುಳ್ಳವನೂ ಮತ್ತು ಸುಖಿಯೂ ಆಗುವನು.

೬. ಕನ್ಯಾರಾಶಿಯಲ್ಲಿ ಹುಟ್ಟಿದವನು ಧರ್ಮಾತ್ಮನೂ, ಮೃದುಸ್ವಭಾವದವನೂ, ವಿದ್ವಾಂಸನೂ ಆಗುವನು.

**ರೋಗೀ ಪೂಜ್ಯಃ ಕ್ಷತೀ ಕೌರ್ಪ್ಯೇ ಕವಿಃ ಶಿಲ್ಪೀ ಜ್ಯಭೇ ಧನೀ ।**
**ಮೃಗೇಽಲಸೋಽಟನಃ ಸ್ವಕ್ಷಃ ಪರದಾರಾರ್ಥಹೃದ್ಘಟೇ ॥ ೨೨೩ ॥**

**ಸಬಲೇ ಭೇ ಭಯೇ ವಾಪಿ ಸಬಲೇ ಭೇಽಖಿಲಂ ಫಲಂ ।**
**ಅನ್ಯಥಾ ವಿಪರೀತಂ ತತ್ಫಲಮೇವಂ ಪರೇಽಪಿ ನ ॥ ೨೨೪ ॥**

೭. ತುಲಾರಾಶಿಯಲ್ಲಿ ಹುಟ್ಟಿದವನು ಪ್ರಾಜ್ಞನು, ದೀರ್ಘಾಕಾರನು ಮತ್ತು ಧನಿಕನೂ ಆಗುವನು.

೮. ವೃಶ್ಚಿಕರಾಶಿಯಲ್ಲಿ ಜನಿಸಿದವನು ರೋಗಿಯು, ಪೂಜ್ಯನು ಮತ್ತು ಸದಾ ಗಾಯವುಳ್ಳವನೂ ಆಗುವನು.

೯. ಧನೂರಾಶಿಯಲ್ಲಿ ಹುಟ್ಟಿದಾತನು ಕವಿಯು, ಶಿಲ್ಪಿಯು, ಧನಿಕನೂ ಆಗುವನು.

೧೦. ಮಕರರಾಶಿಯಲ್ಲಿ ಹುಟ್ಟಿದವನು ಸೋಮಾರಿಯು ಮತ್ತು ಸದಾ ದೇಶಸಂಚಾರದಲ್ಲಿಯೇ ಅಭಿರುಚಿಯುಳ್ಳವನೂ ಆಗುವನು.

೧೧. ಕುಂಭರಾಶಿಯಲ್ಲಿ ಹುಟ್ಟಿದವನು ಪರಸ್ತ್ರೀ, ಪರಧನ ಇವುಗಳ ನ್ನಪಹರಿಸುವವನಾಗುವನು.

೧೨. ಮೀನರಾಶಿಯಲ್ಲಿ ಹುಟ್ಟಿದ ಮನುಜನು ಶತ್ರುಗಳಿಂದ ತಿರಸ್ಕೃತನಾಗಿಯೂ, ಸ್ತ್ರೀವರ್ಜಿತನಾಗಿಯೂ ಆಗುವನು.

೨೨೪. ಈಗ ಹೇಳಿದ ಫಲಗಳು ಜನ್ಮಕಾಲದಲ್ಲಿ ಚಂದ್ರನಿರುವ ರಾಶಿಯು, ರಾಶ್ಯಧಿಪತಿಯು ಮತ್ತು ಚಂದ್ರನೂ ಬಲಿಷ್ಠರಾಗಿದ್ದರೆ ಮಾತ್ರ ಪೂರ್ತಿಯಾಗಿ ಸಿದ್ಧಿಸುವುದೆಂದು ತಿಳಿಯಬೇಕು. ಒಂದುವೇಳೆ ರಾಶ್ಯಧಿಪತಿಯು ದುರ್ಬಲನಾದರೆ ವಿರುದ್ಧವಾದ ಫಲಗಳು ಲಭಿಸುವುವು.

೨೨೫-೨೨೬. ಸೂರ್ಯನು ಮೇಷಾದಿಯಾದ ದ್ವಾದಶರಾಶಿಗಳಲ್ಲಿದ್ದರೆ ಜಾತಕನು ಕ್ರಮವಾಗಿ ಖ್ಯಾತಿಯುಳ್ಳವನು, ಸ್ತ್ರೀದ್ವೇಷಿಯು, ಧನಿಕನು, ಕ್ರೂರನು, ಅಜ್ಞ ಅಥವ ದಡ್ಡನು, ಕವಿಯು, ವೀರನು, ಧನಿಕನು,

ಖ್ಯಾತಃ ಸ್ತ್ರೀದ್ವಿಟ್ ಧನೀ ಶೀಕ್ಷ್ಣೋ ಜ್ಞಃ ಕವಿಃ ಶೌಂಡಿಕೋ ಧನೀ ।
ಪೂಜ್ಯೋಽಲುಬ್ಧೋಽಧನಸಖೋ ಮೇಷಾದೌ ಭಾಸ್ಕರೇ ಜನೌ ॥ ೨೨೫ ॥

ನಿಸ್ವೋಽರ್ಕಭೇ ಭೂಮಿಪುತ್ರೇ ಧನೀ ಚಾಂದ್ರೇ ಸ್ವಭೇ ಧನಃ ।
ಬೌಧೇ ಕೃತಜ್ಞೋ ಜೈವೇ ತು ಖ್ಯಾತಃ ಶೌಕ್ರೇಽನ್ಯದಾರಿಕಃ ॥ ೨೨೬ ॥

ಮೃಗೇ ಬಹ್ವಾತ್ಮಜಧನಃ ಕುಂಭೇ ದುಃಖ್ಯನೃತೀ ಖಲಃ ।
ಸ್ತ್ರೀದ್ವೇಷ್ಯಃ ಸ್ವಜನದ್ವೇಷೀ ನಿಯಮಸ್ಥಃ ಸಧೀಧನಃ ॥ ೨೨೭ ॥

ಪೂಜ್ಯನು, ಜಿಪುಣನು, ದರಿದ್ರನು ಮತ್ತು ಸ್ನೇಹಿತರಿಲ್ಲದವನೂ, ಆಗುವನು. ಕುಜನು ಸಿಂಹದಲ್ಲಿದ್ದರೆ ಜಾತಕನುದರಿದ್ರನಾಗುವನು. ಕಟಕದಲ್ಲಿ ಕುಜನಿದ್ದರೆ ಧನಿಕನಾಗುವನು. ಮೇಷ, ವೃಶ್ಚಿಕಗಳಲ್ಲಿ ಕುಜನಿದ್ದರೆ ಶ್ರೀಮಂತನಾಗುವನು. ಮಿಥುನ, ಕನ್ಯಾರಾಶಿಗಳಲ್ಲಿದ್ದರೆ ಕೃತಜ್ಞನೆನಿಸುವನು. ಇದೇ ಕುಜನು ಧನುಸ್ಸು ಮತ್ತು ಮೀನ ಈ ರಾಶಿಗಳಲ್ಲಿದ್ದರೆ ತುಂಬಾ ಪ್ರಖ್ಯಾತಿಯನ್ನು ಹೊಂದುವನು. ಕುಜನು ತುಲಾ, ವೃಷಭರಾಶಿಗಳಲ್ಲಿದ್ದರೆ ಪರದಾರಾಸಕ್ತನಾಗುವನು.

೨೨೭-೨೨೮. ಕುಜನು ಮಕರದಲ್ಲಿದ್ದರೆ ಹೆಚ್ಚುಮಕ್ಕಳು ಮತ್ತು ಐಶ್ವರ್ಯ ಇವುಗಳುಂಟಾಗುವುವು. ಕುಂಭರಾಶಿಯಲ್ಲಿ ಕುಜನಿದ್ದರೆ ದುಃಖಿಯೂ ಅನೃತವಾದಿಯೂ ಆಗುವನು. ಬುಧನು ಸೂರ್ಯನ ಮನೆಯಲ್ಲಿದ್ದರೆ ಮಾನ (ಗೌರವ) ಮತ್ತು ಅರ್ಥ (ದುಡ್ಡು) ಇವುಗಳುಳ್ಳವನಾಗುವನು. ಬುಧನು ಚಂದ್ರನ ಮನೆಯಲ್ಲಿದ್ದರೆ ಮಕ್ಕಳು, ಸ್ತ್ರೀ, ಸುವರ್ಣ ಇವುಗಳಿಂದ ಪರಿಪೂರ್ಣನಾಗುವನು. ಬುಧನು ಕುಜನ ಮನೆಯಲ್ಲಿದ್ದರೆ ಜಾತಕನು ಸೇನಾಧಿಪತಿಯಾಗುವನು. ಬುಧನು ಗುರುವಿನ ಮನೆಯಲ್ಲಿದ್ದರೆ ಸ್ತ್ರೀ, ಅರ್ಥ, ಪುತ್ರ ಇವರಿಂದ ಕೂಡಿರುವನು. ಶುಕ್ರನ ರಾಶಿಯಲ್ಲಿ ಬುಧನಿದ್ದರೆ ವಕ್ತನೂ ಮತ್ತು ಒಡೆಯನೂ ಆಗುವನು. ಬುಧನು ಶನಿಗೃಹದಲ್ಲಿದ್ದರೆ ಸೇವಕರಿಗೆ ಒಡೆಯನೆನಿಸುವನು.

ಸಮಾನಾರ್ಥಃ ಸಪುತ್ರಸ್ತ್ರೀಸ್ವರ್ಣಃ ಸೂರ್ಯಾದಿಭೇ ಬುಧೇ ।
ಸೇನಾನೀಃ ಸ್ತ್ರ್ಯರ್ಥಪುತ್ರಾಢ್ಯಃ ದಶಸ್ತ್ರ್ಯೈಶ್ಯಃ ಪರಿಚ್ಛದೀ ॥ ೨೨೮ ॥

ಮಂಡಲೇಶಃ ಸಾರ್ಥಸುಖಃ ಸ್ವರ್ಣಸ್ತ್ವಾಮ್ಯರ್ಕಭಾದ್ಗುರೌ ।
ಸ್ತ್ರ್ಯಸ್ತಾರ್ಥೋ ಮಂದಶೋಕಾಢ್ಯೋ ಬಂಧುದ್ವೇಷೀ ಧನಾಘವಾನ್ ॥

ಸಾರ್ಥಃ ಪ್ರಾಜ್ಞಃ ಸಮಃ ಖ್ಯಾತಿಃ ಸ್ತ್ರೀಜಿತೋಽರ್ಕಾದಿಭೇ ಭೃಗೌ ।
ವ್ಯಂಗಜಾರ್ಥೋ ಸ್ವಪ್ರಸೂಕೋ ವಿಧಿಮಿತ್ರೋ ಸುಖತ್ರಯಃ ॥ ೨೩೦ ॥

೨೨೮-೨೩೦. ಗುರುವು ಸೂರ್ಯನ ರಾಶಿಯಲ್ಲಿದ್ದರೆ ಮಂಡಲಾಧಿಪತಿಯಾಗುವನು. ಚಂದ್ರನ ರಾಶಿಯಲ್ಲಿದ್ದರೆ ಅರ್ಥ, ಸೌಖ್ಯ ಇವುಗಳಿಂದ ಕೂಡಿರುವನು. ಕುಜನ ಮನೆಯಲ್ಲಿದ್ದರೆ ಸುವರ್ಣಾಧಿಪತಿಯಾಗುವನು. ಬುಧನ ಮನೆಯಲ್ಲಿದ್ದರೆ ಸ್ತ್ರೀವಿತ್ತವನ್ನು ಹೊಂದುವನು. ಶುಕ್ರನ ಮನೆಯಲ್ಲಿದ್ದರೆ ಶೋಕಹೀನನಾಗುವನು. ಶನಿಯ ಮನೆಯಲ್ಲಿದ್ದರೆ ಬಂಧುದ್ವೇಷಿಯೂ ಮತ್ತು ಪಾಪಿಷ್ಠನೂ ಆಗುವನು.

ಶುಕ್ರನು ಸೂರ್ಯನ ರಾಶಿಯಲ್ಲಿದ್ದರೆ ಅರ್ಥಪತಿಯಾಗುವನು. ಚಂದ್ರನ ಮನೆಯಲ್ಲಿದ್ದರೆ ಪ್ರಾಜ್ಞನಾಗುವನು. ಕುಜನ ಮನೆಯಲ್ಲಿದ್ದರೆ ಸುಖ ಮತ್ತು ದುಃಖಗಳನ್ನು ಸಮವಾಗಿ ಹೊಂದುವನೂ, ಖ್ಯಾತಿಶೀಲನೂ ಆಗುವನು. ಬುಧನ ಮನೆಯಲ್ಲಿದ್ದರೆ ಸ್ತ್ರೀಯರಿಂದ ಜಿತನಾಗುವನು. ಗುರುವಿನ ಮನೆಯಲ್ಲಿದ್ದರೆ ಅಂಗಹೀನರಿಂದ ದ್ರವ್ಯವನ್ನಾರ್ಜಿಸುವವನಾಗುವನು. ಶನಿಯ ಮನೆಯಲ್ಲಿದ್ದರೆ ಸತ್ಸ್ನೇಹದಿಂದ ಸೌಖ್ಯವನ್ನು ಪಡೆಯುವನು.

ಶನಿಯು ಸೂರ್ಯನ ರಾಶಿಯಲ್ಲಿದ್ದರೆ ಅಂಗಹೀನರಿಂದ ಧನ ಪ್ರಾಪ್ತಿಯಾಗುವುದು. ಚಂದ್ರನ ರಾಶಿಯಲ್ಲಿದ್ದರೆ ದುಷ್ಟಪುತ್ರ ಪ್ರಾಪ್ತಿಯುಂಟೆಂದು ತಿಳಿಯಬೇಕು. ಕುಜನ ಮನೆಯಲ್ಲಿದ್ದರೆ ಯಾವಾಗಲೂ ಹೆಚ್ಚುಮಂದಿ ಸ್ನೇಹಿತರಿಂದ ಕೂಡಿರುವನು. ಬುಧನ ಮನೆಯಲ್ಲಿದ್ದರೆ ಸುಖಿಯಾಗಿರುವನು. ಗುರುವಿನ ಮನೆಯಲ್ಲಿದ್ದರೆ ಸತ್ಪುತ್ರರು, ಸತೀಸ್ತ್ರೀ ಮತ್ತು ಧನ ಇವುಗಳಿಂದ ಯುಕ್ತನಾಗುವನು. ಶುಕ್ರನ ಮನೆಯಲ್ಲಿದ್ದರೆ ರಾಜಸದೃಶನಾಗುವನು.

ಸತ್ಪುತ್ರಸ್ತ್ರೀಧನೋ ರಾಜಾ ಗ್ರಾಮೋ ಶೌಕಾದಿಭೇಽರ್ಕಜೇ ।
ಭೂಪಜ್ಞಗುಣಿಪೌರಾಸ್ಯಾದೃಷ್ಟೇಽಬ್ಜೇ ಜೇಽಸೃಗಾದಿಭಿಃ ॥ ೨೩೧ ॥

ನಿಃಸ್ವಸ್ತೇನ ನೃಪಾಃ ಪ್ರಜ್ಞಪ್ರೇಷ್ಯಾಮುವಿನ್ನೃಯುಗ್ಮಗೇ ।
ಧಾತ್ವಾಜೀವೀ ನೃಪಜ್ಞಾಭೀತಂತುವಾಯಾಧನಾಃ ಸ್ವಭೇ ॥ ೨೩೨ ॥

ಯುಯುತ್ಸುಕವಿಸೂರೀಜ್ಯಧಾತುಜೀವಿದೃಗಾಮಯಾಃ ।
ಜ್ಯೋತಿಜ್ಞಾರ್ಢ್ಯೇಜ್ಯನು ಖಲು ನೃಪೇಜ್ಯಾಜ್ಞಾದಿಕರ್ಜತಾ ॥ ೨೩೩ ॥

೨೩೧–೨೩೩. ಮೇಷಲಗ್ನವಾಗಲೀ, ರಾಶಿಯಾಗಲೀ ಕುಜಾದಿ ಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಜಾತಕನು ರಾಜ, ವಿದ್ವಾಂಸ, ರಾಜಸದೃಶ ಗುಣಾಢ್ಯ, (ರಾಜರಿಗೆ ಸಮಾನನೂ ಮತ್ತು ಗುಣಶಾಲಿಯೂ) ಕಳ್ಳ, ದರಿದ್ರ ಇವರಂತೆ ಆಗುವನು. ವೃಷಭರಾಶಿ ಅಥವ ಲಗ್ನ ಇವು ಕುಜಾದಿ ಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ದರಿದ್ರ, ಕಳ್ಳ, ಪ್ರಜೆಗಳಿಂದ ಪೂಜ್ಯ, ರಾಜ, ಶ್ರೀಮಂತ ಸೇವಕ, ಇವರಂತೆ ಆಗುವನು. ಹಾಗೆಯೇ ಮಿಥುನವು ಕುಜಾದಿ ದೃಷ್ಟವಾದರೆ ಕಬ್ಬಿಣದ ವ್ಯಾಪಾರಿ, ರಾಜ, ವಿದ್ವಾಂಸ, ಭಯರಹಿತ, ನೇಯ್ಗೆಯವನು, ದರಿದ್ರ ಇವರಾಗುವನು. ಕಟಕರಾಶಿಯು ಕುಜಾದಿಯಾಗಿ ಸೂರ್ಯಪರ್ಯಂತ ದೃಷ್ಟವಾದರೆ ಯೋಧ, ಕವಿ, ವಿದ್ವಾಂಸ, ಭೂಪಾಲ, ಆಯುಧಜೀವೀ, ನೇತ್ರವ್ಯಾಧಿ ಈ ಫಲಗಳನ್ನು ಹೊಂದುವನು. ಸಿಂಹರಾಶಿಯು ಬುಧಾದಿ ಗ್ರಹಗಳಿಂದ ವೀಕ್ಷಿತವಾದರೆ ಕ್ರಮವಾಗಿ ಜಾತಕನು ಜ್ಯೋತಿಜ್ಞನೂ, ಆಢ್ಯನೂ, ನರೇಂದ್ರನೂ, ನಾಪಿತನೂ, ನೃಪನೂ, ಭೂಪನೂ ಆಗುವನು. ಕನ್ಯಾರಾಶಿಯು ಬುಧಾದಿಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಭೂಪನೂ, ಸೇನಾಪತಿಯೂ, ಚಮತ್ಕಾರಯುಕ್ತನೂ ಆಗುವನು. ಶನಿ, ರವಿ, ಕುಜರಿಂದ ದೃಷ್ಟವಾದರೆ ಸ್ತ್ರೀಯ ಆಶ್ರಯದಿಂದ ಜೀವಿಸುವವನೂ ಆಗುವನು. ತುಲಾರಾಶಿಯು ಬುಧಾದಿಗಳಿಂದ ನೋಡಲ್ಪಟ್ಟರೆ ಭೂಪನೂ, ಸುವರ್ಣಕಾರನೂ ವಣಿಜನೂ, ರವಿ ಕುಜ ಶನಿಗಳಿಂದ ದೃಷ್ಟರಾದರೆ ಪರಕಾರ್ಯ ವಿಮುಖನೂ ಆಗುವನು. ವೃಶ್ಚಿಕರಾಶಿಯು ಬುಧಾದಿಗಳಿಂದ ದೃಷ್ಟವಾದರೆ ಯಮಳಪುತ್ರರಿಗೆ (ಅವಳಿಮಕ್ಕಳಿಗೆ) ತಂದೆಯಾಗುವನು. ವಿನೀತನಾಗುವನು. ಮತ್ತು ಅಗಸನೂ, ದರಿದ್ರನೂ, ರಾಜನೂ ಆಗುವನು.

ಷಷ್ಠೇ ಶುಭೈರ್ನೃಪಚಮೂಪನ್ನೈಪುಣ್ಯವಿತತಾಶಯಾಃ ।
ಜೂಕೇ ಭೂಪಃ ಸ್ವರ್ಣಕಾರವಣಿಜಃ ಶೇಷದೃಗ್ಯುತೇ ॥ ೨೩೪ ॥

ದ್ವಿಪೈತೃಕಾಬ್ಧಿಧ್ವಜಿನೋ ವ್ಯಂಗಾ ಸ್ವಕ್ಷಿತಿಪಾ ಅಲೌ ।
ಜ್ಞಾತಿಕ್ಷ್ಮಾಜನಯಾಶ್ಚಾಯೇ ಸದ್ಭಿರ್ಧರ್ಮಿರ್ಣ ಶಠಸ್ತಥಾ ॥ ೨೩೫ ॥

ಭೂಪಮಂಡಿತಸಖೇಜ್ಞಾ ಮೃಗೇ ಭೂಯಾನ್ಯದಾರಿಕೌ ।
ಕುಂಭೇ ಶೇಷೈಶ್ಚ ಹಾಸ್ಯಜ್ಞನೃಪಜ್ಞಾಃ ಸದ್ಭಿರಂತ್ಯಭೇ ॥ ೨೩೬ ॥

ಹೋರೇಶರ್ಕ್ಷದಲಸ್ಥೈಸ್ತು ದೃಷ್ಟೋ ಯುಕ್ತಃ ಶಶೀ ಶುಭಃ ।
ತ್ರ್ಯಂಶೇ ತತ್ಪತಿಮಿತ್ರರ್ಕ್ಷ ಗತೈರ್ಯುಕ್ತೇಕ್ಷಿತಸ್ತಥಾ ॥ ೨೩೭ ॥

ದ್ವಾದಶಾಂಶೇ ಫಲಂ ಪ್ರೋಕ್ತಂ ನವಾಂಶೇಽಸ್ಯಥ ಕೀರ್ತ್ಯತೇ ।
ಆರಕ್ಷೇಕೋ ವಧರುಚಿರ್ನಿಯುದ್ಧಕುಶಲೋಽರ್ಥವಾನ್ ॥ ೨೩೮ ॥

---

೨೩೪-೨೩೮. ಧನೂರಾಶಿಯು ಬುಧಾದಿಗಳಿಂದ ನೋಡಲ್ಪಟ್ಟರೆ ಸ್ವಜನ ಭರ್ತೃವೂ, ಪೃಥಿವೀಪತಿಯೂ, ಜನಾಶ್ರಯನೂ, ಪಾಪಗ್ರಹದೃಷ್ಟವಾದರೆ ಡಾಂಭಿಕನೂ, ಪರಕಾರ್ಯವಿಮುಖನೂ ಆಗುವನು. ಮಕರರಾಶಿಯು ಬುಧಾದಿ ಗ್ರಹಗಳಿಂದ ದೃಷ್ಟವಾದರೆ ಕ್ರಮವಾಗಿ ಭೂಪನೂ, ರಾಜನೂ, ಪಂಡಿತನೂ, ಧನಿಕನೂ, ದರಿದ್ರನೂ, ಭೂಪನೂ ಆಗುವನು. ಕುಂಭರಾಶಿಯು ಬುಧಾದಿಗಳಿಂದ ದೃಷ್ಟವಾದರೆ ರಾಜ, ರಾಜಸನು, ಅನ್ಯದಾರನಿರತ, ಪಾಪಗ್ರಹಗಳಿಂದ ನೋಡಲ್ಪಟ್ಟರೆ ಪರಸ್ತ್ರೀಸಂಸರ್ಗ ಮುಂತಾದ ಫಲಗಳು ದೊರೆಯುವುವು. ಮೀನರಾಶಿಯು ಬುಧಾದಿಗಳಿಂದ ದೃಷ್ಟವಾದರೆ ಹಾಸ್ಯಗಾರ, ರಾಜ, ವಿದ್ವಾಂಸ ಇವರಾಗಿಯೂ, ಪಾಪಗ್ರಹಗಳಿಂದ ನೋಡಲ್ಪಟ್ಟರೆ ಪಾಪಾಚಾರವುಳ್ಳವನಾಗಿಯೂ ಆಗುವನು. ಹೋರಾ, ದ್ರೇಕ್ಕಾಣ, ನವಾಂಶ, ತ್ರಿಂಶಾಂಶಗಳಲ್ಲಿ ಸೇರಿರುವ ಚಂದ್ರನು ಅದೇ ಹೋರಾದಿಗಳಲ್ಲಿರುವ ಶುಭಗ್ರಹಗಳಿಂದ ವೀಕ್ಷಿತನಾದರೆ ಶುಭಫಲವನ್ನೂ, ಅಶುಭಗ್ರಹಗಳಿಂದ ವೀಕ್ಷಿತನಾದರೆ ಅಶುಭಫಲವನ್ನೂ ಕೊಡುವನು. ಚಂದ್ರನು ಕುಜಾಂಶದಲ್ಲಿದ್ದು ಸೂರ್ಯಾದಿ ಗ್ರಹಗಳಿಂದ ನೋಡಲ್ಪಟ್ಟರೆ ನರಾಧಿಕಾರೀ, ಹಿಂಸಾಸಕ್ತವಚನ ಯುದ್ಧಾಭಿಲಾಷೀ, ಕುಶಲೀ, ಧನಿಕ, ಕಲಹಪ್ರಿಯ ಈ ಫಲಗಳನ್ನು ಕೊಡುವನು. ಶುಕ್ರಾಂಶದಲ್ಲಿದ್ದ ಚಂದ್ರನನ್ನು ರವ್ಯಾದಿಗಳು ನೋಡಿದರೆ ಕ್ರಮವಾಗಿ ಮೂರ್ಖ, ಅನ್ಯದಾರನಿರತ, ಕವಿ, ಕಾವ್ಯಪ್ರಚಾರಕ, ಸುಖಪರ, ಪರಕಳತ್ರಾಭಿಲಾಷೀ ಈರೀತಿಯಾದ ಫಲಗಳನ್ನು

ಕಲಹಃ ಕ್ಷಿತಿಜಾಂಶಸ್ಥೇ ಶೌಕ್ರೇ ಮೂರ್ಖೋಽನ್ಯದಾರದಃ ।
ಕವಿಃ ಸುಖೀ ಬುಧಾಂಶೇ ತು ನಟಚೌರಜ್ಞಶಿಲ್ಪಿನಃ ॥ ೨೩೯ ॥

ಸ್ವಾಂಶೇ ಸ್ವಲ್ಪತನುಃ ಸಖಸ್ತಪಸ್ವೀ ಲೋಭತತ್ಪರಃ ।
ಕ್ರೋಧೀ ನಿಧೀಶೋಽಪಾಕ್ಷ್ಯೋ ವಾ ನೃಪೋ ಹಿಂಸ್ರೋ ಸುತೋ ಹರೇಃ

ಜೀವಾಂಶೇ ಹಾಸ್ಯವಿದ್ಯೋಧಾ ಬಲೀ ಮಂತ್ರೀ ಚ ಧಾರ್ಮಿಕಃ ।
ಅಲ್ಪಾಪತ್ಯೋ ದುಃಖಿತಃ ಸ್ತ್ರೋ ದುಷ್ಟಸ್ತ್ರೀಸೌರಿಭಾಗಗೇ ॥ ೨೪೦ ॥

ಭಾಸುಶ್ಚಂದ್ರಾದಿ ದೃಷ್ಟೇ ತು ತದ್ವದೇವ ಫಲಂ ವದೇತ್ ।
ವರ್ಗೋತ್ತಮೇ ಸ್ವೇ ಪರಭೇ ಫಲಮುಕ್ತಂ ಶುಭಂ ಕ್ರಮಾತ್ ॥ ೨೪೨ ॥

ಹೊಂದುವನು. ಸಿಂಹಾಂಶದಲ್ಲಿರುವ ಚಂದ್ರನನ್ನು ಸೂರ್ಯಾದಿ ಗ್ರಹಗಳು ನೋಡಿದರೆ ಕ್ರಮವಾಗಿ ಕೋಪಿಷ್ಠ, ರಾಜಪ್ರಿಯ, ನಿಧೀಶ, ಪ್ರಭು, ಪುತ್ರಹೀನ, ಅತಿಹಿಂಸಕ, ಈರೀತಿಯಾದ ಫಲವನ್ನು ಹೊಂದುವನು. ಗುರ್ವಂಶದಲ್ಲಿರುವ ಚಂದ್ರನನ್ನು ಸೂರ್ಯಾದಿ ಗ್ರಹಗಳು ನೋಡಿದರೆ ಕ್ರಮವಾಗಿ ಬಲಿಷ್ಠ, ರಣೋಪದೇಶಕ, ಹಾಸ್ಯಜ್ಞ, ಸಚಿವ, ವಿಕಾಮ, ಧರ್ಮಶೀಲ, ಈರೀತಿಯಾದ ಫಲವುಂಟಾಗುವುದು. ಶನ್ಯಂಶದಲ್ಲಿರುವ ಚಂದ್ರನನ್ನು ಸೂರ್ಯಾದಿ ಗ್ರಹಗಳು ನೋಡಿದರೆ ಕ್ರಮವಾಗಿ ಅಲ್ಪಾಪತ್ಯ, ಹಣವಂತನಾಗಿಯೂ ಕಷ್ಟಪಡುವವನು, ಮಾನಧನ, (ಗೌರವಸ್ಥ) ತುಲಾಭಾರದಲ್ಲಿ ಅನುರಕ್ತ, ದುಷ್ಟಸ್ತ್ರೀಯಲ್ಲಿ ಅಭಿಲಾಷೀ, ಕೃಪಣ, ಕ್ರೋಧನ ಈ ಫಲಗಳು ದೊರಕುವುವು. ಸೂರ್ಯನು ಚಂದ್ರಾದಿ ಗ್ರಹಗಳಿಂದ ದೃಷ್ಟನಾದರೂ ಹಿಂದೆ ಹೇಳಿದಂತೆಯೇ ಫಲವನ್ನು ಹೇಳಬಹುದು. ಚಂದ್ರನು ವರ್ಗೋತ್ತಮಾಂಶ, ಸ್ವಾಂಶ, ಪರಾಂಶ, ಇವುಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಲ್ಪ, ಈರೀತಿಯಿಂದ ಫಲಪ್ರದನಾಗುವನು. ಅಂಶಾಧಿಪತಿಯು ಬಲಿಷ್ಠನಾಗಿದ್ದರೆ ಶುಭಫಲವನ್ನೂ, ದುರ್ಬಲನಾದರೆ ಅಶುಭಫಲವನ್ನೂ, ರಾಶ್ಯಧಿಪತಿಯ ದೃಷ್ಟಿಯಿಂದ ಶುಭಾಶುಭರೂಪವಾದ ಫಲವನ್ನು ಹೊಂದುವನು. ಈರೀತಿಯಾಗಿ ಅಂಶಫಲವನ್ನು ಗ್ರಹಗಳಿಂದ ಊಹಿಸಿ ತಿಳಿದುಕೊಳ್ಳಬೇಕು.

ಪುಷ್ಪಂ ಮಧ್ಯಂ ಲಘು ಜ್ಞೇಯಂ ಯದಿ ಚಾಂಶಪತಿರ್ಬಲೀ ।
ರಾಶೀಕ್ಷಣಫಲಂ ರುದ್ಧ್ವಾ ದದಾತ್ಯಂಶಫಲಂ ಸ್ಫುಟಂ　　　॥ ೨೪೩ ॥

ಶೂರಸ್ತಬ್ಧೋ ವಿಕಲದೃಗ್ನಿರ್ಘೃಣೋಽರ್ಕೇ ತನುಸ್ಥಿತೇ ।
ಮೇಷೇ ಧನೀ ತೈಮಿರಿಕಃ ಸಿಂಹೇ ರಾತ್ರ್ಯಂಧ ಏವ ಚ　　　॥ ೨೪೪ ॥

ನೀಚೋಽಧೋಽಸ್ವಃ ಕರ್ಕಗೇಽರ್ಕೇ ಬುದ್ಬುದಾಕ್ಷಸ್ತನುಸ್ಥಿತೇ ।
ದ್ವಿತೀಯೇಽರ್ಕೇ ಬಹುಧನೋ ನೃಪದಂಡ್ಯೋ ಮುಖಾಮಯೀ ॥ ೨೪೫ ॥

ತ್ರಿಗೇ ಬುಧೋ ವಿಕ್ರಮೀ ಚ ವಿಮುಖಃ ಪೀಡಿತೋ ಭುವಿ ।
ಧನಾಪತ್ಯೋಽಕ್ಷಿತೋ ಧೀಸ್ಥೇ ಬಲೀ ಶತ್ರುಜಿತೋಽರಿಗೇ　　　॥ ೨೪೬ ॥

---

೨೪೩-೨೪೬. ಸೂರ್ಯನು ಲಗ್ನದಲ್ಲಿದ್ದರೆ ಶೂರನೂ, ಅಲಸಿಯೂ, ಹೀನದೃಷ್ಟಿಯುಳ್ಳವನೂ ಮತ್ತು ದಯಾರಹಿತನೂ ಆಗುವನು. ಮೇಷದಲ್ಲಿದ್ದರೆ ಧನಿಕನೂ, ಕತ್ತಲೆಗಟ್ಟಿದ ಕಣ್ಣುಳ್ಳವನೂ ಆಗುವನು. ಸಿಂಹದಲ್ಲಿದ್ದರೆ ನಿಶಾಂಧನೂ, ನೀಚರಾಶಿಯಲ್ಲಿದ್ದರೆ ದರಿದ್ರನೂ, ಕಟಕದಲ್ಲಿದ್ದರೆ ಹೂಗಣ್ಣನೂ, ದ್ವಿತೀಯರಾಶಿಯಲ್ಲಿದ್ದರೆ ಧನಶಾಲಿಯೂ, ರಾಜರಿಂದ ಶಿಕ್ಷಿಸಲ್ಪಡುವವನೂ, ವಕ್ತ್ರರೋಗಿಯೂ ಆಗುವನು. ತೃತೀಯದಲ್ಲಿದ್ದರೆ ವಿದ್ವಾಂಸನೂ, ಶೂರನೂ ಆಗುವನು. ಚತುರ್ಥದಲ್ಲಿದ್ದರೆ ಸುಖಹೀನನೂ, ಪೀಡಿತವಾದ ಮನಸ್ಸುಳ್ಳವನೂ ಆಗುವನು. ಪಂಚಮದಲ್ಲಿದ್ದರೆ ದ್ರವ್ಯ, ಮಕ್ಕಳು, ಇವುಗಳಿಂದ ಬಿಡಲ್ಪಡುವನು. ಷಷ್ಠದಲ್ಲಿದ್ದರೆ ಶತ್ರುಜಿತನಾಗುವನು. ಸಪ್ತಮದಲ್ಲಿದ್ದರೆ ಸ್ತ್ರೀಜಿತನೆನಿಸುವನು. ಅಷ್ಟಮದಲ್ಲಿದ್ದರೆ ಅಲ್ಪಾಪತ್ಯ ಮತ್ತು ಅಲ್ಪದೃಷ್ಟಿಯುಳ್ಳವನೂ ಆಗುವನು. ನವಮದಲ್ಲಿದ್ದರೆ ಸುತ, ಅರ್ಥ, ಸೌಖ್ಯ ಇವುಗಳನ್ನುಂಟುಮಾಡುವನು. ದಶಮದಲ್ಲಿದ್ದರೆ ವಿದ್ಯೆ, ಐಶ್ವರ್ಯ ಇವುಗಳನ್ನೂ, ಏಕಾದಶಸ್ಥಾನದಲ್ಲಿದ್ದರೆ ಬಹುಧನವನ್ನೂ ಕೊಡುವನು. ಹನ್ನೆರಡನೆಯಸ್ಥಾನದಲ್ಲಿ ಅಂದರೆ ವ್ಯಯಸ್ಥಾನದಲ್ಲಿದ್ದರೆ ಮಾನವನ್ನೂ ಪಾತಿತ್ಯವನ್ನೂ ಹೊಂದುವನು.

ಸ್ತ್ರೀಜಿತೋ ದ್ಯೂನಸಂಸ್ಥೇ ಚ ನಿಧನೇಽಲ್ಪಾತ್ಮಜೋಽಲ್ಪದೃಕ್ ।
ಸುತಾರ್ಥಸುಖಭಾ ಭಾಗ್ಯೇ ದಶಮೋ ಶ್ರುತಶೌರ್ಯವಾನ್ ॥ ೨೪೭ ॥

ಲಾಭೇ ಬಹುಧನೋ ಮಾನೀ ಪತಿತೋ ಸ್ವೋ ವ್ಯಯೋ ರವೌ ।
ಮೂಕೋಽಥೋ ಬಧಿರಃ ಪ್ರೇಷ್ಯೋಽಬ್ಜೇಂಗೇ ಸ್ವರ್ಕ್ಷೇ ಧನೀ ಭವೇತ್ ॥

ಕುಟುಂಬೀ ಧನವಾನರ್ಥೇ ಹಿಂಸ್ರೋ ವಿಕ್ರಮಗೇ ಭವೇತ್ ।
ಸಾಧುಭಾವಃ ಸುಖಗತೇ ಧೀಸ್ಥೇ ಕನ್ಯಾಪ್ರಜೋಽಲಸಃ । ೨೪೯ ॥

ಅಲ್ಪಾಗ್ನಿ ಕಾಮಸ್ತ್ರೀಕ್ಷ್ಣೋರೌ ಈರ್ಷ್ಯಸ್ತ್ರಮದೋಜ್ಞ ಖೇ ।
ವ್ಯಾಧಿಪೀಡಾನ್ವಿತೋ ಮೃತ್ಯೌ ಭಾನುರ್ಧನಗೇ ಮಿತ್ರಧನಾನ್ವಿತಃ ॥ ೨೫೦ ॥

ಧರ್ಮಧೀಧನಯುಗ್ರಾಜ್ಯೇ ಖ್ಯಾತಧೀಧನಯುಗ್ಭವೇತ್ ।
ಕ್ಷುದ್ರೋಂಗಹೀನೋ ವ್ಯಯಗೇ ಚಂದ್ರೇ ಪ್ರೋಕ್ತಂ ಫಲಂ ಬುಧೈಃ ೨೫೧

೨೪೭-೨೫೦. ಚಂದ್ರನು ಲಗ್ನದಲ್ಲಿದ್ದರೆ ಮೂಕ, ಕಿವುಡ ಮತ್ತು ಸೇವಕನಾಗುವನು. ಇದೇ ಚಂದ್ರನು ಸ್ವಕ್ಷೇತ್ರದಲ್ಲಿದ್ದರೆ ಧನಿಕನಾಗುವನು. ದ್ವಿತೀಯದಲ್ಲಿದ್ದರೆ ಧನಿಕನೂ, ಕುಟುಂಬಿಯೂ ಆಗುವನು. ತೃತೀಯದಲ್ಲಿದ್ದರೆ ಹಿಂಸಕನಾಗುವನು. ಚತುರ್ಥದಲ್ಲಿದ್ದರೆ ಸಾಧುವಾಗುವನು. ಪಂಚಮದಲ್ಲಿದ್ದರೆ ಹೆಚ್ಚು ಹೆಣ್ಣುಮಕ್ಕಳುಳ್ಳವನಾಗುವನು. ಷಷ್ಠದಲ್ಲಿದ್ದರೆ ಅಲ್ಪಾಗ್ನಿ ಮತ್ತು ಅಲ್ಪಕಾಮ ಇವುಗಳುಳ್ಳವನಾಗಿಯೂ, ಚಂದ್ರನು ಸಪ್ತಮದಲ್ಲಿದ್ದರೆ ಅಸೂಯಾ ಪರನಾಗಿಯೂ, ಅಷ್ಟಮದಲ್ಲಿದ್ದರೆ ವ್ಯಾಧಿಪೀಡಿತನಾಗಿಯೂ, ನವಮಸ್ಥಾನ ದಲ್ಲಿದ್ದರೆ ಮಿತ್ರ ಧನಾನ್ವಿತನಾಗಿಯೂ, ದಶಮದಲ್ಲಿದ್ದರೆ ಧರ್ಮಬುದ್ಧಿ, ಧನ ಇವುಗಳುಳ್ಳವನಾಗಿಯೂ, ಲಾಭಸ್ಥಾನದಲ್ಲಿ (ಏಕಾದಶಸ್ಥಾನದಲ್ಲಿ) ದ್ದರೆ ಖ್ಯಾತಿ, ಬುದ್ಧಿ, ಹಣ ಇವುಗಳಿಂದ ಕೂಡಿದವನಾಗಿಯೂ, ಹನ್ನೆರಡನೆಯಸ್ಥಾನದಲ್ಲಿದ್ದರೆ ಕ್ಷುದ್ರನೂ, ಅಂಗಹೀನನೂ ಆಗುತ್ತಾನೆ. ಇದೇ ಚಂದ್ರನಿಂದ ಬರುವ ಭಾವ ಫಲಗಳೆಂದರಿಯಬೇಕು.

೨೫೧-೨೫೩. ಕುಜನು ಲಗ್ನದಲ್ಲಿದ್ದರೆ ಗಾಯಗೊಂಡ ಶರೀರದವ ನಾಗಿಯೂ, ದ್ವಿತೀಯದಲ್ಲಿದ್ದರೆ ನೀಚಾನ್ನಭೋಜಿಯಾಗಿಯೂ, ನವಮದಲ್ಲಿ

ಲಗ್ನೇ ಕುಜೇ ಕ್ಷತತನುರ್ಧನಗೇ ತು ಕದನ್ನಭುಕ್ ।
ಧರ್ಮಪಾಪಸಮಾಚಾರೋऽನ್ಯತ್ರ ಸೂರ್ಯಸಮೋ ಮತಃ ॥ ೨೫೨ ॥

ವಿದ್ವಾನ್ಧನೀ ಚ ಪ್ರವರಃ ಪಂಡಿತಃ ಸಚಿವೋऽರಿಯುಕ್ ।
ಧರ್ಮಜ್ಞೋ ವಿಖ್ಯಾತಗುಣೋ ಗಾಧೋ ಜ್ಞೇಯರತೋऽರ್ಕವತ್ ॥೨೫೩॥

ವಿದ್ವಾನ್ಸ ವಾಚ್ಯಃ ಕೃಪಣೇ ಸುಖಾಕ್ಷೋ ರಿಪುಗ್ಬುದ್ಧಿಮಾನ್ ।
ನೀಚಸ್ತಪಸ್ವೀ ಚಷ್ಣವನೀ ಲೋಭೀ ದುಷ್ಟಸ್ತನೋಗುರೌ ॥ ೨೫೪ ॥

ಸ್ಮರೀ ಸುಖೀ ಶೀಲಗ್ನಸ್ಥೇ ಕಲಹೀ ಸುರತೋತ್ಸುಕಃ ।
ಸುಖಿತಶ್ಚಾನಪತ್ಯಶ್ಚ ಭೃಗೌ ಜೀವವದನ್ಯತಃ ॥ ೨೫೫ ॥

ದ್ದರೆ ಪಾಪಿಯೂ ಆಗುವನು. ಉಳಿದ ಸ್ಥಾನಗಳಲ್ಲಿ ಅಂದರೆ ಮೂರು, ನಾಲ್ಕು, ಐದು, ಆರು, ಏಳು, ಎಂಟು, ಹತ್ತು, ಹನ್ನೊಂದು, ಹನ್ನೆರಡು ಈ ಸ್ಥಾನಗಳಲ್ಲಿದ್ದರೆ ಸೂರ್ಯನಂತೆಯೇ ಫಲಕೊಡುವನು.

೨೫೩. ಬುಧನು ಲಗ್ನದಲ್ಲಿದ್ದರೆ ಪಂಡಿತನೂ, ದ್ವಿತೀಯದಲ್ಲಿದ್ದರೆ ಧನಿಕನೂ, ತೃತೀಯದಲ್ಲಿದ್ದರೆ ದುಷ್ಟನೂ, ಚತುರ್ಥದಲ್ಲಿದ್ದರೆ ಪಂಡಿತನೂ, ಪಂಚಮದಲ್ಲಿದ್ದರೆ ಮಂತ್ರಿಯೂ, ಷಷ್ಠದಲ್ಲಿದ್ದರೆ ಶತ್ರುರಹಿತನೂ, ಸಪ್ತಮದಲ್ಲಿದ್ದರೆ ಧರ್ಮಜ್ಞನೂ, ಅಷ್ಟಮದಲ್ಲಿದ್ದರೆ ವಿಖ್ಯಾತನೂ, ಮುಂದಿನ ಭಾವಗಳಲ್ಲಿ ಅಂದರೆ ನವಮ, ದಶಮ, ಏಕಾದಶ ಮತ್ತು ದ್ವಾದಶಸ್ಥಾನಗಳಲ್ಲಿದ್ದರೆ ಸೂರ್ಯನಂತೆಯೂ ಫಲವನ್ನು ಕೊಡುವನು.

೨೫೪. ಗುರುವು ಲಗ್ನಾದಿ ದ್ವಾದಶಭಾವಗಳಲ್ಲಿಯೂ ಕ್ರಮವಾಗಿ ಪಾಂಡಿತ್ಯ, ವಾಚಾಲತ್ವ, ಕಾರ್ಪಣ್ಯ (ಜಿಪುಣತನ) ಸೌಖ್ಯ, ಬುದ್ಧಿಶಾಲಿತ್ವ, ಶತ್ರುರಾಹಿತ್ಯ, ಪಿತೃಋಣಾಧಿಕ್ಯ, ನೀಚತ್ವ, ತಾಪಸತ್ವ, ಐಶ್ವರ್ಯ, ಲಾಭ ಮತ್ತು ದುಷ್ಟತನ, ಈ ರೀತಿಯಾದ ಫಲಗಳನ್ನು ಕೊಡುವನು.

೨೫೫. ಶುಕ್ರನು ತನ್ವಾದಿ ಭಾವಗಳಲ್ಲಿದ್ದರೆ ಕ್ರಮವಾಗಿ ಕಾಮಿಯೂ, ಸುಖಿಯೂ, ಕಲಹಶಾಲಿಯೂ, ಸುರತಾಭಿಲಾಷಿಯೂ, ಸುಖಿಯೂ, ನಿರಪತ್ಯನೂ (ಮಕ್ಕಳಿಲ್ಲದವನೂ) ಮುಂತಾದ ಫಲಗಳನ್ನೂ, ಉಳಿದ ಭಾವಗಳಲ್ಲಿ ಅಂದರೆ ಸಪ್ತಮಾದಿ ಭಾವಗಳಲ್ಲಿ ಗುರುವಿನಂತೆಯೂ ಫಲವನ್ನು ಕೊಡುವನು.

ನಿಃ ಸ್ವೋ ರೋಗೀ ಕಾಮವಶೋ ಮಲಿನಃ ಶೈಶವಾರ್ತಿಯುಕ್ ।
ಅಲಸೋ ಲಗ್ನಗೇ ಮಂದೇ ಧರ್ಮಾತ್ಸ್ವೋಜ್ಞಗತೇ ನೃಪಃ ॥ ೨೫೬ ॥

ಗ್ರಾಮಾಧಿಪಃ ಸವಿದ್ವಾಂಶ್ಚ ಚಾರ್ವಂಗೋಽನ್ಯತ್ರ ಸೂರ್ಯವತ್ ।
ಪೂರ್ಣಮುಚ್ಚೇಽಥ ಪಾದೋನಫಲಂ ಮೂಲತ್ರಿಕೋಣಗೇ ॥ ೨೫೭ ॥

ಶುಭಗ್ರಹೇ ದಲಂ ಸ್ವರ್ಕ್ಷೇ ಮಿತ್ರಭೇಂಘ್ರಿಮಿತಂ ಫಲಂ ।
ಶತ್ರುಭೇಽಲ್ಪಂ ತಥಾ ನೀಚಾಸ್ತಂಗತೇ ಫಲಶೂನ್ಯತಾ ॥ ೨೫೮ ॥

---

೨೫೬. ಶನಿಯು ಲಗ್ನಾದಿ ದ್ವಾದಶಭಾವಗಳಲ್ಲಿ ಕ್ರಮವಾಗಿ ನಿತ್ಯದಾರಿದ್ರ್ಯ, ರೋಗ, ಕಾಮ, ಮಾಲಿನ್ಯ, ಶೈಶವಾರ್ತಿ (ಮಕ್ಕಳಪೀಡೆ) ಆಲಸ್ಯ, ಅವ್ಯಕ್ತ ಭಾಷಿತ್ವ ಮುಂತಾದ ಫಲಗಳನ್ನು ಕೊಡುವನು. ಜಾತಕನಿಗೆ ತುಲಾ, ಧನುಸ್ಸು, ಮಕರ, ಕುಂಭ, ಮೀನ (ಇವುಗಳಲ್ಲಿ ಒಂದು ಲಗ್ನವಾಗಿದ್ದರೆ ರಾಜನಿಗೆ ಸಮಾನನೂ, ಗ್ರಾಮಾಧಿಪತಿಯೂ, ವಿದ್ವಾಂಸನೂ, ಸುಂದರನೂ ಈರೀತಿಯಾಗಿ ಕ್ರಮವಾಗಿ ಫಲವು ದೊರೆಯುವುದು.

೨೫೭-೨೫೮. ಯಾವ ಗ್ರಹವೇ ಆಗಲೀ ಉಚ್ಚರಾಶಿಯಲ್ಲಿದ್ದರೆ ಪೂರ್ಣ ಫಲವನ್ನೂ, ಮೂಲತ್ರಿಕೋಣದಲ್ಲಿದ್ದರೆ ಮುಕ್ಕಾಲು ३/४ ಫಲವನ್ನೂ, ಸ್ವಕ್ಷೇತ್ರದಲ್ಲಿದ್ದರೆ ಅರ್ಧಭಾಗ ೧/೨ ಫಲವನ್ನೂ, ಮಿತ್ರಕ್ಷೇತ್ರದಲ್ಲಿದ್ದರೆ ಕಾಲುಭಾಗ ೧/೪ ಫಲವನ್ನೂ, ಶತ್ರುಕ್ಷೇತ್ರದಲ್ಲಿದ್ದರೆ ಅಲ್ಪಫಲವನ್ನೂ, ನೀಚರಾಶಿಯಲ್ಲಿಯೂ ಮತ್ತು ಅಸ್ತನಾಗಿರುವಾಗ ಶೂನ್ಯಫಲವನ್ನೂ ಕೊಡುವುದೆಂದು ತಿಳಿಯಬೇಕು. ಜನ್ಮಕಾಲದಲ್ಲಿ ಸ್ವಕ್ಷೇತ್ರಗತರಾದ ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು ಈ ಗ್ರಹಗಳಿಂದ ಕ್ರಮವಾಗಿ ಕುಲಕ್ಕೆ ಸಮಾನನೂ, ಕುಲಾಧಿಪನೂ, ಬಂಧುಪೂಜ್ಯನೂ, ಧನಿಕನೂ, ಸುಖಿಯೂ, ಭೋಗಿಯೂ, ರಾಜನೂ ಮುಂತಾದ ಫಲಗಳುಂಟಾಗುವುವು. ಮಿತ್ರಕ್ಷೇತ್ರಗಳಲ್ಲಿ ಒಂದು ಗ್ರಹವಿದ್ದರೆ ಪರಾಧೀನ ಜೀವಿಯಾಗಿಯೂ, ಎರಡು ಗ್ರಹಗಳಿದ್ದರೆ ಸ್ನೇಹಿತರಿಂದ ಪೋಷಿಸಲ್ಪಡುವವನೂ, ಮೂರು ಗ್ರಹಗಳಿದ್ದರೆ ತನ್ನ ಜೀವನವನ್ನು ತಾನೇ ನಡೆಸಿಕೊಳ್ಳುವವನೂ, ನಾಲ್ಕು ಗ್ರಹಗಳಿದ್ದರೆ ಬಂಧು

**ಶುಭರಾಶ್ಯಾದಿಕೇ ಖೇಟೇ ಕುಲತುಲ್ಯಃ ಕುಲಾಧಿಕಃ ।**
**ಬಂಧುಪೂಜ್ಯೋಽಥ ಧನವಾನ್ಸುಖೀ ಭೋಗೀ ನೃಪಃ ಕ್ರಮಾತ್ ॥ ೨೫೯ ॥**

**ಪರವಿತ್ತಸುಹೃದ್ಬಂಧುಪೋಷ್ಯಾಗಣಬಲಾಧಿಪೌ ।**
**ನೃಪಶ್ಚ ಮಿತ್ರಭಸ್ತೇಷು ಖೇಟೇಷ್ವೇಕಾದಿಷು ಕ್ರಮಾತ್ ॥ ೨೬೦ ॥**

**ವಿಷಮರ್ಕ್ಷೇಽರ್ಕ ಹೋರಾಯಾಂ ಸಂಸ್ಥಿತೇ ಶುಭಭೇಷು ಚ ।**
**ಖ್ಯಾತೋ ಮಹೋದ್ಯಮೀ ಜಾತಿತೇಜಾ ಧೀಮಾನ್ಧನೀ ಬಲೀ ॥ ೨೬೧ ॥**

**ಶುಭೇಷು ಚಂದ್ರಹೋರಾಯಾಂ ಸ್ಥಿತೇಷು ಸಮರಾಶಿಷು ।**
**ಕಾಂತಿ ಮಾರ್ದವಸೌಭಾಗ್ಯಭೋಗಧೀಮಾನ್ಭವೇನ್ನರಃ ॥ ೨೬೨ ॥**

**ಸೂರ್ಯಹೋರಾಗತಾಃ ಪಾಪಾಃ ಸಮಭೇಷು ಚ ಮಧ್ಯಮಾಃ ।**
**ವಿಷಮರ್ಕ್ಷೇಷು ಭಾಸ್ಕರ್ಯಾ ಸೌಮ್ಯಾ ನೋಕ್ತಫಲಪ್ರದಾಃ ॥ ೨೬೩ ॥**

ಗಳಿಂದ ರಕ್ಷಿಸಲ್ಪಡುವವನೂ, ಐದು ಗ್ರಹಗಳಿದ್ದರೆ ಗಣಗಳಿಗೆ ಒಡೆಯನೂ, ಆರು ಗ್ರಹಗಳಿದ್ದರೆ ಸೇನಾಪತಿಯೂ, ಏಳು ಗ್ರಹಗಳಿದ್ದರೆ ಮಾನವಾಧಿಪನೂ ಅಂದರೆ ರಾಜನೂ ಈರೀತಿ ಫಲವುಂಟಾಗುವುದೆಂದರಿಯಬೇಕು.

೨೬೦-೨೬೨. ಪಾಪಗ್ರಹಗಳು ವಿಷಮರಾಶಿಗಳಲ್ಲಿ ಸೂರ್ಯಹೋರೆಯಲ್ಲಿದ್ದರೆ ಜಾತಕನು ಬಲಿಷ್ಠನಾಗಿಯೂ, ಉತ್ಸಾಹಿಯಾಗಿಯೂ, ಅತಿತೇಜಸ್ವಿಯಾಗಿಯೂ ಆಗುವನು. ಶುಭಗ್ರಹಗಳು ಚಂದ್ರಹೋರೆಯಲ್ಲಿ ಸಮರಾಶಿಗತರಾದಾಗ ಕಾಂತಿಯುಳ್ಳವನೂ, ಸೌಭಾಗ್ಯ ಮತ್ತು ಭೋಗ ಇವುಗಳಿಂದ ಯುಕ್ತನೂ ಮತ್ತು ಬುದ್ಧಿವಂತನೂ ಆಗುವನು. ಸಮರಾಶಿಯಲ್ಲಿ ಪಾಪಗ್ರಹವು ಸೂರ್ಯಹೋರೆಯಲ್ಲಿದ್ದರೆ ಮಧ್ಯಮವಾದ ಫಲವು ದೊರೆಯುವುದು. ಸೌಮ್ಯಗ್ರಹವು ವಿಷಮರಾಶಿಯಲ್ಲಿ ಸೂರ್ಯಹೋರೆಯಲ್ಲಿದ್ದರೂ ಮಧ್ಯಮವಾದ ಫಲವೇ ದೊರೆಯುವುದೆಂದು ತಿಳಿಯಬೇಕು.

೨೬೩-೨೬೪. ಚಂದ್ರನು ಸ್ವದ್ರೇಕ್ಕಾಣ ಮತ್ತು ಮಿತ್ರದ್ರೇಕ್ಕಾಣಗತನಾದರೆ ಜಾತಕನು ಸುರೂಪಿಯಾಗುವನು. ಅನ್ಯದ್ರೇಕ್ಕಾಣದಲ್ಲಿದ್ದರೆ ಆ ದ್ರೇಕ್ಕಾಣಾಧಿಪತಿಗಳಿಗೆ ಸಮಾನವಾದ ಫಲಗಳನ್ನು ಕೊಡುವನು. ಚಂದ್ರನು

ಸ್ವಮಿತ್ರತ್ರ್ಯಂಶಗಶ್ಚಂದ್ರಃ ಸುರೂಪಂ ಗುಣಿನಂ ನರಂ ।
ಕರೋತ್ಯನ್ಯಗತಸ್ತದ್ವತ್ತತ್ತುಲ್ಯಗುಣರೂಪಿಣಂ ॥ ೨೬೪ ॥

ವ್ಯಾಲಾಯುಧೇ ಚತುಷ್ಪಾದಾಂಡಜೇಷು ತ್ರ್ಯಂಶಕೇಷು ಚ ।
ತೀಕ್ಷ್ಣೋ ಹಿಂಸ್ರಶ್ಚ ಭವೇದ್ಗುರುತಲ್ಪಗತೋಟನಃ ॥ ೨೬೫ ॥

ಸ್ತೇನೋ ಭೋಕ್ತಾ ಸಧನಧೀರ್ನೃಪಃ ಕ್ಲೀಬಶ್ಚ ಶತ್ರುಹಾ ।
ವಿಷ್ಟಿಕೃದ್ದಾಸವೃತ್ತಿಶ್ಚ ಪಾಪೋ ಹಿಂಸ್ರೋ ಮತಿರ್ಭವೇತ್ ॥ ೨೬೬ ॥

ಮೇಷಾದಿಕೋತ್ತಮಾಂಶೇಷು ದ್ವಾದಶಾಂಶೇಷು ರಾಶಿವತ್ ।
ಜಾಯಾಬಲವಿಭೂಷಾಢ್ಯಃ ಸತ್ತ್ವಯುಕ್ತೋತಿಸಾಹಸೀ ॥ ೨೬೭ ॥

ತೇಜಸ್ವೀ ಚ ನರಃ ಶೂರೋ ತ್ರಿಂಶಾಂಶೇಽಸೃಜಿ ಸಂಸ್ಥಿತೇ ।
ಆಮಯೀ ವಾ ಸ್ವಭಾರ್ಯಾಯಾಂ ವಿಷಮಃ ಪಾರದಾರಿಕಃ ॥ ೨೬೮ ॥

ಸರ್ಪದ್ರೇಕ್ಕಾಣದಲ್ಲಿದ್ದರೆ ಅತ್ಯುತೀಕ್ಷ್ಣನಾಗಿಯೂ, ಫಶ್ವದ್ರೇಕ್ಕಾಣದಲ್ಲಿದ್ದರೆ ಪ್ರಾಣಿಹಿಂಸಕನೂ, ಚತುಷ್ಪಾದ್ರೇಕ್ಕಾಣದಲ್ಲಿದ್ದರೆ ಗುರುಪತ್ನೀ ಸಂಭೋಗ ಮಾಡುವವನೂ, ಪಕ್ಷಿದ್ರೇಕ್ಕಾಣದಲ್ಲಿದ್ದರೆ ದೇಶಸಂಚಾರಿಯೂ ಆಗುವನು.

೨೬೬-೨೭೨. ಮೇಷಾದಿ ನವಾಂಶಗಳಲ್ಲಿ ಜನಿಸಿದವರು ಕ್ರಮವಾಗಿ ಕಳ್ಳ, ಭೋಗೀ, ಪಂಡಿತ, ಆಢ್ಯ, ರಾಜ, ಷಂಡ, (ನಪುಂಸಕ) ಶೂರ, ಭಾರವನ್ನು ಹೊತ್ತು ಜೀವಿಸುವವನೂ, ಸೇವಾವೃತ್ತಿಯಲ್ಲಿ ಜೀವಿಸುವವನೂ, ಪಾಪೀ, ಹಿಂಸಕ ಮತ್ತು ಬುದ್ಧಿಯಿಲ್ಲದವನೂ, ಈರೀತಿಯಾಗಿ ಫಲವುಂಟಾಗುವುದು. ಆದರೆ ವರ್ಗೋತ್ತಮಾಂಶದಲ್ಲಿ ಮಾತ್ರ ಶುಭಫಲವಿರುತ್ತದೆ. ದ್ವಾದಶಾಂಶಗಳ ಫಲವೂ ರಾಶಿಫಲಗಳಂತೆಯೇ ಲಭಿಸುವುದು. ಕುಜನು ತನ್ನ ತ್ರಿಂಶಾಂಶದಲ್ಲಿದ್ದರೆ ಭಾರ್ಯಾಸಮೇತನೂ, ವೀರ್ಯ, ಭೂಷಣ ಮುಂತಾದುವುಗಳಿಂದ ಕೂಡಿದವನೂ, ಶಕ್ತಿ, ಸಾಹಸ ಇವುಗಳಿಂದ ಪ್ರಸಿದ್ಧನೂ ಆಗುವನು. ಶನಿಯು ತನ್ನ ತ್ರಿಂಶಾಂಶದಲ್ಲಿರುವಾಗ ರೋಗಿಯೂ, ಮೃತಪತ್ನೀಕನೂ, (ಹೆಂಡತಿ ಸತ್ತವನೂ) ಅನ್ಯದಾರರತನೂ, ದುಃಖಿಯೂ, ಗೃಹಪರಿವಾರದೊಂದಿಗೆ ಕೂಡಿವವನೂ ಆಗು

ದುಃಖೀ ಪರಿಚ್ಛದಯುತೋ ಮಲಿನಶ್ಚಾರ್ಕಜೇ ಸ್ವಕೇ ।
ಸುಖಧೀಧನಕೀರ್ತ್ಯರ್ಗಲಸಸ್ತೇಜಸ್ವೀ ಲೋಕಪೂಜಿತಃ ॥ ೨೬೯ ॥

ನೀರುಗ್ಗುಹ್ಯಭವಾನ್ಭೋಗೀ ಜೀವೇ ಸ್ವತ್ರಿಂಶಭಾಗಗೇ ।
ಮೇಧಾಕಲಾಕಾವ್ಯಶಿಲ್ಪವಿವಾದಕಪಟಾಂಚಿತಃ ॥ ೨೭೦ ॥

ಶಾಸ್ತ್ರಾರ್ಥಸಾಹಸಯುತೋ ಬುಧೋ ಸ್ವತ್ರಿಂಶಭಾಗಗೇ ।
ಬಹ್ವಪತ್ಯಸುಖಾರೋಗ್ಯರೋಗರೂಪಾರ್ಥಸಂಯುತಃ ॥ ೨೭೧ ॥

ಲಲಿತಾಂಗೋ ವಿಪ್ರಕೀರ್ಣೇಂದ್ರಿಯಃ ಸ್ಯಾದ್ಭಾರ್ಗವೇ ಸ್ವಕೇ ।
ಶೂರಸ್ತಬ್ಧೌ ಚ ವಿಷಮುವರ್ಧಕೌ ಸದ್ಗುಣಕಾನ್ವಿತೌ ॥ ೨೭೨ ॥

ಸುಖೀಜ್ಞೌ ಚಾರುಚೇಷ್ಟಾಂಗೌ ಚಂದ್ರಾರ್ಕೌ ಚೇತ್ಕುಜಾದಿಗೌ ।
ಮೂಲತ್ರಿಕೋಣಸ್ವಕ್ಷೋರ್ಚ್ಚೇ ಕೇಂಶಸ್ಥಾಸ್ತು ಚ ಯೇ ಗ್ರಹಾಃ ॥ ೨೭೩ ॥

ವನು. ಗುರುವು ಸ್ವತ್ರಿಂಶಾಂಶದಲ್ಲಿದ್ದರೆ ಧನ, ಕೀರ್ತಿ, ಸೌಖ್ಯ ಇವುಗಳಿಂದ ಕೂಡಿದವನಾಗಿ ತೇಜಸ್ವಿಯೂ, ಆರೋಗ್ಯವೃಧಕಾಯನೂ ಆಗುವನು. ಬುಧನು ಸ್ವತ್ರಿಂಶಾಂಶದಲ್ಲಿದ್ದರೆ ಬುದ್ಧಿ, ಕಲೆ, ಕಾವ್ಯ, ವಾಕ್ಪಟುತ್ವ, ಸಾಹಸ ಮುಂತಾದ ಕೆಲಸಗಳಲ್ಲಿ ಆಸಕ್ತನಾಗುವನು. ಶುಕ್ರನು ತನ್ನ ತ್ರಿಂಶಾಂಶದಲ್ಲಿರುವಾಗ ಜಾತಕನು ಅಧಿಕವಾದ ಮಕ್ಕಳು, ಸೌಖ್ಯ, ಆರೋಗ್ಯ, ಧನ, ಸೌಂದರ್ಯ ಮುಂತಾದುವುಗಳಿಂದ ಯುಕ್ತನಾಗುವನು ಮತ್ತು ಸುಕುಮಾರಾಂಗನೂ, ವಿಷಯ ಲಂಪಟನೂ ಆಗುವನು. ಕುಜತ್ರಿಂಶಾಂಶದಲ್ಲಿ ಸೂರ್ಯನಿದ್ದರೆ ಶೂರನೂ, ಚಂದ್ರನಿದ್ದರೆ ಆಲಸನೂ, ಶನಿತ್ರಿಂಶಾಂಶದಲ್ಲಿ ಸೂರ್ಯನಿದ್ದರೆ ಕ್ರೂರನೂ, ಚಂದ್ರನಿದ್ದರೆ ಹಿಂಸಕನೂ; ಗುರುತ್ರಿಂಶಾಂಶದಲ್ಲಿ ಸೂರ್ಯನಿದ್ದರೆ ಗುಣಶಾಲಿಯೂ, ಚಂದ್ರನಿದ್ದರೆ ಆಢ್ಯನೂ; ಬುಧತ್ರಿಂಶಾಂಶದಲ್ಲಿ ಸೂರ್ಯನಿದ್ದರೆ ಸುಖಿಯೂ, ಚಂದ್ರನಿದ್ದರೆ ಪಂಡಿತನೂ; ಶುಕ್ರತ್ರಿಂಶಾಂಶದಲ್ಲಿ ಸೂರ್ಯನಿದ್ದರೆ ಸುಂದರಾಂಗನೂ, ಚಂದ್ರನಿದ್ದರೆ ಸರ್ವಜನಪ್ರಿಯನೂ ಆಗುವನು.

೨೭೩–೨೭೬. ಗ್ರಹಗಳು ಕಾರಕಗಳಾಗಬೇಕಾದರೆ ಉಚ್ಚ, ಮೂಲತ್ರಿಕೋಣ, ಸ್ವಕ್ಷೇತ್ರ ಮುಂತಾದ ಸ್ಥಳಗಳಲ್ಲಿರಬೇಕು. ಹಾಗೆಯೇ ಕೇಂದ್ರಾದಿ

ಅನ್ಯೋನ್ಯಕಾರಕಾಸ್ತೇ ಸ್ಯುಃ ಕರ್ಮಗಸ್ತು ವಿಶೇಷತಃ ।
ಶುಭಂ ವರ್ಗೋತ್ತಮೇ ಜನ್ಮ ವೇಶಿಸ್ಥಾನೇ ವಸದ್ಗ್ರಹೈಃ ॥ ೨೭೪ ॥

ಅಶೂನ್ಯೇಷು ಚ ಕೇಂದ್ರೇಷು ಕಾರಕಾಖ್ಯಗ್ರಹೇಷು ಚ ।
ಗುರುಜನ್ಮೇಶಲಗ್ನೇಶಾಃ ಕೇಂದ್ರಸ್ಥಾ ಮಧ್ಯಸೌಖ್ಯದಾಃ ॥ ೨೭೫ ॥

ಪೃಷ್ಠೋಭಯಕೋದಯರ್ಕ್ಷಸ್ಥಿತಾಸ್ತ್ವಂತ್ಯಾಂತರಾದಿಷು ।
ಪ್ರವೇಶೇ ಭಾಸ್ಕರಕುಜೌ ಭೃಗ್ವೀಜ್ಯೌ ಮಧ್ಯಗೌ ತಥಾ ॥ ೨೭೬ ॥

ಚಂದ್ರಾರ್ಕೀ ಫಲದಾವಂತ್ಯೇ ಸದಾ ಜ್ಞಃ ಫಲದಾಯಕಃ ।
ಲಗ್ನಾತ್ಪುತ್ರೇ ಕಲತ್ರೇ ವಾಚ್ಚಾಚ್ಚುಭೇಶಯುತೇಕ್ಷಿತೇ ॥ ೨೭೭ ॥

ಗಳಲ್ಲಿ (ಕೇಂದ್ರ, ಫಣಪರ, ಆಪೋಕ್ಲಿಮ) ರುವ ಗ್ರಹಗಳು ಅಷ್ಟು ಮುಖ್ಯವಲ್ಲ. ಆದರೆ ದಶಮಕೇಂದ್ರದಲ್ಲಿರುವ ಗ್ರಹವು ಮಾತ್ರ ಕಾರಕಸಂಜ್ಞೆಯನ್ನು ಪಡೆಯುವುದು. ಯಾರ ಜನನವು ಲಗ್ನವು ವರ್ಗೋತ್ತಮಾಂಶಗತನಾಗಿದ್ದಾಗ ಆಗುವುದೋ ಆ ಸಮಯದಲ್ಲಿ ವೇಶಿಸ್ಥಾನಗಳಲ್ಲಿ ಶುಭಗ್ರಹಗಳಿದ್ದು ಕೇಂದ್ರಗಳಲ್ಲಿ ಗ್ರಹಶೂನ್ಯವಾಗಿದ್ದರೆ ಅಂತಹವನ ಜನ್ಮವು ಶುಭಫಲಪ್ರದವಾಗುವುದೆಂದು ತಿಳಿಯಬೇಕು. ಸೂರ್ಯನಿರುವ ರಾಶಿಗೆ ಎರಡನೆಯ ಸ್ಥಾನವನ್ನು ವೇಶಿಸ್ಥಾನವೆಂದು ಕರೆಯುವರು. ಗುರು, ಲಗ್ನಾಧಿಪತಿ, ರಾಶ್ಯಧಿಪತಿ, ಇವರು ಕೇಂದ್ರದಲ್ಲಿದ್ದರೆ ಮಧ್ಯಮಫಲ ಅಂದರೆ ಮಧ್ಯಮವಯಸ್ಸಿನಲ್ಲಿ ಫಲಕೊಡುವುವೆಂದರ್ಥ. ದಶಾನಾಥನು ದಶಾಪ್ರವೇಶದಲ್ಲಿದ್ದು ಪೃಷ್ಠೋದಯರಾಶಿಗಳಲ್ಲಿದ್ದರೆ ಫಲವನ್ನು ಅಂತ್ಯದಲ್ಲಿಯೂ, ಉಭಯೋದಯರಾಶಿಗಳಲ್ಲಿದ್ದರೆ ದಶಾಮಧ್ಯದಲ್ಲಿಯೂ, ಶೀರ್ಷೋದಯರಾಶಿಗಳಲ್ಲಿದ್ದರೆ ದಶಾದಿಯಲ್ಲಿಯೂ ಫಲಕೊಡುವನು. ಸೂರ್ಯ ಮತ್ತು ಕುಜರು ಅಷ್ಟಕವರ್ಗಫಲವನ್ನು ಆದಿಯಲ್ಲಿಯೂ, ಗುರು, ಶುಕ್ರರು ಮಧ್ಯಕಾಲದಲ್ಲಿಯೂ, ಶನಿ, ಚಂದ್ರರು ಅಂತ್ಯಕಾಲದಲ್ಲಿಯೂ, ಬುಧನು ಸರ್ವಕಾಲದಲ್ಲಿಯೂ ಕೊಡುವವರಾಗುವರು.

೨೭೭–೨೮೦. ಜನ್ಮಲಗ್ನದಿಂದಾಗಲೀ, ರಾಶಿಯಿಂದಾಗಲೀ, ಪಂಚಮ, ಸಪ್ತಮರಾಶಿಗಳು ಶುಭಗ್ರಹಗಳಿಂದ ಯುಕ್ತವಾಗಿಯೋ ಅಥವಾ ದೃಷ್ಟವಾ

ಸ್ವಾತ್ತಯೋಃ ಸಂಪದಃ ಸ್ವತ್ವಮನ್ಯಥಾಥಾಂಗತೋದಯಃ ।
ರವೌ ಮೀನೇಽರ್ಕಜಃ ಸ್ತ್ರೀಘ್ನಃ ಪುತ್ರಸ್ಥಸ್ತು ತಥಾ ಕುಜಃ ॥ ೨೭೮ ॥

ಸ್ಥಿತಸ್ತುರ್ಯ್ಯಾಷ್ಟಗೈಃ ಕ್ರೂರೈರ್ಯದ್ವಾ ಕ್ರೂರಾಂತರೇ ಸಿತಃ ।
ಸದ್ಗ್ರಹಾಯುತದೃಷ್ಟಶ್ಚೇದಗ್ನಿಪಾತಾನ್ಮೃತಿಃ ಸ್ತ್ರಿಯಾಃ ॥ ೨೭೯ ॥

ಲಗ್ನಾದ್ವ್ಯಪಾಣಿಗತಯೋಃ ಶಶಿರವ್ಯೋಃ ಸಹ ಸ್ತ್ರಿಯಾ ।
ಏಕೇನ ಯಸ್ಯ ಜನ್ಮಾಹುರಥ ಸಪ್ತಮಸಂಸ್ಥಯೋಃ ॥ ೨೮೦ ॥

---

ಗಿಯೋ ಇದ್ದರೆ ಜಾತಕನಿಗೆ ಪುತ್ರ ಮತ್ತು ಕಳತ್ರಸೌಖ್ಯವುಂಟೆಂದು ಹೇಳಬಹುದು. ಒಂದುವೇಳೆ ಹಾಗಿಲ್ಲದಿದ್ದರೆ ಪುತ್ರ, ಕಳತ್ರಾಭಾವವನ್ನು ಹೇಳಬೇಕು. ಜನ್ಮಲಗ್ನವಾದ ಕನ್ಯಾರಾಶಿಯಲ್ಲಿ ಸೂರ್ಯನಿರುವಾಗ ಶನಿಯು ಕಳತ್ರಸ್ಥಾನವಾದ ಮೀಘನದಲ್ಲಿದ್ದರೆ ಪತ್ನಿಯು ನಾಶವಾಗುವಳೆಂದು ತಿಳಿಯಬೇಕು. ಕನ್ಯಾಲಗ್ನದಲ್ಲಿ ಸೂರ್ಯನಿದ್ದು ಪುತ್ರಸ್ಥಾನದಲ್ಲಿ ಕುಜನಿದ್ದರೆ ಪುತ್ರಮರಣವೊದಗುವುದು. ಶುಕ್ರನಿಗೆ ಚತುರ್ಥಾಷ್ಟಮಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ ಪತ್ನಿಯು ಅಗ್ನಿದಗ್ಧಳಾಗುವಳು. ಶುಕ್ರನು ಪಾಪಗ್ರಹಗಳ ಮಧ್ಯದಲ್ಲಿದ್ದರೆ ಎತ್ತರವಾದ ಸ್ಥಳದಿಂದ ಕೆಳಗೆ ಬಿದ್ದು ಪತ್ನಿಯು ಮೃತಳಾಗುವಳು. ಶುಕ್ರನು ಶುಭಗ್ರಹಗಳಿಂದ ವೀಕ್ಷಿತನಾಗದಿದ್ದರೆ ಬಂಧನಸಂಬಂಧವಾಗಿ ಭಾರ್ಯಾಮರಣವುಂಟಾಗುವುದು. ಚಂದ್ರ, ಸೂರ್ಯರು ಲಗ್ನದಿಂದ ದ್ವಾದಶ, ಷಷ್ಠದಲ್ಲಿರುವಾಗ ಹುಟ್ಟಿದವನು ಏಕಾಕ್ಷನಾಗುವನು ಅಂದರೆ ಒಂದೇ ಕಣ್ಣುಳ್ಳವನಾಗುವನು. ಶುಕ್ರ ಸೂರ್ಯರು ಸಪ್ತಮದಲ್ಲಿರುವಾಗ ಹುಟ್ಟಿದವನು ಅಂಗಹೀನಳಾದ ಪತ್ನಿಯನ್ನು ಹೊಂದುವನು. ನವಮ, ಪಂಚಮರಾಶಿಗಳಲ್ಲಿ ಶುಕ್ರ, ಸೂರ್ಯರಿರುವಾಗ ಹುಟ್ಟಿದವನೂ ಅಂಗಹೀನಳಾದ ಹೆಂಡತಿಯುಳ್ಳವನಾಗುವನು. ಶನಿಯು ಲಗ್ನದಲ್ಲಿರುವಾಗ ಶುಕ್ರನು ಚಕ್ರಸಂಧಿಗಳಾದ ಕಟಕ, ವೃಶ್ಚಿಕ, ಮೀನರಾಶಿಗಳ ಅಂತ್ಯಾಂಶದಲ್ಲಿದ್ದರೆ ಮತ್ತು ಪಂಚಮಸ್ಥಾನವು ಶುಭಗ್ರಹಗಳಿಂದ ದೃಷ್ಟವಾಗದಿದ್ದರೆ ಜಾತಕನು ವಂಧ್ಯಾಪತಿಯಾಗುವನು. ಅಂದರೆ ಇವನಿಗೆ ದೊರೆಯುವ ಪತ್ನಿಯು ಬಂಜೆಯಾಗುವಳು.

ನವಧೀಗತಯೋರ್ವಾಪಿ ವಿಕಲಸ್ತ್ರೀಸಿತಾರ್ಕಯೋಃ ।
ಕೋಣೋದಯೇಸ್ತಾಂತ್ಯಸಂಧೌ ಭೃಗೌ ವಂಧ್ಯಾಪತೇರ್ಜನಿಃ ॥ ೨೮೧ ॥

ಸುತಭಂ ಚೇನ್ನ ಸೌಮ್ಯಾಢ್ಯಮಥಾಂತ್ಯಾಸ್ತೋದಯರ್ಕ್ಷಗೈಃ ।
ಪಾಪೇ ಧೀಸ್ಥೇ ವಿಧೌ ಕ್ಷೀಣಜನ್ಮಾಸುತಕಲತ್ರಿಣಃ ॥ ೨೮೨ ॥

ಸಿತೇ ಶನ್ಯಾರಯೋರ್ವರ್ಗೇ ಲಗ್ನಾದ್ದ್ಯೂನೇ ಸ್ಥಿತೋಽಥವಾ ।
ದೃಷ್ಟೋ ವಾ ಜಾಯತೇ ಬ್ರಹ್ಮನ್ನರೋಽಯಂ ಪಾರದಾರಿಕಃ ।
ತೌ ಚೇತ್ಸೇಂದುಸ್ತ್ರಿಯಾ ಸಾರ್ಧಂ ಪುಂಶ್ಚಲೋ ಜಾಯತೇ ನರಃ ॥೨೮೩॥

ಭೃಗ್ವಬ್ಜಯೋರಸ್ತಗಯೋರ್ನರೋ ಭಾರ್ಯಾ ಸುತೋಽಪಿ ವಾ ।
ನೃಸ್ತ್ರಿಯೋಽಸ್ತು ಶುಭೈರ್ದೃಷ್ಟೌ ತೌ ದ್ವೌ ಪರಿಣತಾಂಗಕೌ ॥ ೨೮೪ ॥

೨೮೧-೨೮೩. ಕ್ಷೀಣಚಂದ್ರನು ಪಂಚಮದಲ್ಲಿದ್ದು ದ್ವಾದಶ, ಸಪ್ತಮ ಮತ್ತು ಜನ್ಮಲಗ್ನಗಳಲ್ಲಿ ಪಾಪಗ್ರಹಗಳಿದ್ದರೆ ಜಾತಕನಿಗೆ ಪುತ್ರ ಮತ್ತು ಪತ್ನಿಯರಿಲ್ಲದೇ ಜನ್ಮವನ್ನು ಕಳೆಯಬೇಕಾಗುವುದು. ಶನಿ, ಕುಜರ ವರ್ಗದಲ್ಲಿ ಶುಕ್ರನು ಲಗ್ನಾತ್ಸಪ್ತಮದಲ್ಲಿರುವಾಗ ಮತ್ತು ಶನಿ, ಕುಜ ಇವರಿಬ್ಬರಿಂದ ನೋಡಲ್ಪಟ್ಟರೆ ಜಾತಕನು ವ್ಯಭಿಚಾರಿಯಾಗುವನು. ಏಕರಾಶಿಗತರಾದ ಶುಕ್ರ, ಚಂದ್ರರಿಗೆ ಸಪ್ತಮದಲ್ಲಿ ಶನಿ, ಕುಜರಿದ್ದರೆ ಭಾರ್ಯಾವಿಹೀನನಾಗಿಯೋ ಅಥವ ಪುತ್ರವಿಹೀನನಾಗಿಯೋ ಆಗುವನು. ಪುರುಷಗ್ರಹ ಮತ್ತು ಸ್ತ್ರೀಗ್ರಹ ಇವೆರಡೂ ಒಂದೇರಾಶಿಯಲ್ಲಿದ್ದು ಅದಕ್ಕೆ ಸಪ್ತಮದಲ್ಲಿ ಶನಿ, ಕುಜರು ಶುಭಗ್ರಹಗಳಿಂದ ನೋಡಲ್ಪಟ್ಟರೆ ಆ ದಂಪತಿಗಳು ವೃದ್ಧಾಪ್ಯದಲ್ಲಿಯೂ ಅತ್ಯಂತ ಸುಖಸಂತೋಷಗಳಿಂದ ಕಾಲಕಳೆಯುವರು.

೨೮೪-೨೮೫. ಲಗ್ನದಿಂದ ಹತ್ತು, ಏಳು ಮತ್ತು ನಾಲ್ಕು ಈ ಮನೆಗಳಲ್ಲಿ ಚಂದ್ರ, ಶುಕ್ರ ಮತ್ತು ಇತರ ಪಾಪಗ್ರಹ ಇವುಗಳಿದ್ದರೆ ಜಾತಕನು ವಂಶನಾಶಕನಾಗುವನು. ಅಂದರೆ ನಿರಪತ್ಯನಾಗುವನು. (ಮಕ್ಕಳಿಲ್ಲದವನಾಗುವನು.) ಬುಧನಿಂದ ಕೂಡಿದ ದ್ರೇಕ್ಕಾಣವು ಯಾವ ರಾಶಿಗೆ ಸಂಬಂಧಿಸುವುದೋ ಆ ರಾಶಿಯು ಲಗ್ನಕೇಂದ್ರದಲ್ಲಿರುವ ಶನಿಯಿಂದ ನೋಡಲ್ಪಟ್ಟರೆ

ಜಾಸ್ತಾಂಬುಗೈರಿಂದುಶುಕ್ರಪಾಪೈರ್ವಂಶವಿನಾಶಕಃ ।
ಶಿಲ್ಪೀ ತ್ರ್ಯಂಶೇ ಬುಧಯುತೇ ಕೇಂದ್ರಸಂಸ್ಥಾರ್ಕವೀಕ್ಷಿತೇ ॥ ೨೮೫ ॥

ದಾಸ್ಯಾಂ ಜಾತಃ ಸೌರಿಭಾಗೇ ರಿಃಫಗೇ ಭೃಗುನಂದನೇ ।
ನೀಚೇರ್ಕೇಂದ್ವೋರಸ್ತಗಯೋರ್ದೃಷ್ಟಯೋಃಸೂರ್ಯಜೇನ ವಾ ॥ ೨೮೬ ॥

ಪಾಪದೃಷ್ಟೌ ಶನಿಕುಜಾವಸ್ತಗೌ ವಾತರುಕ್ಪ್ರದೌ ।
ಕರ್ಕಾಲ್ಯಂಶಗತೇ ಕೇಂದ್ರೇ ಪಾಪಯುಕ್ತೇ ತು ಗುಹ್ಯರುಕ್ ॥ ೨೮೭ ॥

ಪಾಪಾಂತರಗತೇಂಗೇऽಬ್ಜೇ ರವೌ ದ್ಯೂನೇ ತು ಕಷ್ಟಯುಕ್ ।
ಚಂದ್ರೇ ಖೇऽಸ್ತಂಗತೇ ಭೌಮೇ ವಿಕಲೋ ವೇಶಿಗೇರ್ಕಜೇ ॥ ೨೮೮ ॥

ಮಿಥೋ ಬಾಂಶಗಯೋಃ ಶೂಲೀ ರವೀಂದ್ವೋರ್ಯುತಯೋಃ ಕೃಶಃ ।
ನಿಧನಾದಿಧನಾಂತ್ಯಸ್ಥಾ ರವೀಂದ್ವಾರಯಮಾ ಯದಾ ॥ ೨೮೯ ॥

---

ಜಾತಕನು ಶಿಲ್ಪಿಯಾಗುವನು. ಶುಕ್ರನು ದ್ವಾದಶದಲ್ಲಿ ಶನ್ಯಂಶದಲ್ಲಿದ್ದರೆ ದಾಸಿಯ ಮಗನಾಗುವನು. ಸೂರ್ಯ ಚಂದ್ರರು ಸಪ್ತಮದಲ್ಲಿದ್ದು ಶನಿಯಿಂದ ವೀಕ್ಷಿತರಾದರೆ ನೀಚಕಾರ್ಯಾಸಕ್ತನಾಗುವನು.

೨೮೬–೨೮೧. ಶುಕ್ರ ಕುಜರು ಸಪ್ತಮದಲ್ಲಿದ್ದು, ಪಾಪಗ್ರಹಗಳಿಂದ ನೋಡಲ್ಪಟ್ಟರೆ ಜಾತಕನು ವಾತರೋಗಿಯಾಗುವನು. ಚಂದ್ರನು ಕಟಕ ವೃಶ್ಚಿಕಾಂಶಗತನಾಗಿದ್ದು ಪಾಪಯುತನಾಗಿದ್ದರೆ ಗುಹ್ಯರೋಗಿಯಾಗುವನು. ಕುಜ ಶನಿಗಳು ಹನ್ನೆರಡು, ಮೂರು ಈ ರಾಶಿಗಳಲ್ಲಿದ್ದು ಲಗ್ನದಲ್ಲಿ ಚಂದ್ರನೂ ಸಪ್ತಮದಲ್ಲಿ ಸೂರ್ಯನೂ ಇರುವಾಗ ಹುಟ್ಟಿದವನು ಕುಷ್ಠರೋಗಿಯಾಗುವನು. ಚಂದ್ರನು ದಶಮದಲ್ಲಿಯೂ, ಕುಜನು ಸಪ್ತಮದಲ್ಲಿಯೂ, ಶನಿಯು ಸೂರ್ಯನಿಂದ ಎರಡನೆಯ ಸ್ಥಾನದಲ್ಲಿಯೂ ಇದ್ದರೆ ಜಾತಕನು ಅಂಗಹೀನನಾಗಿ ಜನಿಸುವನು. ಸೂರ್ಯಚಂದ್ರರು ಪರಸ್ಪರಾಂಶಗಳಲ್ಲಿದ್ದರೆ ಶೂಲರೋಗಿಯೂ, ಏಕಾಂಶದಲ್ಲಿ ಸೇರಿದ್ದರೆ ಕೃಶನೂ ಆಗುವನು. ಲಗ್ನದಿಂದ ಎಂಟು, ಆರು, ಎರಡು ಮತ್ತು ಹನ್ನೆರಡು ಈ ರಾಶಿಗಳಲ್ಲಿ ಕ್ರಮವಾಗಿ ರವಿ, ಚಂದ್ರ, ಕುಜ, ಶನಿಗಳು ಇದ್ದು ಪಾಪಗ್ರಹಗಳಿಂದ ನೋಡಲ್ಪಟ್ಟರೆ ಜಾತಕನು ಕುರುಡನಾಗುವನು.

ಚಲದ್ಗ್ರಹೇಣ ದೋಷೇಣ ಕುರ್ವಂತ್ಯನಯನಂ ನರಂ ।
ಸೌಮ್ಯಾ ದೃಷ್ಟ್ವಾ ನವಾಯತ್ರಿಧೀಗತಾಃ ಪಾಪಖೇಚರಾಃ ॥ ೨೯೦ ॥

ಕರ್ಣೋಪಘಾತಕಾ ದ್ಯೂನೇ ರದವೈಕೃತ್ಯಕಾರಕಾಃ ।
ಲಗ್ನೇ ಗುರೌ ದ್ಯುನೇ ಮಂದೇ ವಾತರೋಗಾರ್ದಿತೋ ಭವೇತ್ ॥ ೨೯೧ ॥

ಸುಖೇಽಸ್ತೇ ವಾ ಕುಜೇ ಜೀವೇ ಲಗ್ನೇ ವಾರ್ಕಿಯುತೋದಯೇ ।
ಕುಜೇ ನವಾತ್ಮಜೇ ದ್ಯೂನೇ ಸಂಜ್ಞೇಂತ್ಯೇಬ್ಜೇ ಚ ಸೋನ್ಮದಃ ॥ ೨೯೨ ॥

ಧೀಧರ್ಮಾರ್ಥಾಂತ್ಯಗೈಃ ಪಾಪೈರ್ಭಸಮಸ್ಸ್ಯಾನ್ನಿ ಬಂಧನಂ ।
ಸರ್ಪಶೃಂಖಲಯಾ ಶಾಠ್ಯ್ಯಂದ್ರ್ಯಕ್ಷೈರ್ಬಲ್ಯ ಶುಭೇಕ್ಷಿತೈಃ ॥ ೨೯೩ ॥

---

ಪಾಪಗ್ರಹಗಳು ಪಂಚಮ ಸಪ್ತಮಗಳಲ್ಲಿದ್ದು ಶುಭಗ್ರಹಗಳಿಂದ ನೋಡಲ್ಪಡದೇ ಪಾಪ ಗ್ರಹಗಳಿಂದಲೇ ಯುಕ್ತರಾಗಿದ್ದರೆ ಜಾತಕನಿಗೆ ಕರ್ಣವೇಧೆಯುಂಟಾಗುವುದು. ಸಪ್ತಮದಲ್ಲಿದ್ದರೆ ಹಲ್ಲುರೋಗಗಳಿಂದ ಯುಕ್ತನಾಗುವನು. ಲಗ್ನದಲ್ಲಿ ಗುರುವೂ, ಸಪ್ತಮದಲ್ಲಿ ಶನಿಯೂ ಇದ್ದರೆ ವಾತರೋಗಿಯಾಗುವನು. ಕುಜನು ನಾಲ್ಕು, ಏಳು ಈ ರಾಶಿಗಳಲ್ಲಿದ್ದರೂ, ಗುರುವು ಲಗ್ನದಲ್ಲಿದ್ದು ಶನಿಸಂಬಂಧಿಯಾಗಿದ್ದರೂ, ಕುಜನು ಪಂಚಮದಲ್ಲಿಯೂ, ಬುಧನು ಸಪ್ತಮದಲ್ಲಿಯೂ ಇದ್ದರೆ ಉನ್ಮಾದ ರೋಗಿಯಾಗುವನು. ಅಂದರೆ ಜಾತಕನು ಹುಚ್ಚನಂತೆ ತಿರುಗಾಡುವನು.

೨೯೩-೨೯೪. ಪಾಪಗ್ರಹಗಳು ಐದು, ಒಂಭತ್ತು, ಎರಡು, ಹನ್ನೆರಡು ಈ ಮನೆಗಳಲ್ಲಿದ್ದು ಶುಭಗ್ರಹಗಳಿಂದ ದೃಷ್ಟರಾಗದಿದ್ದರೆ ಜಾತಕನು ರಾಜಬಂಧನ ಕ್ಕೊಳಗಾಗುವನು. ಅದೇರೀತಿ ಪಾಪಗ್ರಹಗಳು ದ್ವಿತೀಯದಲ್ಲಿದ್ದು ಅಶುಭ ಗ್ರಹಗಳಿಂದ ನೋಡಲ್ಪಟ್ಟರೆ ಸರ್ಪದಿಂದಲೋ ಅಥವಾ ಕೊಲೆಯಿಂದಲೋ (ಖೂನಿಯಿಂದಲೋ) ಮೃತನಾಗುವನು. ಚಂದ್ರನು ಶನಿಸಹಿತನಾಗಿ ಕುಜ ದೃಷ್ಟನಾದರೆ ಅಪಸ್ಮಾರರೋಗವಿಶಿಷ್ಟನಾಗುವನು. ವಾಕ್ಸ್ಥಾನದಲ್ಲಿ ಈರೀತಿ ಗ್ರಹಗಳಿದ್ದರೆ ಜಾತಕನು ದುರ್ವಚನಯುಕ್ತನಾಗಿ ಕ್ಷಯರೋಗಿಯಾಗುವನು.

ಸಮಂದೇಽಬ್ಜೇ ವಕ್ರದೃಷ್ಟೇಽಪಸ್ಮಾರೀ ದುರ್ಜನಾಃ ಕ್ಷಯೀ।
ರವಿಮಂದಕುಜೈಃ ಖಸ್ಥೈಃ ಸೌಮ್ಯದೃಷ್ಟೈಃ ಸಮಂಡಲೈಃ　　|| ೨೯೪ ||

ಭೃತಕಾಃ ಪೂರ್ವಮುದಿತೈರ್ವರಮಧ್ಯಾಧಮಾ ನರಾಃ ।
ಪುಂಜನೌ ತು ಫಲಂ ಪುಣ್ಯಸ್ತ್ರೀಣಾಂ ಯೋಗ್ಯಂ ವದೇಚ್ಚ ತತ್ || ೨೯೫ ||

ತತ್ಸ್ವಾಮಿಷ್ವಖಿಲಂ ಕಾರ್ಯಂ ತದ್ಭರ್ತೃಮರಣಂ ಮೃತೌ ।
ಲಗ್ನೇಂದುಗಂ ವಪುಶ್ಚೈವ ಸೌಭಾಗ್ಯಂ ಚಾಸ್ತಭೇ ವದೇತ್　　|| ೨೯೬ ||

ಯುಗ್ಮೇಷು ಲಗ್ನಶಶಿನೋರ್ವನಿತಾಪ್ರಕೃತಿಸ್ಥಿತಾಃ ।
ಸಚ್ಛೀಲಭೂಷಣಯುತಾ ಶುಭಸಂದೃಷ್ಟಯೋಸ್ತಯೋಃ　　|| ೨೯೭ ||

ಪುರುಷಾಕೃತಿಶೀಲಾಢ್ಯಾ ತಯೋರೋಜಸ್ಥಯೋರ್ಮತಾ ।
ಅಥ ಪಾಪಾ ಗುಣೋನಾಶ್ಚ ಪಾಪವೀಕ್ಷಿತಯೋಸ್ತಯೋಃ　　|| ೨೯೮ ||

---

ಸೂರ್ಯ, ಶನಿ, ಕುಜ ಇವರು ಸ್ವಕ್ಷೇತ್ರಗತರಾಗಿ ಶುಭಗ್ರಹಗಳಿಂದ ನೋಡಲ್ಪಟ್ಟರೆ ಕ್ರಮವಾಗಿ ಉತ್ತಮ, ಮಧ್ಯಮ, ಅಧಮ ಈ ದರ್ಜೆಯ ಸೇವಕರಾಗುವರು. ಇದೇರೀತಿ ಸ್ತ್ರೀಜಾತಕದಲ್ಲಿದ್ದರೆ ಆಕೆಯು ವ್ಯಭಿಚಾರಿಣಿಯಾಗುವಳೆಂದು ತಿಳಿಯಬೇಕು.

೨೯೫-೨೯೮. ಇನ್ನು ಮುಂದೆ ಸ್ತ್ರೀಜಾತಕದ ವಿಷಯವು ನಿರೂಪಿಸಲ್ಪಡುವುದು:—ಪುರುಷ ಜಾತಕಗಳಿಗೆ ಹೇಳಿದ ಫಲಗಳನ್ನೆಲ್ಲಾ ಸಮಂಜಸವಾಗಿದ್ದರೆ ಸ್ತ್ರೀಜಾತಕಗಳಿಗೂ ಹೇಳಬಹುದು. ಆದರೆ ಭರ್ತೃವಿನ ಮರಣವನ್ನು ಜನ್ಮಲಗ್ನದಿಂದ ಎಂಟನೆಯ ಸ್ಥಾನದಲ್ಲಿಯೂ, ಪತಿಯ ಇತರ ವಿಷಯಗಳನ್ನು ಸಪ್ತಮಸ್ಥಾನದಲ್ಲಿಯೂ ಲಗ್ನ ಮತ್ತು ಚಂದ್ರ ಇವರಿಂದಲೇ ಶರೀರಸೌಂದರ್ಯಾದಿಗಳನ್ನೂ ಅರಿಯಬೇಕು. ಸ್ತ್ರೀಯ ಜನ್ಮಲಗ್ನವು ಯುಗ್ಮರಾಶಿಯಲ್ಲಿ ಸೇರಿದ್ದರೆ ಸ್ತ್ರೀಯ ಸ್ವಭಾವವು ಕೇವಲ ಶೀಲಯುತವಾದದ್ದೆಂದು ಹೇಳಬೇಕು. ಲಗ್ನ ಚಂದ್ರರು ಓಜರಾಶಿಯಲ್ಲಿದ್ದರೆ ಸ್ತ್ರೀಯು ಪುರುಷಸ್ವಭಾವದಲ್ಲಿರುವಳೆಂದೂ, ಅದೇ ಓಜರಾಶಿಗಳು ಪಾಪಗ್ರಹಗಳಿಂದ ನೋಡಲ್ಪಟ್ಟಿದ್ದರೆ ಗುಣರಹಿತಳಾಗಿ ಪುಂಶ್ಚಲಿಯಾಗಿರುವಳೆಂದೂ ಅರಿಯಬೇಕು. ಸ್ತ್ರೀಯ ಜನ್ಮರಾಶಿ ಅಥವಾ

ಕುಜಾರ್ಕೀಜ್ಯಜ್ಞಶುಕ್ರಾಣಾಂ ಕುಜರ್ಕ್ಷೇ ಕ್ರಮಶೋಂಗನಾ ।
ಬಾಲ್ಯದುಷ್ಟಾ ತಥಾ ದಾಸೀ ಸಾಧ್ವೀ ಮಾಯಾವತೀ ತ್ವರಾ ॥ ೨೯೯ ॥

ದೃಷ್ಟಾ ವಾಕ್ಯಶೀಲಾ ಸ್ಯಾತ್ತಯೋರೋಜಸ್ಥಯೋರ್ನತಾ ।
ಅಥ ಪಾಪಾ ಗುಣೋನಾಶ್ಚ ಪಾಪವೀಕ್ಷಿತಯೋಸ್ತಯೋಃ ॥ ೩೦೦ ॥

ಪುನರ್ಭೂಃಸ್ತ್ರೀಕ್ಷ್ಣವಾಕ್ಸಗುಣಾ ವಿಜ್ಞಾ ಖ್ಯಾತಾ ಸ್ಫುಜಿದ್ಗೃಹೇ ।
ಚೌಧೇ ಸಮಾಯಾ ಕ್ಲೀಬಾ ಚ ಸತೀ ಗುಣವತೀ ಚಲಾ ॥ ೩೦೧ ॥

ಇಂದುಭೇ ಸ್ವೈರಿಣೀಶಘ್ನೀ ಗುಣಾಢ್ಯಾ ಶಿಲ್ಪಿಕಾಧಮಾ ।
ವಾಚಾಟಾ ಕುಲಟಾ ಸಿಂಹೇ ರಾಗೀ ಪುಂಧೀರಗಮ್ಯತಾ ॥ ೩೦೨ ॥

ಜೈವೇ ಗುಣಾಢ್ಯಾಲ್ಪರತಿರ್ಗುಣಜ್ಞಾ ಜ್ಞಾನಿನೀ ಸತೀ ।
ದಾಸೀ ನೀಚರತಾ ಸಾಧ್ವೀ ಮಾಂದೇ ದುಷ್ಟಾऽನಪತ್ಯಕಾ ॥ ೩೦೩ ॥

ಲಗ್ನವು ಕುಜ, ಶನಿ, ಗುರು, ಶುಕ್ರ ಇವರ ಸ್ಥಾನಗಳಲ್ಲಿ ಒಂದಾಗಿದ್ದರೆ ಕ್ರಮವಾಗಿ ಬಾಲ್ಯದಲ್ಲಿಯೇ ದುರ್ನಡತೆಯುಳ್ಳವಳೂ, ದಾಸಿಯೂ, ಸಾಧ್ವಿಯೂ ಮಾಯಾವತಿಯೂ, ಆತುರವುಳ್ಳವಳೂ ಆಗುವಳು. ಲಗ್ನವು ಓಜರಾಶಿಯಾಗಿ ಪಾಪಗ್ರಹಯುತವಾಗಿದ್ದರೆ ಆವರ ನಡತೆ ಮುಂತಾದುವುಗಳು ದುಷ್ಟವಾದದ್ದೆಂದು ತಿಳಿಯಬೇಕು. ಇದು ಕುಜ ತ್ರಿಂಶಾಂಶದಲ್ಲಿದ್ದರೆ ಮಾತ್ರ ಫಲವೆಂದು ತಿಳಿಯಬೇಕು.

೩೦೦-೩೦೬. ಶುಕ್ರಗೃಹಗಳಲ್ಲೊಂದು ಲಗ್ನವಾಗಿದ್ದರೆ, ಕ್ರೂರವಾದ ಮಾತುಗಳುಳ್ಳವಳೂ, ಎರಡನೆಯ ಮದುವೆಯಾಗುವಳೂ, ಗುಣಾಢ್ಯಳೂ ವಿಶೇಷವಾದ ತಿಳುವಳಿಕೆಯುಳ್ಳವಳೂ ಆಗುವಳು. ಬುಧಗೃಹಗಳು ಲಗ್ನವಾಗಿ ಕುಜತ್ರಿಂಶಾಂಶದಲ್ಲಿದ್ದರೆ ಕ್ಲೀಬಳೂ, ಗುಣವತಿಯೂ ಆಗುವಳು. ಚಂದ್ರರಾಶಿಯಲ್ಲಿದ್ದರೆ ಸ್ವೇಚ್ಛಾವ್ಯವಹಾರಿಣಿಯೂ, ಗುಣಾಢ್ಯಳೂ, ಶಿಲ್ಪವಿಜ್ಞಾನವುಳ್ಳವಳೂ ಆಗುವಳು. ಸಿಂಹರಾಶಿಯಲ್ಲಿ ಜನಿಸಿ, ಕುಜತ್ರಿಂಶಾಂಶದಲ್ಲಿದ್ದರೆ ವಾಚಾಳಿಯೂ ವ್ಯಭಿಚಾರಿಣಿಯೂ, ಅನುರಾಗಿಣಿಯೂ, ಗಂಡಸಿನಂತೆ ಧೀರಳೂ ಆಗುವಳು. ಗುರುಸ್ಥಾನವು ಲಗ್ನವಾದರೆ ಗುಣಾಢ್ಯಳೂ, ಅಲ್ಪರತಿಯುಳ್ಳವಳೂ ಆಗುವಳು.

ಲಗ್ನೇಂದುಯುಕ್ತೈಸ್ತ್ರಿಂಶಾಂಶೈಃ ಫಲಮೇತದ್ಬಲಾನುಗಂ ।
ದೃಗ್ಗ್ಯೈರ್ಮಿಥೋಽಂಶೇ ಶುಕ್ರಾರ್ಕೀ ಶೌಕ್ರೇ ಚೇದ್ವಾ ಘಟಾಂಶಕೇ ॥೩೦೪॥

ಸ್ತ್ರೀಭಿಃ ಸ್ತ್ರೀ ಮೈಥುನಂ ಯಾತಿ ಮದನಾನಲದೀಪಿತಾ ।
ಶೂನ್ಯೇ ಕಾಪುರುಷೋ ದ್ಯೂನೇ ಬಲೇ ಕ್ಲೀಬೋ ನ ಸದ್ದೃಶಿ ॥ ೩೦೫ ॥

ಬುಧಾರ್ಕ್ಯೋರೀಕ್ಷ್ಣರಭೇ ನಿತ್ಯಂ ಪರದೇಶಪರಾಯಣಃ ।
ಉತ್ಸೃಷ್ಟಾ ಮಂದಗೇ ಸೂರ್ಯೇ ಸ್ತ್ರೀ ಬಾಲವಿಧವಾ ಕುಜೇ ॥ ೩೦೬ ॥

ಪಾಪದೃಷ್ಟೇ ಶನೌ ದ್ಯೂನೇ ಕನ್ಯೈವಾಪದ್ಯತೇ ಜರಾಂ ।
ಆಗ್ನೇಯೈರ್ವಿಧವಾಸ್ತಸ್ಥೈಃ ಪುನರ್ಭೂಃ ಮಿಶ್ರಕೈರ್ಭವೇತ್ ॥ ೩೦೭ ॥

ಶನಿಗೃಹವು ಲಗ್ನವಾದರೆ ದಾಸಿಯೂ, ನೀಚಸೇವಾಸಕ್ತಳೂ, ಅನಪತ್ಯಳೂ ಆಗುವಳು. ಚಂದ್ರ ಮತ್ತು ಲಗ್ನ ಇವುಗಳ ತ್ರಿಂಶಾಂಶಾಧಿಪತಿಗಳ ಬಲಾಬಲಗಳನ್ನು ತಿಳಿದು ಸ್ತ್ರೀಸ್ವಭಾವವನ್ನರಿಯಬೇಕು. ಶನಿ ಶುಕ್ರರು ಯಾವ ರಾಶಿಯಲ್ಲಿದ್ದರೂ ಶನ್ಯಂಶದಲ್ಲಿ ಶುಕ್ರನೂ, ಶುಕ್ರಾಂಶದಲ್ಲಿ ಶನಿಯೂ ಇದ್ದರೆ ಸ್ತ್ರೀಯು ಸ್ತ್ರೀಯರಿಂದಲೇ ಕಾಮೇಚ್ಛೆಯನ್ನು ಪೂರೈಸಿಕೊಳ್ಳುವಳು. ಲಗ್ನದಿಂದಾಗಲೀ, ಚಂದ್ರನಿಂದಾಗಲೀ ಸಪ್ತಮದಲ್ಲಿ ಬುಧಶನಿಗಳಿದ್ದರೆ ಪತಿಯು ಷಂಡನಾಗುವನು. ಬುಧಶನಿಗಳು ಸಪ್ತಮಭಾವದಲ್ಲಿ ಚರರಾಶಿಯಲ್ಲಿದ್ದರೆ ಪರದೇಶಸಂಚಾರಿಯಾಗುವನು. ಸಪ್ತಮದಲ್ಲಿ ಸೂರ್ಯನಿದ್ದರೆ ಪತಿಯಿಂದ ದೂಷಿತಳಾಗುವಳು. ಕುಜನಿದ್ದರೆ ಬಾಲವಿಧವೆಯಾಗುವಳು.

೩೦೭-೩೦೯. ಶನಿಯು ಸಪ್ತಮದಲ್ಲಿದ್ದು ಪಾಪದೃಷ್ಟನಾದರೆ ಕನ್ಯೆಯಾಗಿದ್ದರೂ ಮುದುಕಿಯಂತೆ ಕಾಣುವಳು. ಸಪ್ತಮದಲ್ಲಿ ಪಾಪಗ್ರಹಗಳೇ ಇದ್ದರೆ ವಿಧವೆಯಾಗುವಳು. ಶುಭ ಮತ್ತು ಪಾಪಗ್ರಹಗಳೆರಡೂ ಮಿಶ್ರವಾಗಿದ್ದರೆ ಎರಡು ಮದುವೆಯಾಗುವಳು. ಸ್ತ್ರೀ ಜನ್ಮಲಗ್ನದ ಸಪ್ತಮಭಾವವು ಕ್ರೂರಗ್ರಹಾಕ್ರಾಂತವಾಗಿ ಹೀನಬಲವುಳ್ಳದಾಗಿದ್ದರೆ ಪತಿಯಿಂದ ತ್ಯಕ್ತಳಾಗುವಳು. ಕುಜಶುಕ್ರರು ಪರಸ್ಪರಾಂಶಗತರಾಗಿದ್ದರೆ ಅನ್ಯಪುರುಷನನ್ನಾಶ್ರಯಿಸುವಳು. ಸಪ್ತಮದಲ್ಲಿ

ಕ್ರೂರೇ ಹೀನಬಲೇಽಸ್ತಸ್ಥೇ ಪತಿತ್ಯಕ್ತಾ ನ ಸದ್ದೃಶೀ ।
ಮಿಥೋಂಶಗೈಃ ಸಿತಾರಾ ತು ಕುರುತೋರನ್ಯರತಾಂ ಸ್ತ್ರಿಯಂ ॥ ೩೦೮ ॥

ಶೀತರಶ್ಮಿರ್ಯದಾ ದ್ಯೂನೇ ತದಾ ಭರ್ತುರನುಜ್ಞಯಾ ।
ಸೌರಾರರ್ಕ್ಷೇ ಲಗ್ನಗತೇ ಸೇಂದುಶುಕ್ರೇ ತು ಬಂಧಕೀ ॥ ೩೦೯ ॥

ಮಾತ್ರಾ ಸಾರ್ಧಮಸದ್ದೃಷ್ಟೇ ತಥಾ ಕೌಜೇಂಶಕೇಽಸ್ತಗೇ ।
ಮಂದದೃಷ್ಟೇ ವ್ಯಾಧಿಯೋನಿಃ ಸದ್ಗ್ರಹಾಂಶೇ ಪತಿಪ್ರಿಯಾ ॥ ೩೧೦ ॥

ಮಂದರ್ಕ್ಷೇ ವಾಂಶಕೇ ದ್ಯೂನೇ ವೃದ್ಧೋ ಮೂರ್ಖಃ ಪತಿಃ ಸ್ತ್ರಿಯಾಃ
ಸ್ತ್ರೀಲೋಲಃ ಕ್ರೋಧನಃ ಕೌಜೇ ಬೌಧೇ ವಿದ್ವಾಂಶ್ಚ ನೈಪುಣಃ ॥ ೩೧೧ ॥

---

ಚಂದ್ರನಿದ್ದರೆ ಪತಿಯನುಜ್ಞೆಯಿಂದ ವ್ಯಭಿಚಾರವನ್ನಾಡುವಳು. ಲಗ್ನವು ಶನಿ, ಅಂಗಾರಕ ಇವರ ಕ್ಷೇತ್ರಗಳಲ್ಲೊಂದಾಗಿ ಅಲ್ಲಿ ಶುಕ್ರ, ಚಂದ್ರರಿದ್ದರೆ ಬಂಧಕಿ ಯಾಗುವಳು (ಕುಲಟೆಯಾಗುವಳು) ಸಪ್ತಮಭಾವವು ಕುಜಕ್ಷೇತ್ರವಾಗಿ ಲಗ್ನವು ಕುಜತ್ರಿಂಶಾಂಶವಾಗಿದ್ದರೆ ತಾಯಿಯೊಡನೆ ವ್ಯಭಿಚಾರಮಾಡುವಳು. ಸಪ್ತಮ ಸ್ಥಾನವು ಶನಿಯಿಂದ ನೋಡಲ್ಪಟ್ಟರೆ ವ್ಯಾಧಿಯಿಂದ ಕೂಡಿದ ಯೋನಿಯುಳ್ಳವ ಳಾಗುವಳು. ಇದೇ ಶನಿಯು ಸದ್ಗ್ರಹಾಂಶದಲ್ಲಿದ್ದರೆ ಪತಿವ್ರತೆಯು ಪ್ರಿಯಾ ನುರಾಗಿಣಿಯೂ ಆಗುವಳು.

೩೧೦-೩೧೧. ಸಪ್ತಮರಾಶಿಯು ಶನಿಗೃಹವಾಗಿದ್ದು, ಶನ್ಯಂಶದಲ್ಲಿ ಗ್ರಹವಿದ್ದರೂ ಗಂಡನು ವೃದ್ಧನೂ ಮತ್ತು ಮೂರ್ಖನೂ ಆಗುವನು. ಕುಜ ಕ್ಷೇತ್ರವಾದರೆ ಪತಿಯು ಸ್ತ್ರೀಲೋಲನಾಗುವನು. ಬುಧಕ್ಷೇತ್ರವಾದರೆ ವಿದ್ವಾಂ ಸನೂ ನಿಪುಣನೂ, ಗುರುಕ್ಷೇತ್ರವಾದರೆ ಜಿತೇಂದ್ರಿಯನೂ, ಗುಣಶಾಲಿಯೂ ಚಂದ್ರಕ್ಷೇತ್ರವಾದರೆ ಕಾಮಿಯೂ, ಮೃದುಸ್ವಭಾವದವನೂ, ಶುಕ್ರಕ್ಷೇತ್ರವಾದರೆ ಸೌಭಾಗ್ಯವಂತನೂ, ಶನಿಕ್ಷೇತ್ರವಾದರೆ ಮೃದುಕರ್ಮಕಾರಿಯೂ ಆಗುವನು.

ಜಿತೇಂದ್ರಿಯೋ ಗುಣೀ ಚೈವೇ ಚಾಂದ್ರೇ ಕಾಮೀ ಮೃದುಸ್ತಥಾ ।
ಶಾಕ್ರೇ ಸೌಭಾಗ್ಯಯುಕ್ಕಾಂತಃ ಸೌರೇ ತು ಮೃದುಕರ್ಮಕೃತ್ ॥ ೩೧೨ ॥

ಶುಕ್ರಾಬ್ಜಯೋರ್ಲಗ್ನಗಯೋಃ ಸುಖಿನೀಷ್ಯಾಸಮನ್ವಿತಾ ।
ಜ್ಞೇಂದ್ವೋಃ ಕಲಾಸು ನಿಪುಣಾ ಸುಖಿತಾ ಚ ಗುಣಾನ್ವಿತಾ ॥ ೩೧೩ ॥

ಶುಕ್ರಜ್ಞಯೋಸ್ತು ಸುಭಗಾ ಕಲಾಜ್ಞಾ ರುಚಿರಾಂಗನಾ ।
ಅನೇಕಸೌಖ್ಯಾರ್ಥಗುಣಾ ಲಗ್ನೇ ಸೌಮ್ಯತ್ರಯೇ ಸ್ಥಿತೇ ॥ ೩೧೪ ॥

ಕ್ರೂರೇಽಷ್ಟಮೇಽಷ್ಟಮೇಶಾಂಶೇ ಯಸ್ಯ ಸ್ಯಾತ್ತದ್ವಯಃ ಸಮೇ ।
ವೈಧವ್ಯಂ ಚ ಮೃತಿಸ್ತಸ್ಯಾಃ ಸ್ವಯಂ ಸತ್ಸ್ವರ್ಥಗೇಷು ಚ ॥ ೩೧೫ ॥

ಅಲ್ಪಾಪತ್ಯತ್ವಮುಚ್ಚೇಽಸ್ಯಾಃ ಕನ್ಯಾಲಿಹರಿಗೋಷು ಚ ।
ಸೌರೇ ಮಧ್ಯಬಲೇ ಚಂದ್ರಶುಕ್ರಜ್ಞೈರ್ಬಲವರ್ಜಿತೈಃ ॥ ೩೧೬ ॥

೩೧೨–೩೧೮. ಶುಕ್ರಚಂದ್ರರು ಲಗ್ನದಲ್ಲಿದ್ದರೆ ಸುಖವುಳ್ಳವಳೂ, ಅಸೂಯಾಪರಳೂ ಆಗುವಳು. ಬುಧಚಂದ್ರರು ಲಗ್ನದಲ್ಲಿದ್ದರೆ ನಿಪುಣೆಯೂ ಸುಖವುಳ್ಳವಳೂ ಮತ್ತು ಗುಣಾನ್ವಿತಳೂ ಆಗುವಳು. ಲಗ್ನದಲ್ಲಿ ಶುಕ್ರ ಬುಧರಿದ್ದರೆ ಸುಭಗಳೂ, ಕಲಾವತಿಯೂ ಆಗುವಳು. ಲಗ್ನದಲ್ಲಿ ಮೂರುಶುಭಗ್ರಹಗಳಿದ್ದರೆ ಅನೇಕ ಸೌಖ್ಯ ಮತ್ತು ಅರ್ಥ ಇವುಗಳುಳ್ಳವಳಾಗುವಳು. ಅಷ್ಟಮರಾಶಿಯಲ್ಲಿ ಕ್ರೂರಗ್ರಹಗಳಿದ್ದು ಅಷ್ಟಮಾಂಶದಲ್ಲಿರುವ ಗ್ರಹಗಳಿಗೆ ಎಷ್ಟು ಅಂತರವಿದೆಯೋ ಅಷ್ಟು ವರ್ಷಗಳಲ್ಲಿ ವೈಧವ್ಯವಾಗಲೀ ಅಥವ ಸ್ವಯಂ ಮರಣವಾಗಲೀ ಸಂಭವಿಸುವುದು. ಶುಭಗ್ರಹಗಳು ದ್ವಿತೀಯದಲ್ಲಿಯೂ ಪಾಪಗ್ರಹಗಳು ಅಷ್ಟಮದಲ್ಲಿಯೂ ಇದ್ದರೆ ನಾರಿಯು ಸುಮಂಗಲಿಯಾಗಿಯೇ ಮರಣಹೊಂದುವಳು. ಚಂದ್ರನು ಕನ್ಯಾ, ವೃಶ್ಚಿಕ, ವೃಷಭ, ಸಿಂಹಗಳಲ್ಲಿರುವಾಗ ಜನಿಸಿದವಳಿಗೆ ಸ್ವಲ್ಪಮಕ್ಕಳು ಮಾತ್ರ ಜನಿಸುವರು. ಶನಿಯು ಬಲಾಧಿಕನಾಗಿರದೇ ಬುಧ, ಶುಕ್ರ, ಚಂದ್ರರಿಂದಲೂ, ಬಲಹೀನರಾದ ರವಿ, ಕುಜ, ಗುರುಗಳಿಂದಲೂ ನೋಡಲ್ಪಟ್ಟವನಾಗಿ ಓಜರಾಶಿಯು ಲಗ್ನವಾಗಿದ್ದರೆ ಸ್ತ್ರೀಯು ಗಂಡಸಿನಂತೆ ಆಕಾರವುಳ್ಳವಳೂ, ಕುರೂಪಿಣಿಯೂ ಆಗುವಳು. ಗುರು,

ಶೇಷೈಃ ಸವೀರ್ಯರಾಜರ್ಕ್ಷೇ ಲಗ್ನೇ ಕುರೂಪಿಣೀ ಭವೇತ್ ।
ಜೀವಾರಕವಿಸೌಮ್ಯೇಷು ಬಲಿಷು ಸಮಭೇ ತನೌ ॥ ೩೧೭ ॥

ವಿಖ್ಯಾತಾನೇಕಶಾಸ್ತ್ರಜ್ಞಾ ವನಿತಾ ಬ್ರಹ್ಮವಾದಿನೀ ।
ಪಾಪೇಸ್ತೇ ನವಮಸ್ಥಸ್ಯ ಪ್ರವ್ರಜ್ಯಾಮೇತಿ ಭಾಮಿನೀ ॥ ೩೧೮ ॥

ಉದ್ವಾಹೇ ವರಣೇ ಪ್ರಶ್ನೇ ಸರ್ವಮೇತದ್ವಿಚಿಂತಯೇತ್ ।
ಮೃತ್ಯುಸ್ಥಾನಂ ಪಶ್ಯತಾಂ ಸ್ಯಾದ್ಬಲಿನಾ ಧಾತುಕೋಪತಃ ॥ ೩೧೯ ॥

ನೃಣಾಂ ಮೃತ್ಯುರ್ಗತಂ ಯುಕ್ತಂ ಭಗಾತ್ರ್ಯೇತ್ಥೇಪಭೂರಿಭಿಃ ।
ಸವೀರ್ಯೈರ್ಬಹುಜೋಗ್ನ್ಯಂಬುಕ್ಷತಜ್ವರರುಗುದ್ಭವಃ ॥ ೩೨೦ ॥

ತೃಟ್ಕ್ಷುದ್ಭವಶ್ಚಾಷ್ಟಮಸ್ಥೈಃ ಸೂರ್ಯಾದ್ಯೈಶ್ಚ ಚರಾದಿಷು ।
ಪರಸ್ವಾಧ್ವಪ್ರದೇಶೇಷು ಮೃತ್ಯುಃ ಸೂರ್ಯಮಹೀಜಯೋಃ ॥ ೩೨೧ ॥

---

ಕುಜ, ಶುಕ್ರ ಮತ್ತು ಬುಧರು ಬಲಿಷ್ಠರಾಗಿದ್ದು ಯುಗ್ಮರಾಶಿಯು ಲಗ್ನವಾಗಿದ್ದರೆ ಸ್ತ್ರೀಯು ಶಾಸ್ತ್ರಜ್ಞಳೂ, ಬ್ರಹ್ಮವಾದಿನಿಯೂ ಆಗುವಳು. ಪಾಪಗ್ರಹವು ಸಪ್ತಮದಲ್ಲಿಯೂ, ನವಮಸ್ಥಾನದಲ್ಲಿ ಮತ್ತೊಂದು ಪ್ರವ್ರಜ್ಯಾಯೋಗಕರವಾದ (ಸಂನ್ಯಾಸಯೋಗಕಾರಕವಾದ) ಗ್ರಹವೂ ಇರುವುದಾದರೆ ಆ ಹೆಂಗಸು ಸಂನ್ಯಾಸಿನಿಯಾಗುವಳು.

೩೧೯-೩೨೧. ಈ ಸ್ತ್ರೀಜಾತಕಕ್ಕೆ ಹೇಳಿದ ಫಲಗಳನ್ನು ಸ್ತ್ರೀಯ ವಿವಾಹಕಾಲದಲ್ಲಿಯೂ, ಪ್ರಶ್ನಕಾಲದಲ್ಲಿಯೂ ತಿಳಿಯಬಹುದು. ಇನ್ನು ನಿರ್ಯಾಣವಿಷಯವನ್ನು ತಿಳಿಯಬೇಕಾದರೆ ಅಷ್ಟಮಸ್ಥಾನದ ಬಲಾಬಲಗಳನ್ನು ನೋಡಿ ನಿರ್ಧರಿಸಬೇಕು. ಅಷ್ಟಮದಲ್ಲಿ ಪಾಪಗ್ರಹಗಳಿದ್ದರೂ, ಪಾಪಗ್ರಹಗಳಿಂದ ಆ ಅಷ್ಟಮಸ್ಥಾನವು ದೃಷ್ಟವಾಗಿದ್ದರೂ ಆಯಾ ಗ್ರಹಗಳಿಗೆ ಹೇಳಿದ ವ್ಯಾಧಿಯೇ ಮುಂತಾದುವುಗಳಿಂದ ಜಾತಕನು ಮೃತಿಹೊಂದುವನೆಂದು ಅರಿಯಬೇಕು. ಅನೇಕ ಗ್ರಹಗಳು ಅಷ್ಟಮದಲ್ಲಿದ್ದು ಅನೇಕ ಗ್ರಹಗಳಿಂದ ನೋಡಲ್ಪಟ್ಟಿದ್ದರೆ ಜಾತಕನು ನಾನಾವಿಧವಾದ ವ್ಯಾಧಿಗಳಿಂದ ಮರಣಹೊಂದುವನೆಂದು ತಿಳಿಯಬೇಕು. ಸೂರ್ಯಾದಿ ಗ್ರಹಗಳಿಗೆ ಕ್ರಮವಾಗಿ ಅಗ್ನಿ, ನೀರು, ಆಯುಧ, ಜ್ವರ, ದೀರ್ಘರೋಗ, ಬಾಯಾರಿಕೆ, ಹಸಿವು ಇವುಗಳಿಂದ ಮರಣವುಂಟಾಗುವುದೆಂದು ಹೇಳಿದೆ.

ಸ್ವಬಂಧುಸ್ಥಿತಯೋಃ ಪುಂಸಃ ಶೈಲಾಗ್ರಾಭಿರುತಸ್ಯ ಚ ।
ಬಂಧ್ವಸ್ತಕರ್ಮಗೈರ್ಮಂದಚಂದ್ರಭೂಜೈಃ ಪ್ರಹೌ ಮೃತಿಃ ॥ ೩೨ ॥

ಸ್ತ್ರಿಯಾಂ ಹಿಮೋಷ್ಣಕರಯೋಃ ಸ್ವಜನಾತ್ಪಾಪದೃಕ್ತಯೋಃ ।
ತೋಯೇ ಮೃತೀ ರವಿಯಮಯುತೇಂಗೇ ದ್ವ್ಯುಭಯೋದಯೇ ॥ ೩೩ ॥

ಶಸ್ತ್ರಾಗ್ನಿಜೋ ಶುಭಾಂಶಸ್ಥೇ ಚಂದ್ರೇ ಭೌಮಗೃಹಸ್ಥಿತೇ ।
ಮೃತ್ಯುಶ್ಚಾಥ ಮೃಗೇ ಚಂದ್ರೇ ಕರ್ಕೇ ಮಂದೇ ಜಲೋದರಾತ್ ॥ ೩೪ ॥

ಸ್ತ್ರಿಯಾಮಿಂದೌ ರಕ್ತಶೋಧಾತ್ಸೌರೇ ತು ಹ್ಯಗ್ನಿಪಾತಜಃ ।
ಪುತ್ರಧರ್ಮಸ್ಥಯೋಃ ಪಾಪಯೋರ್ವಧಾತ್ಸದದೃಷ್ಟಯೋಃ ॥ ೩೫ ॥

---

೩೨-೩೩. ಸೂರ್ಯಾಂಗಾರಕರು ದಶಮ, ಚತುರ್ಥದಲ್ಲಿದ್ದರೆ ಶೈಲಾಗ್ರ ಪತನದಿಂದಲೂ, (ಬೆಟ್ಟದ ತುದಿಯಿಂದ ಬೀಳುವಿಕೆಯಿಂದ) ಶನಿ, ಶಶಿ, ಅಂಗಾರಕ ಇವರು ಹತ್ತು, ಏಳು, ನಾಲ್ಕು ಈ ಸ್ಥಾನಗಳಲ್ಲಿದ್ದರೆ ಬಾವಿಯಲ್ಲಿ ಬೀಳುವುದರಿಂದಲೂ, ಕನ್ಯಾರಾಶಿಯಲ್ಲಿ ಚಂದ್ರ, ಸೂರ್ಯರಿದ್ದು ಪಾಪಗ್ರಹಗಳಿಂದ ನೋಡಲ್ಪಟ್ಟಿದ್ದರೆ ಸ್ವಜನರಿಂದಲೂ, ದ್ವಿಸ್ವಭಾವಲಗ್ನದಲ್ಲಿ ಸೂರ್ಯ, ಶನಿಗಳಿದ್ದರೆ ನೀರಿನಲ್ಲಿ ಬಿದ್ದು ಮುಳುಗುವಿಕೆಯಿಂದಲೂ ಮರಣವುಂಟಾಗುವುದೆಂದು ತಿಳಿಯಬೇಕು.

೩೪-೩೫. ಚಂದ್ರನು ಪಾಪಗ್ರಹಗಳ ಮಧ್ಯದಲ್ಲಿ ಕುಜಕ್ಷೇತ್ರಗಳಲ್ಲಿದ್ದರೆ ಶಸ್ತ್ರ, ಅಗ್ನಿ ಇವುಗಳಿಂದಲೂ, ಮಕರದಲ್ಲಿ ಚಂದ್ರನೂ, ಕರ್ಕಾಟಕದಲ್ಲಿ ಶನಿಯೂ ಇದ್ದರೆ ಜಲೋದರರೋಗದಿಂದಲೂ ಮೃತಿಹೊಂದುವನೆಂದರಿಯಬೇಕು. ಕನ್ಯಾರಾಶಿಯಲ್ಲಿ ಚಂದ್ರನಿದ್ದರೆ ರಕ್ತಶೋಭೆಯಿಂದಲೂ, ಶನಿಯಿದ್ದರೆ ಅಗ್ನಿಪಾತದಿಂದಲೂ (ಬೆಂಕಿಯಲ್ಲಿ ಬೀಳುವುದರಿಂದಲೂ,) ಪಾಪಗ್ರಹಗಳು ಶುಭಗ್ರಹಗಳಿಂದ ನೋಡಲ್ಪಡದೇ ಪಂಚಮ ಮತ್ತು ನವಮಸ್ಥಾನಗಳಲ್ಲಿದ್ದರೆ ಕೊಲೆಯಿಂದಲೂ ಜಾತಕನಿಗೆ ಮರಣವುಂಟಾಗುವುದೆಂದು ಹೇಳಿದೆ.

ಸದದೃಷ್ಟೈಶ್ಚ ನಿಗಡೈರ್ದೃಕ್ಕೈರ್ಮೃತ್ಯೌ ತು ಬಂಧನೈಃ ।
ಸ್ತ್ರೀಯಾಂ ಸಪಾಪೇ ದ್ಯೂನೇಽಬ್ಜೇ ಸಿತೇ ಮೇಷೇ ರವೌ ತನೌ ॥ ೩೨೬ ॥

ಮರಣಂ ಸ್ತ್ರೀಕೃತೇ ಗೇಹೇ ಹ್ಯಥ ತುರ್ಯೇ ಕುಜೇ ರವೌ ।
ಯಮೇ ಖೇಂಗತ್ರಿಕೋಣಸ್ಥೈಃ ಕ್ಷೀಣಚಂದ್ರಾಂಶುಭೈಃ ಸಕೃತ್ ॥ ೩೨೭ ॥

ತುರ್ಯೇಽರ್ಕೇ ಖೇ ಕುಜೇ ಕ್ಷೀಣಚಂದ್ರದೃಷ್ಟೇ ಸಮಿದ್ಧತಃ ।
ರಂಧ್ರಖಾಂಗಜಲೈಃ ಕ್ಷೀಣೇಂದ್ವಾರಾರ್ಕರವಿಸಂಯುತೈಃ ॥ ೩೨೮ ॥

ಲಗುಡೇನಾಥ ಶೈರೇವ ಖಾಕಾಂಗತನಯಸ್ಥಿತೈಃ ।
ಧೂಮಾನಿಬಂಧನೈಃ ಕಾರ್ಯಃ ಕುಜನೈರ್ಮರಣಂ ಭವೇತ್ ॥ ೩೨೯ ॥

ಬಂಧ್ವಸ್ತಖಸ್ಥೈರ್ಭೌಮಾರ್ಕಮಂದೈಃ ಶಸ್ತ್ರಾಗ್ನಿರಾಜಭಿಃ ।
ಸೌರೇಂದ್ವಾರೈಃ ಸ್ವಾಂಬುಖಸ್ಥೈಃ ಕ್ಷತಕ್ರಿಮ್ಯಾದಿಭಿರ್ಮೃತಿಃ ॥ ೩೩೦ ॥

---

೩೨೬-೩೩೦. ಅಶುಭಗ್ರಹಗಳು ಶುಭಗ್ರಹಗಳಿಂದ ನೋಡಲ್ಪಡದೇ ಪಂಚಮ ಮತ್ತು ನವಮಸ್ಥಾನದಲ್ಲಿದ್ದರೆ ಬಂಧನದಿಂದಲೂ, ಅಷ್ಟಮದಲ್ಲಿ ಸರ್ಪಪಾಶಾದಿ ದ್ರೇಕ್ಕಾಣದಲ್ಲಿ ಪಾಪಗ್ರಹಗಳದ್ದರೆ ಸಿಗಡಬಂಧನದಿಂದಲೂ (ಬೇಡಿಯಿಂದಲೂ) ಕನ್ಯೆಯಲ್ಲಿ ಶುಕ್ರನೂ, ಮೇಷದಲ್ಲಿ ರವಿಯೂ ಇದ್ದು ಮೀನಲಗ್ನವಾಗಿದ್ದರೆ ಸ್ತ್ರೀನಿಮಿತ್ತವಾಗಿಯೂ ಮರಣಹೊಂದುವನು. ಚತುರ್ಥದಲ್ಲಿ ಸೂರ್ಯನೂ, ದಶಮದಲ್ಲಿ ಕುಜನೂ ಇದ್ದು ಕ್ಷೀಣಚಂದ್ರನಿಂದ ನೋಡಲ್ಪಟ್ಟರೆ ಶೂಲದಿಂದ ತಿವಿಯಲ್ಪಟ್ಟವನಾಗಿಯೂ, ಶನಿಯಿಂದ ವೀಕ್ಷಿತನಾದರೆ ಕಾಷ್ಠದ (ದೊಣ್ಣೆಯ) ಸಂಬಂಧವಾದ ವಿಪತ್ತಿನಿಂದಲೂ ಜಾತಕನಿಗೆ ಮರಣ ಪ್ರಾಪ್ತಿಯಾಗುವುದೆಂದು ತಿಳಿಯಬೇಕು. ಕ್ಷೀಣಚಂದ್ರ, ಕುಜ, ಶನಿ, ರವಿ ಈ ಗ್ರಹಗಳಿಂದ ಎಂಟು, ಹತ್ತು, ಒಂದು ಮತ್ತು ನಾಲ್ಕು ಈ ರಾಶಿಗಳು ಯುಕ್ತವಾಗಿದ್ದರೆ ಜಾತಕನು ದೊಣ್ಣೆಯ ಏಟಿನಿಂದ ಸಾಯುವನೆಂದು ತಿಳಿಯಬೇಕು. ಹತ್ತು, ಒಂಭತ್ತು, ಒಂದು ಮತ್ತು ಐದನೆಯ ಮನೆಯಲ್ಲಿ ಅದೇ ಗ್ರಹಗಳು ಅಂದರೆ ಕ್ಷೀಣಚಂದ್ರ, ಕುಜ, ಶನಿ ಮತ್ತು ರವಿ ಇವರು ಕ್ರಮವಾಗಿದ್ದರೆ ಹೊಗೆ, ಬೆಂಕಿ, ಬಂಧನ, ಅಂಕುಶಾದ್ಯಾಯುಧಗಳು ಇವುಗಳಿಂದ ಮೃತಿಯು ಸಂಭವಿಸುವುದು.

ಖೇಽರ್ಕೇ ತುರ್ಯೇ ಕುಜೇ ಯಾನಪಾತಾದಥ ಕುಜೇಽಸ್ತಗೇ ।
ಯಂತ್ರೋತ್ಪೀಡನತಃ ಕ್ಷೀಣಚಂದ್ರಯುಕ್ತೇ ಮೃತಿರ್ಭವೇತ್ ॥ ೩೩೧ ॥

ಭೌಮಾರ್ಕಶೀತಕರಸ್ಥೈರ್ಜೂಕಾಜಶನಿಭಸ್ಥಿತೈಃ ।
ಕ್ಷೀಣೇಂದ್ವರ್ಕಕುಜೈಃ ಖಾಸ್ತಾಂಬುಸ್ಥೈರ್ವಾರಕರೇ ಮೃತಿಃ ॥ ೩೩೨ ॥

ಬಲ್ಯಾರದೃಷ್ಟೇ ಕ್ಷೀಣೇಂದೌ ಮಂದೇ ನಿಧನಸಂಸ್ಥಿತೇ ।
ಗುಹ್ಯರುಕ್ಕ್ರಿಮಿಶಸ್ತ್ರಾಗ್ನಿದಾರುಜೋ ಮೃತ್ಯುರಂಗಿರಾಃ ॥ ೩೩೩ ॥

ಸೌರೇಽರ್ಕೇಽಸ್ತೇ ಮೃತೋ ಮಂದೇ ಕ್ಷೀಣೇಂದೌ ಭುವ್ಯಸಂಯುತೇ ।
ಲಗ್ನಾತ್ಮಜಾಷ್ಟಮತಪಸ್ಸ್ವರ್ಕಭೌಮಾರ್ಕಿಚಂದ್ರವ್ಯೈಃ ॥ ೩೩೪ ॥

---

೩೩೧-೩೩೫. ಚತುರ್ಥಸ್ಥಾನದಲ್ಲಿ ಅಂಗಾರಕನೂ, ಸಪ್ತಮಸ್ಥಾನದಲ್ಲಿ ಸೂರ್ಯನೂ, ದಶಮಸ್ಥಾನದಲ್ಲಿ ಶನಿಯೂ ಇದ್ದರೆ ಆಯುಧ, ಅಗ್ನಿ, ರಾಜಕೋಪ ಮುಂತಾದುವುಗಳು ಮರಣಕ್ಕೆ ಕಾರಣವಾಗುವುವೆಂದರಿಯಬೇಕು. ದ್ವಿತೀಯದಲ್ಲಿ ಶನಿಯೂ, ಚತುರ್ಥದಲ್ಲಿ ಚಂದ್ರನೂ, ದಶಮದಲ್ಲಿ ಕುಜನೂ ಇದ್ದರೆ ಕ್ಷತಗಳಿಂದಲೂ (ಗಾಯಗಳಿಂದಲೂ) ಕ್ರಿಮಿಗಳಿಂದಲೂ ಜಾತಕನಿಗೆ ಮರಣವುಂಟಾಗುವುದೆಂದು ತಿಳಿಯಬೇಕು.

ಸೂರ್ಯನು ದಶಮದಲ್ಲಿಯೂ, ಕುಜನು ಚತುರ್ಥದಲ್ಲಿಯೂ ಇರುವಾಗ ವಾಹನಪಾತದಿಂದಲೂ, ಕುಜನು ಸಪ್ತಮದಲ್ಲಿಯೂ, ಶನಿ, ಚಂದ್ರ, ಸೂರ್ಯರು ಲಗ್ನದಲ್ಲಿಯೂ ಇರುವಾಗ ಯಂತ್ರಪೀಡನದಿಂದ ಮರಣಸಂಭವಿಸುವುದು. ತುಲಾದಲ್ಲಿ ಕುಜನೂ, ಮೇಷದಲ್ಲಿ ಶನಿಯೂ, ಮಕರದಲ್ಲಿ ಚಂದ್ರನೂ ಇರುವಾಗ ಅಮೇಧ್ಯಮಧ್ಯದಲ್ಲಿ ಸಾಯುವನು. ಕ್ಷೀಣ ಚಂದ್ರನು ಬಲಿಷ್ಠನಾದ ಕುಜವೀಕ್ಷಿತನಾಗಿ ಶನಿಯು ಅಷ್ಟಮದಲ್ಲಿರುವಾಗ ಗುಹ್ಯರೋಗದಿಂದಲೂ, ಕ್ರಿಮಿಬಾಧಾದಿಗಳಿಂದಲೂ, ಶಸ್ತ್ರಾಗ್ನಿಬಾಧೆಯಿಂದಲೂ ಸಾಯುವನು. ಕುಜಸಹಿತನಾದ ರವಿಯು ಸಪ್ತಮದಲ್ಲಿಯೂ, ಶನಿಯು ಅಷ್ಟಮದಲ್ಲಿಯೂ, ಕ್ಷೀಣಚಂದ್ರನು ಚತುರ್ಥದಲ್ಲಿಯೂ ಇರುವಾಗ ಹುಟ್ಟಿದವನು ಪಕ್ಷಿಯಿಂದ ಮೃತನಾಗುವನು. ಲಗ್ನದಲ್ಲಿ ರವಿಯೂ, ಪಂಚಮದಲ್ಲಿ

ಶೈಲಶೃಂಗಪವಿಃ ಪಾತಾದ್ಯೈಶ್ಚ ತೇಷಾಂ ಮೃತಿರ್ಭವೇತ್ ।
ದೃಕ್ಕೋಣಂತರೇ ತು ದ್ವಾವಿಂಶಸ್ತತ್ಪತೇರ್ಮೃತ್ಯುಗೋಽಪಿ ವಾ ॥ ೩೩೫ ॥

ಸ್ವಗುಣೈರ್ನಿಧನಂ ಕುರ್ಯಾದ್ಬಲವಾನ್ಯೋ ದ್ವಯೋರ್ಭವೇತ್ ।
ಲಗ್ನಾಂಶೇಶಸದೃಕ್ಸ್ಥಾನೇ ಮೃತ್ಯುರ್ಯೋಗೇಕ್ಷಣಾದಿಭಿಃ ॥ ೩೩೬ ॥

ಮೋಹೋಽಂತೇಽನುದಿತಾಂಶಸ್ಯ ತುಲ್ಯೋ ದ್ವಿಘ್ನಃ ಸ್ವಪೇಕ್ಷಿತೇ ।
ಶುಭೇಕ್ಷಿತೇ ತು ತ್ರಿಗುಣಃ ಕಲ್ಪ್ಯಮನ್ಯತ್ಸ್ವಬುದ್ಧಿತಃ ॥ ೩೩೭ ॥

ಅಂಗಾರಕನೂ, ಅಷ್ಟಮದಲ್ಲಿ ಶನಿಯೂ, ನವಮದಲ್ಲಿ ಚಂದ್ರನೂ ಇರುವಾಗ ಹುಟ್ಟಿದವನು ಪರ್ವತದ ಶಿಖರದಿಂದ ಬಿದ್ದು ಅಥವ ಸಿಡಿಲಿನಿಂದ ಹೊಡೆಯಲ್ಪಟ್ಟು ಮೃತಿಹೊಂದುವನು. ಜಾತಕನು ಯಾವ ದ್ರೇಕ್ಕಾಣದಲ್ಲಿ ಹುಟ್ಟುವನೋ ಅದರಿಂದ ಇಪ್ಪತ್ತೆರಡನೆಯ (೨೨) ದ್ರೇಕ್ಕಾಣಕ್ಕೆ ಯಾರು ಸ್ವಾಮಿಯಾಗಿರುವನೋ ಆ ಗ್ರಹಕ್ಕೆ ಉಕ್ತವಾಗಿರುವ ಅಗ್ನಿಜಲಾದಿಗಳಿಂದ ಜಾತಕನಿಗೆ ಮರಣಸಂಭವಿಸುವುದೆಂದು ಹೇಳಬೇಕು. ಅಥವ ಅಷ್ಟಮಸ್ಥಾನದಲ್ಲಿರುವ ಬಲಿಷ್ಠರಾದ ಗ್ರಹಗಳಿಂದ ಆ ಗ್ರಹದ ಲಕ್ಷಣಕ್ಕನುಸಾರವಾಗಿ ಮೃತ್ಯುವನ್ನು ವಿವರಿಸಿ ಹೇಳಬಹುದು.

೩೩೬-೩೩೭. ಲಗ್ನ, ಹೋರಾ, ನವಾಂಶ ಇವುಗಳ ಅಧಿಪತಿಗಳು ವಿಶೇಷವಾಗಿರುವ ರಾಶಿಸದೃಶವಾದ ಪ್ರದೇಶಗಳಲ್ಲಿ ಮರಣವಾಗುವುದೆಂದೂಹಿಸಬೇಕು. ಮತ್ತು ಅಷ್ಟಮಸ್ಥಾನಕ್ಕಿರುವ ಗ್ರಹದೃಷ್ಟಿಯಿಂದಲೂ ಮರಣಕ್ರಮವನ್ನು ತಿಳಿಯಬಹುದು. ಹುಟ್ಟುವಾಗ ಲಗ್ನದಲ್ಲಿ ಎಷ್ಟು ನವಾಂಶಗಳು ಕಳೆದುಹೋಗಿರುತ್ತವೆಯೋ ಅಷ್ಟುಕಾಲ ಮರಣ ಸಮಯದಲ್ಲಿ ಮೂರ್ಛೆ ಹೊಂದಿರುತ್ತಾನೆಂದು ತಿಳಿಯಬೇಕು. ಲಗ್ನವು ಸ್ವಸ್ವಾಮಿದೃಷ್ಟವಾಗಿದ್ದರೆ ದ್ವಿಗುಣಿತವಾಗಿಯೂ, ಶುಭಗ್ರಹಗಳಿಂದ ನೋಡಲ್ಪಡದಿದ್ದರೆ ತ್ರಿಗುಣಿತವಾಗಿಯೂ ಇರುವ ಸಮಯವನ್ನು ಮರಣಕಾಲದಲ್ಲಿ ಜಾತಕನು ಮೂರ್ಛೆಯಲ್ಲಿ ಕಳೆಯುತ್ತಾನೆ.

ವಹ್ನ್ಯಂಬು ಭಸ್ಮಸಂಕ್ಲೇದಶೋಷವ್ಯಾಲೈರ್ಮೃತಿಸ್ಥಿತೈಃ ।
ಬಿಂದುತಸ್ತಿಂತನೀಯಶ್ಚ ಯಥೋಕ್ತೋ ಮೃತ್ಯುರಂಗಿನಃ ॥ ೩೩೮ ॥

ಗುರುಃ ಶಶಾಂಕಶುಕ್ರೌ ಚ ಸೂರ್ಯಭೌಮೌ ಯಮೇಂದುಜೌ ।
ದೇವಪಿತೃತಿರಿಕ್ತ್ವೋऽಥ ನಾರಕಾನ್ಕುರ್ಯುರಪ್ಯಮೇ ॥ ೩೩೯ ॥

ರವೀಂದುಬಲವತ್ತ್ರ್ಯಂಶನಾಥಾಚ್ಚೈತ್ರೇಷ್ಟಸಮಾಧಮಾಃ ।
ತುಂಗಗಃ ಸಾಂದನೂಕೇನು ಗತಿಃ ಷಡ್ರಂಧ್ರದೃಕ್ಕಪಃ ॥ ೩೪೦ ॥

ದ್ಯೂನಸ್ಥಿತೋ ಗುರುರ್ವಾಪಿ ರಿಪುಕೇಂದ್ರವಿನಾಶಗಃ ।
ಸ್ವೋಚ್ಚಸ್ಥೋಂಗೇ ವ್ಯಯೇ ಸೌಮ್ಯಭಾಗೇ ಮೋಕ್ಷೋ ಬಲಾನ್ವಿತಃ ॥

೩೩೮-೩೪೧. ೨೨ನೆಯ (ಇಪ್ಪತ್ತೆರಡನೆಯ) ದ್ರೇಕ್ಕಾಣವು ಪಾಪಗ್ರಹದ್ದಾಗಿದ್ದರೆ ಮೃತದೇಹವು ಅಗ್ನಿಯಲ್ಲಿಯೂ, ಶುಭಗ್ರಹ ದ್ರೇಕ್ಕಾಣವಾದರೆ ನೀರಿನಲ್ಲಿಯೂ, ಮಿಶ್ರದ್ರೇಕ್ಕಾಣವಾದರೆ ಒಣಗಿ ಹೋಗುವಿಕೆಯಿಂದಲೂ ನಾಶವಾಗುವುದು. ವ್ಯಾಳದ್ರೇಕ್ಕಾಣವಾದರೆ ಅಂದರೆ ಕರ್ಕಟಕದ ೧-೩ ಒಂದು, ಮೂರು, ವೃಶ್ಚಿಕದ ೧-೨ ಒಂದು, ಎರಡು, ಮೀನದ ೨ ಎರಡು ಈ ದ್ರೇಕ್ಕಾಣಗಳಾದರೆ ಮೃತದೇಹವು ದುಷ್ಟಪ್ರಾಣಿಗಳಿಂದ ಭಕ್ಷಿತವಾಗುವುದು. ಗುರು, ಚಂದ್ರ ಶುಕ್ರರು, ಸೂರ್ಯ ಕುಜರು, ಶನಿ ಬುಧರು, ಈ ಗ್ರಹಗಳಿಗೆ ಕ್ರಮವಾಗಿ ದೇವ, ಪಿತೃ, ತಿರ್ಯಕ್, ನರಕ ಈ ಲೋಕಗಳು ಉಕ್ತವಾಗಿವೆ. ಈ ಲೋಕಗಳನ್ನು ಸೂರ್ಯ ಚಂದ್ರರ ದ್ರೇಕ್ಕಾಣಾಧಿಪತಿಯಿಂದ. ನಿಶ್ಚಯಿಸಿ, ಅಲ್ಲಿಂದ ಭೂಲೋಕಕ್ಕೆ ಬಂದು ಜನಿಸಿದವನೆಂದು ತಿಳಿಯಬೇಕು. ಜನ್ಮಕಾಲದಲ್ಲಿ ಆರು, ಏಳು, ಎಂಟನೆಯ ಸ್ಥಾನಗಳು ಗ್ರಹವರ್ಜಿತಗಳಾದರೆ (ಆ ಸ್ಥಾನಗಳಲ್ಲಿ ಗ್ರಹಗಳಿಲ್ಲದಿದ್ದರೆ) ಷಷ್ಠಾಷ್ಟಮಭಾವಗಳಲ್ಲಿ ಯಾವ ದ್ರೇಕ್ಕಾಣಗಳಿರುವುವೋ, ಅವುಗಳಲ್ಲಿ ಯಾವುದು ಬಲಿಷ್ಠವಾಗಿರುವುದೋ ಅಂತಹವರ ಲೋಕವನ್ನು ಜಾತಕನು ತನ್ನ ಮರಣಾನಂತರ ಹೊಂದುವನೆಂದು ತಿಳಿಯಬೇಕು. ಷಷ್ಠಾಷ್ಟಮಗಳಲ್ಲಾಗಲೀ ಕೇಂದ್ರಗಳಲ್ಲಾಗಲೀ ಇರುವ ಗುರುವು ಉಚ್ಚಸ್ಥಾನಗತನಾಗಿದ್ದರೆ ಮತ್ತು ಮಿಕ್ಕ ಗ್ರಹಗಳು ಗ್ರಹವರ್ಜಿತಗಳಾದರೆ ಜಾತಕನು ಮೃತನಾಗಿ ಶಾಶ್ವತವಾದ ಮುಕ್ತಿಯನ್ನು ಹೊಂದುವನೆಂದು ಅರಿಯಬೇಕು.

ಆಧಾನಜನ್ಮಾಜ್ಞಾನೇ ತು ಪೃಚ್ಛತಾಂ ಲಗ್ನತೋ ವದೇತ್ ।
ಪೂರ್ವಾಪರಾರ್ಧೈರ್ಲಗ್ನಸ್ಯ ಸೌಮ್ಯಯಾಮ್ಯೇಽಯನೇ ಜನಿಃ ॥ ೩೪೨ ॥

ಲಗ್ನತ್ರಿಕೋಣೇ ಧೀಜ್ಯತ್ರ್ಯಂಶೈರ್ನಿಕಲ್ಪ್ಯಾವಯವಾಃ ಸಮಾಃ ।
ಗ್ರೀಷ್ಮೋಂಗೇಽರ್ಕೇ ಪರೈರನ್ಯಾಯನರ್ತು ತು ಚಾರ್ಕಭಾತ್ ॥ ೩೪೩ ॥

ಚಂದ್ರಜ್ಞಜೀವಾ ವ್ಯತ್ಯಸ್ತಾಃ ಶುಕ್ರಾರಾರ್ಕಿಭಿರನ್ಯಥಾ ।
ದೃಕ್ಕೈರಾದ್ಯೈಃ ಪೂರ್ವಮಾಸಸ್ತಿಥಿಸ್ತತ್ರಾನುಪಾತತಃ ॥ ೩೪೪ ॥

ವಿಲೋಮಜನ್ಮಭಾಗ್ನೈಶ್ಚ ವೇಲಾ ರಾತ್ರಿದ್ಯುಸಂಜ್ಞಕೇ ।
ತ್ರಿಕೋಣೋತ್ತಮವೀರ್ಯಂ ಹಿ ಲಗ್ನಂ ವಾ ಲಭನಾಭನೇ ॥ ೩೪೫ ॥

೩೪೨-೩೪೩. ಇನ್ನು ನಷ್ಟಜಾತಕವನ್ನು ಕಂಡುಹಿಡಿಯುವ ಉಪಾಯಗಳು ವಿವರಿಸಲ್ಪಡುತ್ತವೆ :—

ಆಧಾನಕಾಲ ಅಥವ ಜನ್ಮಕಾಲ ಇವುಗಳು ತಿಳಿಯದೇ ಹೋದರೆ ಗಣಕನು ಪ್ರಶ್ನೆಮಾಡುವವನ ಪ್ರಶ್ನಲಗ್ನದಿಂದಲೇ ಜಾತಕವನ್ನು ನಿರ್ಮಿಸಬಹುದು. ಪೃಚ್ಛಕನು ಲಗ್ನಪ್ರಥಮಹೋರೆಯಲ್ಲಿ ಪ್ರಶ್ನೆಮಾಡಿದರೆ ಉತ್ತರಾಯಣದಲ್ಲಿಯೂ ದ್ವಿತೀಯಹೋರೆಯಲ್ಲಿ ಪ್ರಶ್ನೆಮಾಡಿದರೆ ದಕ್ಷಿಣಾಯನದಲ್ಲಿಯೂ ಜನಿಸಿದವನೆಂದು ತಿಳಿಯಬೇಕು. ಪ್ರಶ್ನಕಾಲದ ಮೂರು ದ್ರೇಕ್ಕಾಣಗಳಿಂದ ಕ್ರಮವಾಗಿ ಗುರುವು ಒಂದು, ಐದು ಮತ್ತು ಒಂಭತ್ತನೆಯ ರಾಶಿಗಳಲ್ಲಿರುವನೆಂದು ನಿಶ್ಚಯಿಸಿ ಗುರುಚಾರದಿಂದ ಜಾತಕನ ವಯಸ್ಸನ್ನು ಊಹಿಸಿ ಹೇಳಬೇಕು. ಮತ್ತು ಪ್ರಶ್ನಲಗ್ನದ ದ್ವಾದಶಾಂಶಕ್ಕನುಗುಣವಾಗಿ ಅಷ್ಟನೆಯ ರಾಶಿಗಳಲ್ಲಿ ಜನ್ಮಕಾಲದಲ್ಲಿ ಗುರುವು ಇರುವನೆಂದೂ ಊಹಿಸಬಹುದು. ಪ್ರಶ್ನಲಗ್ನದಲ್ಲಿರುವ ಸೂರ್ಯಾದಿಗ್ರಹಗಳಿಂದ ಜನನಕಾಲದಲ್ಲಿ ಗ್ರೀಷ್ಮಾದಿ ಋತುಗಳನ್ನು ಕಂಡುಹಿಡಿಯಬೇಕು.

೩೪೪-೩೪೫. ಅಯನಗಳಿಗೆ ಋತುಗಳು ವ್ಯತ್ಯಾಸವಾಗಿ ಬಂದರೆ ಚಂದ್ರ, ಬುಧ, ಗುರುಗಳಿಗೆ ಶುಕ್ರ, ಕುಜ, ಶನಿಗಳ ಋತುಗಳನ್ನು ವ್ಯತ್ಯಸ್ತವಾಗಿ ಹೇಳಬಹುದು. ದ್ರೇಕ್ಕಾಣದ ಪೂರ್ವಾರ್ಧವು ಋತುವಿನ ಮೊದಲನೆಯ

ಯಾವದ್ಗತೋ ವಿಧುರ್ಲಗ್ನಾತ್ತಾವಚ್ಚಂದ್ರಾಚ್ಚ ಜನ್ಮಭೇ ।
ಗೋಹರೀ ಯುಗ್ಮವಸುಭೇ ಕ್ರಿಯಜೂಕೇ ಮೃಗಾಂಗನೇ ॥ ೩೪೬ ॥

ದಶಾಷ್ಟಸಪ್ತವಿಷಯೇ ಗುಣ್ಯಾಃ ಶೇಷಾಃ ಸ್ವಸಂಖ್ಯಯಾ ।
ಜೀವಭೌಮಕವಿಜ್ಞಾಃ ಸ್ಯು ರಾಘವಾದ್ಯಾಯ ರೇಜ್ಞವತ್ ॥ ೩೪೭ ॥

ಭಾನಾಂ ನಿತ್ಯೋ ವಿಧಿಃ ಖೇಟವಶಾದಾಹರ್ಗಣಾತ್ತಥಾ ।
ಸಪ್ತಘ್ನಂ ಭಹೃತಂ ಶೇಷಮೃಕ್ಷಂ ನವಧನರ್ಣತಃ ॥ ೩೪೮ ॥

ದ್ವಿಘ್ನೇ ಸಮುತ್ಸರ್ಗವಾಸಾಃ ಸ್ಯುಃ ಪಕ್ಷತಿಥ್ಯೌ ಗಜಾಯುತೇ ।
ಸಪ್ತಘ್ನಂ ಹೋನಿಶಾರ್ಕ್ನಾರ್ಣೇಷುಘ್ನೇಂಗಾಂಶೇಷ್ವಹೋರಿಕಾ ॥ ೩೪೯ ॥

ತಿಂಗಳಿಂದೂ ಅಪರಾರ್ಧವು ಎರಡನೆಯ ತಿಂಗಳಿಂದೂ ತಿಳಿಯಬೇಕು. ದ್ರೇಕ್ಕಾಣಕ್ಕೆ ಬಂದಿರುವ ತಿಂಗಳಿನ ಅನುಪಾತದಿಂದ ತಿಥಿಗಳನ್ನು ಊಹಿಸಿ ತಿಳಿದುಕೊಳ್ಳಬೇಕು. ರಾತ್ರಿ ಸಂಜ್ಞಕವಾದ ಲಗ್ನಗಳಿಂದ ಹಗಲುಜನನವೆಂದೂ, ಹಗಲುಸಂಜ್ಞಕವಾದ ಲಗ್ನಗಳಿಂದ ರಾತ್ರಿಜನನವೆಂದೂ ತಿಳಿಯಬೇಕು. ಚಂದ್ರನವಾಂಶಕ್ಕೆ ಸಂಬಂಧಿಸಿದ ನಕ್ಷತ್ರವೇ ಜನ್ಮನಕ್ಷತ್ರವೆನಿಸುವುದು. ಪ್ರಶ್ನಲಗ್ನಕ್ಕೆ ತ್ರಿಕೋಣದಲ್ಲಿರುವ ರಾಶಿಗಳಲ್ಲಿ ಬಲಿಷ್ಠವಾದ ರಾಶಿಯೇ ಪ್ರಶ್ನಲಗ್ನವೆಂದು ತಿಳಿಯಬೇಕು. ಪ್ರಶ್ನಕಾಲದಲ್ಲಿ ಲಗ್ನ, ಚಂದ್ರರಿಗೆ ಎಷ್ಟು ಅಂತರವಿರುವುದೋ ಅಷ್ಟೇ ಅಂತರವನ್ನು ಚಂದ್ರರಾಶಿಗೆ ಸೇರಿಸಿ ಬರುವ ರಾಶಿಯನ್ನೇ ಜನ್ಮಲಗ್ನವೆಂದು ನಿರ್ಧರಿಸಬೇಕು. ಈಗ ಪ್ರಕಾರಾಂತರದಿಂದ ನಷ್ಟಜಾತಕವನ್ನು ಅನಯನಮಾಡಲು ಮೇಷಾದಿ ದ್ವಾದಶರಾಶಿಗಳಿಗೂ ಕ್ರಮವಾಗಿ ಏಳು, ಹತ್ತು, ಎಂಟು, ನಾಲ್ಕು, ಹತ್ತು, ಐದು, ಏಳು, ಎಂಟು, ಒಂಭತ್ತು, ಐದು, ಹನ್ನೊಂದು, ಹನ್ನೆರಡು ಈ ಸಂಖ್ಯೆಯನ್ನು ರಾಶಿಗುಣಕವೆಂದೂ ರವ್ಯಾದಿಗ್ರಹಗಳಿಗೆ ಕ್ರಮವಾಗಿ ಐದು, ಐದು, ಎಂಟು, ಐದು, ಹತ್ತು, ಏಳು, ಐದು ಈ ಸಂಖ್ಯೆಗಳನ್ನು ಗ್ರಹಗುಣಕವೆಂದೂ ತೀರ್ಮಾನಿಸಿರುವರು. ಇದನ್ನು ತಿಳಿದು ಪ್ರಶ್ನಲಗ್ನಸ್ಫುಟವನ್ನು ಲಿಪ್ತೀಮಾಡಿ ರಾಶಿ ಮತ್ತು ಗ್ರಹ ಗುಣಕಸಂಖ್ಯೆಗಳಿಂದ ಗುಣಿಸಿ, ಪುನಃ ಬಂದ ಲಬ್ಧವನ್ನು ಏಳರಿಂದ ಗುಣಿಸಿ, ಒಂಭತ್ತನ್ನು ಕಳೆದು ಇಪ್ಪತ್ತೇಳರಿಂದ ಭಾಗಿಸಿದರೆ ಉಳಿ

ಪುಮಾನ್ಪರಶುಧೃಕ್ಕೃಷ್ಣೋ ರಕ್ತದೃಗ್ರಕ್ಷಿತುಂ ಕ್ಷಮಃ ।
ತೃಷಾರ್ತೈಕಪದಾಕ್ರಾನ್ತಾ ರಕ್ತವಸ್ತ್ರಾ ಘಟಾಕೃತಿಃ ॥ ೩೫೦ ॥

ಕಪಿಲೋ ಹ್ಯಂಧದೃಕ್ಕ್ರೂರೋ ರಕ್ತವಸ್ತ್ರಃ ಕ್ಷತವ್ರತಃ ।
ಕ್ಷುತ್ತೃಷಾರ್ತೋ ದಗ್ಧಪಟೋ ಲೂನಕುಂಚಿತಮೂರ್ಧಜಃ ॥ ೩೫೧ ॥

ಮಲಿನಃ ಕ್ಷುತ್ಪರೋಽಜಾಸ್ಯೋ ದಕ್ಷಃ ಕೃಷ್ಯಾದಿಕರ್ಮಣಿ ।
ವೃಷಕಾಯಃ ಸರಭಯಾತ್ಪಿಂಗಲೋ ವ್ಯಾಕುಲಾಂತರಃ ॥ ೩೫೨ ॥

ಕೌಚಿಕೀರೂಪಿಣೀ ಸಾಧ್ವೀ ಹ್ಯಪ್ರಜೋಽಚ್ಛ್ರಿತಪಾಣಿಕಾ ।
ಉದ್ಯಾನೇ ಕವಚೀ ಧನ್ವೀ ಕ್ರೀಡೇಚ್ಛುರ್ಗರುಡಾನನಃ ॥ ೩೫೩ ॥

---

ಯುವುದು ನಕ್ಷತ್ರವಾಗುವುದು. ಹೀಗೆಯೇ ಏಳರಿಂದ ಭಾಗಿಸಿ ವಾರವನ್ನೂ ನೂರಿಪ್ಪತ್ತರಿಂದ ಭಾಗಿಸಿ ಜಾತಕನ ಆಯುಸ್ಸನ್ನೂ ಎರಡರಿಂದ ಭಾಗಿಸಿ ಪಕ್ಷವನ್ನೂ, ಹದಿನೈದರಿಂದ ಬಾಗಿಸಿ ತಿಥಿಯನ್ನೂ, ಎರಡರಿಂದ ಭಾಗಿಸಿ ಅಹೋರಾತ್ರಾದಿಗಳನ್ನೂ ಕಂಡುಹಿಡಿಯಬೇಕು.

೩೫೦-೩೮೭. ಇನ್ನು ಮುಂದೆ ಮೇಷಾದಿಯಾದ ದ್ವಾದಶರಾಶಿಗಳಲ್ಲಿಯೂ ಕ್ರಮವಾಗಿರುವ ೩೬ ಮೂವತ್ತಾರು ದ್ರೇಕ್ಕಾಣಗಳ ಸ್ವರೂಪವು ಕ್ರಮವಾಗಿ ವಿವರಿಸಲ್ಪಡುವುದು ;—

1. ದ್ರೇಕ್ಕಾಣ ೧ ಒಂದು:—ಪುರುಷ, ಪರಶುಧಾರೀ, ಕೃಷ್ಣವರ್ಣ, ರಕ್ತನೇತ್ರ, ರಕ್ಷಣದಕ್ಷ (ಕಾಪಾಡುವುದರಲ್ಲಿ ಸಮರ್ಥನಾದವನು).

2. ದ್ರೇಕ್ಕಾಣ ೨ ಎರಡು.—ಸ್ತ್ರೀ, ತೃಷಾತಾರ್, ಏಕಪಾದವುಳ್ಳವಳು ರಕ್ತವಸ್ತ್ರಧಾರಿಣೀ, ಘಂಟಾಕೃತಿಯುಳ್ಳವಳು.

3. ದ್ರೇಕ್ಕಾಣ ೩ ಮೂರು :—ಕಪಿಲವರ್ಣ, ಅಂಧದೃಷ್ಟಿ, ಕ್ರೂರ ರಕ್ತವಸ್ತ್ರಧಾರೀ, ಕ್ಷತದೇಹ, (ಗಾಯುಗಳುಳ್ಳ ದೇಹವುಳ್ಳವನು.)

4. ದ್ರೇಕ್ಕಾಣ ೪ ನಾಲ್ಕು :—ಹಸಿವು ಮತ್ತು ಬಾಯಾರಿಕೆಯುಳ್ಳುದು ಸುಟ್ಟಬಟ್ಟೆಯುಳ್ಳುದು, ಗುಂಗುರುಕೂದಲುಳ್ಳುದು.

**ನೃತ್ಯಾದಿವಿದ್ವರುಣವದ್ಬಹುರತ್ನೋ ಧನುರ್ಧರಃ ।**
**ದ್ವಿಪಾಸ್ಯಕಂಠಃ ಕ್ರೋಡಾಸ್ಯಃ ಕಾನನೇಶರಮಾಹಿಕಃ ॥ ೩೫೪ ॥**

**ಆತವ್ಯಶಾಖಾಂ ಪಾಲಾಶೀ ರೌತಿ ಮೂರ್ಧ್ನಾಹಿ ಕರ್ಕಶಾ ।**
**ಚಿಪಿಟಾಸ್ಯೋ ಹಿ ಸಂವೀತೋ ನೌಸ್ಥಃ ಸ್ವರ್ಣಂ ವ್ರಜನ್ಜಲೇ ॥ ೩೫೫ ॥**

**ಶ್ವಾ ನರೋ ಜಂಬುಕಂ ಗೃಧ್ರಂ ಗೃಹೀತ್ವಾ ರೌತಿ ಕಾಲ್ಮಲಾ ।**
**ಧನ್ವೀ ಕೃಷ್ಣಾಜಿನೀ ಸಿಂಹವಾಶ್ವೋನ್ನತಮಾತುರಃ ॥ ೩೫೬ ॥**

5. ದ್ರೇಕ್ಕಾಣ ೫ ಐದು :—ಮಲಿನ ಕ್ಷುಧಾರ್ತ, ಕೃಷ್ಯಾದಿಕರ್ಮಗಳಲ್ಲಿ ದಕ್ಷನಾದವನು.

6. ದ್ರೇಕ್ಕಾಣ ೬ ಆರು :—ಆನೆಯಂತಿರುವ ದೇಹ, ಶರಭಾಕಾರ, ಪಿಂಗಲವರ್ಣ, ಸದಾ ದುಃಖಗೊಂಡ ಮನಸ್ಸುಳ್ಳದ್ದು.

7. ದ್ರೇಕ್ಕಾಣ ೭ ಏಳು :—ಸೂಚ್ಯಗ್ರಬುದ್ಧಿಯುಳ್ಳವಳು (ಅಂದರೆ ಸೂಜಿಯಮೊನೆಯಂತೆ ತುಂಬಾ ಸೂಕ್ಷ್ಮವಾದ ಬುದ್ಧಿಯುಳ್ಳವಳೆಂದಭಿಪ್ರಾಯವು), ಸುಂದರೀ, ಸಾಧ್ವೀಮಣಿ, ಎತ್ತಿದ ಕೈಯುಳ್ಳವಳು, ಪುತ್ರಸಂತಾನವಿಲ್ಲದವಳು.

8. ದ್ರೇಕ್ಕಾಣ ೮ ಎಂಟು :—ಉದ್ಯಾನಸಂಚಾರೀ, ಕವಚ, ಧನುಸ್ಸು ಇವುಗಳುಳ್ಳವನು, ಗರುಡಾಕೃತಿಯುಳ್ಳವನು, ಕ್ರೀಡೇಚ್ಛಾಶಾಲೀ.

9. ದ್ರೇಕ್ಕಾಣ ೯ ಒಂಭತ್ತು :—ನಾಟ್ಯಶಾಸ್ತ್ರಜ್ಞ, ವರುಣಾಕಾರ, ಬಹುರತ್ನ, ಧನುಸ್ಸು ಇವುಗಳುಳ್ಳವನು.

10. ದ್ರೇಕ್ಕಾಣ ೧೦ ಹತ್ತು :—ಆನೆಯಂತಿರುವ ಮುಖ ಮತ್ತು ಕತ್ತುಳ್ಳದ್ದು, ಹಂದಿಯಮುಖ, ಕಾಡಿನಲ್ಲಿ ಚಂಪನವೃಕ್ಷವನ್ನು ಆಶ್ರಯಿಸಿದುದು.

11. ದ್ರೇಕ್ಕಾಣ ೧೧ ಹನ್ನೊಂದು :—ಅರಣ್ಯಸಂಚಾರಿಣೀ, ಪದ್ಮಾರ್ಚಿತಾ, ಮುತ್ತುಗದ ಕೊಂಬೆಯನ್ನು ಹಿಡಿದಿರುವವಳೂ, ತಲೆಗೆದರಿಕೊಂಡಿರುವವಳೂ, ಅರಚಿಕೊಳ್ಳುವಸ್ವಭಾವವುಳ್ಳ ಹೆಂಗಸು.

ಫಲಾಮಿಷಘ್ನಃ ಕೋರ್ಚೀ ನಾ ಭಲ್ಲಾಸ್ಯಃ ಕೆತಚೇಷ್ಟಿತಃ ।
ಪುಷ್ಪಪೂರ್ಣಚ್ಛಟಾ ಕನ್ಯಾ ವಿದ್ಯೇಲ್ಲಾ ಮಲಿನಾಂಬರಾ ॥ ೩೫೭ ॥

ಧನ್ವೀ ವ್ಯಯಾಪಕೃಚ್ಛ್ಯಾಮೋ ಲಿಪಿಕೃದ್ರೋಮಶೋ ನರಃ ।
ಗೌರೀ ಧೌತಾಂಶುಕಾತ್ಸುಚ್ಛಾ ಕುಂಭದೃಸ್ತಾ ಸುರಾಲಯೇ ॥ ೩೫೮ ॥

ಮಾನೋನ್ಮಾನ್ಯಾಪನೋ ಕೌಲೀ ಭಾಂಡಮುಲ್ಪವಿಚಿಂತಕಃ ।
ಕ್ಷುತ್ತೃಡ್ಯುತೋ ನರಃ ಕುಂಭೀ ಗೃಧ್ರಸ್ಯ ಸ್ತ್ರೀಸುತೋಪಗಃ ॥ ೩೫೯ ॥

12. ದ್ರೇಕ್ಕಾಣ ೧೨ ಹನ್ನೆರಡು :—ಅವಲಕ್ಕಿಯನ್ನು ತಿನ್ನುವವನು. ಸರ್ಪಬದ್ಧನು, ನೌಕೆಯಲ್ಲಿ ನಿಂತುಕೊಂಡಿರುವವನೂ. ಸ್ವರ್ಣಾದಿಗಳಿಂದ ಅಲಂಕೃತನಾಗಿರುವವನು.

13. ದ್ರೇಕ್ಕಾಣ ೧೩ ಹದಿಮೂರು :—ನಾಯಿ, ನರಿ, ಹದ್ದು ಇವುಗಳನ್ನು ಹಿಡಿದು, ಶಾಲ್ಮಲೀ ವೃಕ್ಷದ (ಬೂರುಗದ ಮರದ) ಹತ್ತಿರ ನಿಂತು ಕೂಗಿಕೊಳ್ಳುವವನ ಆಕೃತಿಯುಳ್ಳದ್ದು.

14. ದ್ರೇಕ್ಕಾಣ ೧೪ ಹದಿನಾಲ್ಕು :—ಧನುರ್ಧಾರೀ, ಕೃಷ್ಣಾಜಿನವನ್ನು ಧರಿಸಿರುವವನು, ಸಿಂಹದಂತೆ ಗಂಭೀರವಾದ ಗರ್ಜನೆಯನ್ನು ಮಾಡತಕ್ಕವನು, ಕುದುರೆಯಂತೆ ಆಕೃತಿಯುಳ್ಳವನು, ರೋಗಿಯು.

15. ದ್ರೇಕ್ಕಾಣ ಹದಿನೈದು :—ಹಣ್ಣು, ಮಾಂಸ ಇವುಗಳನ್ನು ಧರಿಸಿರುವವನು, ಗಡ್ಡವುಳ್ಳವನು, ಕರಡಿಯಂತೆ ಮುಖವುಳ್ಳವನು, ಕಪಿಯಂತೆ ನಡೆಯುವವನು.

16. ದ್ರೇಕ್ಕಾಣ ೧೬ ಹದಿನಾರು :—ಹೂವು, ಹಣ್ಣು ಇವುಗಳನ್ನು ಧರಿಸಿ, ಮಲಿನವಸ್ತ್ರವನ್ನುಟ್ಟಿರುವ ಸ್ತ್ರೀರೂಪವು.

17. ದ್ರೇಕ್ಕಾಣ ೧೭ ಹದಿನೇಳು :—ಆದಾಯ, ವ್ಯಯಗಳನ್ನು ಲೆಕ್ಕ ಹಾಕುವವನು, ಲೇಖನಿಯನ್ನು ಹಿಡಿದು ಬರೆಯುವವನು, ಪುರುಷಾಕೃತಿಯುಳ್ಳವನು.

ಧನ್ವೀ ಕಿಂನರಚೇಷ್ಟಸ್ತು ಹೈಮವರ್ಮಾ ಮೃಗಾನುಗಃ ।
ಸಿಂಧೇ ಕೂಜಂ ವ್ರಜಂತೀ ಸ್ತ್ರೀ ನಾನಾಸರ್ಪಸಿತಾಂ ಹಿತಾ ॥ ೩೬೦ ॥

ಸೌಖ್ಯಸ್ಪೃಹಾ ಹ್ಯಾವೃತಾಂಗೀ ಭರ್ತ್ರರ್ಥಕಚ್ಛಪಾಕೃತಿಃ ।
ಕೂರ್ಮಾಸ್ಯೋ ಮಲಯೇ ಸಿಂಹಃ ಶ್ವಕ್ರೋಡಮೃಗಭೀಷಕಃ ॥ ೩೬೧ ॥

ವಾಸ್ಯಃ ಶ್ವಕಾಯೋ ಧಾನುಷ್ಕೋ ರಕ್ಷಂಸ್ತಾಪಸಯಜ್ಞಿಯೇ ।
ಚಂಪಕಾಭಾಸನೇ ಮಧ್ಯಾ ಸಿಂಧುರತ್ರ ವಿವರ್ಧಿನೀ ॥ ೩೬೨ ॥

18. ದ್ರೇಕ್ಕಾಣ ೧೮ ಹದಿನೆಂಟು :—ಗೌರವರ್ಣವುಳ್ಳ ಹೆಂಗಸು, ಶುಭ್ರವಾದ ವಸ್ತ್ರವನ್ನುಡತಕ್ಕವಳೂ, ಕುಂಬಹಸ್ತಾ (ಕೈಲಿ ಗಡಿಗೆಯನ್ನು ಹಿಡಿದಿರುವವಳು), ದೇವಾಲಯದಲ್ಲಿ ಸಂಚರಿಸುವವಳು.

19. ದ್ರೇಕ್ಕಾಣ ೧೯ ಹತ್ತೊಂಭತ್ತು :—ಅಳತೆ ಮತ್ತು ತೂಕವಾಡಲು ತಕ್ಕಡಿಯನ್ನು ಹಿಡಿದಿರುವ ಪುರುಷಾಕಾರ, ಒರೆಗಲ್ಲು ಮಚ್ಚು ಇವುಗಳನ್ನು ಹಿಡಿದಿರುವವನು

20. ದ್ರೇಕ್ಕಾಣ ೨೦ ಇಪ್ಪತ್ತು :—ಹಸಿವು ಮತ್ತು ಬಾಯಾರಿಕೆಯಿಂದ ಕೂಡಿದವನು, ಕುಂಬಾಕಾರ, ಗೃಧ್ರಮುಖ, ಹೆಂಡತೀ ಮಕ್ಕಳನ್ನು ಸ್ಮರಿಸಿಕೊಳ್ಳುವವನು.

21. ದ್ರೇಕ್ಕಾಣ ೨೧ ಇಪ್ಪತ್ತೊಂದು :—ಧನುರ್ಧಾರಿಯಾಗಿ ಕಿಂನರರಂತೆ ಸುವರ್ಣ ಮತ್ತು ವಸ್ತ್ರ, ಆಭರಣ ಇವುಗಳನ್ನು ಧರಿಸಿ ಮೃಗವನ್ನು ಹಿಂಬಾಲಿಸುವವನು.

22. ದ್ರೇಕ್ಕಾಣ ೨೨ ಇಪ್ಪತ್ತೆರಡು :—ಸ್ತ್ರೀ ದ್ರೇಕ್ಕಾಣ, ಆಭರಣ ವಿಹೀನಳು, ಸ್ಥಾನಚ್ಯುತಳು, ಸರ್ಪದಷ್ಟಳಾದ ಪಾದವುಳ್ಳವಳು, ಸಮುದ್ರದಿಂದ ಬರುತ್ತಿರುವವಳು.

23. ದ್ರೇಕ್ಕಾಣ ೨೩ ಇಪ್ಪತ್ತಮೂರು :—ಸುಖಾಭಿಲಾಷಿಣೀ, ಸರ್ವಾವೃತಾಂಗೀ, ಗಂಡನನ್ನು ಹುಡುಕುವವಳು, ಏಮಿನಿನಂತೆ ಆಕೃತಿಯುಳ್ಳವಳು.

ಕೂರ್ಚಾಸನೇ ಚಂಪಕಾಭೋ ದಂಡೀ ಕೌಶೇಯಕಾನಿನೀ ।
ಪರವೋತ್ಥೋ ಗೃಧ್ರಮುಖಃ ಸ್ನೇಹಮದ್ಯಾಶನಸ್ಪೃಹಃ ॥ ೩೬೩ ॥

ದಗ್ಧಾವಸ್ಥಾ ಲೋಹಧರಾ ಸಭೂಷಾ ಭಾಂಡಕಚ್ಚರಾ ।
ಭಾಂಡೀ ರೋಮಶ್ಚವಾಃ ಶ್ಯಾಮಃ ಕಿರೀಟೀ ಫಲಯಂತ್ರಧೃಕ್ ॥ ೩೬೪ ॥

ನೌಸ್ಥೋ ಧ್ವಾಂಸೌ ವಿಭೂಷಾರ್ಥಂ ನಾನಾರತ್ನಕರೋಂಚಿತಃ ।
ನೌಸ್ಥಾಬ್ಧೇಃ ಕೂಲಮಾಯಂತೀ ಸಯೂಥಾಂ ಚಂಪಕಾನನಃ ॥ ೩೬೫ ॥

---

24. ದ್ರೇಕ್ಕಾಣ ೨೪ ಇಪ್ಪತ್ತನಾಲ್ಕು :—ಆನೆಯಂತೆ ಮುಖವುಳ್ಳವನು, ಮಲಯಪರ್ವತದ ರಕ್ಷಕ, ಸಿಂಹಾಕೃತಿ, ಚತುಷ್ಪಾದ್ದ್ರೇಕ್ಕಾಣ.

25. ದ್ರೇಕ್ಕಾಣ ೨೫ ಇಪ್ಪತ್ತೈದು :–ನರಮುಖ, ಕುದುರೆಯ ಮೈಯುಳ್ಳದ್ದು (ಕುದುರೆಯ ಮೈಯಂತೆ ಮೈಯುಳ್ಳದ್ದು), ಧನುರ್ಧಾರೀ, ಯಜ್ಞಸಂಬಂಧಿಯಾದ ಉಪಕರಣಗಳನ್ನು ಹಿಡಿಯುವವನು.

26. ದ್ರೇಕ್ಕಾಣ ೨೬ ಇಪ್ಪತ್ತಾರು :—ಸಂಪಿಗೆಹೂವಿನಂತೆ ಹೊಳೆಯುವವಳು, ಸಮುದ್ರದಿಂದ ಎದ್ದು ಬರುವವಳು, ವೃದ್ಧಿಹೊಂದುವ ಸ್ವಭಾವದವಳು.

27. ದ್ರೇಕ್ಕಾಣ ೨೭ ಇಪ್ಪತ್ತೇಳು :—ಉದ್ದವಾದ ಗಡ್ಡ ಮತ್ತು ಮೀಸೆಯುಳ್ಳವನು, ಸಂಪಿಗೆ ಪುಷ್ಪದಂತೆ ಮೈಬಣ್ಣವುಳ್ಳವನು. ದಂಡವನ್ನು ಹಿಡಿದಿರುವವನು, ಪೀತಾಂಬರವನ್ನು ಧರಿಸುವವನು.

28. ದ್ರೇಕ್ಕಾಣ ೨೮ ಇಪ್ಪತ್ತೆಂಟು :—ಗೃಧ್ರಮುಖ, ಹಂದಿಯಂತಿರುವ ದೇಹ, ಮೊಸಳೆಯಂತೆ ಹಲ್ಲುಗಳು, ಕ್ರೂರವಾದ ಮುಖ ಈ ಸ್ವಭಾವದ ನರಾಕಾರ.

29. ದ್ರೇಕ್ಕಾಣ ೨೯ ಇಪ್ಪತ್ತೊಂಭತ್ತು :—ಕಲಾಭಿಜ್ಞಳು, ಶ್ಯಾಮಲವರ್ಣದವಳು, ಭೂಷಣಗಳಿಂದ ಭೂಷಿತಳಾದವಳು.

30. ದ್ರೇಕ್ಕಾಣ ೩೦ ಮೂವತ್ತು :—ಭಾಂಡ, ಕಂಬಳಿ, ಚಾಪ, ಬತ್ತಳಿಕೆ, ಕಿರೀಟ ಇವುಗಳನ್ನು ಧರಿಸಿ ಕಿಂನರಸದೃಶನಾದ ಮನುಷ್ಯ.

**ಗರ್ತೇ ಸರ್ಪಾವೃತೋ ನಗ್ನೋ ರುದಂಶ್ಚೌರಾನಲಾರ್ದಿತಃ ।
ಏತಾದೃತಾಂಕ್ರಿಯಾಂಶಾಸ್ತು ಷಡ್ತ್ರಿಂಶದುದಿತಾಃ ಕ್ರಮಾತ್ ॥ ೩೬ ॥**

31. ದ್ರೇಕ್ಕಾಣ ೩೧ ಮೂವತ್ತೊಂದು :—ಎಣ್ಣೆ, ಸಾರಾಯಿ, ನೀರು ಇವುಗಳಿಂದ ದ್ರವ್ಯಾರ್ಜನೆಮಾಡುವವನು, ಅಜಿನಧಾರೀ, ಗೃಧ್ರಕ್ಕೆ ಸಮಾನ ವಾದ ಮುಖವುಳ್ಳವನು.

32. ದ್ರೇಕಾಣ ೩೨ ಮೂವತ್ತೆರಡು :—ದಗ್ಧ, ಶಾಲ್ಮಲೀವನದಲ್ಲಿ ಬಂಡಿಯಲ್ಲಿ ಲೋಹದ ಅದುರುಗಳನ್ನು ತರುವವಳು, ಮಲಿನ ವಸ್ತ್ರಧಾರಿಣಿ ಸ್ತ್ರೀರೂಪವುಳ್ಳವಳು.

33. ದ್ರೇಕ್ಕಾಣ ೩೩ ಮೂವತ್ತಮೂರು ;—ಶ್ಯಾಮಲವರ್ಣ, ಕಿವಿಯಲ್ಲಿ ತುಂಬಾ ಕೂದಲುಳ್ಳವಳು, ಲೋಹಮಿಶ್ರಿತವಾದ ಮಡಕೆಗಳನ್ನು ಹಿಡಿದು ಸಂಚರಿಸುವ ನರಾಕೃತಿ.

34. ದ್ರೇಕ್ಕಾಣ ೩೪ ಮೂವತ್ತನಾಲ್ಕು :—ಶಂಖ ಮುಂತಾದ ವಸ್ತುಗಳನ್ನು ಧರಿಸಿರುವವನು, ಹಡಗಿನಿಂದ ತೇಲಿಕೊಂಡು ಬರುವವನು, ಹೆಂಡತಿಯ ಅಲಂಕಾರ ವಸ್ತುಗಳನ್ನು ತರುತ್ತಿರುವವನು.

35. ದ್ರೇಕ್ಕಾಣ ೩೫ ಮೂವತ್ತೈದು :—ಎತ್ತರವಾಗಿ ಕಟ್ಟಿದ ಧ್ವಜಪಟವುಳ್ಳವನು, ಸಖಿಯರಿಂದ ಕೂಡಿದವನು, ಸಂಪಿಗೆಯ ಹೂವಿನಂತೆ ಮುಖವುಳ್ಳವನು.

36. ದ್ರೇಕ್ಕಾಣ ೩೬ ಮೂವತ್ತಾರು :—ಹಳ್ಳದ ಬಳಿಯಲ್ಲಿ ಹಾವಿನಿಂದ ಸುತ್ತಲ್ಪಟ್ಟ ದೇಹವುಳ್ಳ ನರಾಕೃತಿಯುಳ್ಳವನು, ನಗ್ನನು, ಕಳ್ಳರಿಂದಲೂ, ಬೆಂಕಿಯಿಂದಲೂ, ತೊಂದರೆಪಟ್ಟ ಮನಸ್ಸುಳ್ಳವನು.

ಹೀಗೆ ಮೇಷಾದಿಯಾಗಿರುವ ೩೬ ಮೂವತ್ತಾರು ದ್ರೇಕ್ಕಾಣಗಳ ಸ್ವರೂಪವನ್ನೂ ವಿವರಿಸಿರುವೆನು. ಇದರ ಸ್ವರೂಪಜ್ಞಾನದಿಂದ, ಜಾತಕ, ಪ್ರಶ್ನೆ ಮುಂತಾದ ಲಗ್ನಗಳಿಂದ ಫಲಾಫಲಗಳನ್ನು ಅರಿಯಬಹುದು.

**ಏತತ್ಸಂಕ್ಷೇಪತಃ ಪ್ರೋಕ್ತಂ ಜಾತಕಂ ಮುನಿಸತ್ತಮ ।**
**ನಿಬೋಧ ಸಂಹಿತಾಸ್ಕಂಧಂ ಲೋಕಕೃತ್ಯುಪಯೋಗಿನಂ ॥ ೩೬೭ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ದ್ವಿತೀಯಪಾದೇ**
**ಬೃಹದುಪಾಖ್ಯಾನೇ ಜಾತಕನಿರೂಪಣಂ ನಾಮ**
**ಪಂಚ ಪಂಚಾಶತ್ತಮೋಽಧ್ಯಾಯಃ**

೩೬೭. ಇಲ್ಲಿನವರೆಗೆ ಜಾತಕಭಾಗಕ್ಕೆ ಸಂಬಂಧಿಸಿದ ಜ್ಯೋತಿಷ ವಿಷಯುವನ್ನೆಲ್ಲಾ ನಿರೂಪಿಸಿರುವೆನು. ಮುಂದೆ ಲೋಕಕ್ಕುಪಕಾರವಾಗುವ ಸಂಹಿತಾಭಾಗವನ್ನು ನಿನಗೆ ತಿಳಿಸುವೆನು; ಕೇಳು ಎಂದು ಸನಂದನಮಹರ್ಷಿಯು ಜಾತಕಭಾಗದ ವಿಷಯನಿರೂಪಣೆಯನ್ನು ಉಪಸಂಹಾರಮಾಡಿದನು.

ಇಂತು ಶ್ರೀನಾರದೀಯಪುರಾಣಪೂರ್ವಭಾಗದಲ್ಲಿ ಬೃಹದುಪಾಖ್ಯಾನವೆಂಬ
ದ್ವಿತೀಯಪಾದದೊಳು ಜಾತಕನಿರೂಪಣೆಯೆಂಬ ಐವತ್ತೈದನೆಯ
ಅಧ್ಯಾಯವು ಮುಗಿದುದು.



# ಷಟ್ಪಂಚಾಶತ್ತಮೋಽಧ್ಯಾಯಃ

॥ ಸನಂದನ ಉವಾಚ ॥

ಕ್ರಮಾಚ್ಚೈತ್ರಾದಿಮಾಸೇಷು ಮೇಷಾದ್ಯಾಃ ಸಂಕ್ರಮಾ ಮತಾಃ ।
ಚೈತ್ರಶುಕ್ಲಪ್ರತಿಪದಿ ಯೋ ವಾರಃ ಸ ನೃಪಃ ಸ್ಮೃತಃ ॥ ೧ ॥

ಮೇಷಪ್ರವೇಶೇ ಸೇನಾನೀಃ ಕರ್ಕಟೇ ಸಸ್ಯಪೋ ಭವೇತ್ ।
ಸಮೋದ್ಯಧೀಶ್ವರಃ ಸೂರ್ಯೋ ಮಧ್ಯಮಶ್ಚೋತ್ತಮೋ ವಿಧುಃ ॥ ೨ ॥

ನೇಷ್ಟಃ ಕುಜೋ ಬುಧೋ ಜೀವೋ ಭೃಗುಸ್ತ್ವತಿಶುಭಂಕರಃ ।
ಅಧಮೋ ರವಿಜೋ ವಾಚ್ಯೋ ಜ್ಞಾತ್ವಾ ಚೈಷಾಂ ಬಲಾಬಲಂ ॥ ೩ ॥

## ಐವತ್ತಾರನೆಯ ಅಧ್ಯಾಯವು

೧-೩. ಸನಂದನಮಹರ್ಷಿಯು ಮುಂದೆ ಸಂಹಿತಾಸ್ಕಂಧರೂಪವಾದ ಜ್ಯೌತಿಷಭಾಗವನ್ನು ವಿವರಿಸುತ್ತಾ ಹೀಗೆಂದನು—

ಚೈತ್ರಾದಿಯಾದ ಚಾಂದ್ರಮಾಸಗಳಿಗೆ ಕ್ರಮವಾಗಿ ಮೇಷಾದಿ ಸೌರರಾಶಿಗಳು ಸಂಬಂಧಿಸುವುವು. ಅಥವಾ ಮೇಷಾದಿಯಾದ ಸಂಕ್ರಮಣಗಳಾದರೂ ಆಯಾ ಮಾಸಗಳಿಗೆ ಸಂಬಂಧಪಡುವುವು. ಚೈತ್ರಶುದ್ಧ ಪಾಡ್ಯಮೀ ತಿಥಿಯು ಯಾವ ವಾರದಲ್ಲಿ ಬರುವುದೋ ಆ ವಾರಾಧಿಪತಿಯೇ ಆ ವರ್ಷಕ್ಕೆ ರಾಜನಾಗುವನು. ಮೇಷಾದಿಯು ಯಾವ ವಾರದಲ್ಲಿ ಸಂಭವಿಸುವುದೋ ಆ ವಾರಾಧಿಪತಿಯು ಆ ವರ್ಷಕ್ಕೆ ಸೇನಾಪತಿಯಾಗುವನು. ಹಾಗೆಯೇ ಕರ್ಕಾಟಕ ಸಂಕ್ರಮಣದ ವಾರಾಧಿಪತಿಯೇ ಸಸ್ಯಾಧಿಪತಿಯೆನಿಸುವನು. ರವಿಯು ರಾಜನಾದರೆ ಸಮಸ್ಥಿತಿಯಲ್ಲಿಯೂ, ಚಂದ್ರನು ರಾಜನಾದರೆ ಉತ್ತಮರೀತಿಯಲ್ಲಿಯೂ ಕುಜನು ರಾಜನಾದರೆ ಅಧಮಸ್ಥಿತಿಯಲ್ಲಿಯೂ, ಬುಧ, ಗುರು, ಶುಕ್ರ ಇವರು ರಾಜರಾದರೆ ಅತ್ಯುತ್ತಮಮಾರ್ಗದಿಂದಲೂ, ಶನಿಯು ರಾಜನಾದರೆ ಹೀನಸ್ಥಿತಿಯಲ್ಲಿಯೂ, ಆ ವರ್ಷವನ್ನು ನಡೆಸುವರು. ಮತ್ತು ಆಯಾಗ್ರಹಗಳ ಬಲಾಬಲಗಳಿಂದಲೂ ವರ್ಷಫಲವನ್ನು ಹೇಳಬೇಕು.

**ದಂಡಾಕಾರೇ ಕಬಂಧೇ ವಾ ಧ್ವಾಂಕ್ಷಾಕಾರೇಽಥ ಕೀಲಕೇ ।**
**ದೃಷ್ಟೇಽರ್ಕಮಂಡಲೇ ವ್ಯಾಧಿಭ್ರಾಂತಿಶ್ಚೋರಾರ್ಥನಾಶನಂ ॥ ೪ ॥**

**ಛತ್ರಧ್ವಜಪತಾಕಾದ್ಯಸನ್ನಿಭೈಸ್ತಿಮಿತೈರ್ಘನೈಃ ।**
**ರವಿಮಂಡಲಗೈರ್ಧೂಮ್ರೈಃ ಸಸ್ಫುಲಿಂಗೈರ್ಜಗತ್ಕ್ಷಯಃ ॥ ೫ ॥**

**ಸಿತರಕ್ತೈಃ ಪೀತಕೃಷ್ಣೈರ್ವರ್ಣೈರ್ವಿಪ್ರಾದಿಪೀಡನಂ ।**
**ಘ್ನಂತಿ ದ್ವಿತ್ರಿಚತುರ್ವರ್ಣೈರ್ಭುವಿ ರಾಜಜನಾನ್ಮುನೇ ॥ ೬ ॥**

**ಊರ್ಧ್ವೈರ್ಭಾನುಕರೈಸ್ತಾಮ್ರೈರ್ನಾಶಂ ಯಾತಿ ಚಮೂಪತಿಃ ।**
**ಪೀತೈರ್ನೃಪಸುತಃ ಶ್ವೇತೈಃ ಪುರೋಧಾಶ್ಚಿತ್ರಿತೈರ್ಜನಾಃ ॥ ೭ ॥**

**ಧೂಮ್ರೈರ್ನೃಪಃ ಪಿಶಂಗೈಸ್ತು ಜಲದಾಧೋಮುಖೈರ್ಜಗತ್ ।**
**ಶುಭೋಽರ್ಕಃ ಶಿಶಿಕೇ ತಾಮ್ರಃ ಕುಂಕುಮಾಭಾ ವಸಂತಿಕೇ ॥ ೮ ॥**

೪-೭. ಮೇಷಸಂಕ್ರಮಣಕಾಲದಲ್ಲಿ ರವಿಮಂಡಲವು ಸ್ವಲ್ಪ ದಂಡಾಕಾರ, ಮುಂಡಾಕಾರ ಮತ್ತು ಕಾಗೆಯ ಆಕಾರ ಈರೀತಿಯಾಗಿ ಕಂಡುಬಂದರೆ ಆ ವರ್ಷದಲ್ಲಿ ದೇಶಕ್ಕೆ ರೋಗ, ಚೋರ, ದ್ರವ್ಯ ಇವುಗಳಿಂದ ಭಯವುಂಟು. ಛತ್ರ, ಧ್ವಜ, ಪತಾಕೆ ಇವುಗಳ ಆಕಾರದಲ್ಲಿದ್ದು ಸೂರ್ಯಮಂಡಲದಲ್ಲಿ, ಧೂಮ್ರವರ್ಣವಾಗಲೀ ಜ್ವಾಲೆಯ ಆಕಾರವಾಗಲೀ ಕಂಡುಬಂದರೆ, ಜಗತ್ತಿಗೆ ಹಾನಿಯುಂಟೆಂದು ತಿಳಿಯಬೇಕು. ಸೂರ್ಯಮಂಡಲದಲ್ಲಿ ಕಾಣುವ ಬಿಳುಪು, ಕೆಂಪು ಹಳದಿ, ಕಪ್ಪು ಈ ಬಣ್ಣಗಳು ಕ್ರಮವಾಗಿ ಬ್ರಾಹ್ಮಣಾದಿ ವರ್ಣಗಳಿಗೆ ತೊಂದರೆಯನ್ನುಂಟುಮಾಡುವುವು. ನಾನಾ ವರ್ಣಗಳು ಮಂಡಲದಲ್ಲಿ ಕಾಣಿಸಿಕೊಂಡರೆ ಆಗ ರಾಜರಿಗೆ ತೊಂದರೆಯೊದಗುವುದೆಂದರಿಯಬೇಕು. ಸೂರ್ಯನ ಕಿರಣಗಳು ಕೆಂಪಾಗಿ ಊರ್ಧ್ವಮುಖವಾಗಿ ಹರಡಿದಂತೆ ಕಂಡರೆ ಸೇನಾಪತಿಗೆ ಹಾನಿಯುಂಟಾಗುವುದು. ಪೀತವರ್ಣದಿಂದ ಮೇಲಕ್ಕೆ ಹರಡಿದ್ದರೆ ರಾಜಪುತ್ರನಿಗೂ, ಶ್ವೇತವರ್ಣದಿಂದ ಹರಡಿದ್ದರೆ ಪುರೋಹಿತನಿಗೂ, ಚಿತ್ರವರ್ಣದಿಂದ ಕಂಡುಬಂದರೆ ಪ್ರಜೆಗಳಿಗೂ ಕಷ್ಟವಾಗುವುದು.

೮-೯. ಸೂರ್ಯನ ಕಿರಣವು ಧೂಮ್ರವರ್ಣದಲ್ಲಿ ಪ್ರಸರಿಸಿದರೆ ರಾಜರಿಗೂ ಪಿಂಗಳವರ್ಣದಿಂದ ಕಿರಣಗಳು ಜಗತ್ತಿಗೆ ಹರಡುವುದಾದರೆ ಅನಾವೃಷ್ಟಿ

ಗ್ರೀಷ್ಮೇ ಚಾಪಾಂಡುರಶ್ಚೈವ ವಿಚಿತ್ರೋ ಜಲದಾಗಮೇ ।
ಪದ್ಮೋದರಾಭಃ ಶರದಿ ಹೇಮಂತೇ ಲೋಹಿತಚ್ಛವಿಃ ॥ ೯ ॥

ಪೀತಃ ಶೀತೇ ಸಿತೋ ವೃಷ್ಟೌ ಗ್ರೀಷ್ಮೇಲೋಹಿತಭಾ ರವಿಃ ।
ರೋಗಾನಾಂ ಪುಷ್ಟಿಭಯಕೃತ್ಕ್ರಮಾದುಕ್ತೋ ಮುನೀಶ್ವರ ॥ ೧೦ ॥

ಇಂದ್ರಚಾಪಾರ್ಧಮೂರ್ತಿಸ್ತು ಭಾನುರ್ಭೂಪವಿರೋಧಕೃತ್ ।
ಶಶರಕ್ತನಿಭೇ ಭಾಸೌ ಸಂಗ್ರಾಮೋ ನ ಚಿರಾದ್ಭುವಿ ॥ ೧೧ ॥

ಮಯೂರಪತ್ರಸಂಕಾಶೋ ದ್ವಾದಶಾಬ್ದಂ ನ ವರ್ಷತಿ ।
ಚಂದ್ರಮಾಸದೃಶೋ ಭಾನುಃ ಕುರ್ಯಾದ್ಭೂಪಾಂತರಂ ಕ್ಷಿತೌ ॥ ೧೨ ॥

ಯುಂಟಾಗಿ ಪ್ರಪಂಚಕ್ಕೂ ವ್ಯಥೆಯುಂಟಾಗುವುದೆಂದು ತಿಳಿಯಬೇಕು. ಶಿಶಿರ ಋತುವಿನಲ್ಲಿ ಸೂರ್ಯನು ಕೆಂಪಾಗಿಯೂ, ವಸಂತಋತುವಿನಲ್ಲಿ ಕುಂಕುಮ ವರ್ಣದಿಂದಲೂ. ಗ್ರೀಷ್ಮಋತುವಿನಲ್ಲಿ ಶುಭ್ರವಾಗಿಯೂ, ವರ್ಷರ್ತುವಿನಲ್ಲಿ ಚಿತ್ರವರ್ಣವಾಗಿಯೂ ಶರದೃತುವಿನಲ್ಲಿ ಪದ್ಮರಾಗದ ಬಣ್ಣದಂತೆಯೂ, ಹಿಮಂತ ಋತುವಿನಲ್ಲಿ ರಕ್ತವರ್ಣವಾಗಿಯೂ ಕಂಡುಬಂದರೆ ಸೂರ್ಯನಿಂದ ಜಗತ್ತಿಗೆ ಶುಭಫಲಗಳುಂಟಾಗುವುವೆಂದೂಹಿಸಬೇಕು.

೧೦-೧೨. ಹಿಮಂತಋತುವಿನಲ್ಲಿ ಹಳದಿಯಾಗಿಯೂ, ವರ್ಷರ್ತುವಿನಲ್ಲಿ ಶುಭ್ರವಾಗಿಯೂ, ಗ್ರಿಷ್ಮರ್ತುವಿನಲ್ಲಿ ರಕ್ತವರ್ಣವಾಗಿಯೂ ಕಂಡುಬರುವ ರವಿಯು, ಕ್ರಮವಾಗಿ ರೋಗ, ಅನಾವೃಷ್ಟಿ, ಭಯ ಇವುಗಳನ್ನು ಕೊಡುವನು. ಅರ್ಧಕಾಮನಬಿಲ್ಲಿನಂತೆ ಕಂಡುಬರುವ ಸೂರ್ಯನು ರಾಜರಿಗೆ ಪರಸ್ಪರ ದ್ವೇಷವನ್ನು ಹೆಚ್ಚಿಸುವನು. ಮೊಲದ ರಕ್ತದಂತೆ ಹೊಳೆಯುವ ಸೂರ್ಯನಿಂದ ದೇಶದಲ್ಲಿ ಯುದ್ಧವಾಗುವುದು. ನವಿಲುಗರಿಯಂತೆ ಹೊಳೆಯುವ ಸೂರ್ಯನಿಂದ ಹನ್ನೆರಡು ವರ್ಷಗಳ ಕಾಲ ಅನಾವೃಷ್ಟಿಯುಂಟಾಗುವುದು. ಚಂದ್ರನಂತೆ ಸೌಮ್ಯನಾಗಿ ಕಂಡುಬರುವ ಸೂರ್ಯನು ರಾಜಪರಿವರ್ತನೆಯನ್ನುಂಟುಮಾಡುವನು ಅಂದರೆ ಆಗಿದ್ದ ರಾಜರು ಹೋಗಿ ಆ ಸ್ಥಳಕ್ಕೆ ಬೇರೆ ರಾಜರು ಬರುವರು.

ಅರ್ಕೇ ಶ್ಯಾಮೇ ಕೀಟಭಯಂ ಭಸ್ಮಾಭೇ ರಾಷ್ಟ್ರಜಂ ತಥಾ ।
ಛಿದ್ರೇಽರ್ಕಮಂಡಲೇ ದೃಷ್ಟೇ ಮಹಾರಾಜವಿನಾಶನಂ ॥ ೧೩ ॥

ಘಟಾಕೃತಿಃ ಕ್ಷುದ್ಭಯಕೃತ್ಪುರಹಾ ತೋರಣಾಕೃತಿಃ ।
ಛತ್ರಾಕೃತೀ ದೇಶಪತಿಃ ಖಂಡಭಾನುನೃಪಾಂತಕೃತ್ ॥ ೧೪ ॥

ಉದಯಾಸ್ತಮಯೇ ಕಾಲೇ ವಿದ್ಯುದುಲ್ಕಾಶನಿರ್ಯದಿ ।
ತದಾ ನೃಪವಧೋ ಜ್ಞೇಯಸ್ತ್ವಥವಾ ರಾಜವಿಗ್ರಹಃ ॥ ೧೫ ॥

ಪಕ್ಷಂ ಪಕ್ಷಾರ್ಧಮರ್ಕೇಂದುಪರಿವಿಷ್ಟಾವಹರ್ನಿಶಂ ।
ರಾಜಾನಮನ್ಯಂ ಕುರುತೋ ಲೋಹಿತಾಂಬುದಯಾಸ್ತಗೌ ॥ ೧೬ ॥

೧೩-೧೪. ಸೂರ್ಯನು ಕಪ್ಪಾಗಿ ಕಂಡುಬಂದರೆ ದೇಶಕ್ಕೆ ಕ್ರಿಮಿಬಾಧೆಯುಂಟೆಂದು ಹೇಳಬೇಕು. ಭಸ್ಮರಾಶಿಯಂತಿದ್ದರೆ ಇತರರಾಷ್ಟ್ರಗಳಿಂದಲೂ ಸೂರ್ಯಮಂಡಲದಲ್ಲಿ ರಂಧ್ರವು ಗೋಚರವಾದರೆ ಮಹಾರಾಜರಿಂದಲೂ ದೇಶವು ನಾಶವಾಗುವುದು. ಗಡಿಗೆಯ ಆಕಾರದಲ್ಲಿ ತೋರಿಬರುವ ರವಿಯಿಂದ ಕ್ಷುದ್ಭಯವೂ, ತೋರಣಾಕಾರದಿಂದ ತೋರಿಬರುವ ರವಿಯಿಂದ ಗ್ರಾಮಗಳ ನಾಶವೂ ಛತ್ರಾಕಾರದಿಂದ ತೋರಿಬರುವ ಸೂರ್ಯನಿಂದ ದೇಶಕ್ಷೋಭೆಯೂ, ಖಂಡಾಕಾರದಿಂದ ತೋರಿಬರುವ ಸೂರ್ಯನಿಂದ ರಾಜನಾಶವೂ ಉಂಟಾಗುವುದು.

೧೫-೧೬. ಸೂರ್ಯೋದಯಾಸ್ತಕಾಲಗಳಲ್ಲಿ ಸಿಡಿಲು ಉಲ್ಕಾಪಾತ ಇವುಗಳು ಒದಗಿದರೆ ರಾಜವಧೆಯಾಗಲೀ ನೃಪಯುದ್ಧವಾಗಲೀ ಆಗುವುದೆಂದು ತಿಳಿಯಬೇಕು. ಪಕ್ಷಾದಿಯಲ್ಲಾಗಲೀ, ಪಕ್ಷಾಂತದಲ್ಲಾಗಲೀ, ಸೂರ್ಯಚಂದ್ರರಿಗೆ ಪರಿವೇಷವುಂಟಾದರೆ ರಾಜರು ದೇಶಕ್ಕೆ ಬದಲಾವಣೆಯಾಗುವರು. ಅಥವ ಉದಯಾಸ್ತಕಾಲಗಳಲ್ಲಿ ಸೂರ್ಯಚಂದ್ರರು ರಕ್ತವರ್ಣದಿಂದ ಕಂಡರೂ, ದೇಶಕ್ಕೆ ರಾಜರು ಬದಲಾಯಿಸುವರೆಂದು ಹೇಳಬೇಕು. ಉದಯಾಸ್ತಕಾಲಗಳಲ್ಲಿ ರವಿಮಂಡಲವು ಶಸ್ತ್ರಾಕಾರದಿಂದ ಕಂಡುಬಂದರೆ ಶಸ್ತ್ರಾದಿಗಳ ಭಯವೂ, ಕತ್ತಿ,

ಉದಯಾಸ್ತಮಯೇ ಭಾನುರಾಚ್ಛಿನ್ನಃ ಶಸ್ತ್ರಸನ್ನಿಭೈಃ ।
ಘನೈರ್ಯುದ್ಧಂ ಖರೋಷ್ಟ್ರಾದ್ಯೈಃ ಪಾಪರೂಪೈರ್ಭಯಪ್ರದಂ ॥ ೧೭ ॥

ಯಾಮ್ಯಶೃಂಗೋನ್ನತಶ್ಚಂದ್ರಃ ಶುಭದೋ ಮೀನಮೇಷಯೋಃ ।
ಸೌಮ್ಯಶೃಂಗೋನ್ನತಃ ಶ್ರೇಷ್ಠೋ ನೃಯುಙ್ಮಕರಯೋಸ್ತಥಾ ॥ ೧೮ ॥

ಘಟೋಕ್ಷ್ಣಸ್ತು ಸಮಃ ಕರ್ಕಚಾಪಯೋಃ ಶರಸನ್ನಿಭಃ ।
ಚಾಪವತ್ಸಿಂಹಮಕರಯೋಶ್ಚ ಶೂಲವತ್ತುಲಕರ್ಕಯೋಃ ॥ ೧೯ ॥

ವಿಪರೀತೋದಿತಶ್ಚಂದ್ರೋ ದುರ್ಭಿಕ್ಷಕಲಹಪ್ರದಃ ।
ಆಷಾಢದ್ವಯಮೂಲೇಂದ್ರಧಿಷ್ಣ್ಯಾನಾಂ ಯಾಮ್ಯಗಃ ಶಶೀ ॥ ೨೦ ॥

ಒಂಟೆ ಇವುಗಳ ಆಕಾರದಿಂದ ಕಂಡುಬಂದರೆ ದೇಶಕ್ಕೆ ಯುದ್ಧಭಯವೂ ಉಂಟಾಗುವುದೆಂದು ಊಹಿಸಬೇಕು.

೧೮-೨೩. ಮೀನ ಮತ್ತು ಮೇಷಮಾಸಗಳಲ್ಲಿ ದಕ್ಷಿಣಶೃಂಗೋನ್ನತಿಯುಳ್ಳ ಚಂದ್ರನು ಲೋಕಕ್ಕೆ ಶುಭಕರನೆನಿಸುವನು. ಹಾಗೆಯೇ ಮಿಥುನ ಮಕರಮಾಸಗಳಲ್ಲಿ ಉತ್ತರಶೃಂಗೋನ್ನತಿಯುಳ್ಳ ಚಂದ್ರನೂ ಶುಭಕರನೆನಿಸುವನು. ವೃಷಭಕುಂಭಮಾಸಗಳಲ್ಲಿ ಸಮಶೃಂಗವೂ, ಕರ್ಕಾಟಕ, ಧನುರ್ಮಾಸಗಳಲ್ಲಿ ಶರಾಕಾರದಶೃಂಗವೂ, ಮಕರ, ಸಿಂಹಮಾಸಗಳಲ್ಲಿ ಧನುರಾಕಾರದ ಶೃಂಗವೂ, ತುಲಾ, ಕಟಕಮಾಸಗಳಲ್ಲಿ ಶೂಲಾಕಾರದಶೃಂಗವೂ ಲೋಕಕ್ಕೆ ಶುಭಕರವಾದದ್ದೆಂದು ತಿಳಿಯಬೇಕು. ಇದಕ್ಕೆ ವಿರುದ್ಧವಾದ ಆಕಾರಗಳಲ್ಲಿ ಕಂಡುಬರುವ ಚಂದ್ರಶೃಂಗವು ಲೋಕಕ್ಕೆ ದುರ್ಭಿಕ್ಷ, ಕಲಹ ಮುಂತಾದ ಕೆಟ್ಟ ಫಲಗಳನ್ನುಂಟುಮಾಡುವುದು. ಪೂರ್ವಾಷಾಢ, ಉತ್ತರಾಷಾಢ, ಮೂಲ, ಜ್ಯೇಷ್ಠ ಈ ನಕ್ಷತ್ರಗಳಲ್ಲಿರುವ ಚಂದ್ರನು ದಕ್ಷಿಣಶೃಂಗೋನ್ನತಿಯಿಂದಿದ್ದರೆ ಲೋಕಕ್ಕೆ ಅಗ್ನಿಭಯವೊದಗುವುದು. ವಿಶಾಖಾ, ಅನೂರಾಧಾ ಈ ನಕ್ಷತ್ರಗಳಲ್ಲಿರುವ ಚಂದ್ರನು ದಕ್ಷಿಣಶೃಂಗೋನ್ನತಿಯಲ್ಲಿದ್ದರೆ ಲೋಕದಲ್ಲಿ ಪಾಪಕಾರ್ಯಗಳು ಹೆಚ್ಚಾಗಿ ಅಭಿವೃದ್ಧಿಹೊಂದುವುವೆಂದು ತಿಳಿಯಬೇಕು. ಮಘಾ, ವಿಶಾಖಾ ಈ ನಕ್ಷತ್ರಗಳಲ್ಲಿ ಚಂದ್ರನು ಉತ್ತರಶೃಂಗೋನ್ನತಿಯಲ್ಲಿದ್ದರೆ ಮಧ್ಯಮಫಲವು

ಅಗ್ನಿಪ್ರದಸ್ತ್ರೀಯಚರವನಸರ್ವವಿನಾಶಕೃತ್ ।
ವಿಶಾಖಾ ಮಿತ್ರಯೋರ್ಯಾಮ್ಯಪಾರ್ಶ್ವಗಃ ಪಾಪಗಃ ಶಶೀ ॥ ೨೧ ॥

ಮಧ್ಯಮಃ ಪಿತೃದೈವತ್ಯೇ ದ್ವಿದೈವೇ ಸೌಮ್ಯಗಃ ಶಶೀ ।
ಅಪ್ರಾಪ್ಯ ಪೌಷ್ಣಭಾದಾರ್ದ್ರಾಮುದುಕ್ಪ್ರಾವಿಶಶೀ ಶುಭಃ ॥ ೨೨ ॥

ಮಧ್ಯಗೋ ದ್ವಾರದಕ್ಷಾಣಿ ಅಶೀತ್ಯ ನವವಾಸವಾತ್ ।
ಯಮೇಂದ್ರಾಹೀಶನೋಯೇಶ ಮರುತಶ್ಚಾರ್ಧತಾರಕಾಃ ॥ ೨೩ ॥

ಧ್ರುವಾದಿಶಿ ದ್ವಿದೈವಾಃಸ್ಯುರಧ್ಯರ್ಧಾಶ್ಚಾಪರಾಃ ಸಮಾಃ ।
ಯಾಮ್ಯಶೃಂಗೋನ್ನತೋ ನೇಷ್ಟಃ ಶುಭಃ ಶುಕ್ಲೇ ಪಿಪೀಲಿಕಾ ॥ ೨೪ ॥

---

ದೊರಕುವುದು. ರೇವತಿ ಉತ್ತರಾಭಾದ್ರ, ಆರಿದ್ರಾ ಈ ನಕ್ಷತ್ರಗಳನ್ನು ಬಿಟ್ಟು ಸಮಶೃಂಗನಾಗಿದ್ದರೆ ಶುಭಕರನಾಗುವನು. ಜ್ಯೇಷ್ಠಾ ನಕ್ಷತ್ರದಿಂದ ಹಿಡಿದು ಒಂಭತ್ತು ನಕ್ಷತ್ರಗಳನ್ನು ಬಿಟ್ಟು (ಅಂದರೆ ಜ್ಯೇಷ್ಠ, ಮೂಲ, ಪೂರ್ವಾಷಾಢ, ಶ್ರವಣ, ಧನಿಷ್ಠೆ, ಶತಭಿಷ, ಪೂರ್ವಾಭಾದ್ರ, ಉತ್ತರಾಭಾದ್ರ ಈ ನಕ್ಷತ್ರಗಳನ್ನು ಬಿಟ್ಟು) ಉಳಿದ ನಕ್ಷತ್ರಗಳಲ್ಲಿ ಸಮಶೃಂಗನಾಗಿದ್ದರೂ ಚಂದ್ರನು ಶುಭಕರನು. ಭರಣಿ, ಜ್ಯೇಷ್ಠಾ, ಆಶ್ಲೇಷಾ, ಪೂರ್ವಾಷಾಢಾ ಈ ನಕ್ಷತ್ರಗಳಲ್ಲಿ ಚಂದ್ರನು ಸಮಶೃಂಗನಾಗಿದ್ದರೆ ಮಧ್ಯಮವಾದ ಫಲಗಳನ್ನು ಲೋಕಕ್ಕೆ ಕೊಡುತ್ತಾನೆ.

೨೪-೨೬. ಸ್ಥಿರನಕ್ಷತ್ರಗಳಲ್ಲಿಯೂ, ಪುನರ್ವಸು, ವಿಶಾಖಾ ಈ ನಕ್ಷತ್ರಗಳಲ್ಲಿಯೂ, ಸಮಶೃಂಗದಲ್ಲಿರುವ ಚಂದ್ರನು ಅರ್ಥಪ್ರದನು. ಉಳಿದ ನಕ್ಷತ್ರಗಳಲ್ಲಿ ಚಂದ್ರನು ಸಮಫಲಗಳನ್ನು ಕೊಡುವನು. ಶುಕ್ಲಪಕ್ಷದಲ್ಲಿ ಯಾಮ್ಯಶೃಂಗದಿಂದ ಕಂಡುಬರುವ ಚಂದ್ರನು ಸಾಮಾನ್ಯವಾಗಿ ಶುಭನಲ್ಲ. ಅದರ ಫಲವಾಗಿ ಲೋಕಕ್ಕೆ ಇರುವೆಯೇ ಮೊದಲಾದ ಕ್ರಿಮಿಗಳ ಬಾಧೆಯು ಹೆಚ್ಚುವುದು. ಚಂದ್ರಶೃಂಗವು ದಕ್ಷಿಣೋನ್ನತಿಯಲ್ಲಿದ್ದರೆ ಗ್ರೀಷ್ಮಋತುವಿನಿಂದ ಕ್ರಮವಾಗಿ ಕಾರ್ಯಹಾನಿ, ಕಾರ್ಯವೃದ್ಧಿ, ಕಾರ್ಯಹಾನಿ, ಕಾರ್ಯವೃದ್ಧಿ, ಸುಭಿಕ್ಷ,

ಕಾರ್ಶ್ಯಹಾನಿಃ ಕಾರ್ಶ್ಯವೃದ್ಧಿರ್ಹಾನಿರ್ವೃದ್ಧಿರ್ಯಥಾಕ್ರಮಂ ।
ಸುಭಿಕ್ಷಕೃದ್ವಿಶಾಲೀಂದುರವಿಶಾಲೋ ಘನಾಶನಃ ॥ ೨೫ ॥

ಅಧೋಮುಖೇ ಶಸ್ತ್ರಭಯಂ ಕಲಹೋ ದಂಡಸನ್ನಿಭೇ ।
ಕುಜಾದ್ಯೈರ್ನಿಹತೇ ಶೃಂಗೇ ಮಂಡಲೇ ವಾ ಯಥಾಕ್ರಮಂ ॥ ೨೬ ॥

ಕ್ಷೇಮಾರ್ಘ್ಯಂ ವೃಷ್ಟಿಭೂಪಾಲಜನನಾಶಃ ಪ್ರಜಾಯತೇ ।
ಸಪ್ತಾಷ್ಟನವಮರ್ಕ್ಷೇಷು ಸೋದಯಾದ್ವಕ್ರಮೇ ಕುಜೇ ॥ ೨೭ ॥

ತದ್ವಕ್ರಮುಷ್ಣಸಂಜ್ಞಂ ಸ್ಯಾತ್ಪ್ರಜಾಪೀಡಾಗ್ನಿಸಂಭವಃ ।
ದಶಮ್ಯೈಕಾದಶೇ ಋಕ್ಷೇ ದ್ವಾದಶೇ ವೋಗ್ರದೀಪ್ತಯಃ ॥ ೨೮ ॥

ಕ್ರೂರಂ ವಕ್ರಮುಖಂ ಜ್ಞೇಯಂ ಸಸ್ಯವೃಷ್ಟಿವಿನಾಶಕೃತ್ ।
ಕುಜೇ ತ್ರಯೋದಶೇ ಋಕ್ಷೇ ವಕ್ರಿತೇ ವಾ ಚತುರ್ದಶೇ ॥ ೨೯ ॥

ಪಾಪಿಗಳನಾಶ ಈ ರೀತಿಯಾಗಿ ಆರು ಋತುಗಳಿಗೂ ಆರು ಫಲಗಳು ಲಭಿಸುವುವು. ಚಂದ್ರಶೃಂಗವು ಅಧೋಮುಖವಾಗಿ ಕಂಡರೆ ಶಸ್ತ್ರಭಯವೂ, ದಂಡಾಕಾರವಾಗಿ ಕಂಡರೆ ಯುದ್ಧಭಯವೂ ಒದಗುವುದು.

೨೭-೩೧. ಚಂದ್ರಮಂಡಲವಾಗಲೀ, ಚಂದ್ರಶೃಂಗವಾಗಲೀ ಕುಜಾದಿ ಗ್ರಹಗಳಿಂದ ಪ್ರತಿಹತವಾದರೆ ಕ್ರಮವಾಗಿ ಕ್ಷೇಮ, ಅರ್ಘವೃದ್ಧಿ, ವೃಷ್ಟಿ, ಭೂಪಾಲ ನಾಶ, ಜನನಾಶ ಈ ಫಲಗಳು ಲಭಿಸುತ್ತವೆ. ಕುಜಗ್ರಹವು ಇರುವ ನಕ್ಷತ್ರಕ್ಕಿಂತ ಏಳು, ಎಂಟು, ಒಂಭತ್ತು ಈ ನಕ್ಷತ್ರಗಳಿಗೆ ಉಷ್ಣವೆಂದು ಹೆಸರಿದೆ. ಈ ನಕ್ಷತ್ರಗಳಿಂದ ಲೋಕಕ್ಕೆ ಪ್ರಜಾಪೀಡೆ, ಅಗ್ನಿಭಯ ಇವುಗಳು ಸಂಭವಿಸುತ್ತವೆ. ಹತ್ತು, ಹನ್ನೊಂದು ಮತ್ತು ಹನ್ನೆರಡನೆಯ ನಕ್ಷತ್ರಗಳು ಜಲ, ಕ್ರೂರ ಮತ್ತು ವಕ್ರವೆಂಬ ಹೆಸರುಗಳನ್ನು ಕ್ರಮವಾಗಿ ಪಡೆಯುತ್ತವೆ. ಇವು ಕ್ರಮವಾಗಿ ಸಸ್ಯ, ವೃಷ್ಟಿ, ನಾಶ ಇವುಗಳನ್ನು ಹೆಚ್ಚಿಸುವುವು. ಹದಿಮೂರು ಮತ್ತು ಹದಿನಾಲ್ಕನೆಯ ನಕ್ಷತ್ರಗಳು, ಬಾಲಾಸ್ಯಚಕ್ರಗಳೆಂಬ ಹೆಸರಿನಿಂದ ಇರುವುವು. ಇವು ಸಸ್ಯ, ವೃಷ್ಟಿ ಇವುಗಳನ್ನು ಕ್ರಮವಾಗಿ ನಾಶಮಾಡುವುವು. ಹದಿನೈದು ಮತ್ತು ಹದಿನಾರನೆಯ ನಕ್ಷತ್ರಗಳು, ರುಧಿರಾನನಗಳೆಂಬ ಸಂಜ್ಞೆಯನ್ನು ಹೊಂದಿರುವುವು. ಇವುಗಳಲ್ಲಿ ಲೋಕಕ್ಕೆ ದುರ್ಭಿಕ್ಷ, ಕ್ಷುದ್ಭಯ

ಬಾಲಾಸ್ಯಚಕ್ರಂ ತತ್ರಸ್ಮಿನ್ಸಸ್ಯವೃಷ್ಟಿವಿನಾಶನಂ ।
ಪಂಚದಶೇ ಷೋಡಶರ್ಕ್ಷೇ ವಕ್ರೇ ಸ್ಯಾದ್ರುಧಿರಾನನಂ ॥ ೩೦ ॥

ದುರ್ಭಿಕ್ಷಂ ಕ್ಷುದ್ಭಯಾನ್ರೋಗಾನ್ಕರೋತಿ ಕ್ಷಿತಿನಂದನಃ ।
ಅಷ್ಟಾದಶೇ ಸಪ್ತದಶೇ ತದ್ವಕ್ರಂ ಮುಸಲಾಹ್ವಯಂ ॥ ೩೧ ॥

ದುರ್ಭಿಕ್ಷಂ ಧನಧಾನ್ಯಾದಿನಾಶನೇ ಭಯಕೃತ್ಸದಾ ।
ಫಾಲ್ಗುನ್ಯೋರುದಿತೋ ಭೌಮೋ ವೈಶ್ವದೇವೇ ಪ್ರತೀಪಗಃ ॥ ೩೨ ॥

ಅಸ್ತಗಶ್ಚತುರಾಸ್ಯಾರ್ಕ್ಷೇ ಲೋಕತ್ರಯವಿನಾಶಕೃತ್ ।
ಉದಿತಃ ಶ್ರವಣೇ ಪುಷ್ಯೇ ವಕ್ರ್ಯಗೋಶ್ವನಹಾನಿದಃ ॥ ೩೩ ॥

ಯದ್ದಿಗ್ಭ್ಯೋಽಭ್ಯುದಿತೋ ಭೌಮಸ್ತದ್ದಿಗ್ಭೂಪಭಯಪ್ರದಃ ।
ಮಘಾಮಧ್ಯಗತೋ ಭೌಮಸ್ತತ್ರ ಚೈವ ಪ್ರತೀಪಗಃ ॥ ೩೪ ॥

---

ರೋಗ ಮುಂತಾದ ದುಷ್ಫಲಗಳು ಸಂಭವಿಸುವುವು. ಹದಿನೇಳು ಮತ್ತು ಹದಿನೆಂಟನೆಯ ನಕ್ಷತ್ರಗಳು ಮುಸಲಗಳೆಂಬ ಹೆಸರಿನಿಂದ ಲೋಕಕ್ಕೆ ದುರ್ಭಿಕ್ಷ ಧನಧಾನ್ಯನಾಶ, ಭಯ ಇವುಗಳನ್ನುಂಟುಮಾಡುವುವು.

೩೨-೩೪. ಫಲ್ಗುನೀ ನಕ್ಷತ್ರಗಳಲ್ಲಿ ಉದಯಿಸಿ ಉತ್ತರಾಷಾಢದಲ್ಲಿ ವಕ್ರಿಯಾಗಿ, ರೋಹಿಣಿಯಲ್ಲಿ ಅಸ್ತನಾಗುವ ಕುಜನು ಲೋಕತ್ರಯವನ್ನೂ ನಾಶಮಾಡುವನು. ಶ್ರವಣನಕ್ಷತ್ರದಲ್ಲಿ ಉದಯವಾಗಿ ಪುಷ್ಯನಕ್ಷತ್ರದಲ್ಲಿ ವಕ್ರಿಯಾದ ಕುಜನು ಗೋವು, ಅಶ್ವ ಇವುಗಳಿಗೆ ಹಾನಿಪ್ರದನಾಗುವನು. ಯಾವ ದಿಕ್ಕಿನಲ್ಲಿ ಉದಯಿಸುವನೋ ಆ ದಿಕ್ಕಿನ ರಾಜರುಗಳಿಗೆ ಭಯಪ್ರದನಾಗುವನು. ಮಖಾನಕ್ಷತ್ರದಲ್ಲಿ ಉದಯಿಸಿ ಅಲ್ಲಿಯೇ ಅಂದರೆ ಆ ಮಖಾನಕ್ಷತ್ರದಲ್ಲಿಯೇ ವಕ್ರಿಯಾದರೆ ಲೋಕಕ್ಕೆ ವೃಷ್ಟಿಯಿಲ್ಲದೇ ಶಸ್ತ್ರಾದಿಗಳಿಂದ ಭಯವೊದಗುವುದು. ಮತ್ತು ದೇವತೆಗಳಿಗೂ ರಾಜರುಗಳಿಗೂ ಹಿಂಸೆಯುಂಟಾಗುವುದು ಮಖಾ ವಿಶಾಖಾ, ರೋಹಿಣೀ ಈ ನಕ್ಷತ್ರಗಳಲ್ಲಿ ವಕ್ರಿಯಾಗುವ ಕುಜನು ಗಂಡ

ಅವೃಷ್ಟಿಶಸ್ತ್ರಭಯದಃ ಪೀಡ್ಯಂ ದೇವಾ ನೃಪಾಂತಕೃತ್ ।
ಪಿತೃದ್ವಿದೈವಧಾತ್ರ್ಯಾಣಾಂ ಭಿದ್ಯಂತೇ ಗಂಡಕಾರಕಾಃ ॥ ೩೫ ॥

ದುರ್ಭಿಕ್ಷಂ ಮರಣಂ ರೋಗಂ ಕರೋತಿ ಕ್ಷಿತಿಜಸ್ತಥಾ ।
ತ್ರಿಷೂತ್ತರಾಸು ರೋಹಿಣ್ಯಾಂ ನೈರ್ಋತೇ ಶ್ರವಣೇ ಮೃಗೇ ॥ ೩೬ ॥

ಅವೃಷ್ಟಿದಶ್ಚರನ್ಸೌಮ್ಯೋ ದಕ್ಷಿಣೇ ರೋಹಿಣೀಸ್ಥಿತಃ ।
ಭೂಮಿಜಃ ಸರ್ವಧಿಷ್ಣ್ಯಾನಾಮುದಗ್ಗಾಮೀ ಶುಭಪ್ರದಃ ॥ ೩೭ ॥

ಯಾಮ್ಯಗೋಽನಿಷ್ಟಫಲದೋ ಭವೇದ್ಭೇದಕರೋ ನೃಣಾಂ ।
ವಿನೋತ್ಪಾತೇನ ಶಶಿನಃ ಕದಾಚಿನ್ನೋದಯಂ ವ್ರಜೇತ್ ॥ ೩೮ ॥

ಅನಾವೃಷ್ಟ್ಯಗ್ನಿಭಯಕೃದನರ್ಥನೃಪವಿಗ್ರಹಃ ।
ವಸುವೈಷ್ಣವವಿಶ್ವೇಂದುಧಾತೃಭೇಷು ಚರನ್ಬುಧಃ ॥ ೩೯ ॥

ನಕ್ಷತ್ರಗಳಲ್ಲಿ ಸಂಚರಿಸಿದಂತೆ ಆಗುವನು. ಅವರ ಫಲವಾಗಿ ಲೋಕಕ್ಕೆ ದುರ್ಭಿಕ್ಷ, ಮರಣ, ರೋಗ ಈ ಬಾಧೆಯನ್ನು ಕೊಡುತ್ತಾನೆ.

೩೬-೩೮. ಕುಜನು ಉತ್ತರಾಯಣದಲ್ಲಿ, ಉತ್ತರಾಷಾಢಾ, ಉತ್ತರಾಭಾದ್ರಾ, ರೋಹಿಣೀ, ಮೂಲ, ಶ್ರವಣ ಈ ನಕ್ಷತ್ರಗಳಲ್ಲಿ ಸಂಚರಿಸುವಾಗ ವೃಷ್ಟಿಗೆ ಪ್ರತಿಬಂಧಕನಾಗುವನು. ದಕ್ಷಿಣಾಯನದಲ್ಲಿ ರೋಹಿಣೀನಕ್ಷತ್ರದಲ್ಲಿ ಸಂಚರಿಸುವಾಗ ಆರೀತಿಯಲ್ಲಿಯೇ ಅವಗ್ರಹಪ್ರದನಾಗುವನು. (ಮಳೆ ಹುಯ್ಯಲು ಪ್ರತಿಬಂಧಕನಾಗುವನೆಂದು ಭಾವವು.) ಎಲ್ಲಾ ನಕ್ಷತ್ರಗಳಲ್ಲಿಯೂ ಉತ್ತರದಿಗ್ಗಾಮಿಯಾದ ಕುಜನೇ ಶುಭಕರನು. ದಕ್ಷಿಣದಿಗ್ಗಾಮಿಯಾದ ಅಂದರೆ ಅತಿಶಯವಾದ ದಕ್ಷಿಣಕ್ರಾಂತಿಗೆ ಒಳಪಟ್ಟ ಕುಜನು ಜನರಿಗೆ ಅನಿಷ್ಟ ಫಲಪ್ರದನಾಗುವನು. ಚಂದ್ರಾಂಗಾರಕರ ಸಮಾಗಮವು ಪ್ರಬಲವಾದ ಮಹೋತ್ಪಾತಕ್ಕೆ ಕಾರಣವಾಗುವುದೆಂದು ತಿಳಿಯಬೇಕು.

೩೯-೪೪. ಧನಿಷ್ಠಾ, ಶ್ರವಣ, ವಿಶಾಖಾ, ಮೃಗಶಿರ, ರೋಹಿಣೀ ಈ ನಕ್ಷತ್ರಗಳಲ್ಲಿ ಸಂಚರಿಸುವ ಬುಧನು, ಅನಾವೃಷ್ಟಿ, ಅಗ್ನಿಭಯ, ರಾಜಯುದ್ಧ

ಭಿನತ್ತಿ ಯದಿ ತತ್ತಾರಾಂ ಬಾಧಾವೃಷ್ಟಿಭಯಂಕರಃ ।
ಆದ್ರಾರ್ದಿಪಿತೃಭಾಂಶೇಷು ದೃಶ್ಯತೇ ಯದಿ ಚಂದ್ರಜಃ ॥ ೪೦ ॥

ತದಾ ದುರ್ಭಿಕ್ಷಕಲಹರೋಗಾನಾವೃಷ್ಟಿಭೀತಿಕೃತ್ ।
ಹಸ್ತಾದಿಷಟ್ಸು ತಾರಾಸು ವಿಚರನ್ನಿಂದುನಂದನಃ ॥ ೪೧ ॥

ಕ್ಷೇಮಂ ಸುಭಿಕ್ಷಮಾರೋಗ್ಯಂ ಕುರುತೇ ರೋಗನಾಶನಂ ।
ಅಹಿರ್ಬುಧ್ನ್ಯಾರ್ಯಮಾಗ್ನೇಯಯಾಮ್ಯಭೇಷು ಚರನ್ಬುಧಃ ॥ ೪೨ ॥

ಭಿಷಕ್ತುರಂಗವಾಣಿಜ್ಯವೃತ್ತೀನಾಂ ನಾಶಕೃತ್ತದಾ ।
ಪೂರ್ವಾತ್ರಯೇ ಚರನ್ಸೌಮ್ಯೋ ಯೋಗತಾರಾಂ ಭಿನತ್ತಿ ಚೇತ್ ॥ ೪೩ ॥

ಕ್ಷುಚ್ಛಸ್ತ್ರಾನಲಚೌರೇಭ್ಯೋ ಭಯದಃ ಪ್ರಾಣಿನಾಂ ತದಾ ।
ಯಾಮ್ಯಾಗ್ನಿಧಾತೃವಾಯವ್ಯಧಿಷ್ಣ್ಯೇಷು ಪ್ರಾಕೃತಾ ಗತಿಃ ॥ ೪೪ ॥

ಅನರ್ಥ ಇವುಗಳನ್ನು ಕೊಡುವನು. ಆ ತಾರಾಮಧ್ಯಗತನಾಗಿದ್ದರೆ ಬುಧನು ಅತಿವೃಷ್ಟಿಯಿಂದ ಲೋಕವನ್ನು ಪೀಡಿಸುವನು. ಆದ್ರಾರ್ದಿಂದ ಮಖಾನಕ್ಷತ್ರ ಪರ್ಯಂತವಾಗಿ ಸಂಚರಿಸುವ ಬುಧನು ದೃಗ್ಗೋಚರನಾದರೆ ದುರ್ಭಿಕ್ಷ, ಕಲಹ ರೋಗ ಅನಾವೃಷ್ಟಿ ಇತ್ಯಾದಿಗಳು ದೊರೆಯುವುವು. ಹಸ್ತಾದಿ ಆರು ನಕ್ಷತ್ರಗಳಲ್ಲಿ (ಹಸ್ತ, ಚಿತ್ತ, ಸ್ವಾತಿ, ವಿಶಾಖೆ, ಅನೂರಾಧೆ, ಜ್ಯೇಷ್ಠ ಈ ನಕ್ಷತ್ರಗಳಲ್ಲಿ) ಸಂಚರಿಸುವ ಬುಧನು ಕ್ಷೇಮ, ಸುಭಿಕ್ಷ, ಆರೋಗ್ಯ ಮುಂತಾದ ಸತ್ಫಲಗಳನ್ನು ಕೊಡುವನು. ಉತ್ತರಾಭಾದ್ರ, ಉತ್ತರ, ಕೃತ್ತಿಕ, ಭರಣೀ ಮುಂತಾದ ನಕ್ಷತ್ರಗಳಲ್ಲಿ ಸಂಚರಿಸುವ ಬುಧನು ವೈದ್ಯರಿಗೂ, ನಾವಿಕರಿಗೂ, ವಣಿಜರಿಗೂ ಬಾಧೆಯನ್ನುಂಟುಮಾಡುವನು. ಪೂರ್ವಾತ್ರಯಗಳಲ್ಲಿ ನಕ್ಷತ್ರಮಧ್ಯಗತನಾಗಿ ಸಂಚಾರಮಾಡುವ ಬುಧನು, ಹಸಿವು, ಶಸ್ತ್ರಬಾಧೆ, ಬೆಂಕಿ ಇವುಗಳಿಂದ ಪ್ರಾಣಿಗಳನ್ನು ಪೀಡಿಸುವನು. ಭರಣೀ, ಕೃತ್ತಿಕೆ, ರೋಹಿಣಿ, ಆರಿದ್ರಾ ಈ ನಕ್ಷತ್ರಗಳಲ್ಲಿ ಬುಧನಗತಿಗೆ ಪ್ರಾಕೃತಗತಿಯೆಂದು ಹೆಸರು.

ರೌದ್ರೇಂದುಸಾರ್ಪಪಿತ್ರ್ಯೇಷು ಜ್ಞೇಯಾ ಮಿಶ್ರಾಹ್ವಯಾ ಗತಿಃ ।
ಭಾಗ್ಯಾರ್ಯಮೇಜ್ಯಾದಿತಿಷು ಸಂಕ್ಷಿಪ್ತಾ ಗತಿರುಚ್ಯತೇ ॥ ೪೫ ॥

ಗತಿಸ್ತೀಕ್ಷ್ಣಾಜಚರಣಾಹಿರ್ಬುಧ್ನ್ಯೇ ಭಾತ್ರಿಭೇಷು ಯಾ ।
ಯಾಮಾಶಿಕಾತಿವಿಶ್ವಾಂಬುಮೂಲಮುತ್ಸ್ವಸ್ಯಜಸ್ಯ ಚ ॥ ೪೬ ॥

ಘೋರಾ ಗತಿರ್ಹರಿತ್ವಾಷ್ಟ್ರವಸುವಾರುಣಭೇಷು ಚ ।
ಇಂದ್ರಾಗ್ನಿಮಿತ್ರಮಾರ್ತಂಡಭೇಷು ಪಾಪಾಹ್ವಯಾ ಗತಿಃ ॥ ೪೭ ॥

ಪ್ರಾಕೃತಾದ್ಯಾಸು ಗತಿಷು ಹ್ಯುದಿತೋಽಸ್ತಮಿತೋಽಪಿ ವಾ ।
ಯಾವಂತ್ಯೇವ ದಿನಾನ್ಯೇಷಃ ದೃಶ್ಯಸ್ತಾವಂತ್ಯದೃಶ್ಯಗಃ ॥ ೪೮ ॥

ಚತ್ವಾರಿಂಶತ್ಕ್ರಮಾತ್ತ್ರಿಂಶದ್ರವೀಂದೂ ಭಸುತೋ ನವ ।
ಪಂಚದಶೈಕಾದಶಭಿರ್ದಿವಸೈಃ ಶಶಿನಂದನ ॥ ೪೯ ॥

೪೫-೪೭. ಆರ್ದ್ರಾ, ಮೃಗಶಿರ, ಆಶ್ಲೇಷಾ, ಮಖಾ ಈ ನಕ್ಷತ್ರಗಳಲ್ಲಿ ಕಾಣುವ ಗತಿಗೆ ಮಿಶ್ರಗತಿಯೆಂದೂ, ಪೂರ್ವಾಫಲ್ಗುನೀ, ಉತ್ತರಾಫಲ್ಗುನೀ, ಪುಷ್ಯ, ಪುನರ್ವಸು ಈ ನಕ್ಷತ್ರಗಳ ಸಂಚಾರಕ್ಕೆ ಸಂಕ್ಷಿಪ್ತಗತಿಯೆಂದೂ ಹೆಸರು. ಪೂರ್ವಾಭಾದ್ರಾ, ಉತ್ತರಾಭಾದ್ರ, ರೇವತೀ ಈ ನಕ್ಷತ್ರಗಳಲ್ಲಿ ತೋರಿಬರುವ ಸಂಚಾರಕ್ಕೆ ತೀಕ್ಷ್ಣಗತಿಯೆಂದೂ ವ್ಯವಹಾರವಿರುವುದು. ಭರಣೀ, ವಿಶಾಖಾ, ಪೂರ್ವಾಷಾಢಾ, ಮೂಲ, ರೇವತಿ ಮತ್ತು ರೋಹಿಣೀ ಈ ನಕ್ಷತ್ರಗಳ ಸಂಚಾರಕ್ಕೆ ಘೋರಗತಿಯೆಂದು ಹೆಸರು. ವಿಶಾಖ, ಅನೂರಾಧಾ, ಹಸ್ತ, ಶ್ರವಣ, ಧನಿಷ್ಠ, ಪೂರ್ವಾಷಾಢಾ ಈ ನಕ್ಷತ್ರಗಳ ಸಂಚಾರಕ್ಕೆ ಪಾಪಗತಿಯೆಂದೂ ರೂಢಿಯಿದೆ.

೪೯-೫೨. ಹಿಂದೆ ಹೇಳಿದ ಪ್ರಾಕೃತವೇ ಮೊದಲಾದ ಗತಿಗಳಲ್ಲಿ ಸಂಚರಿಸುವ ಸೂರ್ಯನು ಎಷ್ಟು ದಿವಸ ಉದಯವಾಗಿ ದೃಗ್ಗೋಚರನಾಗುವನೋ ಅಷ್ಟುದಿನ ಅವನು ಅಸ್ತನೂ ಆಗಿರುವನು. ಮೇಲೆ ಹೇಳಿದ ಆರು ಗತಿಗಳಲ್ಲಿಯೂ, ಕ್ರಮವಾಗಿ ೪೦ ನಲವತ್ತು ೩೦ ಮೂವತ್ತು ೧೪ ಹದಿನಾಲ್ಕು ೯ ಒಂಭತ್ತು ೧೫ ಹದಿನೈದು ೧೧ ಹನ್ನೊಂದು ಈ ಸಂಖ್ಯೆಯ ದಿನಗಳು ಬುಧನಿಗೆ ಉದಯಾಸ್ತಕಾಲಗಳಾಗಿರುವುವು. ಪ್ರಾಕೃತ ಗತಿಯಲ್ಲಿರುವ ಬುಧನು ಜನರಿಗೆ

ಪ್ರಾಕೃತಾಯಾಂ ಗತಃ ಸೌಮ್ಯಃ ಕ್ಷೇಮಾರೋಗ್ಯಸುಭಿಕ್ಷಕೃತ್ ।
ಮಿಶ್ರಸಂಕ್ಷಿಪ್ತಯೋರ್ಮಧ್ಯೇ ಫಲದೋಽನ್ಯಾಸು ವೃಷ್ಟಿದಃ ॥ ೫೦ ॥

ವೈಶಾಖೇ ಶ್ರಾವಣೇ ಪೌಷೇ ಆಷಾಢೇಽಭ್ಯುದಿತೋ ಬುಧಃ ।
ಜಗತಾಂ ಪಾಪಫಲದಸ್ತ್ವಿತರೇಷು ಶುಭಪ್ರದಃ ॥ ೫೧ ॥

ಇಷೋರ್ಜಮಾಸಯೋಃ ಶಸ್ತ್ರದುರ್ಭಿಕ್ಷಾಗ್ನಿಭಯಪ್ರದಃ ।
ಉದಿತಶ್ಚಂದ್ರಜಃ ಶ್ರೇಷ್ಠೋ ರಜತಸ್ಫಟಿಕೋಪಮಃ ॥ ೫೨ ॥

ದ್ವಿಭಾಟಜೋದಿಮಾಸ್ತಸ್ಯ ಪಂಚಮ್ಯೈಕಾದಶಾಸ್ತ್ರಿಭಾತ್ ।
ಯನ್ನಕ್ಷತ್ರೋದಿತೋ ಜೀವಸ್ತನ್ನಕ್ಷತ್ರಾಖ್ಯವತ್ಸರಃ ॥ ೫೩ ॥

ಕಾರ್ತಿಕೋ ಮಾರ್ಗಶೀರ್ಷಶ್ಚ ನೃಣಾಂ ದುಷ್ಟಫಲಪ್ರದಃ ।
ಶುಭಪ್ರದೌ ಪೌಷಮಾಘೌ ಮಧ್ಯಮೌ ಮಧುಫಾಲ್ಗುನೌ ॥ ೫೪ ॥

ಕ್ಷೇಮ ಆರೋಗ್ಯ ಸುಭಿಕ್ಷ ಮುಂತಾದುವುಗಳನ್ನೂ, ಮಿಶ್ರ ಸಂಕ್ಷಿಪ್ತಗಳಲ್ಲಿ ಮಧ್ಯಮವಾದ ಫಲವನ್ನೂ, ಇತರ ಗತಿಗಳಲ್ಲಿ ವೃಷ್ಟಿಪ್ರದರೂಪವಾದ ಫಲವನ್ನೂ ಕೊಡುವನು. ವೈಶಾಖ, ಶ್ರಾವಣ, ಪುಷ್ಯ, ಆಷಾಢ ಈ ಮಾಸಗಳಲ್ಲಿ ಬುಧೋದಯವಾದರೆ ಜಗತ್ತಿಗೆ ಅನಿಷ್ಟಫಲವೂ ಇತರ ಮಾಸಗಳಲ್ಲಿ ಉದಯವಾದರೆ ಶುಭಫಲವೂ ಲಭಿಸುವುದು. ಆಶ್ವಯುಜ ಮತ್ತು ಕಾರ್ತಿಕ ಮಾಸಗಳಲ್ಲಿ ಆಗುವ ಬುಧೋದಯವು ಶಸ್ತ್ರಾಗ್ನಿಗಳ ಭಯವನ್ನುಂಟುಮಾಡುವುದು. ಉದಯಕಾಲದಲ್ಲಿ ಬುಧನ ಬಿಂಬವು ಬೆಳ್ಳಿಯಂತೆಯೂ ಸ್ಫಟಿಕದಂತೆಯೂ ಹೊಳೆಯುತ್ತಿರುವುದು.

೫೩–೫೪. ಸೂರ್ಯಸಂಪರ್ಕದಿಂದ ಉದಿತವಾದ ಬೃಹಸ್ಪತಿಗ್ರಹವು ಯಾವ ನಕ್ಷತ್ರದಲ್ಲಿ ತೋರಿಬರುವುದೋ ಆ ನಕ್ಷತ್ರದ ಹೆಸರೇ ಆ ವರ್ಷಕ್ಕೆ ಬರುವುದು. ಅದೇ ರೀತಿಯಲ್ಲಿ ಬೃಹಸ್ಪತಿ ನಕ್ಷತ್ರದಿಂದ ಹುಟ್ಟುವ ತಿಂಗಳುಗಳ ಫಲವೇನೆಂದರೆ ಕಾರ್ತಿಕ, ಮಾರ್ಗಶಿರ ಈ ಮಾಸಗಳು ದುಷ್ಟಫಲಪ್ರದಗಳಾಗುವುವು. ಪುಷ್ಯ ಮತ್ತು ಮಾಘಮಾಸಗಳು ಶುಭಫಲಪ್ರದಗಳು. ಫಾಲ್ಗುನ ಮತ್ತು ಚೈತ್ರ ಈ ಮಾಸಗಳು ಮಧ್ಯಮವಾದ ಫಲಗಳನ್ನು ಕೊಡುವುವು.

ಮಾಧವಃ ಶುಭದೋ ಜ್ಯೇಷ್ಠೋ ನೃಣಾಂ ಮಧ್ಯಫಲಪ್ರದಃ ।
ಶುಚಿರ್ಮಧ್ಯೋ ನಭಾಃ ಶ್ರೇಷ್ಠೋ ಭಾದ್ರಃ ಶ್ರೇಷ್ಠಃ ಕ್ವಚಿನ್ನರಃ ॥ ೫೫ ॥

ಅತಿಶ್ರೇಷ್ಠ ಇಷಃ ಪ್ರೋಕ್ತೋ ಮಾಸಾನಾಂ ಫಲಮೀದೃಶಂ ।
ಸೌಮ್ಯೇ ಭಾಗೇ ಚರನ್ಭಾನಾಂ ಕ್ಷೇಮಾರೋಗ್ಯಸುಭಿಕ್ಷಕೃತ್ ॥ ೫೬ ॥

ವಿಪರೀತೋ ಗುರುರ್ಯಾಮ್ಯೇ ಮಧ್ಯೇ ಚರತಿ ಮಧ್ಯಮಂ ।
ಪೀತಾಗ್ನಿಶ್ಯಾಮಹರಿತರಕ್ತವರ್ಣೋಂಗಿರಾಃ ಕ್ರಮಾತ್ ॥ ೫೭ ॥

ವ್ಯಾಧ್ಯಗ್ನಿಚೌರಶಸ್ತ್ರಾಸ್ತ್ರಭಯದಃ ಪ್ರಾಣಿನಾಂ ಭವೇತ್ ।
ಅನಾವೃಷ್ಟಿಂ ಧೂಮ್ರನಿಭಃ ಕರೋತಿ ಸುರಪೂಜಿತಃ ॥ ೫೮ ॥

ದಿವಾದೃಷ್ಟೋ ನೃಪವಧ್ಯಾಮಯಂ ವಾ ರಾಷ್ಟ್ರನಾಶನಂ ।
ಸಂವತ್ಸರಶರೀರಂ ಸ್ಯಾತ್ಕೃತ್ತಿಕಾ ರೋಹಿಣೀ ತಥಾ ॥ ೫೯ ॥

ವೈಶಾಖಮಾಸವು ಶುಭಫಲಪ್ರದವಾದದ್ದೆಂದು ಹೇಳಿದೆ. ಜ್ಯೇಷ್ಠಮಾಸವು ಮಧ್ಯಮಫಲಪ್ರದವಾದುದೆಂದೂ ಶ್ರಾವಣವು ಉತ್ತಮಫಲಪ್ರದವಾದುದೆಂದೂ ಭಾದ್ರಪದ ಮತ್ತು ಆಶ್ವಯುಜ ಮಾಸಗಳು ಅತ್ಯುತ್ಕೃಷ್ಟಫಲಪ್ರದವಾದುವುಗಳೆಂದೂ ತಿಳಿಯಬೇಕು. ಗುರುವು ಉತ್ತರಾಯಣದಲ್ಲಿ ಸಂಚರಿಸುವ ನಕ್ಷತ್ರಗಳೆಲ್ಲಾ ಶುಭಫಲಪ್ರದಗಳಾಗಿಯೂ, ದಕ್ಷಿಣಾಯನದ ನಕ್ಷತ್ರಗಳು ಅಶುಭಫಲಪ್ರದಗಳಾಗಿಯೂ, ಮಧ್ಯಭಾಗದ ನಕ್ಷತ್ರಗಳು ಮಧ್ಯಮವಾದ ಫಲಪ್ರದಗಳಾಗಿಯೂ ಆಗುವುವು. ಪೀತ ಅಗ್ನಿವರ್ಣ ಹಸುರು ಕೆಂಪು ಈ ಬಣ್ಣಗಳಿಂದ ಕಾಣುವ ಗುರುವು ಲೋಕಕ್ಕೆ ಕ್ರಮವಾಗಿ ವ್ಯಾಧಿ ಅಗ್ನಿ ಚೋರ ಶಸ್ತ್ರಾಸ್ತ್ರ ಇವುಗಳ ಭಯವನ್ನು ಕೊಡುವನು. ಧೂಮ್ರವರ್ಣದಿಂದ ಕಂಡುಬರುವ ಗುರುವು ಅನಾವೃಷ್ಟಿಪ್ರದನಾಗುವನು.

೫೯-೬೪. ವರ್ಷದ ಮೊದಲುಭಾಗದಲ್ಲಿ ಕೃತ್ತಿಕಾ ಮತ್ತು ರೋಹಿಣೀ ನಕ್ಷತ್ರಗಳಲ್ಲಿ ಸಂಚರಿಸುವ ಗುರುವು ಹಗಲು ಪ್ರವೇಶಿಸಿದರೆ ರಾಜ ರಾಣಿ ಮತ್ತು ರಾಜ್ಯ ಇವುಗಳಿಗೆ ತೊಂದರೆಯುಂಟಾಗುವುದು. ಗುರುವತ್ಸರವೆಂಬ ಪುರುಷನಿಗೆ ಕೃತ್ತಿಕೆಯೇ ಶರೀರ, ರೋಹಿಣಿಯೇ ಪಾದಯುಗಲ, ಮಖಾನಕ್ಷತ್ರವೇ

ನಾಭಿಸ್ತ್ವಾಷಾಟೆಯುಗಲಮಾದ್ರೀ ಹೃತ್ಕುಸುಮಂ ಮಘಾ ।
ದುರ್ಭಿಕ್ಷಾಗ್ನಿಮರುದ್ಭೀತಿಃ ಶರೀರಂ ಕ್ರೂರಪೀಡಿತೇ ॥ ೬೦ ॥

ನಾಭ್ಯಾಂ ಕ್ಷುತ್ತೃಡ್ಭಯಂ ಪುಷ್ಯೇ ಸಮ್ಯಜ್ಮೂಲಫಲಕ್ಷಯಃ ।
ಹೃದಯೇಶಸ್ಯ ನಿಧನಂ ಶುಭಂ ಸ್ಯಾತ್ಸಂಯುತೈಃ ಶುಭೈಃ ॥ ೬೧ ॥

ಸಸ್ಯವೃದ್ಧಿಃ ಪ್ರಜಾರೋಗ್ಯಂ ಯುದ್ಧಂ ಜೀವಾತ್ಯನರ್ಷಣಂ ।
ಇತಿ ದ್ವಿಜಾತಿಮಧ್ಯಾಂ ತು ಗೋನ್ಯಪಸ್ತ್ರೀಸುಖಾ ಮಹತ್ ॥ ೬೨ ॥

ನಿಃ ಸ್ವನಾವೃಷ್ಟಿಫಣಿಭಿರ್ವೃಷ್ಟಿಃ ಸ್ವಾಸ್ಥ್ಯಂ ಮಹೋತ್ಸವಃ ।
ಮಹಾರ್ಘಮತಿಸಂಪತ್ತಿರ್ದೇಶನಾಶೋಽತಿವರ್ಷಣಂ ॥ ೬೩ ॥

ಅವೈರಂ ರೋಗಮಭಯಂ ರೋಗಭೀಃ ಸಸ್ಯವರ್ಷಣೇ ।
ರೋಗೋ ಧಾನ್ಯಂ ನಭೋಽದೃಷ್ಟಿಮಘಾದ್ಯೃಕ್ಷಗತೇ ಗುರೌ ॥ ೬೪ ॥

---

ಹೃದಯ ಈರೀತಿ ಏರ್ಪಟ್ಟಿರುವುದು. ಶರೀರಸ್ಥಾನದ ನಕ್ಷತ್ರವು ಕ್ರೂರಗ್ರಹಾಕ್ರಾಂತವಾದರೆ (ಅಂದರೆ ಕೃತ್ತಿಕಾನಕ್ಷತ್ರಕ್ಕೆ ಕ್ರೂರಗ್ರಹದ ಸಂಬಂಧವೇರ್ಪಟ್ಟರೆ) ದುರ್ಭಿಕ್ಷ, ಅಗ್ನಿ, ವಾಯು ಇವುಗಳಿಂದ ಭಯವುಂಟಾಗುವುದು. ನಾಭಿಭೂತವಾದ ನಕ್ಷತ್ರವು ಕ್ರೂರಗ್ರಹಾಕ್ರಾಂತವಾದರೆ ಹಸಿವು ಬಾಯಾರಿಕೆಗಳ ಭಯವು ತಪ್ಪುವುದಿಲ್ಲ. ಪುಷ್ಯನಕ್ಷತ್ರವು ಕ್ರೂರಗ್ರಹವಿಶಿಷ್ಟವಾದರೆ ಹಣ್ಣು ಹಂಪಲುಗಳು, ಕಾಯಿಪಲ್ಯಗಳು, ಗೆಡ್ಡೆಗೆಣಸುಗಳು ಮುಂತಾದ ಪದಾರ್ಥಗಳು ಕ್ಷಯವಾಗುವುವು, ಮತ್ತು ಸಮಾಜದ ಮುಖಂಡನೆನಿಸಿದವನಿಗೆ ತೊಂದರೆಯಾಗುವುದು. ಮೇಲೆ ಹೇಳಿದ ನಕ್ಷತ್ರಗಳು ಶುಭಗ್ರಹಾಕ್ರಾಂತವಾದರೆ ಸಸ್ಯವೃದ್ಧಿ ಪ್ರಜಾರೋಗ್ಯ ಇವುಗಳು ಲಭಿಸುವುವು. ಗುರುವು ಯುದ್ಧದಲ್ಲಿ ವಿಜಯಿಯಾಗಿ ಪ್ರಕಾಶಿಸಿದರೆ ದ್ವಿಜವರ್ಗಕ್ಕೂ ಪಶು ರಾಜ ಸ್ತ್ರೀ ಇವರಿಗೂ ಅತಿಶಯವಾದ ಸೌಖ್ಯವುಂಟಾಗುವುದು. ಗುರುವು ಮಘಾದಿಯಾದ ನಕ್ಷತ್ರಗಳಲ್ಲಿ ಸಂಚರಿಸುವಾಗ ಕ್ರಮವಾಗಿ ದಾರಿದ್ರ್ಯ, ಅನಾವೃಷ್ಟಿ, ಸರ್ಪಭಯ, ಅತಿವೃಷ್ಟಿ, ಸೌಖ್ಯ, ಉತ್ಸವ, ಮಹಾರ್ಘ, ಸಂಪತ್ತು, ದೇಶನಾಶ, ಅತಿವೃಷ್ಟಿ, ಸ್ನೇಹ, ರೋಗ, ಅಭಯ, ರೋಗಭೀತಿ, ಸಸ್ಯವೃದ್ಧಿ, ವೃಷ್ಟಿ, ವೃದ್ಧಿ, ರೋಗ, ಧಾನ್ಯವೃದ್ಧಿ, ನಭೋವೃದ್ಧಿ, ವೃಷ್ಟಿನಾಶ ಮುಂತಾದ ಫಲಗಳು ಲಭಿಸುವುವು.

ಸೌಮ್ಯಮಧ್ಯಮಯಾಮ್ಯೇಷು ಮಾರ್ಗೇಷು ವೀಥಿಕಾತ್ರಯಂ ।
ಶುಕ್ರಸ್ಯ ದಸ್ರಭಾಜ್ಞೇಯಂ ಪರ್ಯಾಯೈಶ್ಚ ತ್ರಿಭಿಸ್ತ್ರಿಭಿಃ ॥ ೬೫ ॥

ನಾಗೇಭೈರಾವತಾಶ್ಚೈವ ವೃಷಭೋಷ್ಟ್ರಖರಾಹ್ವಯಾಃ ।
ಮೃಗಾಂಜದಹನಾಖ್ಯಾಃ ಸ್ಯುರ್ಯಾಮ್ಯಾಂತಾ ವೀಥಯೋ ನವ ॥ ೬೬ ॥

ಸೌಮ್ಯಮಾರ್ಗೇ ಚ ತಿಸೃಷು ಚರನ್ವೀಥಿಷು ಭಾರ್ಗವಃ ।
ಧಾನ್ಯಾರ್ಘವೃಷ್ಟಿಸಸ್ಯಾನಾಂ ಪರಿಪೂರ್ತಿಂ ಕರೋತಿ ಹಿ ॥ ೬೭ ॥

ಮಧ್ಯಮಾರ್ಗೇ ಚ ತಿಸೃಷು ಸರ್ವಮಾಪ್ಯಧಮಂ ಫಲಂ ।
ಪೂರ್ವಸ್ಯಾಂ ದಿಶಿ ಮೇಘುಸ್ತು ಶುಭದಃ ಪಿತೃಪಂಚಕೇ ॥ ೬೮ ॥

ಸ್ವಾತಿತ್ರಯೇ ಪಶ್ಚಿಮಾಯಾಂ ತಸ್ಯಾಂ ಶುಕ್ರಸ್ತಥಾವಿಧಃ ।
ವಿಪರೀತೇ ತ್ವನಾವೃಷ್ಟಿರ್ವಾತ ಕೃದ್ಬುಧಸಂಯುತಃ ॥ ೬೯ ॥

೬೫–೬೯. ಶುಕ್ರನ ಅಶ್ವಿನ್ಯಾದಿಯಾಗಿ ಮೂರು ಮೂರು ನಕ್ಷತ್ರಗಳ ಸಂಚಾರಮಾರ್ಗಕ್ಕೆ ಒಂದೊಂದು ವೀಥಿಯೆಂದು ಹೆಸರು. ಹೀಗೆ ಒಟ್ಟು ೨೭ ಇಪ್ಪತ್ತೇಳು ನಕ್ಷತ್ರಗಳಿಗೆ ೯ ಒಂಭತ್ತು ವೀಥಿಗಳಾಗುವುವು (ಬೀದಿಗಳಾಗುವುವು). ಇವು ದಕ್ಷಿಣಾಯನ ಉತ್ತರಾಯಣ ಮಧ್ಯಾಯನ ಈ ಭಾಗಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಫಲ ಕೊಡುವುವು. ಈ ವೀಥಿಗಳಿಗೆ ಕ್ರಮವಾಗಿ ನಾಗ, ಇಭ, ಐರಾವತ, ವೃಷಭ, ಉಷ್ಟ್ರ, ಖರ, ಮೃಗ, ಅಜ ಮತ್ತು ದಹನ ವೀಥಿಗಳೆಂದು ಸಂಜ್ಞೆಗಳಿವೆ. ಉತ್ತರಾಯಣದಲ್ಲಿ ಈ ವೀಥಿಯಲ್ಲಿ ಸಂಚರಿಸುವ ಶುಕ್ರನು ಧಾನ್ಯ, ಅರ್ಘ, ವೃಷ್ಟಿ, ಸಸ್ಯ ಇವುಗಳ ಅಭಿವೃದ್ಧಿಯನ್ನು ಕೊಡುವನು. ಮಧ್ಯಮ ಮಾರ್ಗದಲ್ಲಿ (ಅಂದರೆ ಎರಡು ಅಯನಗಳ ಮಧ್ಯಕಾಲದಲ್ಲಿ) ಮಧ್ಯಮವಾದ ಫಲವೂ ದಕ್ಷಿಣಾಯನ ಮಾರ್ಗದಲ್ಲಿ (ಯಾಮ್ಯಮಾರ್ಗದಲ್ಲಿ) ಅಧಮಫಲವೂ ಶುಕ್ರನಿಂದ ಪ್ರಪಂಚಕ್ಕುಂಟಾಗುವುದು. ಮಘಾದಿಯಾದ ಐದು ನಕ್ಷತ್ರಗಳಲ್ಲಿ ಶುಕ್ರನು ಸಂಚರಿಸುವಾಗ ಪೂರ್ವದಿಗ್ಭಾಗದಲ್ಲಿ ವೃಷ್ಟಿಯು ಅಧಿಕವಾಗುತ್ತದೆ. ಸ್ವಾತೀತ್ರಯದಲ್ಲಿರುವಾಗ ಪಶ್ಚಿಮದಲ್ಲಿ ವೃಷ್ಟಿಯುಂಟಾಗುವುದು. ಪೂರ್ವಪಶ್ಚಿಮ ದಿಕ್ಕುಗಳಲ್ಲಿ ನಕ್ಷತ್ರ ವ್ಯತ್ಯಾಸವಾದಾಗ ಅನಾವೃಷ್ಟಿಯೊದಗುವುದು. ಅಲ್ಲದೇ

ಕೃಷ್ಣಾಷ್ಟಮ್ಯಾಂ ಚತುರ್ದಶ್ಯಾಮಮಾಯಾಂ ಚ ಯದಾ ಸಿತಃ ।
ಉದಯಾಸ್ತಮನಂ ಯಾತಿ ತದಾ ಜಲಮಯೀ ಮಹೀ ॥ ೭೦ ॥

ಮಿಥಃ ಸಪ್ತಮರಾಶಿಸ್ಥೌ ಪಶ್ಚಾತ್ಪ್ರಾಗ್ವೀಥಿಸಂಸ್ಥಿತೌ ।
ಗುರುಶುಕ್ರಾವನಾವೃಷ್ಟಿದುರ್ಭಿಕ್ಷಸಮರಪ್ರದೌ ॥ ೭೧ ॥

ಕುಜಜ್ಞಜೀವರವಿಜಾಃ ಶುಕ್ರಸ್ಯಾಗ್ರೇಸರಾ ಯದಿ ।
ಯುದ್ಧಾಂತಿವಾಯುದುರ್ಭಿಕ್ಷಜಲನಾಶಕರಾ ಮತಾಃ ॥ ೭೨ ॥

ಜಲಮಿತ್ರಾರ್ಯಮಾಹೀಂದ್ರನಕ್ಷತ್ರೇಷು ಸುಭಿಕ್ಷಕೃತ್ ।
ಶಸ್ತ್ರಾಪ್ತವೃಷ್ಟಿದೋ ಮೂಲೇಹಿರ್ಬುಧ್ನ್ಯಾಂತ್ಯಭಯೋರ್ಭಯಂ ॥ ೭೩ ॥

ಶ್ರವಣಾನಿಲಹಸ್ತಾರ್ದ್ರಾಭರಣೀಭಾಗ್ಯಭೇಷು ಚ ।
ಚರನ್ನೈಶ್ಚರೋ ನೄಣಾಂ ಸುಭಿಕ್ಷಾರೋಗ್ಯಸಸ್ಯಕೃತ್ ॥ ೭೪ ॥

ವಾತಾದಿಗಳ ಪೀಡೆಯು ಜಾಸ್ತಿಯಾಗುವುದು. ಕೃಷ್ಣಾಷ್ಟಮಿ, ಕೃಷ್ಣಚತುರ್ದಶೀ, ಅಮಾವಾಸ್ಯೆ ಇವುಗಳಲ್ಲಿ ಶುಕ್ರನು ಉದಯಾಸ್ತಗಳನ್ನು ಪಡೆದರೆ ವೃಷ್ಟಿಯು ಅತ್ಯಧಿಕವಾಗಿ ಭೂಮಿಗೆ ಬೀಳುವುದು. ಗುರು ಶುಕ್ರರು ಪರಸ್ಪರ ಸಪ್ತಮರಾಶಿಗತರಾಗಿ ಪೂರ್ವವೀಥಿಯಲ್ಲಿದ್ದರೆ ಅನಾವೃಷ್ಟಿ ದುರ್ಭಿಕ್ಷ ಇವುಗಳ ಭಯವು ಲಭಿಸುವುದು.

೭೨-೭೩. ಕುಜ, ಬುಧ, ಗುರು, ಶನಿಗಳು ಶುಕ್ರನಿಗಿಂತ ಮುಂದಿನ ನಕ್ಷತ್ರಗಳಲ್ಲಿದ್ದರೆ ಕ್ರಮವಾಗಿ ಯುದ್ಧ, ಅತಿವಾಯು, ದುರ್ಭಿಕ್ಷ, ಜಲನಾಶ ಇವುಗಳು ಲಭಿಸುವವು. ಪೂರ್ವಾಷಾಢಾ, ಅನೂರಾಧಾ, ಉತ್ತರ, ಆಶ್ಲೇಷ, ಜ್ಯೇಷ್ಠಾ ಈ ನಕ್ಷತ್ರಗಳಲ್ಲಿ ಸಂಚರಿಸುವ ಶುಕ್ರನು ಸುಭಿಕ್ಷವನ್ನುಂಟುಮಾಡುವನು. ಮೂಲಾನಕ್ಷತ್ರದಲ್ಲಿರುವ ಶುಕ್ರನು ಶಾಸ್ತ್ರವೃದ್ಧಿ, ವೃಷ್ಟಿವೃದ್ಧಿ ಇವುಗಳನ್ನು ಕೊಡುವನು. ಉತ್ತರಾಭಾದ್ರ ಮತ್ತು ರೇವತಿ ಈ ನಕ್ಷತ್ರಗಳಲ್ಲಿರುವ ಶುಕ್ರನು ಭಯವನ್ನುಂಟುಮಾಡುವನು.

೭೪-೭೮. ಶನಿಯು ಶ್ರವಣ ಸ್ವಾತೀ ಹಸ್ತ ಆರ್ದ್ರಾ ಭರಣಿ ಪುಬ್ಬ ಈ ನಕ್ಷತ್ರಗಳಲ್ಲಿ ಸಂಚರಿಸುವಾಗ ಸುಭಿಕ್ಷ, ಆರೋಗ್ಯ, ಸಸ್ಯ ಇವುಗಳನ್ನು ಹೆಚ್ಚಿ

ಮುಖೇ ಚೈಕಂ ಗುದೇ ದ್ವೇ ಚ ತ್ರೀಣಿ ಕೇ ನಯನೇ ದ್ವಯಂ ।
ಹೃದಯೇ ಪಂಚ ಋಕ್ಷಾಣಿ ವಾಮಹಸ್ತೇ ಚತುಷ್ಟಯಂ ॥ ೭೫ ॥

ವಾಮಪಾದೇ ತಥಾ ತ್ರೀಣಿ ದಕ್ಷಿಣೇ ತ್ರೀಣಿ ಭಾನಿ ಚ ।
ಚತ್ವಾರಿ ದಕ್ಷಿಣೇ ಹಸ್ತೇ ಜನ್ಮಭಾದ್ರವಿಜಸ್ಥಿತಿಃ ॥ ೭೬ ॥

ರೋಗೋ ಲಾಭಸ್ತಥಾ ಹಾನಿರ್ಲಾಭಃ ಸೌಖ್ಯಂ ಚ ಬಂಧನಂ ।
ಆಯಾಸಃ ಶ್ರೇಷ್ಠಯಾತ್ರಾ ಚ ಧನಲಾಭಃ ಕ್ರಮಾತ್ಫಲಂ ॥ ೭೭ ॥

ಬಹುಧಾ ರವಿಜಸ್ತ್ವೇತದ್ವಕ್ರಗಃ ಫಲಮೀದೃಶಂ ।
ಕರೋತ್ಯೇವ ಸಮಃ ಸಾಮ್ಯಂ ಶೀಘ್ರಗೇಷೂತ್ಕ್ರಮಾತ್ಫಲಂ ॥ ೭೮ ॥

ವಿಷ್ಣುಚಕ್ರೋತ್ಕೃತ್ತಶಿರಾಃ ಪಂಗುಃ ಪೀಯೂಷಪಾನತಃ ।
ಅಮೃತತ್ಮತಾಂ ಗತಸ್ತತ್ರ ಖೇಟತ್ವೇ ಪರಿಕಲ್ಪಿತಃ ॥ ೭೯ ॥

ಸುವನು. ಶನಿಯು ಉದಯವಾಗುವ ನಕ್ಷತ್ರದಿಂದ ಒಂದು ನಕ್ಷತ್ರವು ಶನಿ ವತ್ಸರಪುರುಷನಿಗೆ ಮುಖವಾಗಿಯೂ, ಎರಡು ನಕ್ಷತ್ರಗಳು ಗುದವಾಗಿಯೂ, ಮೂರು ನಕ್ಷತ್ರಗಳು ಶಿರಸ್ಸಾಗಿಯೂ, ಎರಡು ಕಣ್ಣುಗಳಾಗಿಯೂ, ಐದು ಹೃದಯವಾಗಿಯೂ, ನಾಲ್ಕು ಬಲಗೈಗಳಾಗಿಯೂ, ಮೂರು ಎಡಪಾದವಾಗಿಯೂ, ನಾಲ್ಕು ನಕ್ಷತ್ರಗಳು ಎಡ ಮತ್ತು ಬಲಗೈಗಳಾಗಿಯೂ ಆಗುವುವು. ಮೇಲೆ ಹೇಳಿದ ಅಂಗವಿಭಾಗಗಳಲ್ಲಿ ಸಂಚರಿಸುವ ಶನಿಯು ಕ್ರಮವಾಗಿ ರೋಗ, ಲಾಭ, ಹಾನಿ, ಲಾಭ, ಸುಖ, ಬಂಧನ, ಆಯಾಸ, ಶ್ರೇಷ್ಠವಾದ ಯಾತ್ರೆ, ಧನಲಾಭ, ಬಹುಪತ್ನೀ ಲಾಭ, ವಿಜಯ ಈ ಫಲಗಳನ್ನು ಕೊಡುವನು. ಆದರೆ ಶನಿಯು ವಕ್ರನಾಗಿ ಈ ನಕ್ಷತ್ರಗಳಲ್ಲಿ ಸಂಚರಿಸಿದರೆ ಪೂರ್ಣಫಲವು ಲಭಿಸುವುದು. ಋಜುಗತಿಯಲ್ಲಿ ಮಧ್ಯಮವಾಗಿಯೂ ಶೀಘ್ರಗತಿಯಲ್ಲಿ ವಿರುದ್ಧವಾಗಿಯೂ ಫಲಗಳುಂಟಾಗುವುವೆಂದು ತಿಳಿಯಬೇಕು.

೭೯-೮೨. ಅಮೃತಪಾನಾಭಿಲಾಷೆಯಲ್ಲಿ ಅಡಗಿದ್ದ ರಾಕ್ಷಸನನ್ನು ವಿಷ್ಣುವು ತನ್ನ ಚಕ್ರದಿಂದ ಕತ್ತರಿಸಿದಾಗ ಆದ ರುಂಡವೇ ರಾಹುವೆನಿಸಿತು. ಅಮೃತಪಾನದಿಂದ ಮರಣವನ್ನು ಗೆದ್ದು ಅದೂ ಒಂದು ಗ್ರಹವೆನಿಸಿತು. ಸೂರ್ಯ

**ಆವರಣಧಾತುರರ್ಕೇಂದೂ ತುದತೇ ಸರ್ವಪರ್ವಣಿ ।**
**ವಿಕ್ಷೇಪಾವನತೇರ್ವಂಗಾದ್ರಾಹುರ್ದೂರಗತಸ್ತಯೋಃ ॥ ೮೦ ॥**

**ಷಣ್ಮಾಸವೃದ್ಧ್ಯಾ ಗ್ರಹಣಂ ಶೋಧಯೇದ್ರವಿಚಂದ್ರಯೋಃ ।**
**ಪರ್ವೇಶಾಸ್ತು ತಥಾ ಸಪ್ತದೇವಾಃ ರವ್ಯಾದಿತ ಕ್ರಮಾತ್ ॥ ೮೧ ॥**

**ಬ್ರಹ್ಮೇಂದ್ವಿಂದ್ರಧನಾಧೀಶವರುಣಾಗ್ನಿಯಮಾಹ್ವಯಾಃ ।**
**ಪಶುಸಸ್ಯದ್ವಿಜಾತೀನಾಂ ವೃದ್ಧಿರ್ಬ್ರಾಹ್ಮೇ ತು ಪರ್ವಣಿ ॥ ೮೨ ॥**

**ತದ್ವದೇವ ಫಲಂ ಸೌಮ್ಯೇ ಶ್ಲೇಷ್ಮಪೀಡಾ ಚ ಪರ್ವಣಿ ।**
**ವಿರೋಧೋ ಭೂಭುಜಾಂ ದುಃಖಮೈಂದ್ರೇ ಸಸ್ಯವಿನಾಶನಂ ॥ ೮೩ ॥**

**ಧನಿನಾಂ ಧನಹಾನಿಃ ಸ್ಯಾತ್ಕೌಬೇರಂ ಧಾನ್ಯವರ್ಧನಂ ।**
**ನೃಪಾಣಾಮಶಿವಂ ಕ್ಷೇಮಮಿತರೇಷಾಂ ಚ ವಾರುಣೇ ॥ ೮೪ ॥**

ಚಂದ್ರರ ಮತ್ತು ರಾಹು ಗ್ರಹದ ಸ್ಪಷ್ಟೈಕ್ಯ ಮತ್ತು ಶರಾಭಾವ ಇವುಗಳಿಂದ ಗಣಿತರೀತಿಯಾಗಿ ಗ್ರಹಣ ಸಂಭವಿಸುವುದು. ಆ ಕಾಲದಲ್ಲಿ ಈ ರಾಹುಗ್ರಹವು ತನಗೆ ದ್ರೋಹಮಾಡಿದ ಸೂರ್ಯ ಚಂದ್ರರನ್ನು ನುಂಗುವುದು. ಸೂರ್ಯ ಚಂದ್ರ ಗ್ರಹಣಗಳಿಗೆ ಆರು ತಿಂಗಳಿಗಿಂತ ಹೆಚ್ಚಿನ ಅಂತರವಿದ್ದದ್ದೇ ಆದರೆ ಕ್ರಮವಾಗಿ ಬ್ರಹ್ಮ, ಇಂದು, ಇಂದ್ರ, ಕುಬೇರ, ವರುಣ, ಅಗ್ನಿ, ಯಮ ಇವರು ಪರ್ವಾಧಿಪತಿಗಳೆನಿಸುವರು. ಆರು ತಿಂಗಳ ಅಂತರಕಾಲಕ್ಕೆ ಬ್ರಹ್ಮನೇ ಪರ್ವಾಧಿಪತಿ. ಬ್ರಾಹ್ಮಪರ್ವದಲ್ಲಿ ಪಶು ಸಸ್ಯ ದ್ವಿಜ ಇವರ ವೃದ್ಧಿಯುಂಟಾಗುವುದು.

೮೩-೮೪. ಏಳು ತಿಂಗಳ ಅಂತರಕ್ಕೆ ಚಂದ್ರನು ಪರ್ವಾಧಿಪತಿಯೆನಿಸುವನು. ಅದರಿಂದ ಶ್ಲೇಷ್ಮಪೀಡೆಯೊದಗಿ ಉಳಿದ ಫಲವೆಲ್ಲಾ ಬ್ರಾಹ್ಮಪರ್ವದಂತೆಯೇ ನಡೆಯುವುದು. ಇಂದ್ರನು ಪರ್ವೇಶನಾದಾಗ ರಾಜರ ದ್ವೇಷವೂ ಸಸ್ಯನಾಶವೂ ಆಗುವುದು.

ಕುಬೇರನು ಪರ್ವಾಧಿಪತಿಯಾದಾಗ ಶ್ರೀಮಂತರಿಗೆ ಧನಹಾನಿಯೂ ಧಾನ್ಯವೃದ್ಧಿಯೂ ಹೆಚ್ಚುವುದು. ವರುಣನು ಪರ್ವಾಧಿಪತಿಯಾದ ಕಾಲದಲ್ಲಿ ರಾಜರಿಗೆ ಅಮಂಗಲವೂ ಇತರರಿಗೆ ಮಂಗಳವೂ ಅಭಿವೃದ್ಧಿಹೊಂದುವುದು.

ಪ್ರವರ್ಷಣಂ ಸಸ್ಯವೃದ್ಧಿಃ ಕ್ಷೇಮಂ ಹೌತಾಶಪರ್ವಣಿ ।
ಅನಾವೃಷ್ಟಿಃ ಸಸ್ಯಹಾನಿರ್ದುರ್ಭಿಕ್ಷಂ ಯಾಮ್ಯಪರ್ವಣಿ ॥ ೮೫ ॥

ವೇಲಾಹೀನೇ ಸಸ್ಯಹಾನಿರ್ನೃಪಾಣಾಂ ದಾರುಣಂ ರಣಂ ।
ಅತಿವೇಲೇ ಪುಷ್ಪಹಾನಿರ್ಭಯಂ ಸಸ್ಯವಿನಾಶನಂ ॥ ೮೬ ॥

ಏಕಸ್ಮಿನ್ನೇವ ಮಾಸೇ ತು ಚಂದ್ರಾರ್ಕಗ್ರಹಣಂ ಯದಾ ।
ವಿರೋಧೋ ಧರಣೀಶಾನಾಮರ್ಘದೃಷ್ಟಿವಿನಾಶನಂ ॥ ೮೭ ॥

ಗ್ರಸ್ತೋದಿತಾವಸ್ತಮಿತೌ ನೃಪಧಾನ್ಯವಿನಾಶದೌ ।
ಸರ್ವಗ್ರಸ್ತಾವಿನೇಂದೂ ತು ಕ್ಷುದ್ವ್ಯಾಧ್ಯಗ್ನಿಭಯಪ್ರದೌ ॥ ೮೮ ॥

ಸೌಮ್ಯಾಯನೇ ಕ್ಷತ್ರವಿಪ್ರಾನಿತರಾನ್ ಘ್ನಂತಿ ದಕ್ಷಿಣೇ ।
ದ್ವಿಜಾತೀಂಶ್ಚ ಕ್ರಮಾದ್ಘ್ನಂತಿ ರಾಹುದೃಷ್ಟ್ವೋರಗಾದಿತಃ ॥ ೮೯ ॥

೮೫-೮೮. ಅಗ್ನಿಯು ಪರ್ವಾಧಿಪತಿಯಾದರೆ ಅತಿವೃಷ್ಟಿಯೂ, ಸಸ್ಯವೃದ್ಧಿಯೂ. ಪ್ರಜಾಕ್ಷೇಮವೂ, ಯಮನ ಪರ್ವಾಧಿಪತ್ಯದಲ್ಲಿ ಅನಾವೃಷ್ಟಿ, ಸಸ್ಯಹಾನಿ ದುರ್ಭಿಕ್ಷ ಇವುಗಳೂ ಒದಗುವುವು. ಆರು ತಿಂಗಳಿಗೆ ಮುಂಚೆ ಗ್ರಹಣಗಳು ಸಂಭವಿಸಿದರೆ ಸಸ್ಯಹಾನಿ, ರಾಜರಿಗೆ ಪರಸ್ಪರವಾದ ಭಯ, ಪುಷ್ಪಹಾನಿ (ಪುಷ್ಟರಾದ ಜನಗಳ ನಾಶ) ಇವುಗಳು ಸಂಭವಿಸುವುವು. ಅತಿವೇಲವಾದರೆ ಸಸ್ಯನಾಶ ಭಯ ಇವು ಹೆಚ್ಚುವುವು. ಒಂದೇ ತಿಂಗಳಲ್ಲಿ ಸೂರ್ಯಚಂದ್ರರಿಬ್ಬರ ಗ್ರಹಣವೂ ಸಂಭವಿಸಿದರೆ ರಾಜರಿಗೆ ಪರಸ್ಪರ ದ್ವೇಷ, ಪದಾರ್ಥಗಳ ಬೆಲೆ ಹೆಚ್ಚುವಿಕೆ ಮತ್ತು ಹೆಚ್ಚಾದ ಅನಾವೃಷ್ಟಿ ಈರೀತಿಯಾದ ಫಲಗಳು ಒದಗುವುವು. ಗ್ರಸ್ತೋದಯವಾದರೆ ರಾಜನಾಶವೂ ಗ್ರಸ್ತಾಸ್ತವಾದರೆ ಧಾನ್ಯನಾಶವೂ ಸಂಪೂರ್ಣ ಗ್ರಹಣವೊದಗಿದರೆ ಹಸಿವು, ಬಾಯಾರಿಕೆ, ಅಗ್ನಿಭಯ ಇವುಗಳು ಜನರಿಗೆ ಹೆಚ್ಚಾಗುವುವು.

೮೯-೯೦. ಉತ್ತರಾಯಣದಲ್ಲಿ ಗ್ರಹಣ ಸಂಭವಿಸಿದರೆ ಬ್ರಹ್ಮ, ಕ್ಷತ್ರಿಯ ಮತ್ತು ವೈಶ್ಯವರ್ಗದವರಿಗೂ ದಕ್ಷಿಣಾಯನದಲ್ಲಿ ಗ್ರಹಣವುಂಟಾದರೆ ಇತರರಿಗೂ ಅಂದರೆ ಶೂದ್ರರಿಗೂ ಬಾಧಕವುಂಟೆಂದು ತಿಳಿಯಬೇಕು. ರಾಹುಗ್ರಹಗ್ರಾಸ

ತಥೈವ ಗ್ರಾಸಭೇದಾಃ ಸ್ಯುರ್ಮೋಕ್ಷಭೇದಾಸ್ತಥಾ ದಶ ।
ನೋ ಶಕ್ತಾ ಲಕ್ಷಿತುಂ ದೇವಾಃ ಕಿಂ ಪುನಃ ಪ್ರಾಕೃತಾ ನರಾಃ ॥ ೯೦ ॥

ಆನೀಯ ಖೇಟಾನ್ಗಣಿತಾಂಸ್ತೇಷಾಂ ಚಾರಂ ವಿಚಿಂತಯೇತ್ ।
ಶುಭಾಶುಭಾನ್ಯೈಃ ಕಾಲಸ್ಯ ಗ್ರಾಹಯಾಮೋ ಹಿ ಲಕ್ಷಣಂ ॥ ೯೧ ॥

ತಸ್ಮಾದನ್ವೇಷಣೀಯಂ ತತ್ಕಾಲಜ್ಞಾನಾಯ ಧೀಮತಾ ।
ಉತ್ಪಾತರೂಪಾಃ ಕೇತೂನಾಮುದಯಾಸ್ತಮಯಾ ನೃಣಾಂ ॥ ೯೨ ॥

ದಿವ್ಯಾಂತರಿಕ್ಷಾ ಭೌಮಾಸ್ತೇ ಶುಭಾಶುಭಫಲಪ್ರದಾಃ ।
ಯಜ್ಞಧ್ವಜಾಸ್ತ್ರಭವನರಕ್ಷವೃದ್ಧಿಂ ಗಜೋಪಮಾಃ ॥ ೯೩ ॥

ಸ್ತಂಭಶೂಲಾಂಕುಶಾಕಾರಾ ಆಂತರಿಕ್ಷಾಃ ಪ್ರಕೀರ್ತಿತಾಃ ।
ನಕ್ಷತ್ರಸಂಸ್ಥಿತಾ ದಿವ್ಯಾಃ ಭೌಮಾ ಯೇ ಭೂಮಿಸಂಸ್ಥಿತಾಃ ॥ ೯೪ ॥

ಭೇದದಿಂದ ವಿಪ್ರಾದಿಗಳಿಗೆ ಕ್ರಮವಾಗಿ ಹಿಂಸೆಯೊದಗುವುದು. ಹೀಗೆ ಗ್ರಾಸಭೇದದಿಂದಲೂ, ಮೋಕ್ಷಭೇದದಿಂದಲೂ ಹತ್ತುವಿಧವಾದ ಫಲಗಳು ಲಭಿಸುವವು. ಈ ಭೇದಗಳನ್ನು ಸರಿಯಾಗಿ ತಿಳಿಯಲು ದೇವತೆಗಳಿಗೂ ಅಸಾಧ್ಯವಾಗಿರುವುದು. ಹೀಗಿರುವಾಗ ಸಾಮಾನ್ಯ ಮನುಷ್ಯರು ಹೇಗೆ ತಾನೇ ತಿಳಿಯಬಲ್ಲರು?

೯೧-೯೬. ಗ್ರಹಗಳನ್ನು ಗಣಿತಕ್ರಮದಿಂದ ಆನಯನಮಾಡಿ ಗ್ರಹಣದ ಚಾರಾದಿಗಳನ್ನು ನಿಶ್ಚಯಮಾಡಿಕೊಂಡು ಮುಂದೆ ಹೇಳುವಂತೆ ಕಾಲಲಕ್ಷಣಗಳಿಂದ ಫಲಗಳನ್ನು ಊಹಿಸಿ ತಿಳಿದುಕೊಳ್ಳಬೇಕು. ಉದಯಾಸ್ತಮಯ ಕಾಲಗಳಲ್ಲಿ ಆಗಾಗ ಒದಗುವ ದಿವ್ಯ, ಅಂತರಿಕ್ಷ, ಭೌಮಗಳೆಂಬ ಉತ್ಪಾತಗಳನ್ನು ಸೂಕ್ಷ್ಮರೀತಿಯಿಂದ ತಿಳಿಯಬೇಕು. ಇವು ಶುಭ ಮತ್ತು ಅಶುಭಫಲಗಳೆರಡನ್ನೂ ಕೊಡುವವು. ಅಂತರಿಕ್ಷವೆಂಬ ಉತ್ಪಾತಗಳು ಆಕಾಶದಲ್ಲಿ ಯಜ್ಞಧ್ವಜ, ಅಸ್ತ್ರ, ಭವನ, ಗಜ, ಸ್ತಂಭ, ಶೂಲ, ಅಂಕುಶ ಈ ಆಕಾರಗಳಲ್ಲಿ ಕಂಡುಬರುವವು. ನಕ್ಷತ್ರಗಳಿಂದ ಕಂಡು ಬರುವ ಈ ಆಕಾರಗಳಿಗೆ ದಿವ್ಯವೆಂದೂ ಭೂಮಿಯಲ್ಲಿ ಕಂಡುಬರುವ ಉತ್ಪಾತಗಳಿಗೆ ಭೌಮವೆಂದೂ ಹೆಸರು ರೂಢಿಯಲ್ಲಿರುವವು. ಒಂದೇ ಉತ್ಪಾತವು ಬೇರೆಬೇರೆ ಆಕಾರಗಳಿಂದ ಶುಭಪ್ರದವೂ ಅಶುಭಪ್ರದವೂ

ಏಕೋऽಪಿ ಭಿನ್ನರೂಪಃ ಸ್ಯಾಜ್ಜಂತುರ್ನಾಮ ಶುಭಾಯ ವೈ ।
ಯಾವಂತೋ ದಿವಸಾನ್ಕೇತುಃ ದೃಶ್ಯತೇ ವಿವಿಧಾತ್ಮಕಃ ॥ ೯೫ ॥

ತಾವನ್ಮಾಸೈಃ ಫಲಂ ಯಚ್ಛೃತ್ಯಷ್ಟಾ ಸಾ ರವ್ಯವತ್ಸರೈಃ ।
ಯೇ ದಿವ್ಯಾಃ ಕೇತವಸ್ತೇऽಪಿ ಶಶ್ವಜ್ಜೀವಫಲಪ್ರದಾಃ ॥ ೯೬ ॥

ಹ್ರಸ್ವಃ ಸ್ನಿಗ್ಧಃ ಸುಪ್ರಸನ್ನಃ ಶ್ವೇತಕೇತುಃ ಸುವೃಷ್ಟಿಕೃತ್ ।
ಕ್ಷಿಪ್ರಾದಸ್ತಮಯಂ ಯಾತಿ ದೀರ್ಘಕೇತುರವೃಷ್ಟಿಕೃತ್ ॥ ೯೭ ॥

ಅನಿಷ್ಟದೋ ಧೂಮಕೇತುಃ ಶಕ್ರಚಾಪಸಮಪ್ರಭಃ ।
ದ್ವಿತ್ರಿಚತುಃ ಶೂಲರೂಪಃ ಸ ಚ ರಾಜ್ಯಾಂತಕೃನ್ಮತಃ ॥ ೯೮ ॥

ಮಣಿಹಾರಸ್ತು ವರ್ಣಾಭಾ ದೀಪ್ತಿಮಂತೋऽರ್ಕಸೂನವಃ ।
ಕೇತವಶ್ಚೋದಿತಾಃ ಪೂರ್ವಾಪರಯೋರ್ನೃಪಹಾನಿದಾಃ ॥ ೯೯ ॥

---

ಆಗುವುದು. ಎಷ್ಟು ದಿವಸಗಳು ಈ ಕೇತುದರ್ಶನವಿರುವುದೋ ಅಷ್ಟುತಿಂಗಳ ಅನಂತರ ಇವು ಫಲಪ್ರದಗಳಾಗುವವು.

೯೭-೯೯. ಅಂತರಿಕ್ಷದಲ್ಲಿ ಕಂಡುಬರುವ ಧೂಮಕೇತುವು ಹ್ರಸ್ವವಾಗಿದ್ದು ಶುಭ್ರವರ್ಣವುಳ್ಳುದಾದರೆ ಅದು ವೃಷ್ಟಿಪ್ರದವೆಂದೂ ದೀರ್ಘಾಕಾರವಾಗಿ ಬೇಗ ಅದೃಶ್ಯವಾಗುವ ಕೇತುವು ವೃಷ್ಟಿನಾಶಕವೆಂದೂ ತಿಳಿಯಬೇಕು. ಇಂದ್ರ ಧನುಸ್ಸಿನಂತಿರುವ ಧೂಮಕೇತುವು ಅನಿಷ್ಟಪ್ರದವಾದುದು. ಎರಡು ಮೂರು ಅಥವ ನಾಲ್ಕು ಶೂಲಗಳ ಆಕಾರದಲ್ಲಿ ಕಂಡುಬರುವ ಧೂಮಕೇತುವು ರಾಜ್ಯಕ್ಕೆ ಹಾನಿಯನ್ನುಂಟುಮಾಡುವುದು. ಮಣಿಗಳ ಹಾರದಂತೆ (ರತ್ನಹಾರದಂತೆ) ಹೊಳೆಯುವ ಕೆಲವು ಧೂಮಕೇತುಗಳು ಸೂರ್ಯಪುತ್ರರೆಂದು ಪ್ರಸಿದ್ಧವಾಗಿರುವವು. ಇವು ಸಾಮಾನ್ಯವಾಗಿ ಪೂರ್ವಪಶ್ಚಿಮದಿಕ್ಕುಗಳಲ್ಲಿಯೇ ತೋರಿಬರುವುವು. ಇದರಿಂದ ರಾಜರಿಗೆ ತುಂಬಾ ತೊಂದರೆಯುಂಟಾಗುವುದು.

ವಂಶಕಬಾಲಕ್ಷಿತಿಜಕುಕಕುಂಡಾದಿಸನ್ನಿಭಾಃ ।
ಹುತಾಶನೋದಿತಾಸ್ತೇಽಪಿ ಕೇತವಃ ಫಲದಾಃ ಸ್ಮೃತಾಃ ॥ ೧೦೦ ॥

ಭೂಸುತಾ ಜಲತೈಲಾಭಾ ವರ್ತುಲಾಃ ಕ್ಷುದ್ಭಯಪ್ರದಾಃ ।
ಸುಭಿಕ್ಷಕ್ಷೇಮದಾಃ ಶ್ವೇತಕೇತವಃ ಸೋಮಸೂನವಃ ॥ ೧೦೧ ॥

ಪಿತಾಮಹಾತ್ಮಜಃ ಕೇತುಸ್ತ್ರಿವರ್ಣಸ್ತ್ರಿದಶಾನ್ವಿತಃ ।
ಬ್ರಹ್ಮದಂಡಾದ್ಧೂಮಕೇತುಃ ಪ್ರಜಾನಾಮಂತಕೃನ್ಮತಃ ॥ ೧೦೨ ॥

ಐಶಾನ್ಯಾಂ ಭಾರ್ಗವಸುತಾಃ ಶ್ವೇತರೂಪಾಸ್ತ್ವನಿಷ್ಟದಾಃ ।
ಅನಿಷ್ಟದಾಃ ಪಂಗುಸುತಾಃ ವಿಶಿಖಾಃ ಕಮಕಾಹ್ವಯಾಃ ॥ ೧೦೩ ॥

ವಿಕಚಾಖ್ಯಾ ಗುರುಸುತಾ ನೇಷ್ಟಾ ಯಾಮ್ಯೇ ಸ್ಥಿತಾ ಅಪಿ ।
ಸೂಕ್ಷ್ಮಾಃ ಶುಕ್ಲಾ ಬುಧಸುತಾಶ್ಚೌರರೋಗಭಯಪ್ರದಾಃ ॥ ೧೦೪ ॥

೧೦೦. ಈ ಧೂಮಕೇತುಗಳು ಬಿದಿರಿನ ಮೆಳೆಯಂತೆಯೂ, ಗಿಳಿಯ ಕೊಕ್ಕಿನಂತೆಯೂ, ಮರದಂತೆಯೂ ಕಂಡು ಬರುತ್ತಾ ಅಗ್ನಿಜ್ವಾಲೆಗಳನ್ನೆರಚು ವುವು. ಇವು ಅನಿಷ್ಟಫಲಪ್ರದವಾದುವುಗಳೆಂದು ಹಿಂದೆಯೇ ಹೇಳಿದೆ.

೧೦೧-೧೦೫. ಇನ್ನು ಚಂದ್ರಸಂಬಂಧವಾದ ಕೇತುಗಳು ಭೂಸಂಬಂಧ ವಾದ ಕೇತುಗಳು ಜಲತೈಲದಂತೆ ವಿವಿಧವರ್ಣದಲ್ಲಿಯೂ, ವರ್ತುಲಾಕಾರ ದಲ್ಲಿಯೂ ಕಂಡುಬರುವವು. ಭೂಮಿಯ ಉತ್ಪಾತಗಳು ಕ್ಷುದ್ಭಯವನ್ನುಂಟು ಮಾಡುವವು. ಚಂದ್ರಕೇತುಗಳು (ಶ್ವೇತಕೇತುಗಳು) ಶುಭಫಲಗಳನ್ನು ಕೊಡುತ್ತವೆ. ಇನ್ನು ವರ್ಣತ್ರಯವಿಶಿಷ್ಟವಾಗಿಯೂ, ಮೂರು ಮೂಲೆಗಳುಳ್ಳ ದಾಗಿಯೂ ಮತ್ತು ಬ್ರಹ್ಮದಂಡಾಕಾರದಲ್ಲಿಯೂ ಕೆಲವು ಕೇತುಗಳಿರುವುವು. ಇವು ಬೃಹಸ್ಪತಿಕೇತುಗಳೆಂದು ಹೇಳಲ್ಪಡುವುವು. ಇವುಗಳಿಂದ ಪ್ರಜೆಗಳಿಗೆ ಅನಿಷ್ಟವುಂಟಾಗುವುದು. ಈಶಾನ್ಯದಿಕ್ಕಿನಲ್ಲಿ ಶ್ವೇತವರ್ಣದಿಂದ ಗೋಚರವಾಗುವ ಕೆಲವು ಧೂಮಕೇತುಗಳು ಶುಕ್ರಗ್ರಹಕ್ಕೆ ಸಂಬಂಧಿಸಿದುವುಗಳೆಂದರಿಯಬೇಕು. ಶನಿಸಂಬಂಧವಾದ ಧೂಮಕೇತುಗಳು ಶಿಖಾರಹಿತಗಳಾಗಿ ಕಪ್ಪುಬಣ್ಣದಿಂದ

ಕುಜಾತ್ಮಜಾಃ ಕುಂಕುಮಾಖ್ಯಾ ರಕ್ತಾಃ ಶೂಲಾಸ್ತ್ರನಿಷ್ಟದಾಃ ।
ಅಗ್ನಿಜಾ ವಿಶ್ವರೂಪಾಖ್ಯಾ ಅಗ್ನಿವರ್ಣಾಃ ಸುಖಪ್ರದಾಃ ॥ ೧೦೫ ॥

ಅರುಣಾಃ ಶ್ಯಾಮಲಾಕಾರಾ ಅರ್ಕಪುತ್ರಾಶ್ಚ ಪಾಪದಾಃ ।
ಶುಕ್ರಜಾ ಋಕ್ಷಸದೃಶಾಃ ಕೇತವಃ ಶುಭದಾಯಕಾಃ ॥ ೧೦೬ ॥

ಕೃತ್ತಿಕಾಸು ಭವೋ ಧೂಮಕೇತುರ್ನೂನಂ ಪ್ರಜಾಕ್ಷಯಃ ।
ಪ್ರಾಸಾದವೃಕ್ಷಶೈಲೇಷು ಜಾತೋ ರಾಜ್ಞಾಂ ವಿನಾಶಕೃತ್ ॥ ೧೦೭ ॥

ಸುಭಿಕ್ಷಕೃತ್ಕೌಮುದಾಖ್ಯಃ ಕೇತುಃ ಕುಮುದಸನ್ನಿಭಃ ।
ಆವರ್ತಕೇತುಸಂಧ್ಯಾಯಾಂ ಶಿರೋ ನೇಷ್ಟದಾಯಕಃ ॥ ೧೦೮ ॥

ಕಾಣಿಸಿಕೊಳ್ಳುವುವು. ಇವುಗಳೂ ಕೇವಲ ಅನಿಷ್ಟ ಫಲಗಳನ್ನೇ ಕೊಡುವುವು. ಇವುಗಳಿಗೆ ಕಮಲಕೇತುಗಳೆಂದೂ ಗುರುಯುತಗಳಾದ ಕೇತುಗಳಿಗೆ ವಿಕಚಗಳೆಂದೂ ಹೆಸರಿದೆ. ಈ ಕೇತುಗಳು ದಕ್ಷಿಣೋತ್ತರ ಭಾಗಗಳಲ್ಲಿ ಮಾತ್ರ ಕಂಡುಬರುವವು. ಬುಧಸಂಬಂಧವಾದ ಕೇತುಗಳು ಅತ್ಯಂತ ಸೂಕ್ಷ್ಮಗಳಾಗಿದ್ದರೂ ಚೋರ, ರೋಗ, ಭಯ ಇವುಗಳನ್ನು ಹೆಚ್ಚಿಸುವವು. ಕುಜಸಂಬಂಧಿಯಾದ ಕೇತುಗಳಿಗೆ ಕುಂಕುಮಕೇತುಗಳೆಂದು ಹೆಸರು. ಇವು ಕೆಂಪಾಗಿಯೂ ಶೂಲಾಕಾರದಲ್ಲಿಯೂ ಇದ್ದು ಅನಿಷ್ಟವಾದ ಫಲಗಳನ್ನು ಲೋಕಕ್ಕೆ ಕೊಡುವುವು. ಇನ್ನು ಅಗ್ನಿವರ್ಣದಂತೆ ಶೋಭಿಸುವ ಆಗ್ನೇಯಕೇತುಗಳು ಲೋಕಕ್ಕೆ ಶುಭಫಲಗಳನ್ನುಂಟುಮಾಡುವುವು.

೧೦೬-೧೦೮. ಆಗ್ನೇಯಕೇತುಗಳಿಗೆ ವಿಶ್ವರೂಪಕೇತುಗಳೆಂದೂ ಹೆಸರುಂಟು. ಸೌರಕೇತುಗಳು ಕೆಂಪಾಗಿಯೂ, ಶಾಮಲವರ್ಣವುಳ್ಳವುಗಳಾಗಿಯೂ ಗೋಚರವಾಗುವುವು. ಇವುಗಳು ಲೋಕಕ್ಕೆ ಅನಿಷ್ಟ ಫಲಗಳನ್ನು ಕೊಡುವುವು. ಶುಕ್ರೀಯ (ಶುಕ್ರನ ಸಂಬಂಧವಾದ) ಧೂಮಕೇತುಗಳು ನಕ್ಷತ್ರದಂತೆ ಕಾಣಿಸಿಕೊಂಡು ಜಗತ್ತಿಗೆ ಶುಭಫಲಪ್ರದಗಳಾಗುವುವು. ಕೃತ್ತಿಕಾನಕ್ಷತ್ರದ ಮಧ್ಯದಲ್ಲಿ ಉದಯಿಸುವ ಧೂಮಕೇತುವು ಪ್ರಜಾ

ಬ್ರಹ್ಮದೇವಮನೋರ್ಮಾನಂ ಪಿತ್ರ್ಯಂ ಸೌರಂ ಚ ಸಾವನಂ ।
ಚಾಂದ್ರಮಾರ್ಕ್ಷಂ ಗುರೋರ್ಮಾನಮಿತಿ ಮಾನಾನಿ ವೈ ನವ ॥ ೧೦೯ ॥

ಏತೇಷಾಂ ನವಮಾನಾನಾಂ ವ್ಯವಹಾರೋಽತ್ರ ಪಂಚಭಿಃ ।
ತೇಷಾಂ ಪೃಥಕ್ಪೃಥಕ್ಕಾರ್ಯಂ ವಕ್ಷ್ಯತೇ ವ್ಯವಹಾರತಃ ॥ ೧೧೦ ॥

ಗ್ರಹಾಣಾಂ ನಿಖಿಲಶ್ಚಾರೋ ಗೃಹ್ಯತೇ ಸೌರಮಾನತಃ ।
ವೃಷ್ಟೇರ್ವಿಧಾನಂ ಸ್ತ್ರೀಗರ್ಭಃ ಸಾವನೇನೈವ ಗೃಹ್ಯತೇ ॥ ೧೧೧ ॥

ಪ್ರವರ್ಷಣಾಂ ಸಮೋ ಗರ್ಭೋ ನಾಕ್ಷತ್ರೇಣ ಪ್ರಗೃಹ್ಯತೇ ।
ಯಾತ್ರೋದ್ವಾಹವ್ರತಕ್ಷೌರೇ ತಿಥಿವರ್ಷೇಶನಿರ್ಣಯಃ ॥ ೧೧೨ ॥

ಕ್ಷಯವನ್ನುಂಟುಮಾಡುವುದು. ಪ್ರಾಸಾದ, ಶೈಲ, ವೃಕ್ಷ ಇವುಗಳಿರುವ ಪ್ರದೇಶಗಳಲ್ಲಿ ಕಂಡು ಬರುವ ಧೂಮಕೇತುಗಳು ರಾಜರಿಗೆ ಅನಿಷ್ಟವನ್ನುಂಟುಮಾಡುವುವು. ಕುಮುದದಂತೆ (ಕನ್ನೈದಿಲೆಯಂತೆ) ಕಂಡು ಬರುವ ಕೌಮುದ ಕೇತುಗಳು ಲೋಕಕ್ಕೆ ಸುಭಿಕ್ಷಕಾರಕಗಳಾಗುವವು. ಸಂಧ್ಯಾಕಾಲಗಳಲ್ಲಿ ಗೋಚರಿಸುವ ಸುಳಿಯಂತಿರುವ ಧೂಮಕೇತುಗಳು ಇಷ್ಟವಾದ ಫಲಗಳನ್ನು ಲೋಕಕ್ಕುಂಟುಮಾಡುವುವು.

೧೦೯–೧೧೦. ವರ್ಷಗಣನೆಯಲ್ಲಿ ಬ್ರಹ್ಮ, ದೇವ, ಮನು, ಪಿತೃ, ಸೌರ ಸಾವನ, ಚಾಂದ್ರ, ನಾಕ್ಷತ್ರ ಮತ್ತು ಗುರುಮಾನಗಳೆಂದು ಒಂಭತ್ತು ವಿಧವಾದ ಮಾನಗಳುಂಟು. ಇವುಗಳಲ್ಲಿ ಐದು ಮಾನಗಳು ಮಾತ್ರ ವ್ಯವಹಾರದಲ್ಲಿವೆ. ಒಂದೊಂದು ಮಾನವೂ ಒಂದೊಂದು ಕಾರ್ಯಕ್ಕೆ ಅನುಕೂಲವಾಗಿದೆ.

೧೧೧–೧೧೨. ಸೌರಮಾನದಿಂದ ಗ್ರಹಗಳ ಚಾರವನ್ನೂ, ವೃಷ್ಟಿವಿಧಾನ ಮತ್ತು ಸ್ತ್ರೀಗರ್ಭವಾಸ ನಿಶ್ಚಯ ಇವುಗಳನ್ನು ಸಾವನಮಾನದಿಂದಲೂ, ವೃಷ್ಟಿ ಗರ್ಭಾದಿಗಳನ್ನು ನಾಕ್ಷತ್ರಮಾನದಿಂದಲೂ, ವಿವಾಹ, ಉಪನಯನ, ಕ್ಷೌರಾದಿ ಕರ್ಮಗಳು, ತಿಥಿ, ವರ್ಷ ಇವುಗಳ ಅಧಿಪತಿಗಳ ನಿರ್ಣಯ, ಪರ್ವತಿಥಿ, ಉಪವಾಸತಿಥಿಗಳು, ವಾಸ್ತುಪೂಜಾದಿಗಳು ಇವೇ ಮೊದಲಾದುವುಗಳನ್ನು ಚಾಂದ್ರ

ಪರ್ವವಾಸ್ತೂಪವಾಸಾದಿ ಕೃತ್ಸ್ನಂ ಚಾಂದ್ರೇಣ ಗೃಹ್ಯತೇ ।
ಗೃಹ್ಯತೇ ಗುರುಮಾನೇನ ಪ್ರಭವಾದ್ಯಬ್ದಲಕ್ಷಣಂ ॥ ೧೧೩ ॥

ತತ್ರನ್ಮಾಸೈರ್ದ್ವಾದಶಭಿಸ್ತತ್ತದಷ್ಟೋ ಭವೇತ್ತತಃ ।
ಗುರುಮಧ್ಯಮಚಾರೇಣ ಷಷ್ಟ್ಯಬ್ದಾಃ ಪ್ರಭವಾದಯಃ ॥ ೧೧೪ ॥

ಪ್ರಭವೋ ವಿಭವಃ ಶುಕ್ಲಃ ಪ್ರಮೋದೋಽಥ ಪ್ರಜಾಪತಿಃ ।
ಅಂಗಿರಾಃ ಶ್ರೀಮುಖೋ ಭಾವೋ ಯುವಾ ಧಾತಾ ತಥೈವ ಚ ॥ ೧೧೫ ॥

ಈಶ್ವರೋ ಬಹುಧಾನ್ಯಶ್ಚ ಪ್ರಮಾಥೀ ವಿಕ್ರಮೋ ವೃಷಃ ।
ಚಿತ್ರಭಾನುಃ ಸ್ವಭಾನುಶ್ಚ ತಾರಣಃ ಪಾರ್ಥಿವೋ ವ್ಯಯಃ ॥ ೧೧೬ ॥

ಸರ್ವಜಿತ್ಸರ್ವಧಾರೀ ಚ ವಿರೋಧೀ ವಿಕೃತಃ ಖರಃ ।
ನಂದನೋ ವಿಜಯಶ್ಚೈವ ಜಯೋ ಮನ್ಮಥದುರ್ಮುಖೌ ॥ ೧೧೭ ॥

ಮಾನದಿಂದಲೂ, ನಿರ್ಣಯಿಸಬೇಕು. ಪ್ರಭವಾದಿ (೬೦) ಅರವತ್ತು ವರ್ಷಗಳ ಲಕ್ಷಣವನ್ನೂ ಗುರುಮಾನದಿಂದ ಗಣಿಸಬೇಕು.

೧೧೪-೧೨೪. ಗುರುವು ಸಂಚರಿಸುವ ಮಧ್ಯಮಚಾರದಿಂದ ವರ್ಷವನ್ನೂ ಆ ವರ್ಷಕ್ಕೆ ಹನ್ನೆರಡು ಸಂಖ್ಯೆಯ ಮಾಸಗಳನ್ನೂ ಗುರುಚಾರದಿಂದಲೇ ನಿರ್ಣಯಿಸಬೇಕು. ಹಿಂದೆ ಹೇಳಿದ ಅರವತ್ತು ವರ್ಷಗಳ ಹೆಸರು ಈರೀತಿಯಾಗಿ ಕಂಡುಬರುತ್ತಿದೆ :—

(1) ಪ್ರಭವ, (2) ವಿಭವ, (3) ಶುಕ್ಲ, (4) ಪ್ರಮೋದೂತ, (5) ಪ್ರಜೋತ್ಪತ್ತಿ, (6) ಅಂಗೀರಸ, (7) ಶ್ರೀಮುಖ, (8) ಭಾವ (9) ಯುವ (10) ಧಾತೃ (11) ಈಶ್ವರ (12) ಬಹುಧಾನ್ಯ (13) ಪ್ರಮಾಥಿ (14) ವಿಕ್ರಮ (15) ವಿಷು (16) ಚಿತ್ರಭಾನು (17) ಸ್ವಭಾನು (18) ತಾರಣ (19) ಪಾರ್ಥಿವ (20) ವ್ಯಯ (21) ಸರ್ವಜಿತು (22) ಸರ್ವಧಾರೀ (23) ವಿರೋಧಿ (24) ವಿಕೃತಿ (25) ಖರ (26) ನಂದನ (27) ವಿಜಯ (28) ಜಯ (29) ಮನ್ಮಥ (30) ದುರ್ಮುಖಿ (31) ಹೇವಿಳಂಬಿ (32) ವಿಳಂಬಿ (33) ವಿಕಾರಿ (34) ಶಾರ್ವರಿ (35) ಪ್ಲವ (36) ಶುಭಕೃತ್ (37) ಶೋಭಕೃತ್

ಹೇವಿಲಂಬೋ ವಿಲಂಬಶ್ಚ ವಿಕಾರೀ ಶಾರ್ವರೀ ಪ್ಲವಃ ।
ಶುಭಕೃಚ್ಛೋಭಕೃತ್ಕ್ರೋಧೀ ವಿಶ್ವಾವಸುಪರಾಭವೌ ॥ ೧೧೮ ॥

ಪ್ಲವಂಗಃ ಕೀಲಕಃ ಸೌಮ್ಯಃ ಸಾಧಾರಣ ವಿರೋಧಿಕೃತೌ ।
ಪರೀಧಾವೀ ಪ್ರಮಾದೀ ಚ ಹ್ಯಾನಂದೋ ರಾಕ್ಷಸೋ ನಳಃ ॥ ೧೧೯ ॥

ಪೈಂಗಳಃ ಕಾಳಯುಕ್ತಿಶ್ಚ ಸಿದ್ಧಾರ್ಥೋ ರೌದ್ರದುರ್ಮತೀ ।
ದುಂದುಭೀ ರುಧಿರೋದ್ಗಾರೀ ರಕ್ತಾಕ್ಷೀ ಕ್ರೋಧನೋಽಕ್ಷಯಃ ॥ ೧೨೦ ॥

ನಾಮತುಲ್ಯಫಲಾಃ ಸರ್ವೇ ವಿಜ್ಞೇಯಾಃ ಷಷ್ಟಿವತ್ಸರಾಃ ।
ಯುಗಂ ಸ್ಯಾತ್ಪಂಚಭಿರ್ವರ್ಷೈರ್ಯುಗಾನ್ಯೇವಂ ತು ದ್ವಾದಶ ॥ ೧೨೧ ॥

ತೇಷಾಮೀಶಾಃ ಕ್ರಮಾಜ್ಞೇಯಾ ವಿಷ್ಣುರ್ದೇವಪುರೋಹಿತಃ ।
ಪುರಂದರೋ ಲೋಹಿತಶ್ಚ ತ್ವಷ್ಟಾಹಿರ್ಬುಧ್ನ್ಯಸಂಜ್ಞಕಃ ॥ ೧೨೨ ॥

ಪಿತರಶ್ಚ ತತೋ ವಿಶ್ವೇ ಶಶೀಂದ್ರಾಗ್ನ್ಯಶ್ವಿನೋ ಭಗಃ ।
ತಥಾ ಯುಗಸ್ಯ ವರ್ಷೇಶಾಸ್ತ್ವಗ್ನೀನೇಂದುವಿಧೀಶ್ವರಾಃ ॥ ೧೨೩ ॥

ಅಥಾಬ್ದೇಶ ಚಮೂನಾಥಸಸ್ಯಪಾನಾಂ ಬಲಾಬಲಂ ।
ತತ್ಕಾಲಂ ಗ್ರಹಚಾರಂ ಚ ಸಮ್ಯಜ್ಜ್ಞಾತ್ವಾ ಫಲಂ ವದೇತ್ ॥ ೧೨೪ ॥

(38) ಕ್ರೋಧಿ (39) ವಿಶ್ವಾವಸು (40) ಪರಾಭವ (41) ಪ್ಲವಂಗ (42) ಕೀಲಕ (43) ಸೌಮ್ಯ (44) ಸಾಧಾರಣ (45) ವಿರೋಧಿಕೃತ್ (46) ಪರೀಧಾವೀ (47) ಪ್ರಮಾದೀಚ (48) ಆನಂದ (49) ರಾಕ್ಷಸ (50) ನಳ (51) ಪೈಂಗಳ (52) ಕಾಳಾಯುಕ್ತಿ (53) ಸಿದ್ಧಾರ್ಥಿ (54) ರೌದ್ರಿ (55) ದುರ್ಮತಿ (56) ದುಂದುಭಿ (57) ರುಧಿರೋದ್ಗಾರಿ (58) ರಕ್ತಾಕ್ಷಿ (59) ಕ್ರೋಧನ (60) ಅಕ್ಷಯ. ಈ ಅರವತ್ತು ಸಂವತ್ಸರಗಳೂ ತಮ್ಮ ಹೆಸರಿಗನುಗುಣವಾಗಿ ಫಲಗಳನ್ನು ಕೊಡುವುವು. ಇದರಲ್ಲಿ ಐದೈದು ವರ್ಷಗಳಿಗೆ ಒಂದೊಂದು ಯುಗಗಳಂತೆ (೧೨) ಹನ್ನೆರಡು ಯುಗಗಳಿವೆ. ಅವುಗಳಿಗೆ ಕ್ರಮವಾಗಿ ವಿಷ್ಣು ಗುರು, ಇಂದ್ರ, ಕುಜ, ತ್ವಷ್ಟೃ, ಅಹಿರ್ಬುಧ್ನ್ಯ, ಪಿತೃಗಳು, ವಿಶ್ವೇದೇವತೆಗಳು ಚಂದ್ರ, ಇಂದ್ರಾಗ್ನಿ, ಅಶ್ವಿನೀದೇವತೆಗಳು, ಭಗ ಈರೀತಿಯಾಗಿ ದೇವತೆಗಳು ಆ ಯುಗಗಳಿಗೆ ಅಭಿಮಾನದೇವತೆಗಳಾಗಿರುವರು. ಹೀಗೆ ಯುಗಾಧಿಪತಿಗಳು, ವರ್ಷಾಧಿಪತಿಗಳು, ಸೇನಾಧಿಪತಿ, ಸಸ್ಯಾಧಿಪತಿ ಮುಂತಾದವರ ಬಲಾಬಲಗಳನ್ನು ಚಾರವಶದಿಂದ ಸರಿಯಾಗಿ ತಿಳಿದುಕೊಂಡು ವರ್ಷಫಲವನ್ನು ತಿಳಿಸಬೇಕು.

ಸೌಮ್ಯಾಯನಂ ಮಾಸಷಟ್ಕಂ ಮೃಗಾದ್ಯಂ ಭಾನುಭುಕ್ತಿತಃ ।
ಗ್ರಹಃ ಸುರಾಣಾಂ ತದ್ರಾತ್ರಿಃ ಕರ್ಕಾದ್ಯಂ ದಕ್ಷಿಣಾಯನಂ ॥ ೧೨೫ ॥

ಗೃಹಪ್ರವೇಶವೈವಾಹಪ್ರತಿಷ್ಠಾಮೌಂಜಿಬಂಧನಂ ।
ಮಾಘಾದೌ ಮಂಗಲಂ ಕರ್ಮ ವಿಧೇಯಂ ಚೋತ್ತರಾಯಣೇ ॥ ೧೨೬ ॥

ಯಾಮ್ಯಾಯನೇ ಗರ್ಹಿತಂ ಚ ಕರ್ಮ ತಾವತ್ಪ್ರಶಸ್ಯತೇ ।
ಮಾಘಾದಿಮಾಸೌ ದ್ವೌ ದ್ವೌ ಚ ಋತವಃ ಶಿಶಿರಾದಯಃ ॥ ೧೨೭ ॥

ಮೃಗಾಚ್ಛಿಶಿರವಸಂತಗ್ರೀಷ್ಮಾಃ ಸ್ಯುಶ್ಚೋತ್ತರಾಯಣೇ ।
ವರ್ಷಾ ಶರಚ್ಚ ಹೇಮಂತಃ ಕರ್ಕಾದ್ಯೈ ದಕ್ಷಿಣಾಯನೇ ॥ ೧೨೮ ॥

ಚಾಂದ್ರೋ ದರ್ಶಾವಧಿಃ ಸೌರಃ ಸಂಕ್ರಾಂತ್ಯಾ ಸಾವನೋ ದಿನೈಃ ।
ತ್ರಿಂಶದ್ಭಿಶ್ಚಂದ್ರಭಗಣೋ ಮಾಸೋ ನಾಕ್ಷತ್ರಸಂಜ್ಞಕಃ ॥ ೧೨೯ ॥

೧೨೫-೧೨೭. ಮಕರಾದಿಯಾದ ಆರು ಸೌರಮಾಸಗಳಿಗೆ ಉತ್ತರಾಯಣವೆಂದು ಹೆಸರು. ಆ ಕಾಲವೇ ದೇವತೆಗಳಿಗೆ ಹಗಲು. ಕಟಕಾದಿಯಾದ ಆರು ಮಾಸಗಳೇ ದೇವತೆಗಳಿಗೆ ರಾತ್ರಿಯಾದ ದಕ್ಷಿಣಾಯನವಾಗಿರುವುದು. ಗೃಹಪ್ರವೇಶ, ವಿವಾಹ, ದೇವಪ್ರತಿಷ್ಠಾ, ಉಪನಯನ ಮುಂತಾದ ಕರ್ಮಗಳನ್ನು ಮಾಘಾದಿಯಾದ ಉತ್ತರಾಯಣಾಗತವಾದ ಚಾಂದ್ರಮಾಸಗಳಲ್ಲಿಯೇ ಮಾಡಬೇಕು. ದಕ್ಷಿಣಾಯನದಲ್ಲಿ ಮಾಡುವುದು ಉತ್ತಮವಲ್ಲ. ಮಾಘಮಾಸದಿಂದ ಎರಡೆರಡು ತಿಂಗಳುಗಳಿಗೆ ಒಂದೊಂದು ಋತುವಿನಂತೆ ಶಿಶಿರಾದಿಯಾಗಿ ಆರು ಋತುಗಳು ಆರಂಭವಾಗುವುವು.

೧೨೮-೧೨೯. ಶಿಶಿರ, ವಸಂತ ಮತ್ತು ಗ್ರೀಷ್ಮ ಈ ಮೂರು ಋತುಗಳು ಉತ್ತರಾಯಣದಲ್ಲಿಯೂ ವರ್ಷ, ಶರತ್ ಮತ್ತು ಹೇಮಂತ ಈ ಮೂರು ಋತುಗಳು ದಕ್ಷಿಣಾಯನದಲ್ಲಿಯೂ ಬರುವುವು. ಚಾಂದ್ರಮಾಸಕ್ಕೆ ಅಮಾವಾಸ್ಯೆಯೂ ಸೌರಮಾಸಕ್ಕೆ ಸಂಕ್ರಾಂತಿಯೂ ಅವಧಿಭೂತವಾಗಿರುವುವು. ಅಂದರೆ ಶುಕ್ಲ ಪಾಡ್ಯಮಿಯಿಂದ ಚಾಂದ್ರಮಾಸವೂ, ಮೇಷಾದಿ ಸಂಕ್ರಮಣ ಪ್ರಾರಂಭದಿಂದ ಸೌರಮಾಸವೂ ಹುಟ್ಟುವುದೆಂದು ತಿಳಿಯಬೇಕು. ಚಂದ್ರನು ನಕ್ಷತ್ರಗಳಲ್ಲಿ ಸಂಚರಿಸುವ (೩೦) ಮೂವತ್ತು ಸಾವನದಿವಸಗಳಿಗೆ ನಾಕ್ಷತ್ರಮಾನವೆಂದು ಹೆಸರಿದೆ.

**ಮಧುಶ್ಚ ಮಾಧವಃ ಶುಕ್ರಃ ಶುಚಿಶ್ಚಾಥ ನಭಾಸ್ತತಃ ।**
**ನಭಸ್ಯ ಇಷ ಊರ್ಜಶ್ಚ ಸಹಾಶ್ಚೈವ ಸಹಸ್ಯಕಃ ॥ ೧೩೦ ॥**

**ತಪಾಸ್ತಪಸ್ಯಃ ಕ್ರಮಶಶ್ಚೈತ್ರಾದೀನಾಂ ಸಮಾಹ್ವಯಾ ।**
**ಯಸ್ಮಿನ್ಮಾಸೇ ಪೌರ್ಣಮಾಸೀ ಯೇನ ಧಿಷ್ಣ್ಯೇನ ಸಂಯುತಾ ॥ ೧೩೧ ॥**

**ತನ್ನಕ್ಷತ್ರಾಹ್ವಯೋ ಮಾಸಃ ಪೌರ್ಣಮಾಸೀ ತದಾಹ್ವಯಾ ।**
**ತತ್ಪಕ್ಷೌ ದೇವಪಿತ್ರಾಖ್ಯೌ ಶುಕ್ಲಕೃಷ್ಣೌ ತಥಾಪರೇ ॥ ೧೩೨ ॥**

**ಶುಭಾಶುಭೇ ಕರ್ಮಣಿ ಚ ಪ್ರಶಸ್ತೌ ಭವತಃ ಸದಾ ।**
**ಕ್ರಮಾತ್ತಿಥೀನಾಂ ಬ್ರಹ್ಮಾಗ್ನೀ ವಿರಿಂಚಿರ್ವಿಷ್ಣುಶೈಲಜಾಃ ॥ ೧೩೩ ॥**

**ವಿನಾಯಕಯಮೌ ನಾಗಚಂದ್ರೌ ಸ್ಕಂದೋಽರ್ಕವಾಸವೌ ।**
**ಮಹೇಂದ್ರವಾಸಸೌ ನಾಗದುರ್ಗಾದಂಡಧರಾಹ್ವಯಾಃ ॥ ೧೩೪ ॥**

೧೩೦-೧೩೧. ಮಧು, ಮಾಧವ, ಶುಕ್ರ, ಶುಚಿ, ನಭಾಃ, ನಭಸ್ಯ, ಇಷ ಊರ್ಜ, ಸಹಾ, ಸಹಸ್ಯಕ, ತಪ, ತಪಸ್ಯ ಎಂಬ ಹನ್ನೆರಡು ಹೆಸರುಗಳು ಚೈತ್ರಾದಿಯಾದ ದ್ವಾದಶಮಾಸಗಳಿಗೆ ಕ್ರಮವಾಗಿ ಸಲ್ಲುವುವು. ಯಾವ ಪೂರ್ಣಿಮಾದಲ್ಲಿ ಯಾವ ನಕ್ಷತ್ರವು ಸಂಬಂಧಿಸುವುದೋ ಅದೇ ಹೆಸರು ಅಪೂರ್ತಿ ತಿಂಗಳಿಗೂ ಮತ್ತು ಆ ಪೂರ್ಣಿಮಾತಿಥಿಗೂ ಅನ್ವಯಿಸುವುದು. ಒಂದು ತಿಂಗಳಿನಲ್ಲಿ ಬರುವ ಶುಕ್ಲಕೃಷ್ಣಪಕ್ಷಗಳು ದೇವ ಮತ್ತು ಪಿತೃಗಳಿಗೆ ಸಂಬಂಧಪಟ್ಟುವುಗಳು.

ಶುಕ್ಲಪಕ್ಷವು ಶುಭಕರ್ಮಗಳಿಗೂ ಕೃಷ್ಣಪಕ್ಷವು ಅಶುಭಕರ್ಮಗಳಿಗೂ ಪ್ರಶಸ್ತವಾದುವುಗಳೆಂದು ತಿಳಿಯಬೇಕು.

೧೩೩-೧೩೫. ತಿಥಿಗಳಿಗೆ ಅಧಿಪತಿಗಳು ಕ್ರಮವಾಗಿ ಪ್ರತಿಪತ್ತಿನಿಂದ 1. ಬ್ರಹ್ಮ ಮತ್ತು ಅಗ್ನಿ, 2. ವಿಷ್ಣು 3. ಪಾರ್ವತೀ 4. ಯಮ ಮತ್ತು ಗಣಪತಿ 5. ನಾಗ ಮತ್ತು ಚಂದ್ರರು 6. ಸ್ಕಂದ (ಕುಮಾರಸ್ವಾಮಿ) 7. ಸೂರ್ಯ ಮತ್ತು ಇಂದ್ರರು 8. ಮಹೇಂದ್ರ ವಾಸವರು 9. ನಾಗ ಮತ್ತು ದುರ್ಗಿ ಇವರು (10) ದಂಡಧರನಾದ ಯಮ 11. ಶಿವ ವಿಷ್ಣುಗಳು ಹರಿ ಮತ್ತು

ಶಿವವಿಷ್ಣೂ ಹರಿರವೀ ಕಾಮಃ ಸರ್ವಃ ಕಲಿಸ್ತತಃ ।
ಚಂದ್ರವಿಶ್ವೇದರ್ಶಸಂಜ್ಞಾತಿಥೀಶಾಃ ಪಿತರಃ ಸ್ಮೃತಾಃ ॥ ೧೩೫ ॥

ನಂದಾ ಭದ್ರಾ ಜಯಾ ರಿಕ್ತಾ ಪೂರ್ಣಾಸ್ಸ್ಯುಸ್ತಿಥಯಃ ಪುನಃ ।
ತ್ರಿರಾವೃತ್ತ್ಯಾ ಕ್ರಮಾಜ್ಜ್ಞೇಯಾಃ ನೇಷ್ಟಮಧ್ಯೇಷ್ಟದಾಃ ಸಿತೇ ॥ ೧೩೬ ॥

ಕೃಷ್ಣಪಕ್ಷೇ ತ್ವಿಷ್ಟಮಧ್ಯಾನಿಷ್ಟದಾಃ ಕ್ರಮಶಸ್ತದಾ ।
ಅಷ್ಟಮೀ ದ್ವಾದಶೀ ಷಷ್ಠೀ ಚತುರ್ಥೀ ಚ ಚತುರ್ದಶೀ ॥ ೧೩೭ ॥

ತಿಥಯಃ ಪಕ್ಷರಂಧ್ರಾಖ್ಯಾ ಹ್ಯತಿರೂಕ್ಷಾಃ ಪ್ರಕೀರ್ತಿತಾಃ ।
ಸಮುದ್ರಮನುರಂಧ್ರಾಂಕತತ್ತ್ವಸಂಖ್ಯಾಸ್ತು ನಾಡಿಕಾಃ ॥ ೧೩೮ ॥

ತ್ಯಾಜ್ಯಾಃ ಸ್ಯುಸ್ತಾಸು ತಿಥಿಷು ಕ್ರಮಾತ್ಪಂಚ ಚ ಸರ್ವದಾ ।
ಅಮಾವಾಸ್ಯಾ ಚ ನವಮೀ ಹಿತ್ವಾ ವಿಷಮಸಂಜ್ಞಿಕಾ ॥ ೧೩೯ ॥

---

ಸೂರ್ಯರು 12. ಕಾಮನು 13. ಕಲಿ 14. ಚಂದ್ರ 15. ಪಿತೃದೇವತೆಗಳು ಈರೀತಿಯಾಗಿ ಅಮಾಪರ್ಯಂತವೂ ತಿಥ್ಯಧಿಪತಿಗಳು ಪ್ರತ್ಯೇಕಪ್ರತ್ಯೇಕವಾಗಿರುವರು.

೧೩೬-೧೩೯. ಪ್ರತಿಪತ್ತಿನಿಂದ ಕ್ರಮವಾಗಿ ನಂದ, ಭದ್ರ, ಜಯಾ, ರಿಕ್ತಾ, ಪೂರ್ಣ ಎಂಬುದಾಗಿ ಐದೈದು ತಿಥಿಗಳು ನಂದಾದಿಸಂಜ್ಞೆಗಳನ್ನು ಪಡೆಯುವುವು. ಅವರಲ್ಲಿ ಮೊದಲನೆಯ ಐದು ಅಶುಭವೆನಿಸುವುವು. ಮಧ್ಯದ ಐದು ತಿಥಿಗಳು ಮಧ್ಯಮ. ಕೊನೆಯ ಐದು ತಿಥಿಗಳು ಉತ್ತಮ ಈ ರೀತಿಯಾದ ಫಲವನ್ನು ಶುಕ್ಲಪಕ್ಷದಲ್ಲಿ ಕೊಡುವುವು. ಕೃಷ್ಣಪಕ್ಷದಲ್ಲಿ ಮೊದಲಿನ ಐದು ತಿಥಿಗಳು ಶುಭಫಲಪ್ರದಗಳಾಗುವುವು. ಮಧ್ಯದ ಐದು ತಿಥಿಗಳು ಮಧ್ಯಮದರ್ಜೆಯ ಫಲಗಳನ್ನೂ ಕೊನೆಯ ಐದು ತಿಥಿಗಳು ಅಶುಭ ಫಲಗಳನ್ನೂ ಕೊಡುವುವು. ಈ ತಿಥಿಗಳಲ್ಲಿ ಅಷ್ಟಮೀ, ದ್ವಾದಶೀ, ಷಷ್ಠೀ, ಚೌತಿ, ಚತುರ್ದಶೀ ಈ ತಿಥಿಗಳು ಪಕ್ಷರಂಧ್ರಗಳೆನಿಸಿ ಸಕಲ ಕರ್ಮಗಳಿಗೂ ಅನರ್ಹಗಳೆನಿಸಿರುವುವು. ಆದರೆ ಆತಿಥ್ಯಾದಿಗಳಲ್ಲಿ ಕ್ರಮವಾಗಿ ೭ ಏಳು ೧೪ ಹದಿನಾಲ್ಕು ೮ ಎಂಟು ೯ ಒಂಭತ್ತು ೨೪ ಇಪ್ಪತ್ತನಾಲ್ಕು ನಾಡಿಗಳು ತ್ಯಾಜ್ಯಕಾಲಗಳೆಂದು ಗಣಿಸಲ್ಪಟ್ಟಿವೆ. ಅಮಾವಾಸ್ಯಾ

**ತಿಥಯಸ್ತು ಪ್ರಶಸ್ತಾಃ ಸ್ಯುರ್ಮಧ್ಯಮಾ ಪ್ರತಿಪತ್ಸಿತಾ ।**
**ಷಷ್ಠ್ಯಾಂ ತೈಲಂ ತಥಾಷ್ಟಮ್ಯಾಂ ಮಾಸಂ ಕ್ಷೌರಂ ಕಲೇಸ್ತಿಥೌ ॥ ೧೪೦ ॥**

**ಪೂರ್ಣಿಮಾದರ್ಶಯೋರ್ನಾರೀಸೇವನಂ ಪರಿವರ್ಜಯೇತ್ ।**
**ದರ್ಶೇ ಷಷ್ಠ್ಯಾಂ ಪ್ರತಿಪದಿ ದ್ವಾದಶ್ಯಾಂ ಪ್ರತಿಪರ್ವಸು ॥ ೧೪೧ ॥**

**ನವಮ್ಯಾಂ ಚ ನ ಕುರ್ವೀತ ಕದಾಚಿದ್ದಂತಧಾವನಂ ।**
**ವ್ಯತೀಪಾತೇ ಚ ಸಂಕ್ರಾಂತಾವೇಕಾದಶ್ಯಾಂ ಚ ಪರ್ವಸು ॥ ೧೪೨ ॥**

**ಅರ್ಕಭೌಮದಿನೇ ಷಷ್ಠ್ಯಾಂ ನಾಭ್ಯಂಗೋ ವೈಧೃತೌ ತಥಾ ।**
**ಯಃ ಕರೋತಿ ದಶಮ್ಯಾಂ ಚ ಸ್ನಾನಮಾಮಲಕೈರ್ನರಃ ॥ ೧೪೩ ॥**

**ಪುತ್ರಹಾನಿರ್ಭವೇತ್ತಸ್ಯ ತ್ರಯೋದಶ್ಯಾಂ ಧನಕ್ಷಯಃ ।**
**ಅರ್ಥಪುತ್ರಕ್ಷಯಸ್ತಸ್ಯ ದ್ವಿತೀಯಾಯಾಂ ನ ಸಂಶಯಃ ॥ ೧೪೪ ॥**

---

ಮತ್ತು ನವಮೀ ಈ ತಿಥಿಗಳಲ್ಲಿ ೫ ಐದು ಘಳಿಗೆಗಳು ಸರ್ವದಾ ತಾಜ್ಯವೆನಿಸುವುವು. ಅಲ್ಲದೇ ವಿಷಮ ತಿಥಿಗಳೆನಿಸಿದ ಪಾಡ್ಯಮೀ, ತದಿಗೆ ಪಂಚಮೀ ಇತ್ಯಾದಿ ತಿಥಿಗಳು ಸರ್ವಕರ್ಮಗಳಿಗೂ ಪ್ರಶಸ್ತವಾದುವುಗಳೆಂದು ಹೇಳಿದೆ. ಅದರಲ್ಲಿ ಶುಕ್ಲಪಕ್ಷದ ಪ್ರತಿಪತ್ ಎಂಬುದು ಮಾತ್ರ ಮಧ್ಯಮಫಲವಾದುದು. ಷಷ್ಠಿಯತಿಥಿಯಲ್ಲಿ ತೈಲಾಭ್ಯಂಜನವನ್ನೂ ಅಷ್ಟಮಿಯಲ್ಲಿ ಕ್ಷುರಕರ್ಮವನ್ನೂ, ಚತುರ್ದಶೀ, ಪೂರ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ಸ್ತ್ರೀಸಂಬಂಧವನ್ನೂ ತ್ಯಾಗಮಾಡಬೇಕು. ದರ್ಶ ಷಷ್ಠೀ, ಪ್ರತಿಪತ್, ದ್ವಾದಶೀ, ಪರ್ವತಿಥಿಗಳು ನವಮೀ ಈ ತಿಥಿಗಳಲ್ಲಿ ದಂತಧಾವನವು ನಿಷಿದ್ಧವೆನಿಸಿದೆ. ವ್ಯತೀಪಾತಯೋಗ, ಸಂಕ್ರಮಣಕಾಲ, ಏಕಾದಶಿ ಪರ್ವತಿಥಿಗಳು, ಭಾನುವಾರ, ಮಂಗಳವಾರ, ಷಷ್ಠಿ, ವೈಧೃತಿ ಈ ದಿನಗಳಲ್ಲಿ ಎಣ್ಣೆಯ ನೀರನ್ನು ಹಾಕಿಕೊಳ್ಳಕೂಡದು.

೧೪೪-೧೪೬. ನೆಲ್ಲಿಯಕಾಯಿಯ ಸಂಬಂಧವಾದ ತೈಲದಿಂದ ಯಾರು ದಶಮಿಯ ತಿಥಿಯಲ್ಲಿ ಸ್ನಾನಮಾಡುವರೋ ಅವರಿಗೆ ಪುತ್ರಹಾನಿಯಾಗುವುದು (ಅಂದರೆ ಭೃಂಗಾಮಲಕ ತೈಲವನ್ನು ದಶಮಿಯದಿವಸ ಉಪಯೋಗಿಸಬಾರದೆಂದು ಭಾವವು). ಹೀಗೆಯೇ ಈ ತೈಲದಿಂದ ತ್ರಯೋದಶಿಯಲ್ಲಿ ಧನಕ್ಷಯವೂ ಬಿದಿಗೆ

ಅಮಾಯಾಂ ಚ ನವಮ್ಯಾಂ ಚ ಸಪ್ತಮ್ಯಾಂ ಚ ಕುಲಕ್ಷಯಃ ।
ಯಾ ಪೌರ್ಣಮಾ ದಿವಾ ಚಂದ್ರಮತೀ ಸಾನುಮತೀ ಸ್ಮೃತಾ ॥ ೧೪೫ ॥

ರಾತ್ರೌ ಚಂದ್ರವತೀ ರಾಕಾಪ್ಯಮಾವಾಸ್ಯಾ ತಥಾ ದ್ವಿಧಾ ।
ಸಿನೀವಾಲೀ ಚೇಂದುಮತೀ ಕುಹೂರ್ನೇಂದುಮತೀ ಮತಾ ॥ ೧೪೬ ॥

ಕಾರ್ತಿಕೇ ಶುಕ್ಲನವಮೀ ತ್ವಾದಿಃ ಕೃತಯುಗಸ್ಯ ಚ ।
ತ್ರೇತಾದಿರ್ಮಾಧವೇ ಶುಕ್ಲೇ ತೃತೀಯಾ ಪುಣ್ಯಸಂಜ್ಞಿತಾ ॥ ೧೪೭ ॥

ಕೃಷ್ಣಾ ಪಂಚದಶೀ ಮಾಘೇ ದ್ವಾಪರಾದಿರುದೀರಿತಾ ।
ಕಲ್ಪಾದಿಃ ಸ್ಯಾತ್ಕೃಷ್ಣಪಕ್ಷೇ ನಭಸ್ಯಸ್ಯ ತ್ರಯೋದಶೀ ॥ ೧೪೮ ॥

ಬುದ್ಧಿ ಧನ, ಪುತ್ರ ಇವುಗಳ ನಾಶವೂ ಲಭಿಸುವುದು. ಅಲ್ಲದೇ ಅಮಾವಾಸ್ಯಾ ನವಮೀ, ಸಪ್ತಮೀ ಈ ತಿಥಿಗಳಲ್ಲಿ ಆಮಲಕತೈಲಾಭ್ಯಂಗಮಾಡಿದರೆ ಕುಲಕ್ಷಯ ವಾಗುವುದು. ಪೂರ್ಣಿಮಾತಿಥಿಯಲ್ಲಿ ಪ್ರತಿಪತ್ಸಂಬಂಧದಿಂದ ಚಂದ್ರನು ಕಲಾಹೀನನಾಗಿ ಉದಯಿಸಿದರೆ ಆ ತಿಥಿಗೆ ಅನುಮತಿಯೆಂದೂ ಪೂರ್ಣಚಂದ್ರ ನಾಗಿ ಉದಯಿಸಿದರೆ ರಾಕಾ ಎಂದೂ ಹೆಸರುಂಟಾಗುವುದು. ಹಾಗೆಯೇ ದರ್ಶ ದಲ್ಲಿಯೂ ಪ್ರತಿಪತ್ಸಂಬಂಧದಿಂದ ಚಂದ್ರಕಲೆಯು ಕಂಡುಬಂದರೆ ಸಿನೀವಾಲೀ ಎಂದೂ ಚಂದ್ರಕಲಾಸಂಪರ್ಕವಿಲ್ಲದಿದ್ದರೆ 'ಕುಹೂ' ಎಂದೂ ಎರಡು ಬಗೆಯಾದ ಸಂಜ್ಞೆಯುಂಟಾಗುವುದು.

೧೪೭-೧೪೮. 1. ಕಾರ್ತಿಕ ಶುದ್ಧ ನವಮಿಯು ಕೃತಯುಗಾದಿ ಅಥವ ಕೃತಯುಗವಾರಂಭವಾದ ದಿವಸವಾಗಿರುವುದು.

(2) ವೈಶಾಖ ಶುದ್ಧ ತದಿಗೆಯು ತ್ರೇತಾಯುಗಾರಂಭವಾದ ದಿನ ವೆನಿಸುವುದು

(3) ಮಾಘ ಕೃಷ್ಣ ಅಮಾವಾಸ್ಯಾ ತಿಥಿಯು ದ್ವಾಪರಯುಗಾದಿ ಯಾಗಿರುವುದು.

(4) ಭಾದ್ರಪದ ಕೃಷ್ಣ ತ್ರಯೋದಶೀ ತಿಥಿಯೇ ಕಲಿಯುಗದ ಆದಿ ಯಾಗಿರುವುದು.

ಈರೀತಿ ಕೃತಾದಿ ನಾಲ್ಕು ಯುಗಗಳ ಪ್ರಾರಂಭದಿನಗಳನ್ನು ತಿಳಿಯಬೇಕು.

ದ್ವಾದಶ್ಯೂರ್ಜೇ ಶುಕ್ಲಪಕ್ಷೇ ನವಮ್ಯಾಶ್ವೇಶ್ವಯುಜ್ಯಪಿ ।
ಚೈತ್ರೇ ಭಾದ್ರಪದೇ ಚೈವ ತೃತೀಯಾ ಶುಕ್ಲಸಂಜ್ಞಿತಾ ॥ ೧೪೯ ॥

ಏಕಾದಶೀ ಸಿತಾ ಪೌಷೇ ಚಾಷಾಢೇ ಚಾಷ್ಟಮೀ ಸಿತಾ ।
ಮಾಘೇ ಚ ಸಪ್ತಮೀ ಶುಕ್ಲಾ ನಭಸ್ಯೇ ತ್ವಸಿತಾಷ್ಟಮೀ ॥ ೧೫೦ ॥

ಶ್ರಾವಣೇ ಚಾಪ್ಯಮಾವಾಸ್ಯಾ ಫಾಲ್ಗುನೇ ಮಾಸಿ ಪೌರ್ಣಿಮಾ ।
ಆಷಾಢೇ ಕಾರ್ತಿಕೇ ಮಾಸಿ ಜ್ಯೇಷ್ಠೇ ಚೈತ್ರೇ ಚ ಪೌರ್ಣಿಮಾ ॥ ೧೫೧ ॥

ಮನ್ವಾದಯೋ ಮಾನವಾನಾಂ ಶ್ರಾದ್ಧೇಷ್ವತ್ಯಂತಪುಣ್ಯದಾಃ ।
ಭಾದ್ರೇ ಕೃಷ್ಣತ್ರಯೋದಶ್ಯಾಂ ಮಘಾಸ್ವಿಂದುಃ ಕರೇ ರವಿಃ ॥ ೧೫೨ ॥

ಗಜಚ್ಛಾಯಾ ತದಾ ಜ್ಞೇಯಾ ಶ್ರಾದ್ಧೇ ಹ್ಯತ್ಯಂತಪುಣ್ಯದಾ ।
ಏಕಸ್ಮಿನ್ವಾಸರೇ ತಿಸ್ರಸ್ತಿಥಯಃ ಸ್ಯಾತ್ತಿಥಿಕ್ಷಯಃ ॥ ೧೫೩ ॥

---

೧೪೯-೧೫೧. (1) ಕಾರ್ತಿಕ ಶುದ್ಧ ದ್ವಾದಶೀ.
(2) ಆಶ್ವಯುಜ ಶುದ್ಧ ನವಮೀ
(3) ಚೈತ್ರಶುದ್ಧ ತೃತೀಯಾ
(4) ಭಾದ್ರಪದ ಶುದ್ಧ ತೃತೀಯಾ
(5) ಪುಷ್ಯ ಶುದ್ಧ ಏಕಾದಶೀ
(6) ಆಷಾಢ ಕೃಷ್ಣಾಷ್ಟಮೀ
(7) ಮಾಘ ಶುದ್ಧ ಸಪ್ತಮೀ
(8) ಭಾದ್ರಪದ ಕೃಷ್ಣಾಷ್ಟಮೀ
(9) ಶ್ರಾವಣ ಬಹುಳ ಅಮಾವಾಸ್ಯೆ
(10) ಫಾಲ್ಗುನ ಶುದ್ಧ ಪೂರ್ಣಿಮಾ
(11) ಆಷಾಢ ಶುದ್ಧ ಪೂರ್ಣಿಮಾ
(12) ಕಾರ್ತಿಕ ,, ,,
(13) ಜ್ಯೇಷ್ಠ ,, ,,
(14) ಚೈತ್ರ ,, ,,

ಈ ಹದಿನಾಲ್ಕು ತಿಥಿಗಳೂ ಮನ್ವಾದಿಗಳೆಂದು ಗಣಿಸಲ್ಪಟ್ಟಿವೆ. ಈ ತಿಥಿಗಳಲ್ಲಿ ಮಾನವಕೃತವಾದ ಶ್ರಾದ್ಧವು ಅತ್ಯಂತ ಪುಣ್ಯಫಲಪ್ರದವಾಗುವುದು. ಭಾದ್ರಪದ ಕೃಷ್ಣ ತ್ರಯೋದಶಿಯಲ್ಲಿ ಚಂದ್ರನು ಮಖಾ ನಕ್ಷತ್ರದಲ್ಲಿಯೂ ರವಿಯು ಹಸ್ತನಕ್ಷತ್ರದಲ್ಲಿಯೂ ಇದ್ದರೆ ಆ ತಿಥಿಗೆ 'ಗಜಚ್ಛಾಯಾತಿಥಿಯೆಂದು'

ತಿಥಿವಾರತ್ರಯೇ ತ್ವೇಕಾ ಹ್ಯಧಿಕಾ ದ್ವೇ ಚ ನಿಂದಿತೇ ।
ಸೂರ್ಯಾಸ್ತಮಾನಪರ್ಯಂತಂ ಯಸ್ಮಿನ್ವಾರೇ ತು ಯಾ ತಿಥಿಃ ॥ ೧೫೪ ॥

ವಿದ್ಯತೇ ಸಾ ತ್ವಖಂಡಾ ಸ್ಯಾನ್ನ್ಯೂನಾ ಚೇತ್ಖಂಡಸಂಜ್ಞಿತಾ ।
ತಿಥೇಃ ಪಂಚದಶೋ ಭಾಗಃ ಕ್ರಮಾತ್ಪ್ರತಿಪದಾದಯಃ ॥ ೧೫೫ ॥

ಕ್ಷಣಸಂಜ್ಞಾಸ್ತದರ್ಧಾನಿ ತಾಸಾಮರ್ಧಪ್ರಮಾಣತಃ ।
ರವಿಃ ಸ್ಥಿರಶ್ಚರಶ್ಚಂದ್ರಃ ಕ್ರೂರೋ ವಕ್ರೋಽಖಿಲೋ ಬುಧಃ ॥ ೧೫೬ ॥

ಲಘುರೀಜ್ಯೋ ಮೃದುಃ ಶುಕ್ರಸ್ತೀಕ್ಷ್ಣೋ ದಿನಕರಾತ್ಮಜಃ ।
ಅಭ್ಯಕ್ತೋ ಭಾನುವಾರೇ ಯಃ ಸ ನರಃ ಕ್ಲೇಶವಾನ್ಭವೇತ್ ॥ ೧೫೭ ॥

ಹೆಸರು. ಈ ತಿಥಿಯು ಶ್ರಾದ್ಧಕ್ಕೆ ತುಂಬಾ ಪುಣ್ಯಕರವೆನಿಸಿರುವುದು. ಒಂದೇ ದಿನದಲ್ಲಿ ಮೂರು ತಿಥಿಗಳು ಸಂಭವಿಸಿದರೆ ಅದಕ್ಕೆ 'ಅವಮಾಹಸ್ಸು' ಅಥವಾ 'ತಿಥಿಕ್ಷಯವೆಂದು' ಹೆಸರು ಬರುವುದು. ಒಂದೇ ತಿಥಿಯು ಮೂರುದಿನಗಳಲ್ಲಿ ಪ್ಪರಿ ಅದಕ್ಕೆ 'ತ್ರಿದ್ಯುಸ್ಪೃಕ್' ಎಂಬ ಹೆಸರುಂಟಾಗುವುದು. ಅದರಲ್ಲಿ ಅಧಿಕಾಂಶವಿರುವ ದಿನವೇ ಆ ತಿಥಿಶಬ್ದವಾಚ್ಯವಾಗುವುದು. ಯಾವ ದಿನವಲ್ಲಿ ಸೂರ್ಯೋದಯದಿಂದ ಅಸ್ತಮಾನ ಪರ್ಯಂತವಾಗಿ ತಿಥಿಯಿರುವುದೋ ಆದಿನವೇ ಪೂರ್ಣತಿಥಿಯುಳ್ಳದ್ದೆಂದು ಭಾವಿಸಬೇಕು.

೧೫೫-೧೫೮. ಆ ತಿಥಿಯನ್ನು ಅಖಂಡತಿಥಿಯೆಂದೂ ಉಳಿದ ದಿನಗಳನ್ನು ಖಂಡತಿಥಿಗಳೆಂದೂ ತಿಳಿಯಬೇಕು. ಪ್ರತಿಪದಾದಿ ತಿಥಿಗಳ ಪೂರ್ಣಕಾಲಗಳಲ್ಲಿ ೧/೧೫ ಹದಿನೈದನೆಯ ಒಂದು ಭಾಗದ ಕಾಲಕ್ಕೆ ಕ್ಷಣಕಾಲವೆಂದು ಹೆಸರು. ಅದರ ಅರ್ಧಭಾಗಕ್ಕೆ ಅರ್ಧಕ್ಷಣವೆಂದೂ ಕಾಲವನ್ನು ವ್ಯವಹರಿಸಬೇಕು. ಸೂರ್ಯಾದಿಗ್ರಹಗಳಲ್ಲಿ ಸೂರ್ಯನು ಸ್ಥಿರಗ್ರಹ, ಚಂದ್ರನು ಚರಗ್ರಹ, ಕುಜನು ಕ್ರೂರಗ್ರಹ, ಬುಧನಿಗೆ ಸಾಹಚರ್ಯದಿಂದ ಎಲ್ಲಾ ಗುಣಗಳೂ ಒದಗುವುವು. ಗುರುವು ಲಘುಗ್ರಹ, ಶುಕ್ರನು ಮೃದುಗ್ರಹ, ಶನಿಯು ತೀಕ್ಷ್ಣಗ್ರಹ ಈರೀತಿಯಾಗಿ ಗುಣವಿಭಾಗವಮಾಡಿಕೊಳ್ಳಬೇಕು. ಭಾನುವಾರದಲ್ಲಿ ಅಭ್ಯಂಗವಮಾಡಿಕೊಂಡವನು ದುಃಖಿಯೂ, ಸೋಮವಾರದಲ್ಲಿ ಕಾಂತಿವಂತನೂ

**ಋಕ್ಷೇಶೇ ಕಾಂತಿಭಾಗ್ಭೌಮೇ ವ್ಯಾಧಿಃ ಸೌಭಾಗ್ಯಮಿಂದುಜೇ ।**
**ಜೀವೇ ನೈವಂ ಸಿತೇ ಹಾನಿರ್ಮಂದೇ ಸರ್ವಸಮೃದ್ಧಯಃ** ॥ ೧೫೮ ॥

**ಲಂಕೋದಯಾತ್ಸ್ಯಾದ್ವಾರಾದಿಸ್ತಸ್ಮಾದೂರ್ಧ್ವಮಧೋಽಪಿ ವಾ ।**
**ದೇಶಾಂತರಖಚರಾರ್ಧನಾಡೀಭಿರಪರೇ ಭವೇತ್** ॥ ೧೫೯ ॥

**ಬಲಪ್ರದಸ್ಯ ಖೇಟಸ್ಯ ಕರ್ಮ ಸಿದ್ಧ್ಯತಿ ಯತ್ಕೃತಂ ।**
**ತತ್ಕರ್ಮ ಬಲಹೀನಸ್ಯ ದುಃಖೇನಾಪಿ ನ ಸಿದ್ಧ್ಯತಿ** ॥ ೧೬೦ ॥

**ಇಂದುಜ್ಞಜೀವಶುಕ್ರಾಣಾಂ ವಾಸರಾಃ ಸರ್ವಕರ್ಮಸು ।**
**ಫಲದಾಸ್ತ್ವಿತರೇ ಕ್ರೂರೇ ಕರ್ಮಸ್ವಭಿಮತಪ್ರದಾಃ** ॥ ೧೬೧ ॥

**ರಕ್ತವರ್ಣೋ ರವಿಶ್ಚಂದ್ರೋ ಗೌರೋ ಭೌಮಸ್ತು ಲೋಹಿತಃ ।**
**ದೂರ್ವಾವರ್ಣೋ ಬುಧೋ ಜೀವಃ ಪೀತಶ್ಶ್ವೇತಸ್ತು ಭಾರ್ಗವಃ** ॥ ೧೬೨ ॥

ಮಂಗಳವಾರದಲ್ಲಿ ವ್ಯಾಧಿಪೀಡಿತನೂ ಬುಧವಾರದಲ್ಲಿ ಸೌಭಾಗ್ಯಶಾಲಿಯೂ ಗುರು ವಾರದಲ್ಲಿ ಸೌಭಾಗ್ಯಹೀನನೂ, ಶುಕ್ರವಾರದಲ್ಲಿ ಹಾನಿಯನ್ನು ಪಡೆಯುವನೂ ಶನಿವಾರದಲ್ಲಿ ಸರ್ವಸಮೃದ್ಧಿಯನ್ನು ಹೊಂದುವನೂ ಆಗುವನು.

೧೫೯-೧೬೧. ನಿರಕ್ಷದೇಶವಾದ ಲಂಕೆಯಲ್ಲಿ ವಾರೋದಯಪ್ರವೃತ್ತಿಯನ್ನು ಕಂಡುಹಿಡಿದು ಸ್ವದೇಶಕ್ಕೆ ಅದನ್ನು ದೇಶಾಂತರ ಸಂಸ್ಕಾರಗಳಿಂದ ಆನಯನಮಾಡಿ ಅಲ್ಲಿಂದ ಸ್ವದೇಶದ ವಾರಪ್ರವೃತ್ತಿಯನ್ನು ಕಂಡುಹಿಡಿದುಕೊಳ್ಳಬೇಕು. ಗ್ರಹವು ಬಲಿಷ್ಠವಾದರೆ ಕರ್ಮಕ್ಕೆ ಬಲವನ್ನೂ ದುರ್ಬಲವಾಗಿದ್ದರೆ ಹಾನಿಯನ್ನೂ ತಂದೊಡ್ಡುವುದು. ಸೋಮ, ಬುಧ, ಗುರು, ಶುಕ್ರವಾರಗಳು ಸಕಲ ಕರ್ಮಗಳಿಗೂ ಶುಭವಾಗಿರುವುವು. ಉಳಿದ ವಾರಗಳು ಅಶುಭವಾದುವುಗಳೆಂದರಿಯಬೇಕು.

೧೬೨-೧೬೪. ಸೂರ್ಯಾದಿಗ್ರಹಗಳು ಕ್ರಮವಾಗಿ ರಕ್ತ, ಗೌರ, ಲೋಹಿತ ಗರಿಕೆಯ ಹಸರು, ಪೀತ, ಶ್ವೇತ ಕಪ್ಪು ಈ ಬಣ್ಣಗಳುಳ್ಳವೆಂದೂ, ಈ ಬಣ್ಣಗಳಲ್ಲಿ ಆ ಗ್ರಹಗಳಿಗೆ ಇಷ್ಟವುಂಟೆಂದೂ ತಿಳಿಯಬೇಕು. ಭಾನುವಾರಾದಿಯಾಗಿ ಮುಂದೆ ಹೇಳುವ ಯಾಮಗಳಲ್ಲಿ ಅರ್ಧಯಾಮಕಾಲವು ಯಮಕಂಟಕ, ಗುಳಿಕ

**ಕೃಷ್ಣಃ ಸೌರಿಃ ಸ್ವವಾರೇಷು ಸ್ವಸ್ವವರ್ಣಕ್ರಿಯಾ ಹಿತಾಃ ।**
**ಅದ್ರಿಬಾಣಾಶ್ಚ ಯಸ್ತರ್ಕಪಾತಾಲವಸುಧಾಧರಾಃ ॥ ೧೬೩ ॥**

**ಬಾಣಾಗ್ನಿಲೋಚನಾನಿ ಹ್ಯವದೇಬಾಹುಶಿಲೀಮುಖಾಃ ।**
**ತ್ರ್ಯೇಕಾಹಯೋ ನೇತ್ರಗೋತ್ರರಾಮಾಶ್ಚಂದ್ರರಸರ್ತವಃ ॥ ೧೬೪ ॥**

**ಕುಲಿಕಾಶ್ಚೋಪಕುಲಿಕಾ ವಾರವೇಲಾಸ್ತಥಾ ಕ್ರಮಾತ್ ।**
**ಪ್ರಹರಾರ್ಧಪ್ರಮಾಣಾಸ್ತೇ ವಿಜ್ಞೇಯಾಃ ಸೂರ್ಯವಾಸರಾತ್ ॥ ೧೬೫ ॥**

**ಯಸ್ಮಿನ್ವಾರೇ ಕ್ಷಣೋ ವಾರವೃಷ್ಟಸ್ತದ್ವಾಸರಾಧಿಪಃ ।**
**ಆದ್ಯಃ ಷಷ್ಠೋ ದ್ವಿತೀಯೋಽಸ್ಮಾತ್ತತ್ ಷಷ್ಠಸ್ತು ತೃತೀಯಕಃ ॥ ೧೬೬ ॥**

---

ಮತ್ತು ಅರ್ಧಪ್ರಹಾರ ಈರೀತಿ ಮೂರುವಿಧಕಾಲಗಳಾಗಿರುವುವು. ಇವುಗಳನ್ನು ಸರಿಯಾಗಿ ನಿರ್ಣಯಿಸಿಕೊಳ್ಳಬೇಕು.

| | | | |
|---|---|---|---|
| ಭಾನುವಾರದಲ್ಲಿ | ೫ ಐದು | ೭ ಏಳು | ೪ ನಾಲ್ಕು |
| ಸೋಮವಾರದಲ್ಲಿ | ೪ ನಾಲ್ಕು | ೫ ಆರು | ೭ ಏಳು |
| ಮಂಗಳವಾರದಲ್ಲಿ | ೩ ಮೂರು | ೫ ಐದು | ೨ ಎರಡು |
| ಬುಧವಾರದಲ್ಲಿ | ೨ ಎರಡು | ೪ ನಾಲ್ಕು | ೫ ಐದು |
| ಗುರುವಾರದಲ್ಲಿ | ೧ ಒಂದು | ೩ ಮೂರು | ೮ ಎಂಟು |
| ಶುಕ್ರವಾರದಲ್ಲಿ | ೭ ಏಳು | ೨ ಎರಡು | ೩ ಮೂರು |
| ಶನಿವಾರದಲ್ಲಿ | ೮ ಎಂಟು | ೧ ಒಂದು | ೬ ಆರು. |

ಈ ಯಾಮಗಳಲ್ಲಿ ಅರ್ಧಭಾಗಕಾಲಕ್ಕೆ ಕ್ರಮವಾಗಿ ಯಮಕಂಟಕ, ಗುಳಿಕ, ಅರ್ಧಪ್ರಹಾರ ಮುಂತಾದ ಕುಲಿಕಾ ಉಪಗುಲಿಕಾ ಕಾಲಗಳು ಶುಭಕರ್ಮಗಳಿಗೆ ನಿಷಿದ್ಧವಾಗಿವೆ.

೧೬೬-೧೬೮. ಪ್ರತಿವಾರಕ್ಕೂ ಆಯಾ ವಾರಾಧಿಪತಿಯೇ ಮೊದಲನೆಯ ಕಾಲಹೋರಾಧಿಪತಿಯಾಗುವನು. ಅವನಿಂದ ಆರನೆಯ ಹೋರಾಧಿಪತಿಯು ದ್ವಿತೀಯಕಾಲಹೋರಾಧಿಪನಾಗುವನು. ಹೀಗೆ ಪ್ರತಿವಾರಗಳಲ್ಲಿಯೂ ಹಗಲು ೧೨ ಹನ್ನೆರಡು ರಾತ್ರಿ ಹನ್ನೆರಡು ಅಂದರೆ 24 ಎರಡೂವರೆ ಘಳಿಗೆಗೆ ಒಂದು ಕಾಲಹೋರೆಯಂತೆ ಭಾವಿಸಿ ಆಯಾ ಹೋರೆಗೆ ಕ್ರಮವಾಗಿ ಅಧಿಪತಿಗಳನ್ನು

ಷಷ್ಠಃ ಷಷ್ಠಶ್ಚೇತರೇಷಾಂ ಕಾಲಹೋರಾಧಿಪಾಃ ಸ್ಮೃತಾಃ ।
ಸಾರ್ಧನಾಡೀದ್ವಯೇನೈವ ದಿವಾರಾತ್ರೌ ಯಥಾಕ್ರಮಾತ್ ॥ ೧೬೭ ॥

ವಾರಪ್ರೋಕ್ತೇ ಕರ್ಮಕಾರ್ಯೇ ತದ್ಗ್ರಹಸ್ಯ ಕ್ಷಣೇಪಿ ಸನ್ ।
ನಕ್ಷತ್ರೇಶಾಃ ಕ್ರಮಾದ್ದಸ್ರಯಮವಹ್ನಿ ಪಿತಾಮಹಾಃ ॥ ೧೬೮ ॥

ಚಂದ್ರೇಶಾದಿತಿಜೀವಾಹಿ ಪಿತರೋ ಭಗಸಂಜ್ಞಕಃ ।
ಅರ್ಯಮಾರ್ಕತ್ವಷ್ಟೃಮರುಚ್ಛಕ್ರಾಗ್ನಿಮಿತ್ರವಾಸವಃ ॥ ೧೬೯ ॥

ನೈಋರ್ತ್ಯುದಕವಿಶ್ವೇಜಗೋವಿಂದವಸುತೋಯಪಾಃ ।
ಅಜೈಕಪಾದಹಿರ್ಬುಧ್ನ್ಯಃ ಪೂಷಾ ಚೇತಿ ಪ್ರಕೀರ್ತಿತಾಃ ॥ ೧೭೦ ॥

ಪೂರ್ವಾತ್ರಯಂ ಮಘಾಶ್ಲೇಷಾಗ್ನಿ ವಿಶಾಖಾಯಮಮೂಲಭಂ ।
ಅಧೋಮುಖಂ ತು ನವಕಂ ಭಾನೌ ತತ್ರ ವಿಧೀಯತೇ ॥ ೧೭೧ ॥

ಬಿಲಪ್ರವೇಶಗಣಿತಭೂತಸಾಧನಲೇಖನಂ ।
ಶಿಲ್ಪಕರ್ಮಕಲಾಕೂಪನಿಕ್ಷೇಪೋದ್ಧರಣಾದಿ ಯತ್ ॥ ೧೭೨ ॥

---

ತಿಳಿಯಬೇಕು. ರಾತ್ರಿಯಲ್ಲಿ ಮೊದಲನೆಯ ಹೋರಾಧಿಪನು ವಾರಾಧಿಪತಿಯಿಂದ (೫) ಐದನೆಯವನೇ ಆಗುವನು. ಇನ್ನು ಮುಂದೆ ಇಪ್ಪತ್ತೆಂಟು ನಕ್ಷತ್ರಗಳಿಗೂ ಕ್ರಮವಾಗಿ ಅಧಿಪತಿಗಳು ಹೇಳಲ್ಪಡುವರು-

೧೬೯-೧೭೦. ಅಶ್ವಿನೀದೇವತೆಗಳು ಕಾಲ, ಅಗ್ನಿ. ಬ್ರಹ್ಮ. ಚಂದ್ರ, ರುದ್ರ, ಅದಿತಿ, ಗುರು, ನಾಗ, ಪಿತೃ, ಭಗ, ಅರ್ಯಮ, ರವಿ, ತ್ವಷ್ಟಾ ವಾಯು ಇಂದ್ರಾಗ್ನೀ, ಮಿತ್ರ, ಶಕ್ರ, ದನುಜ, ವರುಣ, ವಿಶ್ವ, ಬ್ರಹ್ಮ, ಶ್ರೀಶ, ವಸು ತೋಯಪ, ಅಜಚರಣ, ಅಹಿರ್ಬುಧ್ನ್ಯ, ಪೂಷಾ ಹೀಗೆ ಅಶ್ವಿನ್ಯಾದಿಯಾಗಿ ಈ ಇಪ್ಪತ್ತೆಂಟು ನಕ್ಷತ್ರಗಳಿಗೆ ಅಧಿಪತಿಗಳಿರುವರು.

೧೭೧-೧೭೨. ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ, ಮಖ, ಆಶ್ಲೇಷಾ ಕೃತ್ತಿಕಾ, ವಿಶಾಖಾ, ಭರಣಿ, ಮೂಲ ಇವು ಒಂಭತ್ತೂ ಅಧೋಮುಖವಾದ ನಕ್ಷತ್ರಗಳು. ಈ ನಕ್ಷತ್ರಗಳಲ್ಲಿ ಸೂರ್ಯನಿರುವಾಗ ಬಿಲಪ್ರವೇಶ, ಗಣಿತ, ಭೂತಸಾಧನಗಳು, ಲೇಖನಕಾರ್ಯಗಳು, ಶಿಲ್ಪಕರ್ಮ, ಕಲಾಕರ್ಮ, ಕೂಪ ಖನನ, ನಿಕ್ಷೇಪೋದ್ಧರಣ ಮುಂತಾದ ಕೆಲಸಗಳನ್ನು ಮಾಡಬೇಕು.

ಮಿತ್ರೇಂದುತ್ವಾಷ್ಟ್ರಹಸ್ತೇಂದ್ರಾದಿತಿ ಭಾಂತ್ಯಾಶ್ವಿವಾಯುಭಂ ।
ತಿರ್ಯಙ್ಮುಖಾಖ್ಯಂ ನವಕಂ ಭಾನಾಂ ತತ್ರ ವಿಧೀಯತೇ ॥ ೧೭೩ ॥

ಹಲಪ್ರವಾಹಗಮನಂ ಗಂತ್ರೀಪತ್ರಗಜೋಷ್ಟ್ರಕಂ ।
ಖರಗೋರಥನೌಯಾನಲುಲಾಯಹಯಕರ್ಮ ಚ ॥ ೧೭೪ ॥

ಬ್ರಹ್ಮವಿಷ್ಣುಮಹೇಶಾರ್ಯಶತತಾರಾ ವಸೂತ್ತರಾಃ ।
ಊರ್ಧ್ವಾಸ್ಯಂ ನವಕಂ ಭಾನಾಂ ಪ್ರೋಕ್ತಮತ್ರ ವಿಧೀಯತೇ ॥ ೧೭೫ ॥

ನೃಪಾಭಿಷೇಕಮಾಂಗಲ್ಯವಾರಣಧ್ವಜಕರ್ಮ ಚ ।
ಪ್ರಾಸಾದತೋರಣಾರಾಮಪ್ರಾಕಾರಾದ್ಯಂ ಚ ಸಿಧ್ಯತಿ ॥ ೧೭೬ ॥

ಸ್ಥಿರಂ ರೋಹಿಣ್ಯುತ್ತರಾಖ್ಯಂ ಕ್ಷಿಪ್ರಂ ಸೂರ್ಯಾಶ್ವಿಪುಷ್ಯಭಂ ।
ಸಾಧಾರಣಂ ದ್ವಿದೈವತ್ಯಂ ವಹ್ನಿಭಂ ಚ ಪ್ರಕೀರ್ತಿತಂ ॥ ೧೭೭ ॥

೧೭೩-೧೭೪. ಅನೂರಾಧಾ, ಮೃಗಶಿರ, ಚಿತ್ತ, ಹಸ್ತ, ಜ್ಯೇಷ್ಠ, ಪುನರ್ವಸು, ರೇವತೀ, ಅಶ್ವಿನೀ, ಸ್ವಾತಿ ಈ ಒಂಭತ್ತೂ ತಿರ್ಯಙ್ಮುಖ ನಕ್ಷತ್ರಗಳು ಇವುಗಳಲ್ಲಿ ಕೃಷಿಕರ್ಮ, ಪ್ರವಾಹದ ಅಡಚಣೆ, ಬೇಲಿಯನ್ನು ಹಾಕುವುದು, ಆನೆ, ಒಂಟೆ, ಕತ್ತೆ, ಎತ್ತು, ರಥ, ನಾವೆ, ಎಮ್ಮೆ ಕುದುರೆ ಇವುಗಳನ್ನು ಕೊಳ್ಳುವುದು ಮತ್ತು ಇವುಗಳ ಮೇಲೆ ಸಂಚರಿಸುವುದು ಈ ಕಾರ್ಯಗಳನ್ನು ನಡೆಸಬಹುದು.

೧೭೫-೧೭೬. ರೋಹಿಣೀ, ಶ್ರವಣ, ಆರಿದ್ರ, ಪುಷ್ಯ, ಶತಭಿಷ, ಧನಿಷ್ಠ ಉತ್ತರಾಷಾಢ, ಉತ್ತರಾಭಾದ್ರ, ಉತ್ತರ ಈ ಒಂಭತ್ತು ನಕ್ಷತ್ರಗಳೂ ಊರ್ಧ್ವಾಸ್ಯವುಳ್ಳವುಗಳು ಅಂದರೆ ಊರ್ಧ್ವಮುಖವುಳ್ಳವುಗಳು. ಇವುಗಳಲ್ಲಿ ನೃಪಾಭಿಷೇಕ, ಮಾಂಗಲ್ಯಧಾರಣ, ಸ್ವಯಂವರ, ಧ್ವಜಪಟಸ್ಥಾಪನೆ, ಪ್ರಾಸಾದ ತೋರಣ, ಆರಾಮ, ಪ್ರಾಕಾರ ಇವುಗಳ ನಿರ್ಮಾಣ ಮುಂತಾದ ಶುಭ ಕಾರ್ಯಗಳನ್ನು ನಡೆಸಬಹುದು.

೧೭೭-೧೭೮. ಅಶ್ವಿನ್ಯಾದಿನಕ್ಷತ್ರಗಳಲ್ಲಿ ರೋಹಿಣೀ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ಈ ನಕ್ಷತ್ರಗಳಿಗೆ ಸ್ಥಿರನಕ್ಷತ್ರಗಳೆಂದೂ, ಹಸ್ತ, ಅಶ್ವಿನೀ

ವಸ್ವಾತ್ಯಾಂಬುಪುಷ್ಯಾಣಿ ವಿಷ್ಣು ಭಂ ಚರಸಂಜ್ಞಿತಂ ।
ಮೃದ್ವಿಂದು ಮಿತ್ರಚಿತ್ರಾಂತ್ಯಮುಗ್ರಂ ಪೂರ್ವಾಮಘಾತ್ರಿಕಂ ॥ ೧೭೮ ॥

ಮೂಲಾದ್ರಾರ್ಹೀಂದ್ರಭಂ ತೀಕ್ಷ್ಣಂ ಸ್ವನಾಮಸದೃಶಂ ಫಲಂ ।
ಚಿತ್ರಾದಿತ್ಯಂಬು ವಿಷ್ಣ್ವಂಬಾಂತ್ಯಾಂಧಿಮಿತ್ರವಸೂಡುಷು ॥ ೧೭೯ ॥

ಸಮೃಗೇಜ್ಯೇಷು ಬಾಲಾನಾಂ ಕರ್ಣವೇಧಕ್ರಿಯಾ ಹಿತಾ ।
ಹಸ್ತೇಂದ್ವದಿತಿತಿಷ್ಯೇಷು ಕರಾದಿತ್ರಿತಯೇ ತಥಾ ॥ ೧೮೦ ॥

ಗಜಕರ್ಮಾಖಿಲಂ ಯತ್ತದ್ವಿಧೇಯಂ ಸ್ಥಿರಭೇಷು ಚ ।
ವಾಜಿಕರ್ಮಾಖಿಲಂ ಕಾರ್ಯಂ ಸೂರ್ಯವಾರೇ ವಿಶೇಷತಃ ॥ ೧೮೧ ॥

ಪುಷ್ಯ ಇವುಗಳಿಗೆ ಕ್ಷಿಪ್ರನಕ್ಷತ್ರಗಳೆಂದೂ, ವಿಶಾಖ, ಕೃತ್ತಿಕ ಇವುಗಳಿಗೆ ಸಾಧಾರಣ ನಕ್ಷತ್ರಗಳೆಂದೂ, ಶತಭಿಷ, ಪುನರ್ವಸು, ಪೂರ್ವಾಷಾಢಾ, ಪುಷ್ಯ, ಶ್ರವಣ ಇವುಗಳಿಗೆ ಚರನಕ್ಷತ್ರಗಳೆಂದೂ, ಮೃಗಶಿರ, ಅನೂರಾಧಾ, ಚಿತ್ತ, ರೇವತಿ ಇವುಗಳಿಗೆ ಮೃದುನಕ್ಷತ್ರಗಳೆಂದೂ, ಪೂರ್ವಾಫಲ್ಗುನೀ, ಪೂರ್ವಾಷಾಢ, ಪೂರ್ವಾಭಾದ್ರ ಮಖ, ಭರಣೀ ಇವುಗಳಿಗೆ ಉಗ್ರನಕ್ಷತ್ರಗಳೆಂದೂ, ಮೂಲಾ, ಆದ್ರಾ, ಆಶ್ಲೇಷಾ ಜ್ಯೇಷ್ಠಾ ಇವು ತೀಕ್ಷ್ಣನಕ್ಷತ್ರಗಳೆಂದೂ ಸಂಜ್ಞೆಯನ್ನು ಪಡೆಯುವುವು. ಇವುಗಳೆಲ್ಲವೂ ತಮ್ಮ ಹೆಸರಿಗನುಗುಣವಾದ ಫಲಗಳನ್ನು ಕೊಡುವುವು.

೧೮೦-೧೮೧ ಚಿತ್ತ, ಪುನರ್ವಸು ಪೂರ್ವಾಷಾಢಾ, ಶ್ರವಣ, ರೇವತಿ ಅನೂರಾಧ, ಶತಭಿಷ, ಮೃಗಶಿರ, ಪುಷ್ಯ ಈ ನಕ್ಷತ್ರಗಳು ಮಕ್ಕಳ ಕಿವಿ ಚುಚ್ಚುವುದಕ್ಕೆ ಪ್ರಶಸ್ತವಾದ ತಿಥಿಗಳು. ಅಶ್ವಿನೀ, ಮೃಗಶಿರ, ಪುನರ್ವಸು ಪುಷ್ಯ, ಹಸ್ತ, ಚಿತ್ತ, ಸ್ವಾತಿ ಇವು ಗಜಕರ್ಮಗಳಿಗೆ ಅಂದರೆ ಆನೆಯನ್ನು ಕೊಳ್ಳುವುದಕ್ಕೂ, ಪೂಜೆಮಾಡುವುದು ಮತ್ತು ಪಟ್ಟಾಭಿಷೇಕಮಾಡುವುದು ಮುಂತಾದ ಕರ್ಮಗಳಿಗೆ ಪ್ರಶಸ್ತವಾದುವುಗಳೆಂದು ತಿಳಿಯಬೇಕು. ಸ್ಥಿರನಕ್ಷತ್ರಗಳಲ್ಲಿಯೂ ವಿಶೇಷವಾಗಿ ಭಾನುವಾರದಲ್ಲಿಯೂ ವಾಜಿಕರ್ಮವು ಅಂದರೆ ಕುದುರೆಯ ಸಂಬಂಧವಾದ ಕರ್ಮಗಳು ಪ್ರಶಸ್ತವೆನಿಸುವುವು. ಚಿತ್ರ ಪೂರ್ವಾಭಾದ್ರ ಅನೂರಾಧ, ಉತ್ತರಾ, ಉತರಾಷಾಢ, ಉತ್ತರಾಭಾದ್ರ, (ಉತ್ತರಾತ್ರಯಗಳು)

**ಚಿತ್ರಾವರುಣಾನ್ತೈರಿಂಚತತ್ರ್ಯಕ್ಷೇತ್ರಾಸು ಗಮಾಗಮಂ ।**
**ದರ್ಶಾಷ್ಟಮ್ಯಾಂ ಚತುರ್ದಶ್ಯಾಂ ಪಶೂನಾಂ ನ ಕದಾಚನ ॥ ೧೮೨ ॥**

**ಮೃದುಧ್ರುವಕ್ಷಿಪ್ರಚರವಿಶಾಖಾಪಿತೃಭೇಷು ಚ ।**
**ಹಲಪ್ರವಾಹಂ ಪ್ರಥಮಂ ವಿದಧ್ಯಾನ್ಮೂಲಭೇ ವೃಷೈಃ ॥ ೧೮೩ ॥**

**ಹಲಾದೌ ವೃಷನಾಶಾಯ ಭತ್ರಯಂ ಸೂರ್ಯಮುಕ್ತಭಾತ್ ।**
**ಅಗ್ರೇ ವೃದ್ಧ್ಯೈ ತ್ರಯಂ ಲಕ್ಷ್ಮ್ಯೈ ಸೌಮ್ಯಪಾರ್ಶ್ವೇ ಚ ಪಂಚಕಂ ॥ ೧೮೪ ॥**

**ಶೂಲತ್ರಯೇಽಪಿ ನವಕಂ ಮರಣಾಯ ಚ ಪಂಚಕಂ ।**
**ಶ್ರಿಯೈ ಪುಷ್ಟ್ಯೈ ತ್ರಯಂ ಶ್ರೇಷ್ಠಂ ಸ್ಯಾಚ್ಚಕ್ರೇ ಲಾಂಗಲಾಹ್ವಯೇ ॥೧೮೫॥**

ಈ ನಕ್ಷತ್ರಗಳು ಪ್ರಯಾಣಾದಿಗಳಿಗೆ ಶ್ರೇಷ್ಠಗಳೆನಿಸಿರುವುವು. ಆದರೆ ಅಮಾವಾಸ್ಯಾ, ಅಷ್ಟಮೀ, ಚತುರ್ದಶೀ ಇವುಗಳಲ್ಲಿ ಪ್ರಯಾಣಾದಿಗಳನ್ನೂ, ಪಶುವಿಕ್ರಯಣಾದಿಗಳನ್ನೂ ಮಾಡಬಾರದು.

೧೮೩-೧೮೫. ಮೃದು, ಧ್ರುವ, ಕ್ಷಿಪ್ರ, ಚರ, ವಿಶಾಖಾ, ಮಖ, ಮೂಲ ಈ ನಕ್ಷತ್ರಗಳಲ್ಲಿ ಕೃಷಿಕರ್ಮವನ್ನು ಆರಂಭಿಸಬಹುದು. ನೇಗಿಲಿನ ಆದಿಭಾಗವಲ್ಲಿ ಸೂರ್ಯನಿರುವ ನಕ್ಷತ್ರದಿಂದ ಮುಂದಿನ ಮೂರು ನಕ್ಷತ್ರಗಳು ಇರುತ್ತವೆ. ಆ ನಕ್ಷತ್ರಗಳಲ್ಲಿ ಆರಂಭಿಸಿದ ಕೃಷಿಕಾರ್ಯದಲ್ಲಿ ಎತ್ತುಗಳಿಗೆ ಹಾನಿಯುಂಟಾಗುವುದು. ಅದರ ಮುಂದಿನ ಮೂರು ನಕ್ಷತ್ರಗಳು ಹಲಾಗ್ರದಲ್ಲಿರುವುವು). ಅವು ವೃದ್ಧಿಪ್ರದಗಳಾದ ನಕ್ಷತ್ರಗಳೆಂದರಿಯಬೇಕು. ತದನಂತರ ಮೂರು ನಕ್ಷತ್ರಗಳು ಲಕ್ಷ್ಮೀಪ್ರದಗಳು. ಬಲಬಾಗದಲ್ಲಿ ಅಲ್ಲಿಂದ ಮುಂದಿನ ಐದು ನಕ್ಷತ್ರಗಳು ವೃದ್ಧಿಪ್ರದಗಳಾಗಿರುವುವು. ನೇಗಿಲಿನ ಗುಳದ ಮೂರು ಭಾಗಗಳಲ್ಲಿಯೂ ಮುಂದಿನ ಒಂಭತ್ತು ನಕ್ಷತ್ರಗಳಿರುವುವು. ಅವು ಕರ್ಷಕನಿಗೆ (ಕೃಷಿಮಾಡುವ ರೈತನಿಗೆ) ಮರಣಪ್ರದಗಳೆನಿಸುವುವು. ಅದಕ್ಕಿಂತ ಮುಂದಿನ ಮೂರು ನಕ್ಷತ್ರಗಳು ಸಂಪತ್ತನ್ನೂ, ಮುಂದಿನ ಮೂರು ನಕ್ಷತ್ರಗಳು ಶ್ರೇಷ್ಠತೆಯನ್ನೂ ಕೊಡುವುವು. ಇದು ಲಾಂಗಲ ಚಕ್ರದಲ್ಲಿ ಹೇಳಿರುವ ಕ್ರಮ.

ಮೃದುಧ್ರುವಕ್ಷಿಪ್ರಭೇಷು ಪಿತೃವಾಯುವಸೂಡುಷು ।
ಸಮೂಲಭೇಷು ಬೀಜೋಪ್ತಿರತ್ಯುತ್ಕೃಷ್ಟಫಲಪ್ರದಾ ॥ ೧೮೬ ॥

ಭವೇದ್ಭತ್ರಿತಯಂ ಮೂರ್ಧ್ನಿ ಧಾನ್ಯನಾಶಾಯ ರಾಹುಭಾತ್ ।
ಗಲೇ ತ್ರಯಂ ಕಜ್ಜಲಾಯ ವೃದ್ಧ್ಯೈ ಚ ದ್ವಾದಶೋದರೇ ॥ ೧೮೭ ॥

ನಿಸ್ತಂಡುಲತ್ವಂ ಲಾಂಗೂಲೇ ಭಚತುಷ್ಟಯಭೀತಿದಂ ।
ನಾಭೌ ವಹ್ನಿಃ ಪಂಚಕಂ ಯದ್ಬೀಜೋಪ್ತಾವಿತಿ ಚಿಂತಯೇತ್ ॥ ೧೮೮ ॥

ಸ್ಥಿರೇಷ್ವದಿತಿಸಾರ್ಪಾಂತ್ಯಪಿತೃಮಾರುತಭೇಷು ಚ ।
ನ ಕುರ್ಯಾದ್ರೋಗಮುಕ್ತಸ್ಯ ಸ್ನಾನಮಾಹೀಂದುಶುಕ್ರಯೋಃ ॥ ೧೮೯ ॥

ಉತ್ತರಾತ್ರಯಮೈತ್ರೇಂದ್ರವಸುವಾರುಣಭೇಷು ಚ ।
ಪುಷ್ಯಾರ್ಕಪೌಷ್ಣ್ಯಧಿಷ್ಣ್ಯೇಷು ನೃತ್ಯಾರಂಭಃ ಪ್ರಶಸ್ಯತೇ ॥ ೧೯೦ ॥

೧೮೬-೧೮೮. ಮೃದು, ಧ್ರುವ, ಕ್ಷಿಪ್ರನಕ್ಷತ್ರಗಳಲ್ಲಿಯೂ ಮಘಾ, ಸ್ವಾತಿ, ಶತಭಿಷ, ಮೂಲ ಈ ನಕ್ಷತ್ರಗಳಲ್ಲಿ ಬಿತ್ತಿದ ಬೀಜವು ಸಂಪೂರ್ಣ ಫಲ ಪ್ರದವಾಗುವುದು. ರಾಹು ಚಕ್ರದಲ್ಲಿ ರಾಹುಗತನಕ್ಷತ್ರದಿಂದ ಮುಂದಿನ ಮೂರು ನಕ್ಷತ್ರಗಳು ಮೂರ್ಧಸ್ಥಾನದಲ್ಲಿರುವುವು. ಅವು ಧಾನ್ಯನಾಶಕಗಳು. ಕಂಠಸ್ಥಾನದಲ್ಲಿರುವ ಮುಂದಿನ ಮೂರು ನಕ್ಷತ್ರಗಳು ಕೃಷ್ಣವರ್ಣವನ್ನುಂಟು ಮಾಡುವುವು. ಉತ್ತರ ಪಾರ್ಶ್ವದ ೧೨ ಹನ್ನೆರಡು ನಕ್ಷತ್ರಗಳು ವೃದ್ಧಿಪ್ರದ ಗಳು. ಲಾಂಗೂಲದಲ್ಲಿ ಬರುವ ನಾಲ್ಕು ನಕ್ಷತ್ರಗಳು ತಂಡುಲನಾಶಕಗಳಾಗು ವುವು. ನಾಭಿಗತವಾದ ಐದು ನಕ್ಷತ್ರಗಳು ವಹ್ನಿಪ್ರದಗಳು. ಬೀಜವನ್ನು ಬಿತ್ತುವ ಕಾರ್ಯದಲ್ಲಿ ಈ ನಕ್ಷತ್ರಗಳ ಫಲಾಫಲಗಳನ್ನು ಯೋಚಿಸಬೇಕು.

೧೮೯-೧೯೦. ಸ್ಥಿರನಕ್ಷತ್ರಗಳು, ಪುನರ್ವಸು, ಆಶ್ಲೇಷಾ, ರೇವತೀ, ಮಘಾ, ಸ್ವಾತೀ ಇವುಗಳಲ್ಲಿ ರೋಗದಿಂದ ಎಚ್ಚೆತ್ತವನಿಗೆ ಸ್ನಾನಮಾಡಿಸ ಬಾರದು. ಆಶ್ಲೇಷಾ, ಮೃಗಶಿರ, ಜ್ಯೇಷ್ಠ, ಉತ್ತರಾತ್ರಯ, (ಅಂದರೆ ಉತ್ತರ, ಉತ್ತರಾಷಾಢ, ಉತ್ತರಾಭಾದ್ರ,) ಅನೂರಾಧ, ಶತಭಿಷ, ಪುಷ್ಯ, ಹಸ್ತ, ರೇವತೀ ಈ ನಕ್ಷತ್ರಗಳಲ್ಲಿ ನಾಟ್ಯಾರಂಭವು ಶ್ರೇಷ್ಠವೆನಿಸುವುದು.

ಪೂರ್ವಾರ್ಧಯುಂಜಿ ಷಡ್ಭಾನಿ ಪೌಷ್ಣಭಾದುದಭಾತ್ತತಃ ।
ಮಧ್ಯಯುಂಜಿ ದ್ವಾದಶರ್ಕ್ಷಾಣೀಂಪ್ರಭಾನ್ನವಭಾನಿ ಚ ॥ ೧೯೧ ॥

ಪರಾರ್ಧಯುಂಜಿ ಕ್ರಮಶಃ ಸಂಪ್ರೀತಿರ್ದಮ್ಪತೇರ್ಮಿಥಃ ।
ಜಘನ್ಯಾಸ್ತೋಯಪಾದಾರ್ದ್ರಾಹಿ ಪವನಾಂತಕನಾಕಪಾಃ ॥ ೧೯೨ ॥

ಕ್ರಮಾದಿತಿದ್ವಿದೈವತ್ಯಾ ಬೃಹತ್ತಾರಾಃ ಪರಾಃ ಸಮಾಃ ।
ತಾಸಾಂ ಪ್ರಮಾಣಘಟಿಕಾಸ್ತ್ರಿಂಶನ್ನವತ್ಯಶೀತಯಃ ॥ ೧೯೩ ॥

ಕ್ರಮಾದಭ್ಯುದಿತೇ ಚಂದ್ರೇ ನಯುತ್ಯರ್ಧಸಮಾನಿ ಚ ।
ಅಶ್ವಗ್ನೀಂದ್ವೀಜ್ಯನೈರ್ಋತ್ಯತ್ವಾಷ್ಟ್ರಜತ್ರ್ಯುತ್ತರಾಭವಾಃ ॥ ೧೯೪ ॥

೧೯೧-೧೯೩. ರೇವತಿಯಿಂದ ಹಿಡಿದು ಆರು ನಕ್ಷತ್ರಗಳಿಗೆ ಪೂರ್ವಾರ್ಧಯುಂಜಿಯೆಂದೂ, ಅಲ್ಲಿಂದ ಹನ್ನೆರಡು ನಕ್ಷತ್ರಗಳು ಮಧ್ಯಯುಂಜಿಯೆಂದೂ, ಮುಂದಿನ ಒಂಭತ್ತು ನಕ್ಷತ್ರಗಳು ಪರಾರ್ಧಯುಂಜಿಯೆಂದೂ ಸಂಜ್ಞೆಗಳನ್ನು ಹೊಂದಿರುವುವು. ದಂಪತಿಗಳ ನಕ್ಷತ್ರಗಳು ಒಂದೇ ಅಂಶದಲ್ಲಿ ಸೇರಿದವುಗಳಾದರೆ ಅನ್ಯೋನ್ಯಾನುರಾಗಿಗಳಾಗಿರುವರೆಂದು ತಿಳಿಯಬೇಕು. ಶತಭಿಷಾ, ಆರ್ದ್ರಾ, ಆಶ್ಲೇಷಾ, ಸ್ವಾತೀ, ಭರಣಿ, ಜ್ಯೇಷ್ಠಾ ಈ ನಕ್ಷತ್ರಗಳಿಗೆ ಜಘನ್ಯನಕ್ಷತ್ರಗಳೆಂದೂ, ಪುನರ್ವಸು, ವಿಶಾಖ ಈ ನಕ್ಷತ್ರಗಳಿಗೆ ಬೃಹತ್ತಾರೆಗಳೆಂದೂ, ಉಳಿದ ನಕ್ಷತ್ರಗಳಿಗೆಲ್ಲಾ ಸಮನಕ್ಷತ್ರಗಳೆಂದೂ ಸಂಜ್ಞೆಯಿದೆ. ಕ್ರಮವಾಗಿ ಆ ನಕ್ಷತ್ರಗಳಲ್ಲಿ ೩೦ ಮೂವತ್ತು ೯೦ ತೊಂಭತ್ತು ೮೦ ಎಂಭತ್ತು ಈ ಘಳಿಗೆಗಳ ಪರ್ಯಂತ ಚಂದ್ರನು ಸಂಚರಿಸುವಷ್ಟು ಕಾಲಪರಿಮಾಣಕ್ಕೆ ಮೇಲಿನ ಸಂಜ್ಞೆಗಳು ಸಲ್ಲುತ್ತವೆ.

೧೯೪-೨೦೦. ಅಶ್ವಿನೀ, ಮೃಗಶಿರ, ಪುಷ್ಯ, ಮೂಲ, ಚಿತ್ರ, ಉತ್ತರಾತ್ರಯ, (ಉತ್ತರ, ಉತ್ತರಾಷಾಢ, ಉತ್ತರಾಭಾದ್ರ,) ಮಖ, ವಿಶಾಖ, ಅಭಿಜಿತ್ ಈ ನಕ್ಷತ್ರಗಳಿಗೆ ಕುಲನಕ್ಷತ್ರಗಳೆಂದು ಹೆಸರು. ರೋಹಿಣೀ, ಜ್ಯೇಷ್ಠಾ, ಪುನರ್ವಸು, ಸ್ವಾತೀ, ರೇವತೀ, ಹಸ್ತ, ಶ್ರವಣ, ಆಶ್ಲೇಷ, ಭರಣೀ ಈ ನಕ್ಷತ್ರಗಳಿಗೆ ಅಕುಲನಕ್ಷತ್ರಗಳೆಂದು ಹೆಸರು. ಉಳಿದ ನಕ್ಷತ್ರಗಳೆಲ್ಲಾ ಕುಲಾಕುಲಗಳೆನಿಸುವುವು. ಈ ಕುಲಸಂಜ್ಞಕವಾದ ನಕ್ಷತ್ರಗಳಲ್ಲಿ ರಾಜನು ದಿಗ್ವಿಜ

ಪಿತೃದ್ವಿದೈವವಸ್ವಾಖ್ಯಾಸ್ತಾರಾಃ ಸ್ಯುಃ ಕುಲಸಂಜ್ಞಿತಾಃ ।
ಧಾತೃಜ್ಯೇಷ್ಠಾದಿತಿಸ್ವಾತೀಪೌಷ್ಣಾರ್ಕಹರಿದೇವತಾಃ ॥ ೧೯೫ ॥

ಅಜಾಹ್ಯಂತಕಭೌಜಂಗತಾರಾಶ್ಚ್ಯೈವಾಕುಲಾಹ್ವಯಾಃ ।
ಶೇಷಾಃ ಕುಲಾಕುಲಾಸ್ತಾರಾಸ್ತಾಸಾಂ ಮಧ್ಯೇ ಕುಲೋಡುಷು ॥ ೧೯೬ ॥

ಪ್ರಯಾತಿ ಯದಿ ಭೂಪಾಲಸ್ತದಾಪ್ನೋತಿ ಪರಾಜಯಂ ।
ಭೇಷೂಪಕುಲಸಂಜ್ಞೇಷು ಜಯಮಾಪ್ನೋತಿ ನಿಶ್ಚಿತಂ ॥ ೧೯೭ ॥

ಸಂಧಿರ್ವಾಪಿ ತಯೋಃ ಸಾಮ್ಯಂ ಕುಲಾಕುಲಗಣೋಡುಷು ।
ಅರ್ಕಾರ್ಕಿಭೌಮವಾರೇ ಚೇದ್ಭದ್ರಾಯಾ ವಿಷಮಾಂಘ್ರಿಭಂ ॥ ೧೯೮ ॥

ತ್ರಿಪುಷ್ಕರಂ ತ್ರಿಗುಣದಂ ದ್ವಿಗುಣಂ ಯಮಲಾಹಿಭಂ ।
ದದ್ಯಾತ್ತದ್ದೋಷನಾಶಾಯ ಗೋತ್ರಯಂ ಮೂಲ್ಯಮೇವ ವಾ ॥ ೧೯೯ ॥

ದ್ವಿಪುಷ್ಕರೇ ದ್ವಯಂ ದದ್ಯಾನ್ನ ದೋಷಸ್ತ್ವೃಕ್ಷಭೇಽಪಿ ವಾ ।
ಕ್ರೂರವಿದ್ಧೋ ಯುತೋ ವಾಪಿ ಪುಷ್ಯೋ ಯದಿ ಬಲಾನ್ವಿತಃ ॥ ೨೦೦ ॥

ಯಾರ್ಥವಾಗಿ ಪ್ರಯಾಣವಾಡಿದರೆ ಪರಾಜಯವನ್ನೈದುವನು. ಅಕುಲ (ಉಪಕುಲ) ನಕ್ಷತ್ರಗಳಲ್ಲಿ ದಿಗ್ವಿಜಯಕ್ಕೆ ಹೊರಟರೆ ವಿಜಯವು ಲಭಿಸುವುದು. ಕುಲಾಕುಲಸಂಜ್ಞಕವಾದ ನಕ್ಷತ್ರಗಳಲ್ಲಿ ಹೊರಟರೆ ಸಂಧಿಯೊದಗುವುದು. ಸೂರ್ಯ, ಶನಿ ಮತ್ತು ಕುಜ ಈ ವಾರಗಳಲ್ಲಿ ಭದ್ರಾಕರಣವು ವಿಷಮಪಾದಯುಕ್ತವಾದ ನಕ್ಷತ್ರಗಳಿಂದ ಕೂಡಿದ್ದಾದರೆ ಫಲವು ತ್ರಿಗುಣವಾಗಿಯೂ, ಪಾದದ್ವಯದಿಂದ ಕೂಡಿದ ನಕ್ಷತ್ರ ಮತ್ತು ಆಶ್ಲೇಷೆಯಿಂದ ಸಂಬಂಧಿತವಾದರೆ ದ್ವಿಗುಣವಾದ ಫಲವೂ ದೊರಕುವುದು. ತ್ರಿಪುಷ್ಕರ ದೋಷನಿವಾರಣೆಗಾಗಿ ಮೂರು ಗೋದಾನ ಅಥವ ತನ್ಮೂಲ್ಯವನ್ನಾಗಲೀ, (ಅಂದರೆ ಆ ಮೂರು ಹಸುಗಳಿಗೆ ಬಾಳುವ ಸರಿಯಾದ ಬೆಲೆಯನ್ನಾಗಲೀ) ದಾನವಾಡಬಹುದು, ದ್ವಿಪುಷ್ಕರ ದೋಷಶಮನಾರ್ಥವಾಗಿ ಎರಡು ಗೋದಾನ ವಾಡಬೇಕು ಅಥವ ಆ ಎರಡು ಗೋಮೂಲ್ಯವನ್ನಾದರೂ ಕೊಡಬೇಕು. ಪುಷ್ಯನಕ್ಷತ್ರವು ಕ್ರೂರಗ್ರಹಾಕ್ರಾಂತವಾದರೂ ಬಲಾನ್ವಿತವಾಗಿದ್ದರೆ ಪಾಣಿಗ್ರಹಣವೊಂದನ್ನು ಬಿಟ್ಟು ಉಳಿದ ಎಲ್ಲಾ ಶುಭಕರ್ಮಗಳನ್ನೂ ನೆರವೇರಿಸಬಹುದು

ವಿನಾ ಪಾಣಿಗ್ರಹಂ ಸರ್ವಂ ಮಂಗಲೇಷ್ವಿಷ್ಟದಃ ಸದಾ ।
ರಾಮಾಗ್ನಿ ಋತುಬಾಣಾಗ್ನಿ ಭೂವೇದಾಗ್ನಿ ಶರೇಷು ಚ ॥ ೨೦೧ ॥

ನೇತ್ರಬಾಹುಶರೇಂದ್ವಿಂದುಬಾಹುವೇದಾಗ್ನಿ ಸಂಕರಾಃ ।
ವೇದನೇತ್ರಾಬ್ಧ್ಯಗ್ನಿಶತಬಾಹುನೇತ್ರರದಾಃ ಕ್ರಮಾತ್ ॥ ೨೦೨ ॥

ತಾರಾಸಂಖ್ಯಾಶ್ಚ ವಿಜ್ಞೇಯಾ ದಸ್ರಾದೀನಾಂ ಪೃಥಕ್ ಪೃಥಕ್ ।
ಯಾ ದೃಶ್ಯಂತೇ ದೀಪ್ತತಾರಾಃ ಸ್ವಗಣೇ ಯೋಗತಾರಕಾಃ ॥ ೨೦೩ ॥

ವೃಷೋ ವೃಕ್ಷೋಽಶ್ವಭಾಯಾಮ್ಯಧಿಷ್ಣ್ಯೇ ಯಮಕರಸ್ತರುಃ ।
ಉಡುಂಬರಶ್ಚಾಗ್ನಿಧಿಷ್ಣ್ಯೇ ರೋಹಿಣ್ಯಾಂ ಜಂಬುಕಸ್ತರುಃ ॥ ೨೦೪ ॥

ಇಂದುಭಾತ್ಖದಿರೋ ಜಾತಃ ಕೃಷ್ಣಪ್ಲಕ್ಷಶ್ಚ ರೌದ್ರಭಾತ್ ।
ಸಂಭೂತೋಽದಿತಿಭಾದ್ವಂಶಃ ಪಿಪ್ಪಲಃ ಪುಷ್ಯಸಂಭವಃ ॥ ೨೦೫ ॥

೨೦೧-೨೦೩. ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಕ್ರಮವಾಗಿ ಅಶ್ವಿನಿಯಲ್ಲಿ (೩) ಮೂರು, ಭರಣಿಯಲ್ಲಿ (೩) ಮೂರು, ಹೀಗೆ ಕೃತ್ತಿಕಾದಿಗಳಲ್ಲಿ (೫) ಐದು (೬) ಆರು (೩) ಮೂರು (೧) ಒಂದು (೪) ನಾಲ್ಕು (೩) ಮೂರು (೫) ಐದು (೫) ಐದು (೨) ಎರಡು (೨) ಎರಡು (೫) ಐದು (೧) ಒಂದು (೧) ಒಂದು (೨) ಎರಡು (೪) ನಾಲ್ಕು (೩) ಮೂರು (೪) ನಾಲ್ಕು (೨) ಎರಡು (೪) ನಾಲ್ಕು (೩) ಮೂರು (೨) ಎರಡು (೧೦೦) ನೂರು (೨) ಎರಡು (೩) ಮೂರು (೩೨) ಮೂವತ್ತೆರಡು. ಈ ಸಂಖ್ಯೆಯುಳ್ಳ ನಕ್ಷತ್ರಗಳು ಕಂಡುಬರುತ್ತವೆ. ಅಷ್ಟು ಸಂಖ್ಯೆಯ ನಕ್ಷತ್ರಗಳಲ್ಲಿ ಯಾವ ನಕ್ಷತ್ರವು ತುಂಬಾ ಪ್ರಕಾಶಮಾನವಾಗಿ ಕಂಡು ಬರುವುದೋ ಅದನ್ನೇ ಯೋಗತಾರೆಯೆಂದು ವ್ಯವಹರಿಸುವರು.

೨೦೪-೨೧೦. ಈಗ ಅಶ್ವಿನ್ಯಾದಿ ನಕ್ಷತ್ರಗಳಿಗೆ ಸಂಬಂಧಿಸಿದ ವೃಕ್ಷಗಳು ನಿರೂಪಿಸಲ್ಪಡುವುವು.

(೧) ಅಶ್ವಿನಿಗೆ— ವೃಷವೃಕ್ಷ— ಬಸವನಪಾದದಮರ
(೨) ಭರಣಿಗೆ— ಯಮಕರವೃಕ್ಷ—
(೩) ಕೃತ್ತಿಕೆಗೆ— ಉದುಂಬರವೃಕ್ಷ— ಅತ್ತಿಮರ
(೪) ರೋಹಿಣಿಗೆ— ಜಂಬುಕವೃಕ್ಷ— ನೇರಳೆಮರ

ಸರ್ಪಧಿಷ್ಣ್ಯೇ ನಾಗವೃಕ್ಷೋ ವಟಃ ಪಿತೃಭಸಂಭವಃ ।
ಪಾಲಾಶೋ ಭಾಗ್ಯಭಾಜ್ಜಾತಃ ಅಕ್ಷಶ್ಚಾರ್ಯಮಸಂಭವಃ ॥ ೨೦೨ ॥

ಅರಿಷ್ಟವೃಕ್ಷೋ ರವಿಭಾಚ್ಛ್ರೀವೃಕ್ಷಸ್ತ್ವಾಷ್ಟ್ರಸಂಭವಃ ।
ಸ್ವಾತ್ಯೃಕ್ಷಜೋಽರ್ಜುನೋ ವೃಕ್ಷೋ ದ್ವಿದೈವತ್ಯಾದ್ವಿಕಂಕತಃ ॥ ೨೦೭ ॥

ಮಿತ್ರಭಾದ್ಬಗಲೋ ಜಾತೋ ವಿಷ್ಟಿಃ ಪೌರಂದರರ್ಕ್ಷಜಃ ।
ಸರ್ಜವೃಕ್ಷೋ ಮೂಲಭಾಚ್ಚ ವಂಜುಲೋ ವಾರಿಧಿಷ್ಣ್ಯಜಃ ॥ ೨೦೮ ॥

ಪನಸೋ ವೈಶ್ವಭಾಜ್ಜಾತಶ್ಚಾರ್ಕವೃಕ್ಷಶ್ಚ ವಿಷ್ಣುಭಾತ್ ।
ವಸುಧಿಷ್ಣ್ಯಚ್ಛಮೀವೃಕ್ಷಃ ಕದಂಬೋ ವಾರಣರ್ಕ್ಷಜಃ ॥ ೨೦೯ ॥

(೫) ಮೃಗಶಿರೆಗೆ—ಖದಿರವೃಕ್ಷ—ಕಗ್ಗಲಿಮರ
(೬) ಆದ್ರ್ರಾಕ್ಕೆ—ಕೃಷ್ಣಪ್ಲಕ್ಷ—ಬಸುರೀಮರ
(೭) ಪುನರ್ವಸುವಿಗೆ—ವಂಶ—ಬಿದಿರು
(೮) ಪುಷ್ಯಕ್ಕೆ—ಪಿಪ್ಪಲವೃಕ್ಷ—ಅರಳಿಮರ
(೯) ಆಶ್ಲೇಷಾಕ್ಕೆ—ನಾಗವೃಕ್ಷ—ನಾಗಸಂಪಿಗೆಮರ
(೧೦) ಮಖಾಕ್ಕೆ—ವಟವೃಕ್ಷ—ಆಲದಮರ
(೧೧) ಪುಬ್ಬಾನಕ್ಷತ್ರಕ್ಕೆ—ಪಲಾಶವೃಕ್ಷ—ಮುತ್ತುಗ
(೧೨) ಉತ್ತರೆಗೆ—ಅಕ್ಷವೃಕ್ಷ—ತಾರೇಗಿಡ
(೧೩) ಹಸ್ತಕ್ಕೆ—ಅರಿಷ್ಟವೃಕ್ಷ—ಬೇವಿನಮರ
(೧೪) ಚಿತ್ತಕ್ಕೆ—ಶ್ರೀವೃಕ್ಷ—ಬಿಲ್ವದಮರ
(೧೫) ಸ್ವಾತಿಗೆ—ಅರ್ಜುನವೃಕ್ಷ—ಕೆಂಪುಮತ್ತೀಗಿಡ
(೧೬) ವಿಶಾಖೆಗೆ—ವಿಕಂಕತವೃಕ್ಷ—ಹುಳೀಬೇಲದಮರ
(೧೭) ಅನೂರಾಧೆಗೆ—ಬಗಲವೃಕ್ಷ—
(೧೮) ಜ್ಯೇಷ್ಠೆಗೆ—ವಿಷ್ಟಿವೃಕ್ಷ—
(೧೯) ಮೂಲಕ್ಕೆ—ಸರ್ಜವೃಕ್ಷ—
(೨೦) ಪೂರ್ವಾಷಾಢಕ್ಕೆ—ವಂಜುಲವೃಕ್ಷ ಅಥವ ಹೊಂಗೇಮರ

ಅಜಾಹೇರ್ಬ್ರೂತವೃಕ್ಷೋಽಥದ್ವಿಧ್ಯಜಃ ಪಿಚುಮಂದಕಃ ।
ಮಧುವೃಕ್ಷಃ ಪೌಷ್ಣ್ಯಧಿಷ್ಣ್ಯಾದ್ಧಿಷ್ಣ್ಯವೃಕ್ಷಾಃ ಪ್ರಕೀರ್ತಿತಾಃ ॥ ೨೧೦ ॥

ಯಸ್ಮಿನ್ಧಿಷ್ಣ್ಯೇ ಶನೈಶ್ಚರೋ ಧಿಷ್ಣ್ಯೇ ತದ್ವೃಕ್ಷೋಽರ್ಚ್ಯಃ ಪ್ರಯತ್ನತಃ ।
ಯೋಗೇಶಾ ಯಮವಿಶ್ವೇಂದುಧಾತೃಜೀವನಿಶಾಕರಾಃ ॥ ೨೧೧ ॥

ಇಂದ್ರಶೋಯಾಹಿವಹ್ನ್ಯರ್ಕಭೂಮಿರುದ್ರಕತೋಯಪಾಃ ।
ಗಣೇಶರುದ್ರಧನದತ್ವಷ್ಟೃಮಿತ್ರಷಡಾನನಾಃ ॥ ೨೧೨ ॥

(೨೧) ಉತ್ತರಾಷಾಢಕ್ಕೆ—ಪನಸವೃಕ್ಷ—ಹಲಸಿನಮರ
(೨೨) ಶ್ರವಣಕ್ಕೆ—ಅರ್ಕವೃಕ್ಷ—ಎಕ್ಕದಗಿಡ
(೨೩) ಧನಿಷ್ಠೆಗೆ—ಶಮೀವೃಕ್ಷ—ಬನ್ನೀಮರ
(೨೪) ಶತಭಿಷೆಗೆ—ಕದಂಬವೃಕ್ಷ—ಈಚಲುಮರ
(೨೫) ಪೂರ್ವಾಭಾದ್ರೆಗೆ—ಚೂತವೃಕ್ಷ—ಮಾವಿನಮರ
(೨೬) ಉತ್ತರಾಭಾದ್ರೆಗೆ—ಪಿಚುಮಂದವೃಕ್ಷ—ಬೇವಿನಮರ
(೨೭) ರೇವತಿಗೆ—ಮಧುವೃಕ್ಷ—ಹಿಪ್ಪೇಮರ

ಈರೀತಿಯಾಗಿ ೨೭ ಇಪ್ಪತ್ತೇಳು ನಕ್ಷತ್ರಗಳಿಗೂ ಬೇರೆಬೇರೆ ಮರಗಳು ಹೇಳಲ್ಪಟ್ಟಿವೆಯೆಂದು ತಿಳಿಯಬೇಕು.

೨೧೧-೨೧೩. ಶನಿಯು ಯಾವ ನಕ್ಷತ್ರದಲ್ಲಿ ಸಂಚರಿಸುವನೋ ಆ ನಕ್ಷತ್ರಕ್ಕೆ ಹೇಳಿರುವ ವೃಕ್ಷವನ್ನು ಪೂಜಿಸುವುದು ಶ್ರೇಯಸ್ಕರವಾದುದು. ಈ ರೀತಿ ೨೭ ಇಪ್ಪತ್ತೇಳು ನಕ್ಷತ್ರಗಳಿಗೂ ಯೋಗಕಾರಕರು ಕ್ರಮವಾಗಿ ಹೇಳಲ್ಪಟ್ಟಿರುವರು :—

೧. ಅಶ್ವಿನೀ ನಕ್ಷತ್ರಕ್ಕೆ .... ಅಶ್ವಿನೀದೇವತೆಗಳು
೨. ಭರಣಿಗೆ .... ಯಮ
೩. ಕೃತ್ತಿಕೆಗೆ .... ವಿಶ್ವೇದೇವತೆಗಳು
೪. ರೋಹಿಣಿಗೆ .... ಚಂದ್ರ
೫. ಮೃಗಶಿರೆಗೆ .... ಧಾತೃ

**ಸಾವಿತ್ರೀ ಕಮಲಾ ಗೌರೀ ನಾಸತ್ಯೌ ಪಿತರೋಽದಿತಿಃ ।**
**ವೈಧೃತಿಶ್ಚ ವ್ಯತೀಪಾತೋ ಮಹಾಪಾತಾವುಭೌ ಸದಾ ॥ ೨೧೩ ॥**

| | | |
|---|---|---|
| ೬. ಆರಿದ್ರಾಕ್ಕೆ | .... | ಜೀವನು (ಗುರುವು) |
| ೭. ಪುನರ್ವಸು | .... | ನಿಶಾಕರ |
| ೮. ಪುಷ್ಯಕ್ಕೆ | .... | ಇಂದ್ರ |
| ೯. ಆಶ್ಲೇಷಾ | .... | ತೋಯ |
| ೧೦. ಮಘಾ ನಕ್ಷತ್ರಕ್ಕೆ | .... | ಸರ್ಪ |
| ೧೧. ಪುಬ್ಬೆಗೆ | .... | ವಹ್ನಿ |
| ೧೨. ಉತ್ತರೆಗೆ | .... | ಅರ್ಕ |
| ೧೩. ಹಸ್ತಕ್ಕೆ | .... | ಭೂಮಿ |
| ೧೪. ಚಿತ್ರೆಗೆ | .... | ರುದ್ರ |
| ೧೫. ಸ್ವಾತೀ | .... | ವರುಣ |
| ೧೬. ವಿಶಾಖೆಗೆ | .... | ಗಣೇಶ |
| ೧೭. ಅನೂರಾಧೆಗೆ | .... | ರುದ್ರ |
| ೧೮. ಜ್ಯೇಷ್ಠಕ್ಕೆ | .... | ಕುಬೇರ (ಧನದ) |
| ೧೯. ಮೂಲಾ | ... | ತ್ವಷ್ಟಾ |
| ೨೦. ಪೂರ್ವಾಷಾಢಕ್ಕೆ | .... | ಮಿತ್ರ |
| ೨೧. ಉತ್ತರಾಷಾಢ | .... | ಷಣ್ಮುಖ |
| ೨೨. ಶ್ರವಣ | .... | ಸಾವಿತ್ರೀ |
| ೨೩. ಧನಿಷ್ಠ | .... | ಕಮಲಾ |
| ೨೪. ಶತಭಿಷ | .... | ಗೌರೀ |
| ೨೫. ಪೂರ್ವಾಭಾದ್ರ | .... | ಪಿತೃಗಳು |
| ೨೬. ಉತ್ತರಾಭಾದ್ರ | .... | ಅದಿತಿ |
| ೨೭. ರೇವತಿ | .... | ಪೂಷಾ |

ಈರೀತಿಯಾಗಿ ದೇವತೆಗಳು ನಕ್ಷತ್ರಗಳಿಗೆ ಯೋಗಕಾರಕರಾಗಿರುವರು. ವೈಧೃತಿ ಮತ್ತು ವ್ಯತೀಪಾತಗಳು ಮಹಾಪಾತಗಳೆಂದು ವ್ಯವಹರಿಸಲ್ಪಡುವುವು. (ಹಿಂದೆ ಹೇಳಿದ ಯೋಗಕಾರಕರುಗಳಿಗೆ ಸ್ವಲ್ಪ ವಿರುದ್ಧವಾಗಿ ಕೆಲವು ಗ್ರಂಥಗಳಲ್ಲಿ ಕಾರಕತ್ವವನ್ನು ಹೇಳಿದೆ).

ಪರಿಘಸ್ಯ ಚ ಪೂರ್ವಾರ್ಧಂ ಸರ್ವಕಾರ್ಯೇಷು ಗರ್ಹಿತಂ ।
ವಿಷ್ಕಂಭವತ್ತ್ಯೋಸ್ತಿಸ್ರಃ ಷಡ್ವಾ ಗಂಡಾತಿಗಂಡಯೋಃ ॥ ೨೧೪ ॥

ವ್ಯಾಘಾತೇ ನವ ಶೂಲೇ ತು ಪಂಚನಾಡ್ಯೋ ಹಿ ಗರ್ಹಿತಾಃ ।
ಅದಿತೀಂದುಮಘಾಹ್ಯಶ್ವಮೂಲಮೈತ್ರೇಜ್ಯಭಾನಿ ಚ ॥ ೨೧೫ ॥

ಜ್ಞೇಯಾನಿ ಸಹಚಿತ್ರಾಣಿ ಮೂರ್ಧಭಾನಿ ಯಥಾಕ್ರಮಂ ।
ಲಿಖೇದೂರ್ಧ್ವಗತಾಮೇಕಾಂ ತಿರ್ಯಗ್ರೇಖಾಸ್ತ್ರಯೋದಶ ॥ ೨೧೬ ॥

ತತ್ರ ಖಾರ್ಜೂರಿಕೇ ಚಕ್ರೇ ಕಥಿತಂ ಮೂರ್ಧ್ನಿ ಭಂ ನ್ಯಸೇತ್ ।
ಭಾನ್ಯೇಕರೇಖಾಗತಯೋಃ ಸೂರ್ಯಾಚಂದ್ರಮಸೋರ್ಮಿಥಃ ॥ ೨೧೭ ॥

ಏಕಾರ್ಗಲೋ ದೃಷ್ಟಿಪಾತಶ್ಚಾಭಿಜಿದ್ವರ್ಜಿತಾನಿ ವೈ ।
ವಿನಾಡೀಭಿರ್ದ್ವಾದಶಭೀ ರಹಿತಂ ಘಟಿಕಾದ್ವಯಂ ॥ ೨೧೮ ॥

೨೧೪-೨೧೮. ಪರಿಘಯೋಗದ ಪೂರ್ವಾರ್ಧವೂ, ವಿಷ್ಕಂಭಯೋಗದ ಮೊದಲುಭಾಗದ ಮೂರು ಘಳಿಗೆಯೂ, ಗಂಡ ಮತ್ತು ಅತಿಗಂಡಯೋಗಗಳಲ್ಲಿ ಆರುಘಳಿಗೆಗಳೂ, ವ್ಯಾಘಾತದಲ್ಲಿ (೯) ಒಂಭತ್ತು ಘಳಿಗೆಯೂ, ಶೂಲದಲ್ಲಿ (೫) ಘಳಿಗೆಯೂ ತ್ಯಾಜ್ಯವಾದುವುಗಳೆಂದು ಹೇಳಿದೆ. ಖಾರ್ಜೂರಿಕಾಚಕ್ರದಲ್ಲಿ ಅಂದರೆ ಖರ್ಜೂರಪತ್ರಾಕೃತಿಯಲ್ಲಿ ಒಂದು ಚಕ್ರವನ್ನು ಬರೆದು ಅದರಲ್ಲಿ ಊರ್ಧ್ವಾಧೋಭಾಗಗತವಾಗಿ ಒಂದು ರೇಖೆಯನ್ನೂ, ಹದಿಮೂರು ತಿರ್ಯಗ್ರೇಖೆಗಳನ್ನೂ ಬರೆದು ಮೇಲ್ಭಾಗದಲ್ಲಿ ಅಶ್ವಿನೀನಕ್ಷತ್ರವನ್ನೂ ಉಳಿದ ಇಪ್ಪತ್ತಾರು ಸ್ಥಾನಗಳಲ್ಲಿ ಭರಣ್ಯಾದಿಯಾಗಿ ಅಭಿಜಿತ್ತನ್ನು ಬಿಟ್ಟು ಪ್ರದಕ್ಷಿಣಾಕಾರವಾಗಿ ನಕ್ಷತ್ರಗಳನ್ನು ರೇಖೆಯ ಎರಡು ಪಕ್ಕಗಳಲ್ಲಿಯೂ ಬರೆಯಬೇಕು. ಹೀಗೆ ಬಂದ ಏಕರೇಖಾಗತವಾದ ಎರಡು ನಕ್ಷತ್ರಗಳಲ್ಲಿ ಸೂರ್ಯಚಂದ್ರರು ಇದ್ದದ್ದೇ ಆದರೆ ಅವರಿಗೆ ದೃಷ್ಟಿಪಾತವಿರುವುದೆಂದು ತಿಳಿದು ಆ ದಿನದಲ್ಲಿ ಯಾವ ಶುಭ ಕರ್ಮವನ್ನೂ ಮಾಡಬಾರದು. ಒಂದುವೇಳೆ ಮಾಡಬೇಕಾದರೂ (೨-೧೨) ಎರಡುಘಳಿಗೆ ಮತ್ತು ಹನ್ನೆರಡು ವಿಘಳಿಗೆಗಳ ಕಾಲ ತ್ಯಾಜ್ಯಘಟಿಯೆಂದು ತಿಳಿದು ಆ ಕಾಲವನ್ನು ಬಿಟ್ಟು ಮುಂದಿನ ಘಳಿಗೆಗಳಲ್ಲಿ ಕಾರ್ಯ ಮಾಡಬೇಕು.

**ಯೋಗಂ ಪ್ರಕರಣಂ ಯೋಗಾಃ ಕ್ರಮಾತ್ತು ಸಪ್ತವಿಂಶತಿಃ ।**
**ಇಂದ್ರಃ ಪ್ರಜಾಪತಿರ್ಮಿತ್ರಸ್ತ್ವಷ್ಟಾಭೂಹರಿರೀರಿತಾಃ ॥ ೨೧೯ ॥**

**ಕೀನಾಶಃ ಕಲಿರುದ್ರಾಖ್ಯೋ ತಿಥ್ಯರ್ಧಾಂಶಾಸ್ತ್ವಹಿರ್ಮರುತ್ ।**
**ಬವಾದಿವಣಿಜಾಂತಾನಿ ಶುಭಾನಿ ಕರಣಾನಿ ಷಟ್ ॥ ೨೨೦ ॥**

**ಪರೀತಾ ವಿಪರೀತಾ ವಾ ವಿಷ್ಟಿರ್ನೇಷ್ಟಾ ತು ಮಂಗಲೇ ।**
**ಮುಖೇ ಪಂಚ ಗಲೇ ಚೈಕಾ ವಕ್ಷಸ್ಯೇಕಾದಶ ಸ್ಮೃತಾಃ ॥ ೨೨೧ ॥**

**ನಾಭೌ ಚತಸ್ರಃ ಷಟ್ಕಟ್ಯಾಂ ತಿಸ್ರಃ ಪುಚ್ಛಾಖ್ಯನಾಡಿಕಾಃ ।**
**ಕಾರ್ಯಹಾನಿರ್ಮುಖೇ ಮೃತ್ಯುರ್ಗಲೇ ವಕ್ಷಸಿ ನಿಸ್ವತಾ ॥ ೨೨೨ ॥**

೨೧೯-೨೨೩. ನಕ್ಷತ್ರಗಳಂತೆಯೇ ವಿಷ್ಕಂಭಾದಿ ೨೭ ಇಪ್ಪತ್ತೇಳು ಯೋಗಗಳಿವೆ. (ಅವು ಯಾವುವೆಂದರೆ (೧) ವಿಷ್ಕಂಭ (೨) ಪ್ರೀತಿ (೩) ಆಯುಷ್ಮಾನ್ (೪) ಸೌಭಾಗ್ಯ (೫) ಶೋಭನ (೬) ಅತಿಗಂಡ (೭) ಸುಕರ್ಮ (೮) ಧೃತಿ (೯) ಶೂಲ (೧೦) ಗಂಡ (೧೧) ವೃದ್ಧಿ (೧೨) ಧ್ರುವ (೧೩) ವ್ಯಾಘಾತ (೧೪) ಹರ್ಷಣ (೧೫) ವಜ್ರ (೧೬) ಸಿದ್ಧಿ (೧೭) ವ್ಯತೀಪಾತ (೧೮) ವರೀಯ (೧೯) ಪರಿಘ (೨೦) ಶಿವ (೨೧) ಸಿದ್ಧ (೨೨) ಸಾಧ್ಯ (೨೩) ಶುಭ (೨೪) ಶುಕ್ಲ (೨೫) ಬ್ರಹ್ಮ (೨೬) ಐಂದ್ರ (೨೭) ವೈಧೃತಿ) ಇವುಗಳಲ್ಲದೇ ಹನ್ನೊಂದು ಕರಣಗಳಿವೆ :—

(೧) ಬವ (೨) ಬಾಲವ (೩) ಕೌಲವ (೪) ತೈತುಲ (೫) ಗರಜ (೬) ವಣಿಕ್ (೭) ಭದ್ರ (೮) ಶಕುನಿ (೯) ಚತುಷ್ಪಾತ್ (೧೦) ನಾಗವಾನ್ (೧೧) ಕಿಂಸ್ತುಘ್ನ. ತಿಥ್ಯರ್ಧವೇ ಕರಣವಾಗಿರುವುದು. ಅಂದರೆ ಒಂದು ತಿಥಿಗೆ ಎರಡು ಕರಣಗಳು ಸೇರುತ್ತವೆ. ಬವಾದಿ ಕರಣಗಳಿಗೆ ಕ್ರಮವಾಗಿ (೧) ಇಂದ್ರ (೨) ಪ್ರಜಾಪತಿ (೩) ಮಿತ್ರ (೪) ತ್ವಷ್ಟೃ (೫) ಭೂ (೬) ಹರಿ (೭) ಕೀನಾಶ (೮) ಕಲಿ (೯) ರುದ್ರ (೧೦) ಅಹಿ (೧೧) ಮರುತ್ ಎಂಬುದಾಗಿ ಈ ದೇವತೆಗಳು ಅಧಿಪತಿಗಳಾಗಿರುವರು. ಅವರಲ್ಲಿ ಬವಕರಣದಿಂದ ವಣಿಕ್ಕರಣದ ವರೆಗಿರುವ ಆರು ಶುಭಕರಣಗಳೆನಿಸುವುವು. (ಅಂದರೆ ಬವ, ಬಾಲವ, ಕೌಲವ, ತೈತುಲ,

ಕಟ್ಯಾಮುನ್ಮತ್ತತಾ ನಾಭೌ ಚ್ಯುತಿಃ ಪುಚ್ಛೇ ಧ್ರುವಂ ಜಯಃ ।
ಸ್ಥಿರಾಣಿ ಮಧ್ಯಮಾನ್ಯೇಷಾಂ ಮಧ್ಯನಾಗಚತುಷ್ಪದಾ ॥ ೨೨೩ ॥

ದಿನಾಮುಹೂರ್ತಾ ರುದ್ರಾಹಿ ಮಿತ್ರಪಿತ್ರವಸೂದಕಃ ।
ವಿಶ್ವೇ ವಿಧಾತೃಬ್ರಹ್ಮೇಂದ್ರರುದ್ರಾಗ್ನಿವಸುತೋಯಪಾಃ ॥ ೨೨೪ ॥

ಅರ್ಯಮಾ ಭಗಸಂಜ್ಞಶ್ಚ ವಿಜ್ಞೇಯಾ ದಶ ಪಂಚ ಚ ।
ಈಶಾಜಾ ಪಾದಹಿರ್ಬುಧ್ನ್ಯಯೂಪಾಬ್ಧಿಪವಹ್ನಯಃ ॥ ೨೨೫ ॥

ಧಾತ್ರಿಂದ್ರಾದಿತೀಜ್ಯಾಖ್ಯಾ ವಿಷ್ಣ್ವರ್ಕತ್ವಷ್ಟ್ರವಾಯವಃ ।
ಅಹ್ನಃ ಪಂಚದಶೋ ಭಾಗಸ್ತಥಾ ರಾತ್ರಿಪ್ರಮಾಣತಃ ॥ ೨೨೬ ॥

ಗರಜ ಮತ್ತು ವಣಿಕ್ ಈ ಆರು ಕರಣಗಳು ಶುಭಕರಗಳು) ಯಾವಪಕ್ಷವೇ ಆಗಲೀ ಭದ್ರಾಕರಣವು ಶುಭಕರ್ಮಗಳಿಗೆ ಶ್ರೇಷ್ಠವಾದುದಲ್ಲವು ಈ ವಿಷ್ಟಿಕರಣದಲ್ಲಿ (ಭದ್ರಾಕರಣಕ್ಕೇ ವಿಷ್ಟಿಯೆಂದೂ ಸಂಜ್ಞಾಂತರವುಂಟೆಂದು ತಿಳಿಯಬೇಕು) ಮೊದಲನೆಯ ಐದು ಗಳಿಗೆಗಳು ಮುಖವೆಂದೂ, ಮುಂದಿನ ಒಂದು ಗಳಿಗೆಯು ಕಂಠಭಾಗವೆಂದೂ, ಹನ್ನೊಂದು ಗಳಿಗೆಗಳು ವಕ್ಷೋಭಾಗವೆಂದೂ ನಾಲ್ಕು ಗಳಿಗೆಗಳು ನಾಭಿಯೆಂದೂ, ಆರು ಗಳಿಗೆಗಳು ಕಟಿಭಾಗವೆಂದೂ, ಮೂರು ಗಳಿಗೆಗಳು ಬಾಲವೆಂದೂ ಒಟ್ಟು (೩೦) ಮೂವತ್ತು ಗಳಿಗೆಗಳೂ ಈ ಪ್ರಕಾರದಿಂದ ನಿರ್ದೇಶಿತವಾಗಿವೆ. ಅದರಲ್ಲಿ ಮುಖದಲ್ಲಿ ಕಾರ್ಯಹಾನಿಯೂ, ಗಲದಲ್ಲಿ (ಕಂಠಪ್ರದೇಶದಲ್ಲಿ) ಮೃತ್ಯುವೂ, ವಕ್ಷಸ್ಥಳದಲ್ಲಿ ದಾರಿದ್ರ್ಯವೂ, ಕಟಿಯಲ್ಲಿ ಉನ್ಮತ್ತತೆಯೂ, ನಾಭಿಯಲ್ಲಿ ನಾಶವೂ, ಪುಚ್ಛಭಾಗದಲ್ಲಿ ಜಯವೂ ಲಭಿಸುವುದೆಂದು ತಿಳಿಯಬೇಕು. ಅಂದರೆ ವಿಷ್ಟಿಕರಣದಲ್ಲಿ ತ್ಯಾಜ್ಯಘಟಿಕೆಗಳನ್ನು ಈ ಫಲದಿಂದ ತಿಳಿಯಬೇಕು. ಇನ್ನುಳಿದ ಐದು ಕರಣಗಳು ಸ್ಥಿರಕರಣಗಳಾಗುವುವು.

*೨೨೪–೨೨೬.* ಅಹಃ ಪ್ರಮಾಣವನ್ನು (೧೫) ಹದಿನೈದು ಭಾಗ ಮಾಡಿದರೆ ಒಂದೊಂದು ಭಾಗಕ್ಕೂ ಒಂದೊಂದು ಮುಹೂರ್ತವೆಂದು ಹೆಸರು. ಹೀಗೆ ಹಗಲು (೧೫) ಹದಿನೈದು ಮತ್ತು ರಾತ್ರಿ ಹದಿನೈದು ಮುಹೂರ್ತಗಳು ದೊರ

ಮುಹೂರ್ತಮಾನಂ ಸಾರ್ಧದ್ವಿಘಟಿಕಾಃ ಪರಿಕೀರ್ತಿತಾಃ ।
ಅರ್ಯಮಾ ರಾಕ್ಷಸಬ್ರಾಹ್ಮೌ ಪಿತ್ರಾಗ್ನೇಯೌ ತಥಾಭಿಜಿತ್ ॥ ೨೨೭ ॥

ರಾಕ್ಷಸಾಖ್ಯೌ ಬ್ರಾಹ್ಮಪಿತ್ರ್ಯೌ ಭರ್ಗಾಜಾಂಶಾವಿನಾದಿಷು ।
ವಾರೇಷು ವರ್ಜನೀಯಾಸ್ತೇ ಮುಹೂರ್ತಾಃ ಶುಭಕರ್ಮಸು ॥ ೨೨೮ ॥

ಯೇಷು ಋಕ್ಷೇಷು ಯತ್ಕರ್ಮ ಕಥಿತಂ ನಿಖಿಲಂ ಚ ತತ್ ।
ತದ್ದೈವತ್ಯೇ ಮುಹೂರ್ತೇಽಪಿ ಕಾರ್ಯಂ ಯಾತ್ರಾದಿಕಂ ಸದಾ ॥ ೨೨೯ ॥

ಕುವುವು. ಕ್ರಮವಾಗಿ ಈ ಮೂವತ್ತು ಮುಹೂರ್ತಗಳಿಗೂ ಅಧಿಪತಿಗಳು ಈ ರೀತಿಯಾಗಿ ಬರುವರು :—

(೧) ರುದ್ರ (೨) ಅಹಿ (೩) ಮಿತ್ರ (೪) ಪಿತೃ (೫) ವಸು (೬) ವರುಣ (೭) ವಿಶ್ವೇದೇವತೆಗಳು (೮) ವಿಧಾತೃ (೯) ಬ್ರಹ್ಮ (೧೦) ಇಂದ್ರ (೧೧) ರುದ್ರ (೧೨) ಅಗ್ನಿ (೧೩) ತೋಯಪ (೧೪) ಅರ್ಯಮಾ (೧೫) ಭಗ ಈ ಹದಿನೈದು ಮಂದಿಯೂ ದಿವಾಮುಹೂರ್ತಾಧಿಪತಿಗಳು.

(೧) ಈಶ (೨) ಅಜಾಪಾತ್ (೩) ಅಹಿರ್ಬುಧ್ನ್ಯ (೪) ಯೂಪ (೫) ಅಬ್ಧಿಪ (೬) ವಹ್ನಿ (೭) ಧಾತೃ (೮) ಇಂದ್ರ (೯) ಅದಿತಿ (೧೦) ಇಜ್ಯ (೧೧) ವಿಷ್ಣು (೧೨) ಅರ್ಕ (೧೩) ತ್ವಷ್ಟ್ರು (೧೪) ವಾಯು (೧೫) ಭಗ ಈ ಹದಿನೈದು ಮಂದಿ ದೇವತೆಗಳು ರಾತ್ರಿ ಮುಹೂರ್ತಗಳಿಗೆ ಅಧಿಪತಿಗಳೆಂದೂ ತಿಳಿಯಬೇಕು. ಒಂದು ಮುಹೂರ್ತಕ್ಕೆ ಎರಡೂವರೆ ಗಳಿಗೆಯಂತೆ ಹಗಲಿನಲ್ಲಾಗುವ ಹನ್ನೆರಡು ಮುಹೂರ್ತಗಳಿಗೆ ಕ್ರಮವಾಗಿ (೧) ಅರ್ಯಮ (೨) ರಾಕ್ಷಸ (೩) ಬ್ರಾಹ್ಮ (೪) ಪಿತೃ (೫) ಅಗ್ನಿ (೬) ಅಭಿಜಿತ್ (೭) ರಾಕ್ಷಸ (೮) ರಾಕ್ಷಸ (೯) ಬ್ರಾಹ್ಮ (೧೦) ಪಿತೃ (೧೧) ಭರ್ಗ (೧೨) ಅಜ ಮುಹೂರ್ತಗಳೆಂದು ಹೆಸರು. ಪ್ರತಿವಾರಗಳಲ್ಲಿಯೂ ಬರುವ ದುರ್ಮುಹೂರ್ತಗಳನ್ನು ಶುಭಕರ್ಮಗಳಲ್ಲಿ ತ್ಯಾಜ್ಯವಾದಬೇಕು.

೨೨೯–೨೩೬. ಯಾವ ನಕ್ಷತ್ರದಲ್ಲಿ ಯಾವ ಕರ್ಮವನ್ನಾಚರಿಸಬೇಕೋ ಆ ನಕ್ಷತ್ರಾಧಿಪತಿಯ ಮುಹೂರ್ತವೇ ಆ ಕರ್ಮಕ್ಕೆ ಶ್ರೇಷ್ಠವಾದುದು. ಯಾತ್ರಾದಿಗಳಲ್ಲೂ ಇದನ್ನೇ ಗಮನಿಸಬೇಕು. ಸೂರ್ಯನಿರುವ ನಕ್ಷತ್ರಕ್ಕಿಂತ

ಭೂಕಂಪಃ ಸೂರ್ಯಭಾತ್ಸಪ್ತಮರ್ಕ್ಷೇ ವಿದ್ಯುಚ್ಚ ಪಂಚಮೇ ।
ಶೂಲೋಽಷ್ಟಮೇ ಚ ದಶಮೇ ಶನಿರಷ್ಟಾದಶಂ ತತಃ ॥ ೨೩೦ ॥

ಕೇತುಃ ಪಂಚದಶೇ ದಂಡ ಉಲ್ಕಾ ಏಕೋನ ವಿಂಶತೌ ।
ನಿರ್ಘಾತಯಾತಸಂಜ್ಞಶ್ಚ ಜ್ಞೇಯಃ ಸ ನವಪಂಚಮೇ ॥ ೨೩೧ ॥

ಮೋಹನಿರ್ಘಾತಕಂಪಾಶ್ಚ ಕುಲಿಶಂ ಪರಿವೇಷಣಂ ।
ವಿಜ್ಞೇಯಾ ಏಕವಿಂಶರ್ಕ್ಷಾದಾರಭ್ಯ ಚ ಯಥಾಕ್ರಮಂ ॥ ೨೩೨ ॥

ಚಂದ್ರಯುಕ್ತೇಷು ಭೇಷ್ವೇಷು ಶುಭಕರ್ಮ ನ ಕಾರಯೇತ್ ।
ಸೂರ್ಯಭಾತ್ಸ್ವಪಿತ್ರ್ಯರ್ಕ್ಷಂ ತ್ವಾಷ್ಟ್ರಮಿತ್ರಾಪ್ತಭೇಷು ಚ ॥ ೨೩೩ ॥

ಸವಿಷ್ಣುಭೇಷು ಕ್ರಮಶೋದಸ್ತಭಾಚ್ಚಂದ್ರಸಂಯುತಃ ।
ಧಿಷ್ಣ್ಯೇ ತಾವತಿ ಸತ್ಯತ್ರ ದುಷ್ಟಯೋಗಃ ಪತತ್ಯಸೌ ॥ ೨೩೪ ॥

ಮುಂದಿನ ಏಳನೆಯ ನಕ್ಷತ್ರಕ್ಕೆ ಭೂಕಂಪವೆಂದೂ, ಐದನೆಯದಕ್ಕೆ 'ವಿದ್ಯುತ' ಎಂದೂ, ಎಂಟನೆಯದಕ್ಕೆ ಶೂಲವೆಂದೂ, ಹತ್ತನೆಯದಕ್ಕೆ ಅಶನಿಯೆಂದೂ, ಹದಿನೆಂಟನೆಯದಕ್ಕೆ ಕೇತುವೆಂದೂ, ಹದಿನೈದನೆಯದಕ್ಕೆ ದಂಡವೆಂದೂ, ಹತ್ತೊಂಭತ್ತನೆಯದಕ್ಕೆ ಉಲ್ಕಾ ಎಂದೂ, ಹದಿನಾಲ್ಕನೆಯದಕ್ಕೆ ನಿರ್ಘಾತಯಾತ ವೆಂದೂ ಹೆಸರುಂಟು. (೨೧) ಇಪ್ಪತ್ತೊಂದನೆಯ ನಕ್ಷತ್ರಕ್ಕಿಂತ ಮುಂದಕ್ಕೆ ಕ್ರಮವಾಗಿ ಮೋಹ, ನಿರ್ಘಾತ, ಕಂಪ, ಕುಲಿಶ, ಪರಿವೇಷಣಗಳೆಂಬ ಸಂಜ್ಞೆ ಗಳಿರುವುವು. ಹೀಗೆ ಸೂರ್ಯನಿಂದ ಲಬ್ಧಸಂಜ್ಞೆಯುಳ್ಳ ನಕ್ಷತ್ರಗಳಲ್ಲಿ ಚಂದ್ರ ನಿರುವಾಗ ಶುಭಕರ್ಮಗಳನ್ನು ಮಾಡುವುದು ಶ್ರೇಯಸ್ಕರವಲ್ಲ. ಸೂರ್ಯನು ಮಖ, ಚಿತ್ರಾ, ಅನೂರಾಧ, ಧನಿಷ್ಠ ಈ ನಕ್ಷತ್ರಗಳಲ್ಲಿರುವಾಗಲೂ ದುಷ್ಟನಕ್ಷತ್ರ ಸಹಿತವಾಗಿ ಚಂದ್ರನಿರುವಾಗಲೂ ಹುಟ್ಟುವ ಯೋಗವು ದುಷ್ಟಯೋಗವೆನಿಸು ವುದು. ಚಂಡೀಶ, ಚಂಡಾಯುಧ ಮುಂತಾದ ಯೋಗಗಳು ಶುಭಕರ್ಮಗಳಿಗೆ ಶ್ರೇಷ್ಠವಾದುವುಗಳಲ್ಲ. ತಿಥಿ, ವಾರ ಇವುಗಳ ಸಂಬಂಧದಿಂದ ಹದಿಮೂರು ಯೋಗಗಳು ಹುಟ್ಟುತ್ತವೆ. ಈ ತಿಥಿವಾರ ಸಂಬಂಧದಿಂದ ಹುಟ್ಟುವ ಕ್ರಕಚ ಯೋಗವು ಸಕಲ ಮಂಗಳಕರ್ಮಗಳಿಗೂ ನಿಷಿದ್ಧವಾದದ್ದು. ಭಾನುವಾರವು

ಚಂಡೀಶಚಂಡಾಯುಧಾಖ್ಯಸ್ತಸ್ಮಿನ್ನೈವಾಚರೇಚ್ಛುಭಂ ।
ತ್ರಯೋದಶ ಸ್ಯುರ್ಮಿಲನಸಂಖ್ಯಯಾ ತಿಥಿವಾರಯೋಃ ॥ ೨೩೫ ॥

ಕ್ರಕಚೋ ನಾಮ ಯೋಗೋಽಯಂ ಮಂಗಲೇಷ್ವತಿಗರ್ಹಿತಃ ।
ಸಪ್ತಮ್ಯಾಮರ್ಕವಾರೇ ಚ ಪ್ರತಿಪತ್ಸೌಮ್ಯವಾಸರೇ ॥ ೨೩೬ ॥

ಸಂವರ್ತಯೋಗೋ ವಿಜ್ಞೇಯಃ ಶುಭಕರ್ಮವಿನಾಶಕೃತ್ ।
ಆನಂದಃ ಕಾಲದಂಡಾಖ್ಯೋ ಧೂಮ್ರಧಾತೃಸುಧಾಕರಾಃ ॥ ೨೩೭ ॥

ಧ್ವಾಂಕ್ಷಧ್ವಜಾಖ್ಯಶ್ರೀವತ್ಸವಜ್ರಮುದ್ಗರಛತ್ರಕಾಃ ।
ಮಿತ್ರಮಾನಸಪದ್ಮಾಖ್ಯಲುಂಬಕೋತ್ಪಾತಮೃತ್ಯವಃ ॥ ೨೩೮ ॥

ಕಾಣಸಿದ್ಧಿಶುಭಾ ಮೃತ್ಯುಮುಸಲಾಂತಕಕುಂಜರಾಃ ।
ರಾಕ್ಷಸಾಖ್ಯವರಸ್ಥೈರ್ಯವರ್ಧಮಾನಾಃ ಕ್ರಮಾದಮೀ ॥ ೨೩೯ ॥

ಸಪ್ತಮಿಯಲ್ಲಿಯೂ ಬುಧವಾರವು ಪ್ರತಿಪತ್ತಿನಲ್ಲಿಯೂ ಬಂದರೆ ಆಗ ಕ್ರಕಚ ಯೋಗವುಂಟಾಗುವುದೆಂದು ತಿಳಿಯಬೇಕು.

೨೩೭–೨೪೧. ಭಾನುವಾರದಲ್ಲಿ ಅಶ್ವಿನ್ಯಾದಿಯಾಗಿ ಅಭಿಜಿತ್ಸಹಿತವಾದ ಇಪ್ಪತ್ತೆಂಟು ನಕ್ಷತ್ರಗಳು ಸೇರಿದರೆ ಕ್ರಮವಾಗಿ ಇಪ್ಪತ್ತೆಂಟು ಯೋಗಗಳು ಹುಟ್ಟುವುವು :—

(೧) ಸಂವರ್ತ (೨) ಆನಂದ (೩) ಕಾಲದಂಡ (೪) ಧೂಮ್ರ (೫) ಧಾತೃ (೬) ಸುಧಾಕರ (೭) ಧ್ವಾಂಕ್ಷ (೮) ಧ್ವಜ (೯) ಶ್ರೀವತ್ಸ (೧೦) ವಜ್ರ (೧೧) ಮುದ್ಗರ (೧೨) ಛತ್ರಕ (೧೩) ಮಿತ್ರ (೧೪) ಮಾನಸ (೧೫) ಪದ್ಮ (೧೬) ಲಂಬಕ (೧೭) ಉತ್ಪಾತ (೧೮) ಮೃತ್ಯು (೧೯) ಕಾಣ (೨೦) ಸಿದ್ಧಿ (೨೧) ಶುಭ (೨೨) ಮೃತ್ಯು (೨೩) ಮುಸಲ (೨೪) ಅಂತಕ (೨೫) ಕುಂಜರ (೨೬) ರಾಕ್ಷಸ (೨೭) ಸ್ಥೈರ್ಯ (೨೮) ವರ್ಧಮಾನ ಎಂಬ ಈ ಯೋಗಗಳು ಅರ್ಥವತ್ತಾದ (ಅಂದರೆ ತಮ್ಮ ಹೆಸರಿಗನುಗುಣವಾದ) ಫಲಗಳನ್ನು ಕೊಡುವುವು.

ಸೋಮವಾರದಲ್ಲಿ ಮೃಗಶಿರಾದಿಯಾಗಿಯೂ, ಮಂಗಳವಾರದಲ್ಲಿ ಆಶ್ಲೇಷಾದಿಯಾಗಿಯೂ, ಬುಧವಾರದಲ್ಲಿ ಹಸ್ತಾದಿಯಾಗಿಯೂ, ಗುರುವಾರದಲ್ಲಿ ಅನೂ

**ಯೋಗಾಃ ಸ್ವಸಂಜ್ಞಾಫಲದಾ ಅಷ್ಟಾವಿಂಶತಿರೀರಿತಾಃ ।**
**ರವಿವಾರೇ ಕ್ರಮಾದೇವ ದಸ್ರಭಾದಿಂದುಭಾದ್ವಿಧೌ ॥ ೨೪೦ ॥**

**ಸಾರ್ಪಾದ್ವೈಷೇ ಬುಧೇ ಹಸ್ತಾನ್ಮೈತ್ರಭಾನ್ಸುರಮಂತ್ರಿಣಿ ।**
**ವೈಶ್ವದೇವಾದ್ಭೃಗುಸುತೇ ವಾರಣಾದ್ಭಾಸ್ಕರಾತ್ಮಜೇ ॥ ೨೪೧ ॥**

**ಹಸ್ತರ್ಕ್ಷಂ ಚ ರವಾವಿಂದೌ ಚಂದ್ರಭಂ ದಸ್ರಭಂ ಕುಜೇ ।**
**ಸೌಮ್ಯೇ ಮಿತ್ರಭಪೂಚಾರ್ಯಂ ತಿಷ್ಯಃ ಪೌಷ್ಣ್ಯಂ ಭೃಗೋಃ ಸುತೇ ॥ ೨೪೨ ॥**

**ರೋಹಿಣೀ ಮಂದವಾರೇ ಚ ಸಿದ್ಧಿಯೋಗಾಹ್ವಯಾ ಅಮೀ ।**
**ಆದಿತ್ಯಭೌಮಯೋರ್ನಂದಾ ಭದ್ರಾ ಶುಕ್ರಶಶಾಂಕಯೋಃ ॥ ೨೪೩ ॥**

**ಜಯಾ ಸೌಮ್ಯೇ ಗುರೌ ರಿಕ್ತಾ ಶನೌ ಪೂರ್ಣೇತಿ ನೋ ಶುಭಾಃ ।**
**ನಂದಾ ತಿಥಿಃ ಶುಕ್ರವಾರೇ ಸೌಮ್ಯೇ ಭದ್ರಾ ಕುಜೇ ಜಯಾ ॥ ೨೪೪ ॥**

---

ರಾಧಾದಿಯಾಗಿಯೂ, ಶುಕ್ರವಾರದಲ್ಲಿ ಉತ್ತರಾಷಾಢಾ ನಕ್ಷತ್ರವೇ ಮೊದಲಾಗಿಯೂ, ಶನಿವಾರದಲ್ಲಿ ಶತಭಿಷಾದಿಯಾಗಿಯೂ ಮೇಲೆ ಹೇಳಿದ ಇಪ್ಪತ್ತೆಂಟು ಯೋಗಗಳೂ ಪ್ರತಿವಾರದಲ್ಲಿಯೂ ಹುಟ್ಟುವುವು.

೨೪೨-೨೪೬. ಭಾನುವಾರದಲ್ಲಿ ಹಸ್ತನಕ್ಷತ್ರ, ಸೋಮವಾರದಲ್ಲಿ ಮೃಗಶಿರ ಮಂಗಳವಾರದಲ್ಲಿ ಅಶ್ವಿನೀನಕ್ಷತ್ರ, ಬುಧವಾರದಲ್ಲಿ ಅನೂರಾಧಾನಕ್ಷತ್ರ, ಗುರುವಾರದಲ್ಲಿ ಪುಷ್ಯನಕ್ಷತ್ರ, ಶುಕ್ರವಾರದಲ್ಲಿ ರೇವತೀನಕ್ಷತ್ರ, ಶನಿವಾರದಲ್ಲಿ ರೋಹಿಣೀನಕ್ಷತ್ರ ಇವುಗಳ ಸಂಬಂಧದಿಂದ ಆಯಾ ದಿನಗಳಲ್ಲಿ ಸಿದ್ಧಿಯೋಗವು ಹುಟ್ಟುವುದು-

ಭಾನುವಾರ ಮತ್ತು ಮಂಗಳವಾರಗಳಲ್ಲಿ ನಂದತಿಥಿಯೂ, ಶುಕ್ರವಾರ ಮತ್ತು ಸೋಮವಾರಗಳಲ್ಲಿ ಭದ್ರಾತಿಥಿಯೂ, ಬುಧವಾರ ಮತ್ತು ಗುರುವಾರಗಳಲ್ಲಿ ಜಯಾತಿಥಿಯೂ, ಶನಿವಾರದಲ್ಲಿ ಪೂರ್ಣತಿಥಿಯೂ ಸೇರಿದರೆ ಶುಭಸಿದ್ಧಿಯೋಗಗಳೆನಿಸುವುವು.

೧. ಶುಕ್ರವಾರದಲ್ಲಿ ನಂದತಿಥಿಯೂ
೨. ಬುಧವಾರದಲ್ಲಿ ಭದ್ರಾತಿಥಿಯೂ

ರಿಕ್ತಾ ಮಂದೇ ಗುರೋರ್ವಾರೇ ಪೂರ್ಣಾ ಸಿದ್ಧಾಹ್ವಯಾ ಅಮೀ ।
ಏಕಾದಶ್ಯಾಮಿಂದುವಾರೋ ದ್ವಾದಶ್ಯಾಮರ್ಕವಾಸರಃ ॥ ೨೪೫ ॥

ಷಷ್ಠೀ ಗುರೌ ತೃತೀಯಾ ಜ್ಞೇಽಷ್ಟಮೀ ಶುಕ್ರೇ ಶನೈಶ್ಚರೇ ।
ನವಮೀ ಪಂಚಮೀ ಭೌಮೇ ದಗ್ಧಯೋಗಾಃ ಪ್ರಕೀರ್ತಿತಾಃ ॥ ೨೪೬ ॥

ಭರಣ್ಯರ್ಕದಿನೇ ಚಂದ್ರೇ ಚಿತ್ರಾ ಭೌಮೇ ತು ವಿಶ್ವಭಂ ।
ಬುಧೇ ಶ್ರವಿಷ್ಠಾರ್ಯಮಭೇ ಗುರೌ ಜ್ಯೇಷ್ಠಾ ಭೃಗೋರ್ದಿನೇ ॥ ೨೪೭ ॥

ರೇವತೀ ಮಂದವಾರೇ ತು ಗ್ರಹಜನ್ಮರ್ಕ್ಷನಾಶನಂ ।
ವಿಶಾಖಾದಿಚತುರ್ವರ್ಗಮರ್ಕವಾರಾದಿಷು ಕ್ರಮಾತ್ ॥ ೨೪೮ ॥

ಉತ್ಪಾತಮೃತ್ಯುಕಾಣಾಖ್ಯಸಿದ್ಧಿಯೋಗಾಃ ಪ್ರಕೀರ್ತಿತಾಃ ।
ತಿಥಿವಾರೋದ್ಭವಾ ನೇಷ್ಟಾಃ ಯೋಗಾ ವಾರರ್ಕ್ಷಸಂಭವಾಃ ॥ ೨೪೯ ॥

---

೩. ಕುಜವಾರದಲ್ಲಿ ಜಯಾತಿಥಿಯೂ

೪. ಶನಿವಾರದಲ್ಲಿ ರಿಕ್ತಾತಿಥಿಯೂ

೫. ಗುರುವಾರದಲ್ಲಿ ಪೂರ್ಣಾತಿಥಿಯೂ

ಸೇರುವುದರಿಂದಲು ಸಿದ್ಧಿಯೋಗಗಳುಂಟಾಗುವುವು.

೧. ಸೋಮವಾರದಲ್ಲಿ ಏಕಾದಶಿಯೂ

೨. ಭಾನುವಾರದಲ್ಲಿ ದ್ವಾದಶಿಯೂ

೩. ಗುರುವಾರದಲ್ಲಿ ಷಷ್ಠಿಯೂ

೪. ಬುಧವಾರದಲ್ಲಿ ತದಿಗೆಯೂ

೫. ಶುಕ್ರವಾರದಲ್ಲಿ ಅಷ್ಟಮಿಯೂ

೬. ಶನಿವಾರದಲ್ಲಿ ನವಮಿಯೂ

೭. ಮಂಗಳವಾರದಲ್ಲಿ ಪಂಚಮಿಯೂ

ಸೇರುವುದರಿಂದ ದಗ್ಧಯೋಗಗಳೆಂಬ ಹೆಸರು ಬರುವುದು.

೨೪೭–೨೫೩. ಇದೇರೀತಿ ವಾರಗಳಲ್ಲಿ ಬೇರೆಬೇರೆ ನಕ್ಷತ್ರಗಳು ಸೇರುವುದರಿಂದ ಅನಿಷ್ಟಯೋಗಗಳೂ ಉಂಟಾಗುವುವು—

ಹೂಣವಂಗಖಸೇಷ್ವನ್ಯದೇಶೇಷ್ವತಿಶುಭಪ್ರದಾಃ ।
ಘೋರಾಷ್ವಾಕ್ಷೀಮಹೋದರ್ಯೋ ಮಂದಾ ಮಂದಾಕಿನೀ ತಥಾ ॥ ೨೫೦ ॥

ಮಿಶ್ರಾ ರಾಕ್ಷಸಿಕಾ ಸೂರ್ಯವಾರಾದಿಷು ಯಥಾಕ್ರಮಂ ।
ಶೂದ್ರತಸ್ಕರವೈಶ್ಯಕ್ಷ್ಮಾದೇವಭೂಪಗವಾಂ ಕ್ರಮಾತ್ ॥ ೨೫೧ ॥

ಅನುಕ್ತಾನಾಂ ಚ ಸರ್ವೇಷಾಂ ಘೋರಾದ್ಯಾಃ ಸುಖದಾಃ ಸ್ಮೃತಾಃ ।
ಪೂರ್ವಾಹ್ಣೇ ನೃಪತೀನ್ಹಂತಿ ವಿಪ್ರಾನ್ಮಧ್ಯಂದಿನೇ ವಿಶಃ ॥ ೨೫೨ ॥

| | | | |
|---|---|---|---|
| ೧. | ಭಾನುವಾರದಲ್ಲಿ | ಭರಣೀನಕ್ಷತ್ರವೂ | |
| ೨. | ಸೋಮ ,, | ಚಿತ್ರಾ | ,, |
| ೩. | ಮಂಗಳ ,, | ಪೂರ್ವಾಷಾಢ | ,, |
| ೪. | ಬುಧ ,, | ಧನಿಷ್ಠಾ | ,, |
| ೫. | ಗುರು ,, | ಉತ್ತರಾ | ,, |
| ೬. | ಶುಕ್ರ ,, | ಜ್ಯೇಷ್ಠ | ,, |
| ೭. | ಶನಿ ,, | ರೇವತಿ | ,, |

ಸೇರಿದರೆ ಅನಿಷ್ಟಯೋಗಗಳುಂಟಾಗುವುವು. ಭಾನುವಾರಾದಿಯಾದ ಏಳು ವಾರಗಳಲ್ಲಿಯೂ ಕ್ರಮವಾಗಿ ವಿಶಾಖಾನಕ್ಷತ್ರಾದಿಯಾಗಿ, ಪೂರ್ವಾಷಾಢಾದಿಯಾಗಿ, ಧನಿಷ್ಠಾದಿಯಾಗಿ, ರೇವತ್ಯಾದಿಯಾಗಿ, ರೋಹಿಣ್ಯಾದಿಯಾಗಿ, ಪುಷ್ಯಾದಿಯಾಗಿ, ಉತ್ತರಫಲ್ಗುನ್ಯಾದಿಯಾಗಿ, ನಾಲ್ಕುನಾಲ್ಕು ನಕ್ಷತ್ರಗಳು ಸೇರುವುದರಿಂದ ಕ್ರಮವಾಗಿ (೧) ಉತ್ಪಾತ (೨) ಮೃತ್ಯು (೩) ಕಾಣ (೪) ಸಿದ್ಧಿ ಎಂಬ ನಾಲ್ಕು ಯೋಗಗಳು ಹುಟ್ಟುವುವು. ಆದರೆ ತಿಥಿವಾರ ಸಂಬಂಧದಿಂದ ಹುಟ್ಟುವ ಯೋಗಗಳು ಅಷ್ಟು ಶುಭಪ್ರದಗಳಲ್ಲ. ವಾರ ಮತ್ತು ನಕ್ಷತ್ರಯೋಗಗಳಿಂದ ಹುಟ್ಟುವ ಯೋಗಗಳು ಹೂಣ, ವಂಗದೇಶಗಳಿಗೆ ವಿಶೇಷ ಫಲಪ್ರದಗಳಾಗುತ್ತವೆ. ವಾರಕ್ಷ್ಯಯೋಗದಲ್ಲಿ ಭಾನುವಾರಾದಿಯಾಗಿ ಬರುವ ದುರ್ಯೋಗಗಳಿಗೆ ಕ್ರಮವಾಗಿ ಘೋರಾ, ಅಷ್ವಾಕ್ಷೀ, ಮಹೋದರೀ, ಮಂದಾ, ಮಂದಾಕಿನೀ, ಮಿಶ್ರಾ, ರಾಕ್ಷಸಿಕಾ ಎಂಬ ಹೆಸರಿನಿಂದ ಕ್ರಮವಾಗಿ ಶೂದ್ರ, ತಸ್ಕರ, ವೈಶ್ಯ, ಬ್ರಾಹ್ಮಣ, ರಾಜ, ಗೋವು ಮುಂತಾದವರಿಗೆ ಅಶುಭಫಲಗಳೂ, ಉಳಿದವರಿಗೆ ಶುಭಫಲ

ಸ್ವಾಶ್ರೋಪವಿಷ್ಟಾಸ್ತಿಷ್ಠಂತಸ್ತೇ ಲೋಕಾಃ ಕ್ಷೇಮಮಾಪ್ನುಯುಃ ।
ಅಂಧಕಂ ಮಂದಸಂಜ್ಞಂ ಚ ಮಧ್ಯಸಂಜ್ಞಂ ಸುಲೋಚನಂ ॥ ೨೬೧ ॥

ಫಲೀಯಾದ್ವಣಯೇದ್ಭಾನಿ ರೋಹಿಣ್ಯಾದಿಚತುರ್ವಿಧಂ ।
ಸ್ಥಿರಭೇಷ್ವರ್ಕಸಂಕ್ರಾಂತಿರ್ಜ್ಞೇಯಾ ವಿಷ್ಣುಪದಾಹ್ವಯಾ ॥ ೨೬೨ ॥

ಷಡಶೀತಿಮುಖಾ ಜ್ಞೇಯಾ ದ್ವಿಸ್ವಭಾವೇಷು ರಾಶಿಷು ।
ತುಲಾಘಟಾಜಯೋರ್ಜ್ಞೇಯೋ ವಿಷುವತ್ಸೂರ್ಯಸಂಕ್ರಮಃ ॥ ೨೬೩ ॥

ಯಾಮ್ಯಾಯನೇ ಸ್ಥಿರೇ ತ್ವಾದ್ಯಾಃ ಪರಾಃ ಸೌಮ್ಯೇಂದುಮೂರ್ತಿಭೈಃ ।
ಮೇಧ್ಯಾ ವಿಷುವತಿ ಪ್ರೋಕ್ತಾಃ ಪುಣ್ಯಾನಾಡ್ಯಸ್ತು ಷೋಡಶ ॥ ೨೬೪ ॥

ಸಂಧ್ಯಾ ತ್ರಿನಾಡೀಪ್ರಮಿತಾರ್ಕಬಿಂಬೋದ್ಧ್ವೋದಯಾಸ್ತತಃ ।
ಪ್ರಾಕ್ಪಶ್ಚಾದ್ಯಾಮ್ಯಸೌಮ್ಯೇ ಚೇತ್ಪುಣ್ಯಂ ಪೂರ್ವಾಪರೇಽಹನಿ ॥ ೨೬೫ ॥

೨೬೧-೨೬೩. ಸುಪ್ತಾವಸ್ಥೆ, ಉಪವೇಷಣಾವಸ್ಥೆಗಳಿಂದ ಸಂಕ್ರಾಂತಿ ಪುರುಷನು ಲೋಕಕ್ಕೆ ಕ್ಷೇಮವನ್ನುಂಟುಮಾಡುವನು. ಅಂಧಕ, ಮಂದ ಮಧ್ಯ, ಸುಲೋಚನ ದುಂತಾದ ಅವಸ್ಥೆಗಳಿಂದ ಅದಕ್ಕೆ ವಿರುದ್ಧವಾದ ಫಲ ಗಳೂ ಸಂಭವಿಸುವುವು. ಸ್ಥಿರ ರಾಶಿಸಂಕ್ರಮಣಗಳಿಗೆ ವಿಷ್ಣುಪದವೆಂದೂ, ದ್ವಿಸ್ವಭಾವರಾಶಿ ಸಂಕ್ರಮಗಳಿಗೆ ಷಡಶೀತಿಯೆಂದೂ, ತುಲಾ ಮತ್ತು ಮೇಷ ಸಂಕ್ರಾಂತಿಗಳಿಗೆ ವಿಷುವತ್ತೆಂದೂ ಸಂಜ್ಞೆಗಳುಂಟು.

೨೬೪-೨೬೫. ಕಟಕ ಮತ್ತು ವಿಷ್ಣುಪದ ಸಂಕ್ರಮಣಗಳಿಗೆ ಮೊದಲಿನ ೧೬ ಹದಿನಾರು ಗಳಿಗೆಗಳೂ, ಮಕರ ಮತ್ತು ಷಡಶೀತಿಮುಖಗಳಲ್ಲಿ ಮುಂದಿನ ೧೬ ಹದಿನಾರು ಗಳಿಗೆಗಳೂ, ವಿಷುವತ್ಸಂಕ್ರಮಣದಲ್ಲಿ ಮಾತ್ರ ಮಧ್ಯಭಾಗದ ೧೬ ಗಳಿಗೆಗಳೂ ಪುಣ್ಯಕಾಲಗಳೆನಿಸುವುವು. ಸಂಧ್ಯಾಕಾಲಾನಂತರ ಮೂರು ಗಳಿಗೆಯಮೇಲೆ ಅಥವಾ ಉದಯಾತ್ಪೂರ್ವ ಮೂರು ಗಳಿಗೆಯಲ್ಲಾಗಲೀ ಸಂಕ್ರ ಮಣವಾದರೆ, ಆ ಸಂದರ್ಭವು ದಕ್ಷಿಣಾಯನವಾಗಿದ್ದಲ್ಲಿ ಪೂರ್ವದಿನವೂ, ಉತ್ತ ರಾಯಣವಾದರೆ ಪರದಿನವೂ ಪುಣ್ಯಕಾಲವೆನಿಸುವುದು. ಸಂಕ್ರಮಣವಾಗುವ ನಕ್ಷತ್ರವಲ್ಲಿ ಚಂದ್ರನ ಬಲಾಬಲಗಳನ್ನು ತಿಳಿದು ಆ ನಕ್ಷತ್ರದವರಿಗೆ ಫಲಾ

ಯಾದೃಶೇನೇಂದುನಾ ಭಾನೋಃ ಸಂಕ್ರಾಂತಿಸ್ತಾದೃಶಂ ಫಲಂ ।
ನರಃ ಪ್ರಾಪ್ನೋತಿ ತದ್ರಾಶೌ ಶೀತಾಂಶೋಃ ಸಾಧ್ವಸಾಧು ಚ ॥ ೨೬೬ ॥

ಸಂಕ್ರಾಂತೇಃ ಪರತೋ ಭಾನುರ್ಭುಕ್ತೋ ಯಾವದ್ಭಿರಂಶಕೈಃ ।
ರವೇರಯನಸಂಕ್ರಾಂತಿಸ್ತದಾ ತದ್ರಾಶಿಸಂಕ್ರಮಾತ್ ॥ ೨೬೭ ॥

ಸಂಕ್ರಾಂತಿಗ್ರಹಗರ್ಕ್ಷಂ ವಾ ಜನ್ಮನ್ಯುಭಯಪಾರ್ಶ್ವಯೋಃ ।
ವ್ರತೋದ್ವಾಹಾದಿಕೇಷ್ವೇವ ದ್ವಯಂ ನೇಷ್ಟಂ ತು ತತ್ಕ್ರಮಾತ್ ॥ ೨೬೮ ॥

ತಿಲೋಪರಿ ಲಿಖೇಚ್ಚಕ್ರಂ ತ್ರಿತ್ರಿಶೂಲಂ ತ್ರಿಕೋಣಕಂ ।
ತತ್ರ ಹೇಮ ವಿನಿಕ್ಷಿಪ್ಯ ದದ್ಯಾದ್ದೋಷಾಪನುತ್ತಯೇ ॥ ೨೬೯ ॥

ತಾರಾಬಲೇನ ಶೀತಾಂಶುರ್ಬಲವಾಂಸ್ತದ್ವಶಾದ್ರವಿಃ ।
ಬಲೀ ಸಂಕ್ರಮಮಾಣಸ್ತು ತದ್ವತ್ಸ್ವೇಟಾ ಬಲಾಧಿಕಾಃ ॥ ೨೭೦ ॥

ಫಲಗಳನ್ನು ಊಹಿಸಿ ತಿಳಿದುಕೊಳ್ಳಬೇಕು. ಚಂದ್ರನ ಬಲಕ್ಕನುಗುಣವಾಗಿ ಅವರಿಗೆ ಫಲದೊರೆಯುವುದು. ಅಯನಸ್ಥಾನದ ಅಂಶವು ಎಷ್ಟು ಹಿಂದಾಗಿರುತ್ತದೆಯೋ ಅಷ್ಟುದಿನದ ಹಿಂದೆಯೇ ಅಯನಸಂಕ್ರಾಂತಿಯಾಗುತ್ತದೆ. ಅದಕ್ಕೆ ಅಯನದಿನವೆಂದು ಹೆಸರು.

೨೬೮-೨೭೦. ಸಂಕ್ರಮಣಕಾಲದ ನಕ್ಷತ್ರವಾಗಲೀ, ರಾಶಿಯಾಗಲೀ ಜನ್ಮನಕ್ಷತ್ರ ಅಥವ ಜನ್ಮರಾಶಿಯಾಗಲೀ ವ್ರತಬಂಧ (ಉಪನಯನ) ವಿವಾಹ ಮುಂತಾದ ಕರ್ಮಗಳಿಗೆ ಅಷ್ಟು ಪ್ರಶಸ್ತವಲ್ಲ. ತದ್ದೋಷಶಮನಾರ್ಥವಾಗಿ ಎಳ್ಳಿನಮೇಲೆ ಮಂಡಲವನ್ನು ಬರೆದು ಅದರೊಳಗೆ ತ್ರಿಶೂಲಾಂತರ್ಗತವಾದ ತ್ರಿಕೋಣವನ್ನು ಬರೆಯಬೇಕು. ನಂತರ ಆ ತ್ರಿಕೋಣದಮೇಲೆ ಸುವರ್ಣವನ್ನಿಟ್ಟು ದಾನಮಾಡಬೇಕು. ತಾರಾಬಲ ಮತ್ತು ಚಂದ್ರಬಲದಿಂದ ಚಂದ್ರನ ಬಲಾಬಲಗಳನ್ನೂ, ಸಂಕ್ರಮಣಕಾಲದ ರಾಶ್ಯಾದಿಗಳಿಂದ ಸೂರ್ಯನ ಬಲಾಬಲಗಳನ್ನೂ ಹಾಗೆಯೇ ಇತರಗ್ರಹಗಳ ಬಲವನ್ನೂ ಪ್ರತಾದಿಗಳಲ್ಲಿ ಮೊದಲು ತಿಳಿದುಕೊಳ್ಳಬೇಕು.

ಶುಭೋಽರ್ಕೋ ಜನ್ಮತಸ್ತ್ರ್ಯಾಯದಶಷಟ್ಸು ಮುನೀಶ್ವರ ।
ನವಪಂಚಾಂಬುರಿಷ್ಫಸ್ಥೈರ್ವ್ಯಾರ್ಕಿಭಿರ್ವಿಧ್ಯತೇ ನ ಚೇತ್ ॥ ೨೭೦ ॥

ಶುಭೋ ಜನ್ಮರ್ಕ್ಷತಶ್ಚಂದ್ರೋ ದ್ಯೂನಾಂಗಾಯಾರಿಸ್ವತ್ರಿಷು ।
ಯಥೇಷ್ವಾಂತ್ಯಾಂಬುಧರ್ಮಸ್ಥೈರ್ವಿಬುಧೈರ್ವಿಧ್ಯತೇ ನ ಚೇತ್ ॥ ೨೭೧ ॥

ತ್ರ್ಯಾಯಾರಿಷು ಕುಜಃ ಶ್ರೇಷ್ಠೋ ಜನ್ಮನಾ ಚೇನ್ನ ವಿಧ್ಯತೇ ।
ವ್ಯಯೇಷ್ವಂಕಸ್ಥಿತೈಃ ಸೌರಿಸೌಮ್ಯಸೂರ್ಯೈಃ ಶುಭೌಷಧಾತ್ ॥ ೨೭೩ ॥

ಜ್ಞಃ ಸ್ವಾಯಾರ್ಯಷ್ಟಖಾಯೇಷು ಜನ್ಮತಶ್ಚೇನ್ನ ವಿಧ್ಯತೇ ।
ಧೀತ್ರ್ಯಂಕಾದಿಗಜಾಂತಸ್ಥೈಃ ಶಶಾಂಕರಹಿತೈಃ ಶುಭೈಃ ॥ ೨೭೪ ॥

ಜನ್ಮರಾಶೇರ್ಗುರುಃ ಶ್ರೇಷ್ಠಃ ಸ್ವಾಯಗೋಽಧ್ಯಸ್ತಗೋ ನ ಚೇತ್ ।
ವಿಧ್ಯತೇರಿತ್ಯಾಷ್ಟಖಾಂಬುತ್ರಿಗತೈಃ ಖೇಟೈರ್ಮುನೀಶ್ವರ ॥ ೨೭೫ ॥

೨೭೦. ಜನ್ಮರಾಶ್ಯಪೇಕ್ಷಯಾ ಮೂರು, ಆರು, ಹತ್ತು, ಹನ್ನೊಂದರಲ್ಲಿ ಸೂರ್ಯನು ಒಂಭತ್ತು, ಐದು, ನಾಲ್ಕು, ಹನ್ನೆರಡು ಈ ಸ್ಥಾನಗಳಲ್ಲಿರತಕ್ಕ ಶನಿ ಭಿನ್ನರಾದ ಇತರಗ್ರಹಗಳಿಂದ ವಿದ್ಧನಾಗವಿದ್ದರೆ ಶುಭಫಲಪ್ರದನಾಗುವನು.

೨೭೧. ಹಾಗೆಯೇ ಚಂದ್ರನು ಎರಡು ಮೂರು ಆರು, ಏಳು, ಹನ್ನೊಂದು, ಈ ಸ್ಥಾನಗಳಲ್ಲಿ ಶುಭನು. ಆದರೆ ಹನ್ನೆರಡು, ನಾಲ್ಕು, ಒಂಭತ್ತರಲ್ಲಿರುವ ಬುಧವರ್ಜಿತರಾದ ಇತರ ಗ್ರಹಗಳಿಗಿಂತ ಈ ಚಂದ್ರನಿಗೆ ಯಾವ ವೇಧೆಯೂ ಇರಕೂಡದು.

೨೭೩. ಕುಜನು ಮೂರು, ಆರು, ಹನ್ನೊಂದರಲ್ಲಿ ಶುಭಕರನೆನಿಸು ವನು. ಹನ್ನೆರಡು, ಐದು, ಒಂಭತ್ತರಲ್ಲಿರುವ ಶನಿ, ಬುಧ, ಸೂರ್ಯ ಇವ ರಿಂದ ಈ ಕುಜನು ದೃಷ್ಟನಾಗದಿರಬೇಕು.

೨೭೪-೨೭೫. ಎರಡು ಹನ್ನೊಂದು, ಆರು, ಎಂಟು, ಹತ್ತರಲ್ಲಿರುವ ಬುಧನೂ, ಐದು, ಮೂರು ಒಂಭತ್ತು ಮತ್ತು ಎಂಟರಲ್ಲಿರುವ ಚಂದ್ರರಹಿತರಾದ ಗ್ರಹಗಳಿಂದ ಅವಲೋಕಿತನಾಗದಿದ್ದರೆ ಶುಭಫಲಪ್ರದನೆನಿಸುವನು. ಹಾಗೆಯೇ ಗುರುವೂ ಎರಡು, ಐದು, ಏಳು, ಒಂಭತ್ತು ಮತ್ತು ಹನ್ನೊಂದರಲ್ಲಿದ್ದು ಹನ್ನೆ

ಜನ್ಮಭಾದಾಸುತಾಷ್ಟಾಂಕಾಂತ್ಯಾಯೇಷ್ವಿಷ್ಟೋ ಭೃಗೋಃ ಸುತಃ ।
ಚೇನ್ನ ವಿದ್ಧೋಽಷ್ಟಸಪ್ತಾಂಗಂ ಖಾಂಕಾದ್ಯಾಯಾರಿಗಾಮಗೈಃ ॥ ೨೭೬ ॥

ನ ದದಾತಿ ಶುಭಂ ಕಿಂಚಿದ್ಗೋಚರೇ ವೇಧಸಂಯುತೇ ।
ತಸ್ಮಾದ್ವೇಧಂ ವಿಚಾರ್ಯಾಥ ಕಥನೀಯಂ ಶುಭಾಶುಭಂ ॥ ೨೭೭ ॥

ವಾಮಭೇದವಿಧಾನೇನ ದುಷ್ಟೋಽಪಿ ಸ್ಯಾಚ್ಛುಭಂಕರಃ ।
ಸೌಮ್ಯೇಕ್ಷಿತೋಽನಿಷ್ಟಫಲಃ ಶುಭದಃ ಪಾಪವೀಕ್ಷಿತಃ ॥ ೨೭೮ ॥

ನಿಷ್ಫಲೌ ತೌ ಗ್ರಹೌ ಸ್ವೇನ ಶತ್ರುಣಾ ಚ ವಿಲೋಕಿತೌ ।
ನೀಚರಾಶಿಗತಃ ಸ್ವಸ್ಯ ಶತ್ರೋಃ ಕ್ಷೇತ್ರಗತೋಽಪಿ ವಾ ॥ ೨೭೯ ॥

ಶುಭಾಶುಭಫಲಂ ನೈವ ದದ್ಯಾದಸ್ತಮಿತೋಽಪಿ ವಾ ।
ಗ್ರಹೇಷು ವಿಷಮಸ್ಥೇಷು ಶಾಂತಿಂ ಕುರ್ಯಾತ್ಪ್ರಯತ್ನತಃ ॥ ೨೮೦ ॥

---

ರಡು, ಎಂಟು ಹತ್ತು ನಾಲ್ಕು ಮತ್ತು ಮೂರನೆಯ ಮನೆಗಳಲ್ಲಿರುವ ಇತರ ಗ್ರಹಗಳಿಂದ ವಿದ್ಧನಾಗದಿದ್ದರೆ ಶುಭಸೆಸಿಸುವನು. ಶುಕ್ರನೂ ಜನ್ಮರಾಶ್ಯಪೇಕ್ಷಯಾ ಐದು, ಎಂಟು, ಒಂಭತ್ತು, ಹನ್ನೆರಡು ಮತ್ತು ಹನ್ನೊಂದರಲ್ಲಿದ್ದು ಎಂಟು, ಏಳು, ಆರು, ಹತ್ತು, ಒಂಭತ್ತು, ಹನ್ನೊಂದರಲ್ಲಿರುವ ಇತರಗ್ರಹಗಳಿಂದ ಯುಕ್ತನಾಗದಿದ್ದರೆ ಶುಭಕರನೆನಿಸುವನು.

೨೭೭-೨೮೦. ಗೋಚರಫಲದಲ್ಲಿ ವೇಧೆಯಿಂದ ಕೂಡಿದ ಗ್ರಹಗಳು ಶುಭಫಲಗಳನ್ನು ಕೊಡಲಾರವು. ಆದುದರಿಂದ ಗೋಚರದ ಶುಭಾಶುಭಫಲಗಳನ್ನು ವೇಧೆಯನ್ನರಿತು ಹೇಳಬೇಕು. ಅಶುಭಗ್ರಹ ವಿದ್ಧನಾದ ಗ್ರಹವು ಶುಭನಾದರೂ ಅಶುಭಫಲವನ್ನೇ ಕೊಡುವನು. ವಾಮವೇಧದಿಂದ ಕೂಡಿದ ದುಷ್ಟಗ್ರಹವೂ ಶುಭಫಲವನ್ನೇ ಕೊಡುವನು. ಅಲ್ಲದೇ ಶತ್ರುಗ್ರಹವೀಕ್ಷಿತವೂ ನೀಚರಾಶಿಸ್ಥಿತವೂ ಮತ್ತು ಶತ್ರುಕ್ಷೇತ್ರಸ್ಥವೂ ಆದ ಗ್ರಹಗಳು ಶುಭಫಲವನ್ನು ಕೊಡಲಾರವು. ರವಿಯೊಡಗೂಡಿ ಅಸ್ತರಾದರೂ ಆ ಗ್ರಹಗಳು ಶುಭಪ್ರದರಲ್ಲವೆಂದು ತಿಳಿಯಬೇಕು. ಈರೀತಿ ಗ್ರಹಗಳು ದುರ್ಬಲರಾಗಿದ್ದಾಗ ಪ್ರಯತ್ನಪೂರ್ವಕವಾಗಿ ಶಾಂತಿ ಮಾಡಬೇಕು. ಮನುಷ್ಯನ ಏಳಿಗೆ ಮತ್ತು ಬೀಳುವಿಕೆ ಈ ಎರಡೂ ಗ್ರಹಗಳಿಗೆ ಸೇರಿದುದು. ಆದ್ದರಿಂದ ಯಾವಾಗಲೂ ಗ್ರಹಾರ್ಚನೆ ಮಾಡುತ್ತಿರುವುದು ಮಾನವರಿಗೆ ತುಂಬಾ ಒಳ್ಳೆಯದು.

ಹಾನಿವೃದ್ಧಿರ್ಗ್ರಹಾಧೀನಾ ತಸ್ಮಾತ್ಪೂಜ್ಯತಮಾ ಗ್ರಹಾಃ ।
ಮಣಿರ್ಮುಕ್ತಾಫಲಂ ವಿದ್ರುಮಾಖ್ಯಂ ಮರಕತಂ ತಥಾ ॥ ೨೮೧ ॥

ಪುಷ್ಯರಾಗಂ ತಥಾ ವಜ್ರಂ ನೀಲಂ ಗೋಮೇದಸಂಜ್ಞಿತಂ ।
ವೈಡೂರ್ಯಂ ಭಾಸ್ಕರಾದೀನಾಂ ತುಷ್ಟ್ಯೈ ಧಾರ್ಯಂ ಯಥಾಕ್ರಮಂ ॥ ೨೮೨ ॥

ಶುಕ್ಲಪಕ್ಷಾದಿದಿವಸೇ ಚಂದ್ರೋ ಯಸ್ಯ ಶುಭಪ್ರದಃ ।
ಸ ಪಕ್ಷಸ್ತಸ್ಯ ಶುಭದಃ ಕೃಷ್ಣಪಕ್ಷೋಽನ್ಯಥಾಽಶುಭಃ ॥ ೨೮೩ ॥

ಶುಕ್ಲಪಕ್ಷೇ ಶುಭಶ್ಚಂದ್ರೋ ದ್ವಿತೀಯನವಪಂಚಮೇ ।
ರಿಃಫರಂಧ್ರಾಂಬುಸಂಸ್ಥೈಶ್ಚೇನ್ನ ವಿದ್ಧೋ ಗಗನೇಚರೈಃ ॥ ೨೮೪ ॥

ಜನ್ಮಸಂಪದ್ವಿಪತ್ಕ್ಷೇಮ ಪ್ರತ್ಯರಿಃ ಸಾಧಕೋ ವಧಃ ।
ಮಿತ್ರಂ ಪರಮಮಿತ್ರಂ ಚ ಜನ್ಮಭಾತ್ತು ಪುನಃ ಪುನಃ ॥ ೨೮೫ ॥

೨೮೧-೨೮೪. ಸೂರ್ಯಾದಿ ನವಗ್ರಹತೃಪ್ತಿಗಾಗಿ ಮನುಷ್ಯನು ಕ್ರಮವಾಗಿ ಮಣಿ, ಮುತ್ತು, ಹವಳ, ಪಚ್ಚೆ, ಪುಷ್ಯರಾಗ, ವಜ್ರ, ನೀಲ, ಗೋಮೇದಕ, ವೈಡೂರ್ಯ ಈ ನವರತ್ನಗಳನ್ನು ಧರಿಸಬೇಕು. ಚಂದ್ರನು ಮಾಸದ ಶುದ್ಧಪ್ರತಿಪತ್ತಿನಲ್ಲಿ ಜಾತಕನಿಗೆ ಶುಭಫಲಪ್ರದನಾಗಿರುವುದಾದರೆ ಆ ಪಕ್ಷವೆಲ್ಲಾ ಆತನಿಗೆ ಶುಭವಾದದ್ದೆಂದೂ ಕೃಷ್ಣಪಕ್ಷದ ಪ್ರತಿಪತ್ತಿನಲ್ಲಿ ಅಶುಭನಾಗಿದ್ದರೆ ಆಗಲೂ ಶುಭಫಲಪ್ರದನಾಗುವನೆಂದೂ ತಿಳಿಯಬೇಕು. ಆದರೆ ಶುಕ್ಲಪಕ್ಷದಲ್ಲಿ ಶುಭನಾದ ಚಂದ್ರನು ಐದು, ಒಂಭತ್ತು, ಎರಡು, ಹನ್ನೆರಡು ಎಂಟು, ನಾಲ್ಕು ಈ ಸ್ಥಾನಗಳಲ್ಲಿರುವ ಇತರ ಗ್ರಹಗಳಿಂದ ವಿದ್ಧನಾಗಿರಬಾರದು. ಹಾಗಾದರೆ ಮಾತ್ರ ಆತನು ಶುಭಫಲಪ್ರದನೆನಿಸುವನು.

೨೮೫-೨೮೮. ಜನ್ಮಾದಿಯಾಗಿ ತಾರಾಬಲವು ಜನ್ಮ, ಸಂಪತ್, ವಿಪತ್ ಕ್ಷೇಮ, ಪ್ರತ್ಯಮುಕ್, ಸಾಧನ, ವಧ, ಮಿತ್ರ, ಪರಮಮಿತ್ರ ಎಂದು ಒಂಭತ್ತು ವಿಧವಾಗಿ ಆಗುವುದು. ಅದರಲ್ಲಿ ಒಂದು, ಮೂರು, ಐದು, ಏಳು ಈ ತಾರೆಗಳು ಅಶುಭಪ್ರದಗಳು. ಅವುಗಳಿಗೆ ಕ್ರಮವಾಗಿ ಶಾಕ, ಬೆಲ್ಲ, ಉಪ್ಪು, ಸ್ವರ್ಣಸಹಿತವಾದ ತಿಲ ಇವುಗಳನ್ನು ದಾನಮಾಡಿದರೆ ಅದರ ದೋಷವು ನಿವೃತ್ತಿ

ಜನ್ಮತ್ರಿಪಂಚಸಪ್ತಾಖ್ಯಾಸ್ತಾರಾ ನೇಷ್ಟಫಲಪ್ರದಾಃ ।
ಶಾಕಂ ಗುಡಂ ಚ ಲವಣಂ ಸತಿಲಂ ಕಾಂಚನಂ ಕ್ರಮಾತ್ ॥ ೨೮೬ ॥

ಅನಿಷ್ಟಫಲನಾಶಾಯ ದದ್ಯಾದೇತದ್ದ್ವಿಜಾತಯೇ ।
ಕೃಷ್ಣೇ ಬಲವತೀ ತಾರಾ ಶುಕ್ಲಪಕ್ಷೇ ಬಲೀ ಶಶೀ
ಚಂದ್ರಸ್ಯ ದ್ವಾದಶಾವಸ್ಥಾ ರಾಶೌ ರಾಶೌ ಯಥಾಕ್ರಮಂ ॥ ೨೮೭ ॥

ಯಾತ್ರೋದ್ವಾಹಾದಿಕಾರ್ಯೇಷು ನಾಮತುಲ್ಯಫಲಪ್ರದಾಃ ।
ಷಷ್ಟಿಘ್ನಂ ಗತಚಂದ್ರರ್ಕ್ಷಂ ತತ್ಕಾಲಘಟಿಕಾನ್ವಿತಂ ॥
ವೇದಘ್ನಮಿಷುವೇದಾಂತ್ಯಮವಸ್ಥಾ ಭಾಸುಭಾಗತಃ ॥ ೨೮೮ ॥

ಪ್ರವಾಸನಷ್ಟಾಖ್ಯಮೃತಾ ಜಯೋ ಹಾಸ್ಯಂ ರತಿರ್ಮುದಾ ।
ಶನಿಭುಕ್ತಿರ್ಜ್ವರಃ ಕಂಪಃ ಸುಸ್ಥಿತಿರ್ನಾಮಸನ್ನಿಭಾಃ ॥ ೨೮೯ ॥

ಪಟ್ಟಬಂಧನಯಾದ್ರೋಗ್ರಸಂಧಿವಿಗ್ರಹಭೂಷಣಂ ।
ಧಾತ್ವಾಕರಂ ಯುದ್ಧಕರ್ಮ ಮೇಷಲಗ್ನೇ ಪ್ರಸಿದ್ಧ್ಯತಿ ॥ ೨೯೦ ॥

ಯಾಗುವುದು. ಕೃಷ್ಣಪಕ್ಷದಲ್ಲಿ ತಾರಾಬಲವನ್ನೂ ಶುಕ್ಲಪಕ್ಷದಲ್ಲಿ ಚಂದ್ರಬಲವನ್ನೂ ನೋಡಬೇಕು. (ಅಂದರೆವಿಶೇಷವಾಗಿ ಗಮನಿಸಬೇಕೆಂದು ಅಭಿಪ್ರಾಯ) ಚಂದ್ರನಿಗೆ ಪ್ರತಿರಾಶಿಯಲ್ಲಿಯೂ ಹನ್ನೆರಡು ಅವಸ್ಥೆಗಳಿರುವುವು. ಈ ಅವಸ್ಥೆಗಳು ಹೆಸರಿಗೆ ತಕ್ಕಂತೆ ಯಾತ್ರೆವಿವಾಹ ಮುಂತಾದ ಕರ್ಮಗಳಲ್ಲಿ ಫಲಗಳನ್ನು ಕೊಡುವುಗಳಾಗುವುವು. ಆ ಅವಸ್ಥೆಯನ್ನು ಕಂಡುಹಿಡಿಯಬೇಕಾದರೆ ಚಂದ್ರನಿರುವ ನಕ್ಷತ್ರದ ಗತಘಟಿಕೆಗಳನ್ನು ಅರವತ್ತರಿಂದ ಗುಣಿಸಿ, ತಾತ್ಕಾಲಿಕವಾದ ಘಳಿಗೆಗಳನ್ನು ಸೇರಿಸಿ ಮತ್ತೆ ನಾಲ್ಕರಿಂದ ಗುಣಿಸಿ, ಹನ್ನೆರಡರಿಂದ ಭಾಗಿಸಿದರೆ ಕ್ರಮವಾಗಿ ಬರುವ ಲಬ್ಧಗಳೇ ಈ ಅವಸ್ಥೆಗಳಾಗಿರುವುವು.

೨೮೯ ಆ ದ್ವಾದಶಾವಸ್ಥೆಗಳು ಕ್ರಮವಾಗಿ, ಪ್ರವಾಸ, ನಷ್ಟ, ಮೃತಿ ಜಯ, ಹಾಸ್ಯ, ರತಿ, ಮುದ, ಹಸಿವು, ಭೋಜನ, ಜ್ವರ, ಕಂಪ, ಸುಸ್ಥಿತಿ ಎಂಬ ಹೆಸರಿನಿಂದ ಕೂಡಿ ತಮ್ಮ ಹೆಸರಿಗೆ ತಕ್ಕಂತೆ ಫಲಗಳನ್ನು ಕೊಡುವುವು.

೨೯೦-೩೦೧. (1) ಪಟ್ಟಾಭಿಷೇಕ, ಪ್ರಯಾಣ, ಸಂಧಿ, ಯುದ್ಧ ಒಡವೆ ಮತ್ತು ಗಣಿಗಳ ಕೆಲಸ ಇವುಗಳನ್ನು ಮೇಷಲಗ್ನದಲ್ಲಿ ನಡೆಸುವುದು ಶ್ರೇಯಸ್ಕರವಾದುದು.

ಮಂಗಲಾನಿ ಸ್ಥಿರಾಣ್ಯಂಬುವೇಶ್ಮಕರ್ಮಪ್ರವರ್ತನಂ ।
ಕೃಷಿವಾಣಿಜ್ಯಪಶ್ವಾದಿ ವೃಷಲಗ್ನೇ ಪ್ರಸಿಧ್ಯತಿ ॥ ೨೯೧ ॥

ಕಲಾವಿಜ್ಞಾನಶಿಲ್ಪಾನಿ ಭೂಷಣಾಹವಸಂಶ್ರವಂ ।
ಗಜೋದ್ವಾಹಾಭಿಷೇಕಾದ್ಯಂ ಕರ್ತವ್ಯಂ ಮಿಥುನೋದಯೇ ॥ ೨೯೨ ॥

ವಾಪೀಕೂಪತಡಾಗಾದಿ ವಾರಿಬಂಧನಮೋಕ್ಷಣಂ ।
ಪೌಷ್ಟಿಕಂ ಲಿಪಿಲೇಖಾದಿ ಕರ್ತವ್ಯಂ ಕರ್ಕಟೋದಯೇ ॥ ೨೯೩ ॥

ಇಕ್ಷುಧಾನ್ಯವಣಿಕ್ಪಣ್ಯಕೃಷಿಸೇವಾದಯಃ ಸ್ಥಿರೇ ।
ಸಾಹಸಾಹವಭೂಪಾದ್ಯಂ ಸಿಂಹಲಗ್ನೇ ಪ್ರಸಿಧ್ಯತಿ ॥ ೨೯೪ ॥

ವಿದ್ಯಾಶಿಲ್ಪೌಷಧಂ ಕೃತ್ಯಂ ಭೂಷಣಂ ಚ ಚರಸ್ಥಿರಂ ।
ಕನ್ಯಾಲಗ್ನೇ ವಿಧೇಯಂ ಚ ಪೌಷ್ಟಿಕಾಖಿಲಮಂಗಲಂ ॥ ೨೯೫ ॥

(2) ಮಂಗಳಕರ್ಮ, ಸ್ಥಿರಕಾರ್ಯಗಳು, ನೀರು, ಮನೆ, ಕೃಷಿ. ವ್ಯಾಪಾರ, ಪಶುವಿಕ್ರಯಣಾದಿಗಳು ಇವುಗಳಿಗೆ ವೃಷಭಲಗ್ನವು ಪ್ರಶಸ್ತವಾಗಿರುವುದು.

(3) ಕಲೆ, ವಿಜ್ಞಾನ, ಶಿಲ್ಪ, ಭೂಷಣ, ಯುದ್ಧ, ಅಭ್ಯಾಸ, ಗಜಾಭಿಷೇಕ, ವಿವಾಹ ಈ ಕರ್ಮಗಳಿಗೆ ಮಿಥುನಲಗ್ನವು ಪ್ರಶಸ್ತವಾದುದು.

(4) ಬಾವಿ. ಕೆರೆ, ಏರಿ, ಪುಷ್ಟಿಕರ್ಮಗಳು, ಲೇಖನಕಾರ್ಯ ಇವುಗಳನ್ನು ಕಟಕಲಗ್ನದಲ್ಲಿ ಮಾಡುವುದು ಶ್ರೇಯಸ್ಕರವೆಂದು ತಿಳಿಯಬೇಕು.

(5) ಕಬ್ಬು, ಇತರಧಾನ್ಯ. ವ್ಯಾಪಾರ, ಕೃಷಿ, ಸೇವಾಕರ್ಮ ಇನ್ನೂ ಸ್ಥಿರಕಾರ್ಯಾರಂಭ, ಸಾಹಸದ ಕಾರ್ಯಗಳು ಇವುಗಳಿಗೆ ಸಿಂಹಲಗ್ನವು ಪ್ರಶಸ್ತವಾದುದು.

(6) ವಿದ್ಯಾ, ಶಿಲ್ಪ, ಔಷಧಿ, ಒಡವೆ, ಪುಷ್ಟಿಕರವಾದ ಕಾರ್ಯಗಳು ಇವುಗಳನ್ನು ಹೊಂದಲು ಕನ್ಯಾಲಗ್ನವು ಶ್ರೇಷ್ಠವಾಗಿರುವುದು.

(7) ಕೃಷಿ, ವ್ಯಾಪಾರ, ಪ್ರಯಾಣ, ಪಶುಗಳ ವಿಕ್ರಯಣ, ವಿವಾಹ ವ್ರತಾದಿಗಳು, ತೂಕಮಾಡುವ ಕಾರ್ಯಗಳು ಇವುಗಳಿಗೆ ತುಲಾಲಗ್ನವು ಪ್ರಶಸ್ತವಾಗಿರುವುದು.

ಕೃಷಿವಾಣಿಜ್ಯಯಾನಂ ಚ ಪಶೂದ್ವಾಹವ್ರತಾದಿಕಂ ।
ತುಲಾಯಾಮಖಿಲಂ ಕರ್ಮ ತುಲಾಭಾರಾಶ್ರಿತೇ ಚ ಯತ್ ॥ ೨೯೬ ॥

ಸ್ಥಿರಕರ್ಮಾಖಿಲಂ ಕಾರ್ಯಂ ರಾಜಸೇವಾಭಿಷೇಚನಂ ।
ಚೌರ್ಯಕರ್ಮಸ್ಥಿರಾರಂಭಾಃ ಕರ್ತವ್ಯಾ ವೃಶ್ಚಿಕೋದಯೇ ॥ ೨೯೭ ॥

ವ್ರತೋದ್ವಾಹಪ್ರಯಾಣಾಶ್ವಗಜಶಿಲ್ಪಕಲಾದಿಕಂ ।
ಚರಸ್ಥಿರವಿಮಿಶ್ರಂ ಚ ಕರ್ತವ್ಯಂ ಕಾರ್ಮುಕೋದಯೇ ॥ ೨೯೮ ॥

ಚಾಪಬಂಧನಮೋಕ್ಷಾಸ್ತ್ರಕೃಷಿಗೋಽಶ್ವಾದಿಕರ್ಮ ಯತ್ ।
ಪ್ರಸ್ಥಾನಂ ಪಶುದಾಸಾದಿ ಕರ್ತವ್ಯಂ ಮಕರೋದಯೇ ॥ ೨೯೯ ॥

ಕೃಷಿವಾಣಿಜ್ಯಪಶ್ವಂಬು ಶಿಲ್ಪಕರ್ಮಕಲಾದಿಕಂ ।
ಜಲಪಾತ್ರಾಸ್ತ್ರಶಸ್ತ್ರಾದಿ ಕರ್ತವ್ಯಂ ಕಲಶೋದಯೇ ॥ ೩೦೦ ॥

(8) ಸ್ಥಿರಕರ್ಮಗಳು, ರಾಜಸೇವಾ, ರಾಜ್ಯಪಟ್ಟಾಭಿಷೇಕ, ಕಳ್ಳತನ ಇವುಗಳಿಗೆ ವೃಶ್ಚಿಕಲಗ್ನವು ಶ್ರೇಷ್ಠವಾಗಿರುವುದು.

(9) ವ್ರತ ಉಪನಯನ, ವಿವಾಹ, ಪ್ರಯಾಣ, ಕುದುರೆ, ಆನೆ, ಶಿಲ್ಪ ಕಲೆ, ಚರ, ಸ್ಥಿರ, ಮಿಶ್ರಕಾರ್ಯ ಇವುಗಳನ್ನು ಧನುರ್ಲಗ್ನದಲ್ಲಿ ಮಾಡಬೇಕು.

(10) ಧನುರ್ಬಂಧನ, ಮೋಕ್ಷಗಳು, ಅಸ್ತ್ರವಿದ್ಯೆ, ಕೃಷಿ, ಗೋವು, ಕುದುರೆ ಇವುಗಳಿಗೆ ಸಂಬಂಧಿಸಿದ ಕಾರ್ಯಗಳು, ಪ್ರಯಾಣ, ಪಶು, ಸೇವಕರು ಇವರುಗಳನ್ನು ಸ್ವೀಕರಿಸುವುದು ಮುಂತಾದ ಈರೀತಿಯ ಕರ್ಮಗಳಿಗೆ ಮಕರ ಲಗ್ನವು ಪ್ರಶಸ್ತವಾದುದು.

(11) ಕೃಷಿ, ವ್ಯಾಪಾರ, ಪಶು, ನೀರು, ಶಿಲ್ಪಕರ್ಮ, ಕಲಾದಿಗಳು, ಜಲಪಾತ್ರಸಂಗ್ರಹ, ಅಸ್ತ್ರಶಸ್ತ್ರಾದಿಗಳ ಸಂಗ್ರಹ ಇವುಗಳಿಗೆ ಕುಂಭಲಗ್ನವು ಉತ್ತಮವಾದುದು.

ವ್ರತೋದ್ವಾಹಾಭಿಷೇಕಾಂಬುಸ್ಥಾಪನಂ ಸನ್ನಿವೇಶನಂ ।
ಭೂಷಣಂ ಜಲಪಾತ್ರಾಶ್ವಕರ್ಮ ಮೀನೋದಯೇ ಶುಭಂ ॥ ೩೦೦ ॥

ಮೇಷಾದಿಷು ವಿಲಗ್ನೇಷು ಶುದ್ಧೇಷ್ವೇವಂ ಪ್ರಸಿದ್ಧ್ಯತಿ ।
ಕ್ರೂರಗ್ರಹೇಕ್ಷಿತೇಷೂಗ್ರಸಂಯುತೇಷೂಗ್ರಮೇವ ಹಿ ॥ ೩೦೨ ॥

ಗೋಯುಗ್ಮಕರ್ಕಕನ್ಯಾಂತ್ಯ ತುಲಾಚಾಪಧರಾಃ ಶುಭಾಃ ।
ಶುಭರ್ಕ್ಷತ್ವಾಚ್ಛುಭಾಸತ್ಯ ಇತರಾಃ ಪಾಪರಾಶಯಃ ॥ ೩೦೩ ॥

ಗ್ರಹಯೋಗಾವಲೋಕಾಭ್ಯಾಂ ರಾಶಿರ್ಧತ್ತೇ ಗ್ರಹೋದ್ಭವಂ ।
ಫಲಂ ತಾಭ್ಯಾಂ ವಿಹೀನೋಽಸೌ ಸ್ವಭಾವಮುಪಸರ್ಪತಿ ॥ ೩೦೪ ॥

(12) ಉಪನಯನ, ವಿವಾಹ, ಅಭಿಷೇಕ, ಜಲಸ್ಥಾಪನ, ಭೂಷಣ ಪರಿಗ್ರಹ, ಜಲಪಾತ್ರ ಪರಿಗ್ರಹ, ಅಶ್ವಕರ್ಮ ಇವುಗಳಿಗೆ ಮೀನಲಗ್ನವು ಪ್ರಶಸ್ತವಾದುದು. ಈರೀತಿ ಹನ್ನೆರಡು ಲಗ್ನಗಳಲ್ಲಿಯೂ ಅವುಗಳಿಗೆ ವಿಹಿತವಾಗಿರುವ ಕಾರ್ಯಗಳನ್ನು ಮಾಡುವುದರಿಂದ ಶ್ರೇಯಸ್ಸುಂಟೆಂದು ತಿಳಿಯಬೇಕು.

೩೦೨-೩೦೪. ಮೇಲೆ ಹೇಳಿದ ಮೇಷಾದಿಲಗ್ನಗಳು ಶುಭಗ್ರಹಯುಕ್ತಗಳಾಗಿ ಶುದ್ಧಗಳೆನಿಸಿದ್ದರೆ, ಶುಭಪ್ರದಗಳಾಗುವುವು. ಪಾಪಗ್ರಹಗಳಿಂದ ಯುತವೂ, ದುಷ್ಟವೂ ಆಗಿದ್ದರೆ ಅಶುಭಪ್ರದಗಳೆನಿಸುವುವು. ವೃಷಭ, ಮಿಥುನ ಕಟಕ, ಕನ್ಯಾ, ಮೀನ ಮತ್ತು ಧನುಸ್ಸು ಈ ಲಗ್ನಗಳು ಶುಭಗ್ರಹಾಧಿಪತ್ಯವುಳ್ಳವುಗಳಾದ್ದರಿಂದ ಶುಭಲಗ್ನಗಳೆನಿಸುವುವು. ಉಳಿದ ಲಗ್ನಗಳು ಅಂದರೆ ಮೇಷ, ಸಿಂಹ ಮುಂತಾದುವುಗಳು ಪಾಪಲಗ್ನಗಳೆನಿಸಿವೆ. ಲಗ್ನದಲ್ಲಿ ಗ್ರಹವು ಬಲಿಷ್ಠವಾಗಿದ್ದು ಅಥವ ಬಲಿಷ್ಠಗ್ರಹದ ದೃಷ್ಟಿಯಿಂದ ಕೂಡಿದ್ದರೆ ಆ ಗ್ರಹಕ್ಕೆ ಸಂಬಂಧಿಸಿದ ಫಲವು ದೊರೆಯುವುದು. ಯಾವ ಗ್ರಹದ ದೃಷ್ಟಿಯಾಗಲೀ ಯೋಗವಾಗಲೀ ಇಲ್ಲದೇ ಇರುವ ಲಗ್ನವು ತನ್ನ ಸ್ವಭಾವವನ್ನೇ ಫಲವನ್ನಾಗಿ ಕೊಡುವುದು.

ಆದೌ ಸಂಪೂರ್ಣಫಲದಂ ಮಧ್ಯೇ ಮಧ್ಯಫಲಪ್ರದಂ ।
ಅಂತೇ ತುಚ್ಛಫಲೇ ಲಗ್ನೇ ಸರ್ವಸ್ಮಿನ್ನೇವಮೇವ ಹಿ ॥ ೩೦೫ ॥

ಸರ್ವತ್ರ ಪ್ರಥಮಂ ಲಗ್ನಂ ಕರ್ತುಶ್ಚಂದ್ರಬಲಂ ತತಃ ।
ಕಲ್ಪ್ಯಮಿಂದೌ ನ ಬಲಿನಿ ಸಪ್ತಮೋ ಬಲಿನೋ ಗ್ರಹಾಃ ॥ ೩೦೬ ॥

ಚಂದ್ರಸ್ಯ ಬಲಮಾಧಾರಮಾಧೇಯಂ ಚಾನ್ಯಖೇಟಕಂ ।
ಆಧಾರಭೂತೇನಾಧೇಯಂ ಧೀಯತೇ ಪರಿಧಿಸ್ಥಿನಂ ॥ ೩೦೭ ॥

ಚೇದಿಂದುಃ ಶುಭದಃ ಸರ್ವೇ ಗ್ರಹಾಃ ಶುಭಫಲಪ್ರದಾಃ ।
ಅಶುಭಶ್ಚೇದಶುಭದಾ ವರ್ಜಯಿತ್ವಾ ಧನಾಧಿಪಂ ॥ ೩೦೮ ॥

ಲಗ್ನಸ್ವಾಮ್ಯುದಿತಾಯೋಃಶಾಸ್ತ್ರೇಷ್ವಂಶೇಷು ಸ್ಥಿತೋ ಗ್ರಹಃ ।
ಲಗ್ನೋದ್ಭವಂ ಫಲಂ ಧತ್ತೇ ಧನಾತೀತೋ ದ್ವಿತೀಯಕಂ ॥ ೩೦೯ ॥

೩೦೫-೩೧೦. ಲಗ್ನಾದಿಭಾಗದಲ್ಲಿ ಪೂರ್ಣಫಲವೂ, ಮಧ್ಯಭಾಗದಲ್ಲಿ ಮಧ್ಯ ಫಲವೂ, ಅಂತ್ಯದಲ್ಲಿ ತುಚ್ಛಫಲವೂ ಉಂಟಾಗುವುದು. ಸಕಲ ಕರ್ಮಗಳಿಗೂ ಮೊದಲು ಲಗ್ನಬಲವೂ ಅನಂತರ ಚಂದ್ರಬಲವೂ ಇರಬೇಕು. ಒಂದುವೇಳೆ ಚಂದ್ರ ಬಲವಿಲ್ಲದಿದ್ದರೆ, ಲಗ್ನಾತ್ಸಪ್ತಮದಲ್ಲಿಯಾದರೂ, ಬಲಿಷ್ಠಗ್ರಹಗಳಿದ್ದು ಅದರಿಂದ ಲಗ್ನವು ಬಲಿಷ್ಠವೆನಿಸಿರಬೇಕು. ಸಕಲಗ್ರಹಗಳಿಗೂ ಚಂದ್ರನೇ ಆಧಾರಭೂತನಾದವನು. ಆಧಾರಭೂತನಾದ ಈ ಚಂದ್ರನ ಬಲವೊಂದಿದ್ದರೆ ಸಕಲಗ್ರಹಗಳೂ ಬಲಿಷ್ಠರಾಗಿರುವರೆಂದೇ ತಿಳಿಯಬೇಕು. ಚಂದ್ರನು ಶುಭಫಲಪ್ರದನಾದರೆ ಇತರ ಸಕಲಗ್ರಹಗಳೂ ಶುಭಪ್ರದರೇ ಆಗುವರು. ಆದರೆ ಧನಾಧಿಪತಿ ಅಂದರೆ ದ್ವಿತೀಯಾಧಿಪತಿ ಮಾತ್ರ ಹಾಗಾಗುವುದಿಲ್ಲ. ಲಗ್ನವು ಬಲಿಷ್ಠವಾಗಿದ್ದರೆ ಆ ಲಗ್ನಾಂಶದಲ್ಲಿರುವ ಗ್ರಹಗಳೆಲ್ಲಾ ಆ ಲಗ್ನದ ಫಲವನ್ನೇ ಕೊಡುವುವು. ಆದರೆ ದ್ವಿತೀಯಾಧಿಪತಿ ಮಾತ್ರ ಆ ಫಲವನ್ನು ಕೊಡುವುದಿಲ್ಲ. ಇದೇ ರೀತಿ ಸಕಲ ಭಾವಗಳನ್ನೂ ಆಯಾ ಫಲಗಳಿಗೆ ಆಯಾ ಭಾವಗಳನ್ನೇ ಲಗ್ನಗಳೆಂದು ಭಾವಿಸಿ,

ಏವಂ ಸ್ಥಾನೇಷು ಶೇಷೇಷು ಚೈವಮೇವಂ ಪ್ರಕಲ್ಪಯೇತ್ ।
ಲಗ್ನಂ ಸರ್ವಗುಣೋಪೇತಂ ಲಭ್ಯತೇಽಲ್ಪೈರ್ದಿನೈರ್ನಹಿ ॥ ೩೧೦ ॥

ದೋಷಾಲ್ಪತ್ವಂ ಗುಣಾಧಿಕ್ಯಂ ಬಹುಸಂತತಮಿಷ್ಯತೇ ।
ದೋಷಾದ್ದುಷ್ಟೋ ಹಿ ಕಾಲಸ್ತಮಪಿ ಮಾಷ್ಟುಂ ಪಿತಾಮಹಃ ॥ ೩೧೧ ॥

ಅಷ್ಟಶೌಚಗುಣಾಧಿಕ್ಯಂ ದೋಷಾನ್ಯತ್ರೇ ತತೋ ಹಿ ತೇ ।
ಅಮಾರಿಕ್ತಾಷ್ಟಮೀ ಷಷ್ಠೀ ದ್ವಾದಶೀ ಪ್ರತಿಪತ್ಸ್ವಪಿ ॥ ೩೧೨ ॥

ಪರಿಘಸ್ಯ ಚ ಪೂರ್ವಾರ್ಧಂ ವ್ಯತೀಪಾತೇ ಸವೈಧೃತೌ ।
ಸಂಧ್ಯಾಸೂಪಪ್ಲವೇ ವಿಷ್ಟ್ಯಾಮಶುಭಂ ಪ್ರಥಮಾರ್ತವಂ ॥ ೩೧೩ ॥

ಫಲಾಫಲಗಳನ್ನು ವಿಚಾರಮಾಡಬೇಕು. ಗುಣಗಣಭರಿತವಾದ ಲಗ್ನವು ಕ್ಷಿಪ್ರದಲ್ಲಿಯೇ ಫಲಕೊಡುವುದು.

೩೧೧-೩೧೨. ದೋಷವು ಕಮ್ಮಿಯಾಗಿ ಗುಣವು ಅಧಿಕವಾಗಿದ್ದರೆ ಲಗ್ನದ ಫಲವು ಸಂತತವಾಗಿ ದೊರೆಯುವುದು. ದೋಷಾಧಿಕ್ಯದಿಂದ ಲಗ್ನವು ದುಷ್ಟವಾಗಿದ್ದರೆ ಲಗ್ನದ ಫಲವು ಅನಿಷ್ಟವಾಗಿ ಪರಿಣಮಿಸುವುದು. ಅದನ್ನು ತಪ್ಪಿಸಲು ಬ್ರಹ್ಮನಿಗೂ ಸಾಧ್ಯವಿಲ್ಲ. ದೋಷಾಧಿಕ್ಯದ ಲಗ್ನಫಲವನ್ನು ಜಾತಕನು ಅನುಭವಿಸಿಯೇ ತೀರಬೇಕು.

೩೧೩-೩೧೪. ಅಮಾವಾಸ್ಯಾ, ರಿಕ್ತತಿಥಿಗಳು, ಅಷ್ಟಮೀ, ಷಷ್ಠೀ, ದ್ವಾದಶೀ, ಪ್ರತಿಪತ್, ಪರಿಘಯೋಗ, ವ್ಯತೀಪಾತ, ವೈಧೃತಿ, ಸಂಧ್ಯಾಕಾಲ, ಉಪಪ್ಲವಕಾಲ, ಭದ್ರಾಕರಣ ಇವುಗಳಲ್ಲಿ ಸ್ತ್ರೀಯು ಪ್ರಥಮ ರಜಸ್ವಲೆಯಾಗುವುದು ಒಳ್ಳೆಯದು. ವಾರಫಲಗಳಲ್ಲಿ ಭಾನುವಾರ ರಜಸ್ವಲೆಯಾದರೆ ರೋಗಿಷ್ಟೆಯಾಗುವಳು. ಸೋಮವಾರವಾದರೆ ಪತಿಪ್ರಿಯೆಯಾಗುವಳು. ಮಂಗಳವಾರವಾದರೆ ದುಃಖಿನಿಯಾಗುವಳು. ಬುಧವಾರವಾದರೆ ಪುತ್ರಿಣಿಯಾಗುವಳು. ಗುರುವಾರವಾದರೆ ಭೋಗಿನಿಯಾಗುವಳು. ಶುಕ್ರವಾರವಾದರೆ ಪತಿವ್ರತೆಯಾಗು

ರುಗ್ಣಾ ಪತಿಪ್ರಿಯಾ ದುಃಖಾ ಪುತ್ರಿಣೀ ಭೋಗಿನೀ ತಥಾ ।
ಪತಿವ್ರತಾ ಕ್ಲೇಶಯುಕ್ತಾ ಸೂರ್ಯವಾರಾದಿಷು ಕ್ರಮಾತ್ ॥ ೧೦೪ ॥

ಯಮಾಗ್ನಿರೌದ್ರಭಾಗ್ಯಾಹಿ ದ್ವೀಶೇಂದ್ರಾದಿಷ್ವಪದ್ವಿಷಾಃ ।
ತಾರಕಾ ನ ಹಿತಾ ಮಾಸಾ ಮಧೂರ್ಜಶುಚಿಪೌಷಕಾಃ ॥ ೧೦೫ ॥

ಭದ್ರಾ ಚ ಸಂಕ್ರಮೋ ನಿದ್ರಾ ರಾತ್ರಿಶ್ಚಂದ್ರಾರ್ಕಯೋರ್ಗ್ರಹಃ ।
ಕುಲಟಾ ಪಾಪಭೋಗೇಷು ನಿಂದ್ಯರ್ಕ್ಷೇ ನಿಂದ್ಯವಾಸರೇ ॥ ೧೦೬ ॥

ತಿಲಾಜ್ಯದೂರ್ವಾ ಜುಹುಯಾದ್ಗಾಯತ್ರ್ಯಾಷ್ಟಶತಂ ಬುಧಃ ।
ಸುವರ್ಣಗೋತಿಲಾನ್ದದ್ಯಾತ್ಸರ್ವದೋಷಾಪನುತ್ತಯೇ ॥ ೧೦೭ ॥

ಆದ್ಯಾ ನಿಶಶ್ಚತಸ್ರಸ್ತು ತ್ಯಾಜ್ಯಾ ಅಪಿ ಸಮಾಃ ಪರ್ವೈಃ ।
ಓಜರಾಶ್ಯಂಶಗೇ ಚಂದ್ರೇ ಲಗ್ನೇ ಪುಂಗ್ರಹವೀಕ್ಷಿತೇ ॥ ೧೦೮ ॥

ವಳು. ಶನಿವಾರವಾದರೆ ಕ್ಲೇಶಯುಕ್ತಳಾಗುವಳು. ಈರೀತಿಯಾಗಿ ಭಾನು ವಾರಾದಿಯಾದ ಏಳು ವಾರಗಳಲ್ಲಿಯೂ ಕ್ರಮವಾಗಿ ರಜಸ್ವಲಾ ಫಲಗಳನ್ನ ರಿಯಬೇಕು

೧೦೫-೧೦೭. ಭರಣೀ, ಕೃತ್ತಿಕಾ, ಆರಿದ್ರಾ, ಪುಬ್ಬ, ಆಶ್ಲೇಷ, ವಿಶಾಖ ಜ್ಯೇಷ್ಠ ಈ ನಕ್ಷತ್ರಗಳು ಸ್ತ್ರೀಯರ ಪ್ರಥಮಾರ್ತವಕ್ಕೆ ಶುಭಪ್ರದಗಳಲ್ಲವೆಂದು ತಿಳಿಯಬೇಕು. ಚೈತ್ರ, ಜ್ಯೇಷ್ಠ, ಕಾರ್ತಿಕ, ಪುಷ್ಯ ಈ ಮಾಸಗಳು ಅಶುಭ ಪ್ರದಗಳು. ಹಾಗೆಯೇ ಭದ್ರಾಕರಣ, ಸೂರ್ಯಸಂಕ್ರಾಂತಿ, ನಿದ್ರಾಕಾಲ ರಾತ್ರಿಕಾಲ, ಸೂರ್ಯಚಂದ್ರರ ಗ್ರಹಣಕಾಲ ಈ ಸಮಯಗಳಲ್ಲಿ ಋತುಮತಿ ಯಾದವಳೂ, ಹಾಗೆಯೇ ಪಾಪಲಗ್ನಗಳು, ನಿಷಿದ್ಧತಿಥಿವಾರಾದಿಗಳೂ ಇವು ಗಳಲ್ಲಿ ರಜಸ್ವಲೆಯಾದವಳೂ ವ್ಯಭಿಚಾರಿಣಿಯಾಗುವಳೆಂದು ತಿಳಿಯಬೇಕು. ಈ ದೋಷನಿವಾರಣೆಗಾಗಿ ತಿಲ, ಆಜ್ಯ, ದೂರ್ವೆ ಈ ದ್ರವ್ಯಗಳಿಂದ ನೂರೆಂಟು ಗಾಯತ್ರೀಹೋಮಗಳನ್ನು ಮಾಡಬೇಕು. ಮತ್ತು ಸುವರ್ಣ, ಗೋವು, ತಿಲ ಇವುಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು.

೧೦೮-೧೦೯. ರಾತ್ರಿಯ ಮೊದಲನೆಯ ಮತ್ತು ನಾಲ್ಕನೆಯ ಯಾಮ ಗಳಲ್ಲಿ ಗರ್ಭಾಧಾನಕ್ಕೆ ಪ್ರಶಸ್ತವಾದ ಕಾಲವಲ್ಲ. ಗರ್ಭಾಧಾನಕಾಲದಲ್ಲಿ ಚಂದ್ರನು

ಉಪವೀತೀ ಯುಗ್ಮತಿಥಾವನಗ್ನಃ ಕಾಮಯೇತ್ಸ್ತ್ರಿಯಂ ।
ಪುತ್ರಾರ್ಥೀ ಪುರುಷಸ್ತ್ಯಕ್ತ್ವಾ ಪೌಷ್ಣ್ಯಮೂಲಾಹಿಪಿತ್ರ್ಯಭಂ ॥ ೩೧೯ ॥

ಪ್ರಸಿದ್ಧೇ ಪ್ರಥಮೇ ಗರ್ಭೇ ತೃತೀಯೇ ವಾ ದ್ವಿತೀಯಕೇ ।
ಮಾಸೇ ಪುಂಸವನಂ ಕಾರ್ಯಂ ಸೀಮಂತಂ ಚ ಯಥಾ ತಥಾ ॥ ೩೨೦ ॥

ಚತುರ್ಥೇ ಮಾಸಿ ಷಷ್ಠೇ ವಾಪ್ಯಷ್ಟಮೇ ವಾ ತದೀಶ್ವರೇ ।
ಬಲೋಪಪನ್ನೇ ದಂಪತ್ಯೋಶ್ಚಂದ್ರತಾರಾಬಲಾನ್ವಿತೇ ॥ ೩೨೧ ॥

ಅರಿಕ್ತಾ ಪರ್ವದಿವಸೇ ಕುಜಜೀವಾರ್ಕವಾಸರೇ ।
ತೀಕ್ಷ್ಣಮಿಶ್ರಾರ್ಕವರ್ಜ್ಯೇಷು ಪುಂಭಾಂಶೇ ರಾತ್ರಿನಾಯಕೇ ॥ ೩೨೨ ॥

ಶುದ್ಧೇಷ್ಟಮೇ ಜನ್ಮಲಗ್ನಾತ್ತಯೋರ್ಲಗ್ನೇ ನ ನೈಧನೇ ।
ಶುಭಗ್ರಹಯುತೇ ದೃಷ್ಟೇ ಪಾಪದೃಷ್ಟಿವಿವರ್ಜಿತೇ ॥ ೩೨೩ ॥

ಓಜರಾಶಿಯಲ್ಲಿದ್ದು ಲಗ್ನವು ಪುಂಗ್ರಹವೀಕ್ಷಿತವಾಗಿದ್ದರೆ ಪುಂಜನನವಾಗುವುದು. ಯುಗ್ಮತಿಥಿಯಲ್ಲಿ ಮತ್ತು ಯುಗ್ಮಲಗ್ನದಲ್ಲಿ ಸ್ತ್ರೀಯನ್ನು ಪ್ರವೇಶಮಾಡಿದವನು ಸ್ತ್ರೀಶಿಶುವನ್ನು ಹೊಂದುವನು. ಆದರೆ ರೇವತಿ ಮೂಲಾ ಆಶ್ಲೇಷಾ ಮಘ ಈ ನಕ್ಷತ್ರಗಳಲ್ಲಿ ಸ್ತ್ರೀಸಂಬಂಧಮಾಡಕೂಡದು.

೩೨೦-೩೨೧. ಪ್ರಥಮಗರ್ಭದಲ್ಲಿ ಎರಡು ಅಥವ ಮೂರನೆಯ ತಿಂಗಳಲ್ಲಿ ಪುಂಸವನವನ್ನೂ, ನಾಲ್ಕು, ಆರು ಎಂಟನೆಯ ತಿಂಗಳಲ್ಲಿ ಸೀಮಂತವನ್ನೂ ಮಾಡಬೇಕು. ಆ ದಿನದಲ್ಲಿ ದಂಪತಿಗಳಿಗೆ ಚಂದ್ರ ತಾರಾಬಲಗಳು ಸರಿಯಾಗಿ ಬರುವಂತೆ ಲಗ್ನವನ್ನು ನಿಷ್ಕರ್ಷಿಸಬೇಕು.

೩೨೨-೩೨೩. ಪುಂಸವನ ಸೀಮಂತಕರ್ಮಗಳಿಗೆ ರಿಕ್ತತಿಥಿ ಪರ್ವದಿನಗಳು, ಮಂಗಳವಾರ, ಗುರುವಾರ ಮತ್ತು ಭಾನುವಾರಗಳೂ ತೀಕ್ಷ್ಣ ಮತ್ತು ಮಿಶ್ರನಕ್ಷತ್ರಗಳಲ್ಲಿ ಸೂರ್ಯನಿರುವುದೂ ಅಷ್ಟು ಪ್ರಶಸ್ತತರಗಳಲ್ಲವೆಂದು ಹೇಳಿದೆ. ಚಂದ್ರನು ಪುಂರಾಶಿಯಲ್ಲಿರುವಾಗ ಅಷ್ಟಮಶುದ್ಧಿಯಿದ್ದು, ಲಗ್ನದಲ್ಲಿ ಶುಭಗ್ರಹವಿರುವುದಾಗಲೀ, ಪಾಪಗ್ರಹಗಳ ದೃಷ್ಟಿಯಿಲ್ಲದೇ ಶುಭಗ್ರಹಗಳ ದೃಷ್ಟಿಯೇ ಇರುವಾಗ ಸೀಮಂತಕರ್ಮವನ್ನು ನಡೆಸುವುದು ಪ್ರಶಸ್ತವಾದುದು.

ಶುಭಗ್ರಹೇಷು ಧೀಧರ್ಮಕೇಂದ್ರೇಷ್ವರಿಭವೇ ತ್ರಿಷು ।
ಪಾಪೇಷು ಸತ್ಸು ಚಂದ್ರೇಂತ್ಯನಿಧನಾದ್ಯರಿವರ್ಜಿತೇ ॥ ೩೨೪ ॥

ಕ್ರೂರಗ್ರಹಾಣಾಮೇಕೋಽಪಿ ಲಗ್ನಾದಂತ್ಯಾತ್ಮಜಾಷ್ಟಗಃ ।
ಸೀಮಂತಿನೀಂ ವಾ ತದ್ಗರ್ಭಂ ಬಲೀ ಹಂತಿ ನ ಸಂಶಯಃ ॥ ೩೨೫ ॥

ತಸ್ಮಿನ್ಜನ್ಮಮುಹೂರ್ತೇಽಪಿ ಸೂತಕಾಂತೇಽಪಿ ವಾ ಶಿಶೋಃ ।
ಜಾತಕರ್ಮ ಪ್ರಕರ್ತವ್ಯಂ ಪಿತೃಪೂಜನಪೂರ್ವಕಂ ॥ ೩೨೬ ॥

ಸೂತಕಾಂತೇ ನಾಮಕರ್ಮ ವಿಧೇಯಂ ತತ್ಕುಲೋಚಿತಂ ।
ನಾಮಪೂರ್ವಂ ಪ್ರಶಸ್ತಂ ಸ್ಯಾನ್ಮಂಗಲ್ಯೈಃ ಸುಸಮೀಕ್ಷಿತೈಃ ॥ ೩೨೭ ॥

ದೇಶಕಾಲೋದಶಾಶಾದ್ಯೈಃ ಕಾಲಾತಿಕ್ರಮಣಂ ಯದಾ ।
ಅನಸ್ತಗೇ ಭೃಗಾಪೀಜ್ಯೇ ತತ್ಕಾರ್ಯೇ ಚೋತ್ತರಾಯಣೇ ॥ ೩೨೮ ॥

ಸೀಮಂತಲಗ್ನದಿಂದ ಐದು, ಒಂಭತ್ತು, ಒಂದು, ನಾಲ್ಕು, ಏಳು, ಹತ್ತು ಈ ಮನೆಗಳಲ್ಲಿ ಶುಭಗ್ರಹಗಳಿರಬೇಕು. ಮೂರು, ಆರು, ಹನ್ನೊಂದನೆಯ ಸ್ಥಾನದಲ್ಲಿ ಪಾಪಗ್ರಹಗಳಿರಬೇಕು. ಚಂದ್ರನು ಹನ್ನೆರಡು ಮತ್ತು ಆರು ಈ ರಾಶಿಗಳಲ್ಲಿರಕೂಡದು. ಲಗ್ನಾತ್ ಹನ್ನೆರಡು, ಐದು, ಎಂಟನೆಯ ಮನೆಗಳಲ್ಲಿ ಒಂದು ಕ್ರೂರಗ್ರಹವಿದ್ದರೂ ಅದು ಸೀಮಂತಿನಿಯಾದ ಸ್ತ್ರೀಯನ್ನಾಗಲೀ ಅಥವ ಆಕೆಯ ಗರ್ಭವನ್ನಾಗಲೀ ಕೊಲ್ಲುವುದು. ಆದ್ದರಿಂದ ಸೀಮಂತಕ್ಕೆ ನಿರ್ದುಷ್ಟವಾದ ಲಗ್ನವನ್ನಿಡಬೇಕು.

೩೨೬-೩೨೮. ಮಗುವು ಹುಟ್ಟಿದಕಾಲದಲ್ಲಿಯೋ ಅಥವಾ ಜಾತಾಶೌಚನಿವೃತ್ತಿಯಾದಮೇಲೋ ಜಾತಕರ್ಮವನ್ನು ಪಿತೃಗಳ ಪೂಜಾಪೂರ್ವಕವಾಗಿ ನಡೆಸಬೇಕು. ಸೂತಕಾಂತ್ಯದಲ್ಲಿ ಅವರವರ ಕುಲಪದ್ಧತಿಯಂತೆ ನಾಮಕರಣ ಮಾಡುವುದು ಉತ್ತಮ. ಚೆನ್ನಾಗಿ ಆಲೋಚಿಸಿ ಮಂಗಳಕರವಾಗಿರುವ ಹೆಸರನ್ನು ಮಗುವಿಗೆ ಇಡುವುದು ಶ್ರೇಯಸ್ಕರವಾದದ್ದು. ಕಾರಣಾಂತರದಿಂದ ಸಕಾಲದಲ್ಲಿ ನಾಮಕರಣಮಾಡಲು ಸಾಧ್ಯವಾಗದಿದ್ದರೆ ಗುರು, ಶುಕ್ರರ ಅಸ್ತವಿಲ್ಲದಿರುವಾಗ ಉತ್ತರಾಯಣದಲ್ಲಿ ಚರ, ಸ್ಥಿರ, ಮೃದು, ಕ್ಷಿಪ್ರ ಈ ನಕ್ಷತ್ರಗಳಲ್ಲಿ

ಚರಸ್ಥಿರಮೃದುಕ್ಷಿಪ್ರನಕ್ಷತ್ರೇ ಶುಭವಾಸರೇ ।
ಚಂದ್ರತಾರಾಬಲೋಪೇತೇ ದಿವಸೇ ಚ ಶಿಶೋಃ ಪಿತುಃ ॥ ೩೨೯ ॥

ಶುಭಲಗ್ನೇ ಶುಭಾಂಶೇ ಚ ನಿಧನೇ ಶುದ್ಧಿಸಂಯುತೇ ।
ಷಷ್ಠೇ ಮಾಸ್ಯಷ್ಟಮೇ ವಾಪಿ ಪುಂಸಾಂ ಸ್ತ್ರೀಣಾಂ ತು ಪಂಚಮೇ ॥ ೩೩೦ ॥

ಸಪ್ತಮೇ ಮಾಸಿ ವಾ ಕಾರ್ಯಂ ನವಾನ್ನಪ್ರಾಶನಂ ಶುಭಂ ।
ರಿಕ್ತಾಂ ದಿನಕ್ಷಯಂ ನಂದಾಂ ದ್ವಾದಶೀಮಷ್ಟಮೀಮಥ ॥ ೩೩೧ ॥

ತ್ಯಕ್ತ್ವಾನ್ಯತಿಥಿಷು ಪ್ರೋಕ್ತಂ ಪ್ರಾಶನಂ ಶುಭವಾಸರೇ ।
ಚರಸ್ಥಿರಮೃದುಕ್ಷಿಪ್ರನಕ್ಷತ್ರೇ ಶುಭನೈಧನೇ ॥ ೩೩೨ ॥

ದಶಮೇ ಶುದ್ಧಿಸಂಯುಕ್ತೇ ಶುಭಲಗ್ನೇ ಶುಭಾಂಶಕೇ ।
ಪೂರ್ವಾರ್ಧೇ ಸೌಮ್ಯಖೇಟೇನ ಸಂಯುಕ್ತೇ ವೀಕ್ಷಿತೇಽಪಿ ವಾ ॥ ೩೩೩ ॥

ತ್ರಿಷಷ್ಠಲಾಭಗೈಃ ಕ್ರೂರೈಃ ಕೇಂದ್ರಧೀಧರ್ಮಗೈಃ ಶುಭೈಃ ।
ವ್ಯಯಾರಿನಿಧನಸ್ಥೇ ಚ ಚಂದ್ರೇಽನ್ನಪ್ರಾಶನಂ ಶುಭಂ ॥ ೩೩೪ ॥

ಶುಭವಾರದದಿನ ಚಂದ್ರ ತಾರಾಬಲಗಳನ್ನು ಚೆನ್ನಾಗಿ ನಿರ್ಣಯಿಸಿ ತಂದೆಯು ಮನೆಯಲ್ಲಿಯೇ ಮಗುವಿಗೆ ನಾಮಕರಣವಮಾಡಬಹುದು.

೩೩೦-೩೩೪. ಹೆಣ್ಣುಮಕ್ಕಳಿಗೆ ಐದು ಏಳು ಮೊದಲಾದ ವಿಷಮತಿಂಗಳುಗಳಲ್ಲಿಯೂ, ಗಂಡುಮಕ್ಕಳಿಗೆ ಆರು, ಎಂಟು ಮುಂತಾದ ಸಮತಿಂಗಳಲ್ಲಿಯೂ ಶುಭಲಗ್ನ, ಶುಭಾಂಶ, ಅಷ್ಟಮಶುದ್ಧಿಯಿರುವ ಲಗ್ನ ಇಂತಹ ಸಮಯದಲ್ಲಿ ಅನ್ನಪ್ರಾಶನವನ್ನು ಮಾಡಿಸಬೇಕು. ಅನ್ನಪ್ರಾಶನಕ್ಕೆ ರಿಕ್ತತಿಥಿ, ಕ್ಷಯತಿಥಿ, ನಂದತಿಥಿಗಳು, ದ್ವಾದಶೀ, ಅಷ್ಟಮಿ ಇವುಗಳನ್ನು ಬಿಟ್ಟು ಉಳಿದ ತಿಥಿಗಳು ಪ್ರಶಸ್ತವಾದುವುಗಳು. ಚರ, ಸ್ಥಿರ, ಮೃದು, ಕ್ಷಿಪ್ರನಕ್ಷತ್ರಗಳೂ, ಲಗ್ನಾಷ್ಟಮಶುದ್ಧಿ ಲಗ್ನದಶಮಶುದ್ಧಿ ಅಥವ ಶುಭಗ್ರಹಸಂಬಂಧ, ಮೂರು, ಆರು, ಹನ್ನೊಂದರಲ್ಲಿ ಪಾಪಗ್ರಹಳಿರುವುದು, ಒಂದು, ಐದು, ಒಂಭತ್ತು, ಏಳು, ನಾಲ್ಕು, ಹತ್ತರಲ್ಲಿ ಶುಭಗ್ರಹಗಳಿರುವುದೂ ಅನ್ನಪ್ರಾಶನಕ್ಕೆ ಬಹು ಪ್ರಶಸ್ತವಾದುವುಗಳೆಂದು ತಿಳಿಯಬೇಕು.

ತೃತೀಯೇ ಪಂಚಮೇ ಚಾಬ್ದೇ ಸ್ವಕುಲಾಚಾರತೋಽಪಿ ವಾ ।
ಬಾಲಾನಾಂ ಜನ್ಮತಶ್ಚೌಲಂ ಸ್ವಗೃಹ್ಯೋಕ್ತವಿಧಾನತಃ ॥ ೩೩೫ ॥

ಸೌಮ್ಯಾಯನೇ ನಾಸ್ತಗಯೋಃ ಸುರಾರಿಸುರಮಂತ್ರಿಣೋಃ ।
ಅಪರ್ವರಿಕ್ತಾತಿಥಿಷು ಶುಕ್ರೇಜ್ಯಜ್ಞೇಂದುವಾಸರೇ ॥ ೩೩೬ ॥

ದಸ್ರಾದಿತೀಜ್ಯಚಂದ್ರೇಂದ್ರಪೂಷಭಾನಿ ಶುಭಾನಿ ತು ।
ಚೌಲಕರ್ಮಣಿ ಹಸ್ತರ್ಕ್ಷಾತ್ತ್ರೀಣಿ ತ್ರೀಣಿ ಚ ವಿಷ್ಣುಭಾತ್ ॥ ೩೩೭ ॥

ಪಟ್ಟಬಂಧನಚೌಲಾನ್ನಪ್ರಾಶನೇ ಚೋಪನಾಯನೇ ।
ಶುಭದಂ ಜನ್ಮನಕ್ಷತ್ರಮಶುಭಂ ತ್ವನ್ಯಕರ್ಮಣಿ ॥ ೩೩೮ ॥

ಅಷ್ಟಮೇಃ ಶುದ್ಧಿಸಂಯುಕ್ತೇ ಶುಭಲಗ್ನೇ ಶುಭಾಂಶಕೇ ।
ಜನ್ಮಾಷ್ಟಮೇ ನ ಶೀತಾಂಶೌ ಷಷ್ಠಾಷ್ಟಾಂತ್ಯವಿವರ್ಜಿತೇ ॥ ೩೩೯ ॥

೩೩೫-೩೩೯. ಮಗುವಿಗೆ ಚೂಡಾಕರ್ಮವಾಡಲು ಜನ್ಮತಃ ಮೂರು ಅಥವ ಐದು ವರ್ಷಗಳು ಪ್ರಶಸ್ತವಾದುವುಗಳು. ಅದನ್ನು ಸ್ವಶಾಖಾನುಸಾರವಾಗಿ ಕುಲಪದ್ಧತಿಯನ್ನು ಸ್ವಲ್ಪವೂ ಬಿಡದೇ ನಡೆಸಬೇಕು. ಉತ್ತರಾಯಣದಲ್ಲಿ ಗುರುಶುಕ್ರಾಸ್ತವಿಲ್ಲದಿರುವಾಗ ಪರ್ವ ಮತ್ತು ರಿಕ್ತತಿಥಿಗಳನ್ನು ಬಿಟ್ಟು ಶುಕ್ರ ಗುರು, ಬುಧ, ಚಂದ್ರವಾರಗಳಲ್ಲಿ ಅಶ್ವಿನೀ, ಪುನರ್ವಸು, ಪುಷ್ಯ, ರೋಹಿಣೀ ಜ್ಯೇಷ್ಠ, ರೇವತೀ ಮುಂತಾದ ಶುಭ ನಕ್ಷತ್ರಗಳಲ್ಲಿ ಚೌಲವನ್ನು ನಡೆಸಬಹುದು. ಇದೇರೀತಿ ಉಪನಯನಕ್ಕೂ ಇರಬೇಕು. ಅಲ್ಲದೇ ಉಪನಯನಕ್ಕೆ ಹಸ್ತ ಚಿತ್ತ, ಸ್ವಾತಿಯೂ, ಶ್ರವಣ, ಧನಿಷ್ಠ, ಶತಭಿಷಗಳೂ ಪ್ರಶಸ್ತಗಳಾಗಿವೆ. ಚೌಲೋಪನಯನಗಳಿಗೆ ಮಾತ್ರ ಜನ್ಮನಕ್ಷತ್ರವು ಪ್ರಶಸ್ತವಾದದ್ದು. ಉಳಿದ ಕರ್ಮಗಳಿಗೆ ಜನ್ಮನಕ್ಷತ್ರಗಳು ಪ್ರಶಸ್ತವಾದದ್ದಲ್ಲವೆಂದು ಗಮನಿಸಬೇಕು. ಚೌಲೋಪನಯನ ಲಗ್ನಗಳು ಅಷ್ಟಮಶುದ್ಧಿಯಿಂದಲೂ ಶುಭಾಂಶಗಳಿಂದಲೂ ಕೂಡಿರಬೇಕು. ಜನ್ಮಲಗ್ನದಿಂದ ಎಂಟನೆಯ ರಾಶಿಯು ಚೌಲೋಪನಯನ ಲಗ್ನವಾಗಿರಕೂಡದು. ಚಂದ್ರನು ಆರು, ಎಂಟು, ಹನ್ನೆರಡನೆಯ ಮನೆಗಳಲ್ಲಿರಕೂಡದು. ದ್ವಿತೀಯ ಮತ್ತು ಕೇಂದ್ರ ತ್ರಿಕೋಣಗಳಲ್ಲಿ ಶುಭಗ್ರಹಗಳೂ ಮೂರು, ಆರು, ಹನ್ನೊಂದರಲ್ಲಿ ಪಾಪಗ್ರಹಗಳೂ ಇರಬೇಕು.

ಧನತ್ರಿಕೋಣಕೇಂದ್ರಸ್ಥೈಃ ಶುಭೈಸ್ತ್ರ್ಯಾಯಾರಿಗೈಃ ಪರೈಃ ।
ಅಭ್ಯಕ್ತೇ ಸಂಧ್ಯಯೋರ್ಮಾರ್ಗೇ ನಿಶಿ ಭುಕ್ತ್ವಾ ನ ವಾಹವೇ ॥ ೩೪೦ ॥

ನೋತ್ಕಟೇ ಭೂಷಿತೇ ನೈವ ಯಾನೇ ನ ನವಮೇಽಹ್ನಿ ಚ ।
ಕ್ಷೌರಕರ್ಮ ಮಹೀಪಾನಾಂ ಪಂಚಮೇ ಪಂಚಮೇಽಹನಿ ॥ ೩೪೧ ॥

ಕರ್ತವ್ಯಂ ಕ್ಷೌರನಕ್ಷತ್ರೇಽಪ್ಯಥ ವಾಸ್ಯೋದಯೇ ಶುಭಂ ।
ನೃಪವಿಪ್ರಾಜ್ಞಯಾ ಯಜ್ಞೇ ಮರಣೇ ಬಂಧಮೋಕ್ಷಣೇ ॥ ೩೪೨ ॥

ಉದ್ವಾಹೇಽಖಿಲವಾರರ್ಕ್ಷತಿಥಿಷು ಕ್ಷೌರಮಿಷ್ಟದಂ ।
ಕರ್ತವ್ಯಂ ಮಂಗಲೇಷ್ವಾದೌ ಮಂಗಲಾಯ ಕ್ಷುರಾರ್ಪಣಂ ॥ ೩೪೩ ॥

---

೩೪೦-೩೪೨. ಅಭ್ಯಂಜನಸ್ನಾನವಾದಮೇಲೂ, ಸಂಧ್ಯಾಕಾಲದಲ್ಲಿಯೂ ದಾರಿಯಲ್ಲಿಯೂ, ರಾತ್ರಿವೇಳೆಯಲ್ಲಿಯೂ, ಊಟವಾದಮೇಲೂ, ಯುದ್ಧರಂಗದಲ್ಲಿಯೂ, ಕೋಪದಿಂದಿರುವಾಗಲೂ, ಅಲಂಕೃತನಾಗಿದ್ದಾಗಲೂ, ಪ್ರಯಾಣ ಮಾಡುವಾಗಲೂ, ನವಮಿಯ ತಿಥಿಯಲ್ಲಿಯೂ, ಕ್ಷೌರವನ್ನು ಮಾಡಿಸಿಕೊಳ್ಳಬಾರದು. ರಾಜರು ಪ್ರತಿಪಂಚಮಿಯಲ್ಲಿಯೂ ಕ್ಷೌರಕರ್ಮವನ್ನು ಮಾಡಿಸಿಕೊಳ್ಳಬಹುದು. ಕ್ಷೌರಕರ್ಮಕ್ಕೆವಿಹಿತವಾಗಿರುವ ನಕ್ಷತ್ರಗಳಲ್ಲಿಯೇ ಈ ಕರ್ಮವನ್ನುಮಾಡಿಸಿಕೊಳ್ಳಬೇಕು. ಆದರೆ ರಾಜಾಜ್ಞೆ, ಬ್ರಾಹ್ಮಣಾಜ್ಞೆ, ಯಜ್ಞ, ದೊಡ್ಡವರ ಮರಣಕಾಲ, ಬಂಧನಮೋಕ್ಷಕಾಲ ಮುಂತಾದ ಅವಶ್ಯಕರ್ಮಗಳಲ್ಲಿ ಯಾವ ತಿಥಿ, ವಾರ, ನಕ್ಷತ್ರ ಮುಂತಾದವುಗಳನ್ನೂ ನೋಡಬೇಕಾಗಿಲ್ಲ.

೩೪೩. ಮದುವೆಗೆ ಹೇಳಿದ ದಿನ, ವಾರ, ನಕ್ಷತ್ರಗಳಲ್ಲಿ ಕ್ಷೌರವನ್ನು ಮಾಡಿಸಬಹುದು. ಸರ್ವ ಶುಭಕರ್ಮಗಳಿಗೂ ಪ್ರಾರಂಭದಲ್ಲಿ ಕ್ಷೌರವನ್ನು ಮಾಡಿಸುವುದು ಮಂಗಳಕರವಾದದ್ದೆಂದು ತಿಳಿಯಬೇಕು ಮತ್ತು ಉದ್ವಾಹಾದಿ ಕರ್ಮಗಳಲ್ಲೆಲ್ಲಾ ಅಂಕುರಾರ್ಪಣಕರ್ಮವನ್ನಾಚರಿಸುವುದು ತುಂಬಾ ಪ್ರಶಸ್ತವಾದುದು.

ನವಮೇ ಸಪ್ತಮೇ ವಾಪಿ ಪಂಚಮೇ ದಿವಸೇಽಪಿ ವಾ ।
ತೃತೀಯೇ ಬೀಜನಕ್ಷತ್ರೇ ಶುಭವಾರೇ ಶುಭೋದಯೇ ॥ ೩೪೪ ॥

ಸಮ್ಯಗ್ಗೃಹಾಣ್ಯಲಂಕೃತ್ಯ ವಿತಾನಧ್ವಜತೋರಣೈಃ ।
ಆಶಿಷೋ ವಾಚನಂ ಕಾರ್ಯಂ ಪುಣ್ಯಂ ಪುಣ್ಯಾಂಗನಾದಿಭಿಃ ॥ ೩೪೫ ॥

ಸಹ ವಾದಿತ್ರನೃತ್ಯಾದ್ಯೈರ್ಗತ್ವಾ ಪ್ರಾಗುತ್ತರಾಂ ದಿಶಂ ।
ತತ್ರ ಮೃದಂ ಗೃಹಿತ್ವಾಶು ಯಥಾವತ್ಪುನರಾಗತಃ ॥ ೩೪೬ ॥

ಮೃಣ್ಮಯೇಽಪ್ಯಥವಾ ವೈಣವೇಽಪಿ ಪಾತ್ರೇ ಪ್ರಪೂರಯೇತ್ ।
ಅನೇಕಬೀಜಸಂಯುಕ್ತಂ ತೋಯಂ ಪುಷ್ಪಾಭಿಶೋಭಿತಂ ॥ ೩೪೭ ॥

ಅಥಾನಾದಷ್ಟಮೇ ವರ್ಷೇ ಜನ್ಮತೋ ವಾಗ್ರಜನ್ಮನಾಂ ।
ರಾಜ್ಞಾಮೇಕಾದಶೇ ಮೌಂಜೀಬಂಧನಂ ದ್ವಾದಶೇ ವಿಶಾಂ ॥ ೩೪೮ ॥

---

೩೪೪-೩೪೭. ಶುಭಕರ್ಮಗಳಿಗೆ ಮೊದಲು ಮೂರು, ಐದು, ಏಳು ಈ ದಿನಗಳಲ್ಲಿ ಶುಭನಕ್ಷತ್ರ ಮತ್ತು ಶುಭವಾರವಿರುವಾಗ ಮನೆಯನ್ನು ರಂಗವಲ್ಯಾದಿಗಳಿಂದ ಅಲಂಕರಿಸಿ, ಧ್ವಜತೋರಣಾದಿಗಳನ್ನೂ ಕಟ್ಟಿ ವೃದ್ಧಾಶೀರ್ವಾದಪೂರ್ವಕವಾಗಿ, ಸುವಾಸಿನಿಯರಿಂದ ಕೂಡಿ, ಉತ್ತರದಿಗ್ಭಾಗದಿಂದ ಮಂಗಳವಾದ್ಯಪುರಸ್ಸರವಾಗಿ ಮಣ್ಣನ್ನು ತಂದು ಮೃಣ್ಮಯವಾದ ಅಥವ ಬಿದಿರಿನಿಂದ ರಚಿತವಾದ ಪಾತ್ರೆಗಳನ್ನಿಟ್ಟು ಅದರಮೇಲೆ ಬೇರೆಬೇರೆ ಧಾನ್ಯಗಳನ್ನು ಬಿತ್ತಬೇಕು. ಅದನ್ನು ಪುಷ್ಪಾದಿಗಳಿಂದ ಅಲಂಕರಿಸಿ, ಬೆಳೆಸಬೇಕು. ಇದೇ ಅಂಕುರಾರ್ಪಣವೆನಿಸುವುದು.

೩೪೮-೩೫೨. ಬ್ರಾಹ್ಮಣವಟುವಿಗೆ ಜನ್ಮಾಷ್ಟಮ ಅಥವ ಗರ್ಭಾಷ್ಟಮ ವರ್ಷಗಳಲ್ಲಿಯೂ, ಕ್ಷತ್ರಿಯನಿಗೆ ಹನ್ನೊಂದನೆಯ ವರ್ಷದಲ್ಲಿಯೂ, ವೈಶ್ಯನಿಗೆ ಹನ್ನೆರಡನೆಯ ವರ್ಷದಲ್ಲಿಯೂ ಮಾಡುವ ಉಪನಯನವು ಪ್ರಶಸ್ತವಾದದ್ದು. ಆದರೆ ವೇದಶಾಸ್ತ್ರಾದಿಗಳಲ್ಲಿ ನೈಪುಣ್ಯವನ್ನಪೇಕ್ಷಿಸುವ ಕಾಮ್ಯಬುದ್ಧಿಯಿಂದ ಐದನೆಯ ವಯಸ್ಸಿನಲ್ಲಿ ಬೇಕಾದರೂ ಉಪನಯನವನ್ನು ಮಾಡಬಹುದು. ಹಾಗೆಯೇ ಶ್ರೀಕಾಮನಾದವನಿಗೆ ಆರನೆಯ ವರ್ಷವೂ ಪ್ರಶಸ್ತವಾಗಿರುವುದು.

ಜನ್ಮತಃ ಪಂಚಮೇ ವರ್ಷೇ ವೇದಶಾಸ್ತ್ರವಿಶಾರದಃ ।
ಉಪವೀತೀ ಯತಃ ಶ್ರೀಮಾನ್ಕಾರ್ಯಂ ತತ್ರೋಪನಾಯನಂ ॥ ೩೪೯ ॥

ಬಾಲಸ್ಯ ಬಲಹೀನೋಽಪಿ ಸಿತೋ ಜೀವಃ ಶುಭಪ್ರದಃ ।
ಯಥೋಕ್ತವತ್ಸರೇ ಕಾರ್ಯಮನುಕ್ತೇ ನೋಪನಾಯನಂ ॥ ೩೫೦ ॥

ದೃಶ್ಯಮಾನಗುರೌ ಶುಕ್ರೇ ಶಾಖೇಶೇ ಚೋತ್ತರಾಯಣೇ ।
ವೇದಾನಾಮಧಿಪಾ ಜೀವಶುಕ್ರಭೌಮಬುಧಾಃ ಕ್ರಮಾತ್ ॥ ೩೫೧ ॥

ಶರದ್ಗ್ರೀಷ್ಮವಸಂತೇಷು ವ್ಯುತ್ಕ್ರಮಾತ್ತು ದ್ವಿಜನ್ಮನಾಂ ।
ಮುಖ್ಯಂ ಸಾಧಾರಣಂ ತೇಷಾಂ ತಪೋ ಮಾಸಾದಿಪಂಚಸು ॥ ೩೫೨ ॥

ಸ್ವಕುಲಾಚಾರಧರ್ಮಜ್ಞೋ ಮಾಘಮಾಸೇ ತು ಫಾಲ್ಗುನೇ ।
ವಿಧಿಜ್ಞಶ್ಚಾರ್ಥವಾಂಶ್ಚೈತ್ರೇ ವೇದವೇದಾಂಗಪಾರಗಃ ॥ ೩೫೩ ॥

ಉಪನೀತನಾಗುವ ವಟುವಿಗೆ ಶುಕ್ರನ ಬಲವಿದ್ದರೂ, ಗುರುಬಲವಿದ್ದೇಇರಬೇಕು. ಅದನ್ನು ನೋಡಿ ಹಿಂದೆ ಹೇಳಿದ ಕಾಲವು ಅತೀತವಾಗದಂತೆ ಉಪನಯನಮಾಡಬೇಕು. ಉಪನಯನಕಾಲದಲ್ಲಿ ಗುರುಶುಕ್ರರು ಅಸ್ತರಾಗಿರಕೂಡದು. ಉತ್ತರಾಯಣವಾಗಿರಬೇಕು. ಗುರು, ಶುಕ್ರ, ಕುಜ, ಬುಧರು ಕ್ರಮವಾಗಿ ವೇದಾಧಿಪತಿಗಳಾಗಿರುವುದರಿಂದ ಅವರೂ ಆಯಾ ಶಾಖೆಗಳಿಗೆ ಬಲಿಷ್ಠರಾಗಿರಬೇಕು. ವಸಂತ, ಗ್ರೀಷ್ಮ, ಶರದೃತುಗಳು, ಬ್ರಾಹ್ಮಣ, ಕ್ಷತ್ರಿಯ ವೈಶ್ಯವರ್ಣದವರಿಗೆ ಕ್ರಮವಾಗಿ ಪ್ರಶಸ್ತನಾದುವುಗಳು. ಮಾಘಾದಿ ಐದು ತಿಂಗಳುಗಳು ಸಾಧಾರಣವಾಗಿ ಎಲ್ಲರಿಗೂ ಶ್ರೇಷ್ಠವಾದುವುಗಳೆಂದು ತಿಳಿಯಬೇಕು.

೩೫೩-೩೫೭. ಮಾಘ, ಫಾಲ್ಗುಣಮಾಸಗಳಲ್ಲಿ ಉಪನೀತವಾದ ವಟುವು ಕುಲಾಚಾರ ಧರ್ಮಗಳಿಂದ ಪರಿಪೂರ್ಣನೆನಿಸುವನು. ಚೈತ್ರದಲ್ಲಿ ವಿಧಿಜ್ಞನಾಗಿಯೂ, ಶ್ರೀಮಂತನಾಗಿಯೂ, ವೇದವೇದಾಂಗಗಳಲ್ಲಿ ನಿಪುಣನಾಗಿಯೂ ಆಗುವನು. ವೈಶಾಖದಲ್ಲಿ ಧನವಂತನೂ, ವೇದಶಾಸ್ತ್ರಾದಿಗಳಲ್ಲಿ ಪಾರಂಗತನಾಗಿಯೂ ಆಗುವನು. ಜ್ಯೇಷ್ಠದಲ್ಲಿ ಉಪನೀತನಾದ ವಟುವು

ವೈಶಾಖೇ ಧನವಾನ್ವೇದಶಾಸ್ತ್ರವಿದ್ಯಾವಿಶಾರದಃ ।
ಉಪನೀತೋ ಬಲಾಢ್ಯಶ್ಚ ಜ್ಯೇಷ್ಠೇ ವಿಧಿವಿದಾಂ ವರಃ ॥ ೩೫೪ ॥

ಶುಕ್ಲಪಕ್ಷೇ ದ್ವಿತೀಯಾ ಚ ತೃತೀಯಾ ಪಂಚಮೀ ತಥಾ ।
ತ್ರಯೋದಶೀ ಚ ದಶಮೀ ಸಪ್ತಮೀ ವ್ರತಬಂಧನೇ ॥ ೩೫೫ ॥

ಶ್ರೇಷ್ಠಾ ಏಕಾದಶೀ ಷಷ್ಠೀ ದ್ವಾದಶ್ಯನ್ಯಾಸ್ತು ಮಧ್ಯಮಾಃ ।
ಕೃಷ್ಣೇ ದ್ವಿತ್ರೀಷುಸಂಖ್ಯಾಶ್ಚ ತಿಥಯೋಽನ್ಯಾ ಹ್ಯತಿನಿಂದಿತಾಃ ॥ ೩೫೬ ॥

ಧಿಷ್ಣ್ಯಾನ್ಯರ್ಕತ್ರಯಾಂಶೇಜರುದ್ರಾದಿತ್ಯುತ್ತರಾಣಿ ಚ ।
ವಿಷ್ಣುತ್ರಯಾಶ್ವಿಮಿತ್ರಾಬ್ಜಯೋನಿಭಾನ್ಯುಪನಾಯನೇ ॥ ೩೫೭ ॥

ಜನ್ಮಭಾದ್ದಶಮಂ ಕರ್ಮ ಸಂಘಾತರ್ಕ್ಷಂ ತು ಷೋಡಶಂ ।
ಅಷ್ಟಾದಶಂ ಸಮುದಯಂ ತ್ರಯೋವಿಂಶಂ ವಿನಾಶನಂ ॥ ೩೫೮ ॥

ಬಲಿಷ್ಠನೂ, ವೇದಜ್ಞನೂ ಆಗುವನು. ಉಪನಯನಕ್ಕೆ ಶುಕ್ಲಪಕ್ಷದ್ವಿತೀಯಾ ತೃತೀಯ, ಪಂಚಮಿ, ತ್ರಯೋದಶೀ, ದಶಮಿ, ಸಪ್ತಮಿ ಈ ತಿಥಿಗಳು ಪ್ರಶಸ್ತವಾದುವುಗಳು. ಏಕಾದಶೀ, ಷಷ್ಠಿ, ದ್ವಾದಶೀ ತಿಥಿಗಳು ಮಧ್ಯಮವಾದುವುಗಳು. ಉಳಿದುವುಗಳು ಅಧಮಗಳೆನಿಸುವುವು. ಕೃಷ್ಣಪಕ್ಷದಲ್ಲಿ ಬಿದಿಗೆ ತದಿಗೆ, ಪಂಚಮಿ ಈ ಮೂರನ್ನು ಬಿಟ್ಟು ಉಳಿದುವುಗಳೆಲ್ಲಾ ಅಪ್ರಶಸ್ತವಾದುವುಗಳೇ ಎಂದು ತಿಳಿಯಬೇಕು.

೩೫೭-೩೬೪. ಹಸ್ತ, ಚಿತ್ತ, ಸ್ವಾತಿ, ರೇವತಿ, ಪುಷ್ಯ, ಆದ್ರ್ರ ಪುನರ್ವಸು, ಉತ್ತರಾತ್ರಯ (ಅಂದರೆ ಉತ್ತರಾ, ಉತ್ತರಾಷಾಢ, ಉತ್ತರಾಭಾದ್ರ) ಶ್ರವಣ, ಧನಿಷ್ಠ, ಶತಭಿಷ, ಅಶ್ವಿನೀ, ಅನೂರಾಧ, ರೋಹಿಣೀ ಈ ನಕ್ಷತ್ರಗಳು ಉಪನಯನಕ್ಕೆ ಪ್ರಶಸ್ತವಾದುವುಗಳು. ವಟುವಿನ ಜನ್ಮನಕ್ಷತ್ರದಿಂದ ಹತ್ತನೆಯ ನಕ್ಷತ್ರಕ್ಕೆ ಕರ್ಮನಕ್ಷತ್ರವೆಂದೂ, ಹದಿನಾರನೆಯ ನಕ್ಷತ್ರಕ್ಕೆ ಸಂಘಾತನಕ್ಷತ್ರವೆಂದೂ, ಹದಿನೆಂಟನೆಯದಕ್ಕೆ ಸಮುದಯವೆಂದೂ, ಇಪ್ಪತ್ತಮೂರನೆಯದಕ್ಕೆ ವಿನಾಶನವೆಂದೂ, ಇಪ್ಪತ್ತೈದನೆಯದಕ್ಕೆ ಮಾನಸವೆಂದೂ ಹೆಸರು. ಈ ನಕ್ಷತ್ರಗಳಲ್ಲಿ ಶುಭಕರ್ಮಗಳನ್ನಾಚರಿಸಬಾರದು. ಉಪನಯ

**ಮಾನಸಂ ಪಂಚವಿಂಶತ್ಯಬ್ದಂ ನಾಚರೇಚ್ಛುಭಮೇಷು ತು ।**
**ಆಚಾರ್ಯಸೌಮ್ಯಕಾವ್ಯಾನಾಂ ವಾರಾಃ ಶಸ್ತಾಃ ಶಶೀನಯೋಃ ॥ ೩೫೯ ॥**

**ವಾತಾ ತು ಮಧ್ಯಮೌ ಚೈವ ಪ್ರತೇಽನ್ಯೌ ನಿಂದಿತೌ ಮತೌ ।**
**ತ್ರಿಧಾ ವಿಭಜ್ಯ ದಿವಸಂ ತತ್ರಾದೌ ಕರ್ಮ ದೈವಿಕಂ ॥ ೩೬೦ ॥**

**ದ್ವಿತೀಯೇ ಮಾನುಷಂ ಕಾರ್ಯಂ ತೃತೀಯೇಂಶೇ ಚ ಪೈತೃಕಂ ।**
**ಸ್ವನೀಚಗೇ ತದಂಶೇ ವಾ ಸ್ವಾರಿಭೇ ವಾ ತದಂಶಕೇ ॥ ೩೬೧ ॥**

**ಗುರುಶಿಖಿನೋಽಕ್ಷ ಶಾಖೇಶೇ ಕಲಾಶೀಲವಿವರ್ಜಿತಃ ।**
**ಸ್ವಾಧಿಶತ್ರುಗೃಹಸ್ಥೇ ವಾ ತದಂಶಸ್ಥೇಥವಾ ವ್ರತೀ ॥ ೩೬೨ ॥**

**ಶಾಖೇಶೇ ವಾ ಗುರೌ ಶುಕ್ರೇ ಮಹಾಪಾತಕಕೃದ್ಭವೇತ್ ।**
**ಸ್ವೋಚ್ಚಸಂಸ್ಥೇ ತದಂಶೇ ವಾ ಸ್ವರಾಶೌ ರಾಶಿಗೇ ಗಣೇ ॥ ೩೬೩ ॥**

**ಶಾಖೇಶೇ ವಾ ಗುರೌ ಶುಕ್ರೇ ಕೇಂದ್ರಗೇ ವಾ ತ್ರಿಕೋಣಗೇ ।**
**ಅತೀವ ಧನವಾಂಶ್ಚೈವ ವೇದವೇದಾಂಗಪಾರಗಃ ॥ ೩೬೪ ॥**

ನಕ್ಕೆ ಗುರು, ಬುಧ ಶುಕ್ರವಾರಗಳು ಪ್ರಶಸ್ತವಾದುವುಗಳು. ಭಾನು, ಸೋಮ ವಾರಗಳು ಮಧ್ಯಮಗಳು. ಉಳಿದ ವಾರಗಳು ನಿಂದಿತಗಳು. ಅಹಃ ಪ್ರಮಾಣದ ಮೂರನೆಯ ಒಂದು ಭಾಗದಲ್ಲಿ ದೈವಕಾರ್ಯಗಳನ್ನೂ ಎರಡನೆಯ ಭಾಗದಲ್ಲಿ ಮಾನುಷಕಾರ್ಯಗಳನ್ನೂ ಮೂರನೆಯ ಭಾಗದಲ್ಲಿ ಪಿತೃಕರ್ಮಗಳನ್ನೂ ಆಚರಿಸಬೇಕು. ಗುರು, ಚಂದ್ರ, ಅಥವಾ ವೇದಾಧಿಪತಿ ಇವರಲ್ಲಿ ಯಾರೊಬ್ಬರೂ ನೀಚಾಂಶದಲ್ಲಾಗಲೀ ನೀಚರಾಶಿಯಲ್ಲಾಗಲಿ, ಶತ್ರುನವಾಂಶದಲ್ಲಾಗಲೀ ಇದ್ದರೆ ಉಪನೀತನು ಕಲಾಶೀಲಾದಿಗಳಿಂದ ವಿವರ್ಜಿತನಾಗುವನು. ಅಧಿಶತ್ರುರಾಶಿಯಲ್ಲಾಗಲೀ ಆ ಅಂಶದಲ್ಲಾಗಲೀ, ಗುರು, ಶುಕ್ರ ಮತ್ತು ಶಾಖಾಧಿಪತಿಗಳಿದ್ದರೆ, ವ್ರತಿಯು ಮಹಾಪಾತಕಿಯಾಗಿ ಪಾಪಕಾರ್ಯಗಳನ್ನೆಸಗುವವನಾಗುತ್ತಾನೆ. ಈ ಗ್ರಹಗಳು ಉಚ್ಚ, ಉಚ್ಚಾಂಶ, ಸ್ವಕ್ಷೇತ್ರ, ಕೇಂದ್ರ ತ್ರಿಕೋಣ ಇವುಗಳಲ್ಲಿ ಇದ್ದದ್ದೇ ಆದರೆ ಉಪನೀತನಾದ ವಟುವು ಧನಿಕನೂ ವೇದ ಮತ್ತು ವೇದಾಂಗ ಅಂದರೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಇವುಗಳಲ್ಲಿ ಪಂಡಿತನೂ ಆಗುತ್ತಾನೆ.

ಪರಮೋಚ್ಚಗತೇ ಜೀವೇ ಶಾಖೇಶೇ ವಾಥವಾ ಸಿತೇ ।
ವ್ರತೀ ವಿಶುದ್ಧೇ ನಿಧನೇ ವೇದಶಾಸ್ತ್ರವಿಶಾರದಃ ॥ ೩೬೫ ॥

ಸ್ವಾಧಿಮಿತ್ರಗೃಹಸ್ಥೇ ವಾ ತಸ್ಯೋಚ್ಚಸ್ಥೇ ತದಂಶಗೇ ।
ಗುರೌ ಭೃಗೌ ವಾ ಶಾಖೇಶೇ ವಿದ್ಯಾಧನಸಮನ್ವಿತಃ ॥ ೩೬೬ ॥

ಶಾಖಾಧಿಪತಿವಾರಶ್ಚ ಶಾಖಾಧಿಪಬಲಂ ಶಿಶೋಃ ।
ಶಾಖಾಧಿಪತಿಲಗ್ನಂ ಚ ದುರ್ಲಭಂ ತ್ರಿತಯಂ ವ್ರತೇ ॥ ೩೬೭ ॥

ತಸ್ಮಾದ್ವೇದಾಂಶಗೇ ಚಂದ್ರೇ ವ್ರತೀ ವಿದ್ಯಾವಿಶಾರದಃ ।
ಪಾಪಾಂಶಗೇ ಸ್ವಾಂಶಗೇ ವಾ ದರಿದ್ರೋ ನಿತ್ಯದುಃಖಿತಃ ॥ ೩೬೮ ॥

ಶ್ರವಣಾದಿತಿನಕ್ಷತ್ರೇ ಕರ್ಕಾಂಶಸ್ಥೇ ನಿಶಾಕರೇ ।
ತದಾ ವ್ರತೀ ವೇದಶಾಸ್ತ್ರಧನಧಾನ್ಯಸಮೃದ್ಧಿಮಾನ್ ॥ ೩೬೯ ॥

೩೬೫–೩೬೯. ಮೇಲೆಹೇಳಿದ ಗ್ರಹಗಳು ಪರಮೋಚ್ಚರಾಶಿಯಲ್ಲಿ ಪರಮೋಚ್ಚಭಾಗದಲ್ಲಿರುವಾಗ ಲಗ್ನಕ್ಕೆ ಅಷ್ಟಮಶುದ್ಧಿಯಿರುವುದಾದರೆ ವಟುವು ವೇದಶಾಸ್ತ್ರನಿಪುಣನಾಗುವನು. ಅಲ್ಲದೇ ಅಧಿಮಿತ್ರರ ರಾಶಿಯಲ್ಲಾಗಲೀ ಅಂಶದಲ್ಲಾಗಲೀ ಅವರ ಉಚ್ಚರಾಶಿಯಲ್ಲಾಗಲೀ ಇರುವುದಾದರೆ ವಿದ್ಯಾಧನಯುಕ್ತನಾಗುವನು. ಉಪನಯನದಲ್ಲಿ ಶಾಖಾಧಿಪತಿಯ ವಾರ ಅವನ ಬಲ ಅವನ ಲಗ್ನ ಇವು ಮೂರು ಪ್ರಶಸ್ತವಾದುದು. ಆದರೆ ಅದು ದೊರೆಯುವುದು ದರ್ಲಭ. ಆದ್ದರಿಂದ ಚಂದ್ರನು ಶಾಖಾಧಿಪತಿಯ ರಾಶ್ಯಂಶಗತನಾಗಿದ್ದರೆ ಆ ಸಮಯದಲ್ಲಿ ಉಪನಯನವಾದ ವಟುವು ವೇದಪಾರಂಗತನಾಗುವನು. ಆದರೆ ಚಂದ್ರನು ಪಾಪಾಂಶದಲ್ಲಾಗಲೀ ಸ್ವಾಂಶದಲ್ಲಾಗಲೀ ಇರುವನಾದರೆ ವಟುವು ದರಿದ್ರನಾಗಿ ನಿತ್ಯದುಃಖಿಯಾಗುವನು. ಶ್ರವಣ ಅಥವ ಪುನರ್ವಸು ನಕ್ಷತ್ರದಲ್ಲಿ ಚಂದ್ರನಿದ್ದು ಕಟಕಾಂಶಗತನಾಗಿದ್ದರೆ ವಟುವು ವೇದ, ಶಾಸ್ತ್ರ, ಧನ ಧಾನ್ಯ ಇವುಗಳಿಂದ ಯುಕ್ತನಾಗುವನು.

ಶುಭಲಗ್ನೇ ಶುಭಾಂಶೇ ಚ ನೈಧನೇ ಶುದ್ಧಿಸಂಯುತೇ ।
ಲಗ್ನೇ ತು ನಿಧನೇ ಸೌಮ್ಯೈಃ ಸಂಯುತೇ ವಾ ನಿರೀಕ್ಷಿತೇ ॥ ೩೭೦ ॥

ಇಷ್ಟೈರ್ಜೀವಾರ್ಕಚಂದ್ರಾದ್ಯೈಃ ಪಂಚಭಿರ್ಬಲಿಭಿರ್ಗ್ರಹೈಃ ।
ಸ್ಥಾನಾದಿಬಲಸಂಪೂರ್ಣೈಶ್ಚತುರ್ಭಿರ್ವಾ ಶುಭಾನ್ವಿತೈಃ ॥ ೩೭೧ ॥

ಈಕ್ಷಣೈರ್ವಾತ್ರಿಕವಿಂಶಮಹಾದೋಷವಿವರ್ಜಿತೇ ।
ರಾಶಯಃ ಸಕಲಾಃ ಶ್ರೇಷ್ಠಾಃ ಶುಭಗ್ರಹಯುತೇಕ್ಷಿತಾಃ ॥ ೩೭೨ ॥

ಶುಭನವಾಂಶಕಗತಾ ಗ್ರಾಹ್ಯಾಸ್ತೇ ಶುಭರಾಶಯಃ ।
ನ ಕದಾಚಿತ್ಕರ್ಕಟಾಂಶಶುಭೇಕ್ಷಿತಯುತೋಽಪಿ ವಾ ॥ ೩೭೩ ॥

ತಸ್ಮಾದ್ಗೋಮಿಥುನಾಂಶಾಶ್ಚ ತುಲಾಕನ್ಯಾಂಶಕಾಃ ಶುಭಾಃ ।
ಏವಂ ವಿಧೇ ಲಗ್ನಗತೇ ನವಾಂಶೇ ವ್ರತಮೀರಿತಂ ॥ ೩೭೪ ॥

---

೩೭೦-೩೭೭. ಶುಭಲಗ್ನ, ಶುಭಾಂಶ, ಅಷ್ಟಮಶುದ್ಧಿ, ಲಗ್ನಕ್ಕೆ ಶುಭ ಗ್ರಹಯೋಗ ಅಥವ ಶುಭಗ್ರಹಗಳ ದೃಷ್ಟಿ, ಗುರು, ಶನಿ, ಚಂದ್ರ, ಶುಕ್ರ, ಕುಜ ಈ ಗ್ರಹಗಳು ಬಲಿಷ್ಠರಾಗಿರುವುದು, ಅಥವ ಷಡ್ಬಲ ವಿಶಿಷ್ಟರಾದ ನಾಲ್ಕುಗ್ರಹ ಗಳ ಯೋಜನೆ, ಇಪ್ಪತ್ತೊಂದು ಮಹಾದೋಷಗಳಿಲ್ಲದಿರುವುದು, ಶುಭಗ್ರಹಲಗ್ನ ಗಳು ಇವೆಲ್ಲವೂ ಉಪನಯನಕ್ಕೆ ಪ್ರಶಸ್ತವಾದುವುಗಳು. ಶುಭಗ್ರಹಗಳು ಶುಭನವಾಂಶಗತರಾಗಿರಬೇಕು. ರಾಶಿಗಳು ಶುಭಗ್ರಹಗಳ ಸಂಬಂಧಿಗಳಾಗಿರ ಬೇಕು. ಆದರೆ ಶುಭಗ್ರಹಯುಕ್ತವಾಗಿದ್ದರೂ ಕಟಕಾಂಶವು ಮಾತ್ರ ಉಪ ನಯನಕ್ಕೆ ಪ್ರಶಸ್ತವಲ್ಲವೆಂದು ತಿಳಿಯಬೇಕು- ವೃಷಭ, ಮಿಥುನ, ಕನ್ಯಾ, ತುಲಾ ಈ ಅಂಶಗಳು ಪ್ರಶಸ್ತವಾದುವುಗಳು. ಉಪನಯನಲಗ್ನಕ್ಕೆ ಮೂರು ಆರು, ಹನ್ನೊಂದರಲ್ಲಿ ಪಾಪಗ್ರಹಗಳಿರಬೇಕು. ಆರು, ಎಂಟು, ಹನ್ನೆರಡು ಈ ಸ್ಥಾನಗಳಲ್ಲಿ ಶುಭಗ್ರಹಗಳಿರಬಾರದು. ಒಂದು, ಆರು, ಎಂಟು, ಹನ್ನೆರಡು

ತ್ರಿಷಡಾಯಗತೈಃ ಪಾಪೈಃ ಷಡಷ್ಟಾಂತ್ಯವಿವರ್ಜಿತೈಃ ।
ಶುಭೈಃ ಷಷ್ಠಾಷ್ಟಲಗ್ನಾಂತ್ಯವರ್ಜಿತೇನ ಹಿಮಾಂಶುನಾ ॥ ೩೭೫ ॥

ಸ್ವೋಚ್ಚಸಂಸ್ಥೋಽಪಿ ಶೀತಾಂಶುರ್ವ್ರತಿನೋ ಯದಿ ಲಗ್ನಗಃ ।
ಸ ಕರೋತಿ ಶಿಶುಂ ನಿಃಸ್ವಂ ಸರ್ವತಃ ಕ್ಷಯರೋಗಿಣಂ ॥ ೩೭೬ ॥

ಸ್ಫೂರ್ಜಿತೇ ಕೇಂದ್ರಗೇ ಭಾನೌ ವ್ರತಿನಾಂ ಪಿತೃನಾಶನಂ ।
ಪಂಚದೋಷೋನಿತಂ ಲಗ್ನಂ ಶುಭದಂ ಚೋಪನಾಯನೇ ॥ ೩೭೭ ॥

ವಿನಾ ವಸಂತಋತುನಾ ಕೃಷ್ಣಪಕ್ಷೇ ಗಲಗ್ರಹೇ ।
ಅನಧ್ಯಾಯೇ ವಿಷ್ಟಿಷಷ್ಠ್ಯೋರ್ನತು ಸಂಸ್ಕಾರಮರ್ಹತಿ ॥ ೩೭೮ ॥

ತ್ರಯೋದಶ್ಯಾದಿ ಚತ್ವಾರಿ ಸಪ್ತಮ್ಯಾದಿ ದಿನತ್ರಯಂ ।
ಚತುರ್ಥೀ ವಾ ಶುಭಾಃ ಪ್ರೋಕ್ತಾ ಅಷ್ಟಾವೇತೇ ಗಲಗ್ರಹಾಃ ॥ ೩೭೯ ॥

ಈ ಸ್ಥಾನಗಳಲ್ಲಿ ಚಂದ್ರನಿರಕೂಡದು. ಚಂದ್ರನು ಉಚ್ಚರಾಶಿಗತನಾಗಿದ್ದರೂ ಉಪನಯನಲಗ್ನದಲ್ಲಿರಕೂಡದು. ಹಾಗಿರುವುದಾದರೆ ವಟುವು ದರಿದ್ರನೂ ಕ್ಷಯರೋಗಿಯೂ ಆಗುವನು.

೩೭೭-೩೭೯. ಲಗ್ನಾತ್ಕೇಂದ್ರದಲ್ಲಿ ರವಿಕುಜರಿದ್ದರೆ ಪಿತೃನಾಶವಾಗುವುದು. ಮೇಲೆ ಹೇಳಿದ ದೋಷಗಳಿಲ್ಲದ ಲಗ್ನವೇ ಉಪನಯನಕ್ಕೆ ಪ್ರಶಸ್ತವಾದುದೆಂದು ತಿಳಿಯಬೇಕು. ಕೃಷ್ಣಪಕ್ಷಗಳ ಗಳಗ್ರಹ ತಿಥಿಯಲ್ಲಿ ಉಪನಯನ ಮಾಡಬಾರದು. ಆದರೆ ವಸಂತ ಋತುವಿನಲ್ಲಿ ಈ ತಿಥಿಗಳು ದುಷ್ಟವಲ್ಲ. ಅನಧ್ಯಯನ ತಿಥಿಗಳಲ್ಲಿ ಭದ್ರಾಕರಣ, ಷಷ್ಠೀ ಈ ತಿಥಿಗಳು ವ್ರತಕ್ಕೆ ಶ್ರೇಷ್ಠವಲ್ಲ. ತ್ರಯೋದಶಿಯಿಂದ ನಾಲ್ಕು ತಿಥಿಗಳು ಸಪ್ತಮಿಯಿಂದ ಮೂರು ತಿಥಿಗಳು ಮತ್ತು ಚತುರ್ಥೀ ಒಟ್ಟು ಈ ಎಂಟು ತಿಥಿಗಳಿಗೆ ಗಳಗ್ರಹತಿಥಿಗಳೆಂದು ಹೆಸರು.

ಕ್ಷುರಿಕಾಬಂಧನಂ ವಕ್ಷ್ಯೇ ನೃಪಾಣಾಂ ಪ್ರಾಕ್ಕರಗ್ರಹಾತ್ ।
ವಿವಾಹೋಕ್ತೇಷು ಮಾಸೇಷು ಶುಕ್ಲಪಕ್ಷೇಷ್ಯನಸ್ತಗೇ ॥ ೩೮೦ ॥

ಜೀವೇ ಶುಕ್ರೇ ಚ ಭೂಪುತ್ರೇ ಚಂದ್ರತಾರಾಬಲಾನ್ವಿತೇ ।
ಮೌಂಜೀಬಂಧೋಕ್ತತಿಥಿಷು ಕುಜವರ್ಜಿತವಾಸರೇ ॥ ೩೮೧ ॥

ನ ಚೇನ್ನವಾಂಶಕೇ ಕರ್ತುರಷ್ಟಮೋದಯವರ್ಜಿತೇ ।
ಶುದ್ಧೇಽಷ್ಟಮೇ ವಿಧೌ ಲಗ್ನೇ ಷಷ್ಠಾಷ್ಟಾಂತ್ಯವಿವರ್ಜಿತೇ ॥ ೩೮೨ ॥

ಧನತ್ರಿಕೋಣಕೇಂದ್ರಸ್ಥೈಃ ಶುಭೈಸ್ತ್ರ್ಯಾಯಾರಿಗೈಃ ಪರೈಃ ।
ಕ್ಷುರಿಕಾಬಂಧನಂ ಕಾರ್ಯಮರ್ಚಯಿತ್ವಾಮರಾನ್ಪಿತೄನ್ ॥ ೩೮೩ ॥

ಅರ್ಚಯೇತ್ಕ್ಷುರಿಕಾಂ ಸಮ್ಯಗ್ದೇವತಾನಾಂ ಚ ಸನ್ನಿಧೌ ।
ತತಃ ಸುಲಗ್ನೇ ಬಧ್ನೀಯಾತ್ಕಟ್ಯಾಂ ಲಕ್ಷಣಸಂಯುತಾಂ ॥ ೩೮೪ ॥

---

೩೮೦-೩೮೪. ಕ್ಷತ್ರಿಯರಿಗೆ ವಿವಾಹಾತ್ಪೂರ್ವದಲ್ಲಿ ನಡೆಸುವ ಕ್ಷುರಿಕಾಬಂಧನವೆಂಬ ಸಂಸ್ಕಾರವನ್ನು ವಿವಾಹಕ್ಕೆ ಉಕ್ತವಾಗುವ ಮಾಸಾದಿಗಳಲ್ಲಿ ನಡೆಸಬೇಕು. ಶುಕ್ಲಪಕ್ಷದಲ್ಲಿ ಕುಜ, ಗುರು, ಶುಕ್ರಾಸ್ತಗಳಿಲ್ಲದ ಸಮಯದಲ್ಲಿ ಶುಭತಾರಾಚಂದ್ರಬಲಗಳಿಂದ ಕೂಡಿದಾಗ ನಡೆಸಬಹುದು. ಉಪನಯನಕ್ಕೆ ಹೇಳಿದ ತಿಥಿಗಳಲ್ಲಿಯೂ, ಮಂಗಳವಾರವೊಂದನ್ನು ಬಿಟ್ಟು ಉಳಿದ ವಾರಗಳಲ್ಲಿಯೂ, ಸ್ವಜನ್ಮರಾಶಿ ಮತ್ತು ಅಷ್ಟಮರಾಶಿಗಳನ್ನು ಬಿಟ್ಟು, ಲಗ್ನಕ್ಕೆ ಅಷ್ಟಮ ಶುದ್ಧಿಯಿರುವಾಗ, ಚಂದ್ರನು ಒಂದು, ಆರು, ಎಂಟು ಹನ್ನೆರಡರಲ್ಲಿ ಇಲ್ಲದೇ ಇರುವಾಗ ನಡೆಸುವುದು ಒಳ್ಳೆಯದು. ಕ್ಷುರಿಕಾಬಂಧನಲಗ್ನಕ್ಕೆ ಎರಡು, ಐದು ಒಂಭತ್ತು, ನಾಲ್ಕು, ಏಳು, ಒಂದನೆಯ ರಾಶಿಗಳಲ್ಲಿ ಶುಭಗ್ರಹಗಳಿರುವುದೂ ಮೂರು, ಆರು, ಹನ್ನೊಂದರಲ್ಲಿ ಪಾಪಗ್ರಹಗಳಿರುವುದೂ ಪ್ರಶಸ್ತವಾದವು. ಇಂತಹ ಮುಹೂರ್ತದಲ್ಲಿ ಕತ್ತಿಯನ್ನು ಪೂಜಿಸಿ ದೇವತೆಗಳನ್ನೂ ಪಿತೃಗಳನ್ನೂ ವಿಧಿವತ್ತಾಗಿ ಅರ್ಚನೆಮಾಡಿ ದೇವರ ಸನ್ನಿಧಿಯಲ್ಲಿ ಒಳ್ಳೆಯಲಗ್ನವಿರುವ ಸಮಯದಲ್ಲಿ ಅವನ್ನು ತನ್ನ ಸೊಂಟಕ್ಕೆ ಕಟ್ಟಿಕೊಳ್ಳಬೇಕು.

ಆಯಾಮಾರ್ಧಾಗ್ರವಿಸ್ತಾರಪ್ರಮಾಣೇನೈವ ಛೇದಯೇತ್ ।
ತಚ್ಛೇದಖಂಡಾನ್ಯಾಯಾಃ ಸ್ಯುರ್ಧ್ವಜಾಯೇ ರಿಪುನಾಶನಂ ॥ ೩೮೫ ॥

ಧೂಮ್ರಾಯೇ ಮರಣಂ ಸಿಂಹೇ ಜಯಃ ಶುನಿ ಚ ರೋಗಿತಾ ।
ಧನಲಾಭೋ ವೃಷೇತ್ಯಂತಂ ದುಃಖೀ ಭವತಿ ಗರ್ದಭೇ ॥ ೩೮೬ ॥

ಗಜಾಯೇ ಽತ್ಯಂತಸಂಪ್ರೀತಿರ್ಧ್ವಾಂಕ್ಷೇ ವಿತ್ತವಿನಾಶನಂ ।
ಖಡ್ಗಪುತ್ರಿಕಯೋರ್ಮಾನಂ ಗಣಯೇತ್ಸ್ವಾಂಗುಲೇನ ತು ॥ ೩೮೭ ॥

ಮಾನಾಂಗುಲೇಷು ಪರ್ಯಾಯಾನೇಕಾದಶಮಿತಾಂ ತ್ಯಜೇತ್ ।
ಶೇಷಾಣಾಮಂಗುಲಾನಾಂ ಚ ಫಲಾನಿ ಸ್ಯುರ್ಯಥಾಕ್ರಮಂ ॥ ೩೮೮ ॥

ಪುತ್ರಲಾಭಃ ಶತ್ರುವಧಃ ಸ್ತ್ರೀಲಾಭೋ ಗಮನಂ ಶುಭಂ ।
ಅರ್ಥಹಾನಿಶ್ಚಾರ್ಥವೃದ್ಧಿಃ ಪ್ರೀತಿಃ ಸಿದ್ಧಿರ್ಜಯಃ ಸ್ತುತಿಃ ॥ ೩೮೯ ॥

---

೩೮೫-೩೮೯. ಅನಂತರ ಕತ್ತಿಯನ್ನು ಹಿಡಿದು ಛೇದ್ಯವಸ್ತುವನ್ನು ಆಯದ ಆಕಾರವು ಹುಟ್ಟುವಂತೆ ಛೇದಿಸಬೇಕು. ಆಮೇಲೆ ಛೇದವಾದ ಆ ಆಕಾರದಿಂದ ಈರೀತಿ ಫಲಗಳನ್ನು ಊಹಿಸಬೇಕು. ಛೇದ್ಯವಾದ ಆಯವು ಧ್ವಜಾಕಾರದಲ್ಲಿದ್ದರೆ ಶತ್ರುನಾಶವೂ, ಧೂಮ್ರಾಯವಾಗಿದ್ದರೆ ಮರಣವೂ, ಸಿಂಹಾಕಾರವು ಬಂದರೆ ಜಯಲಾಭವೂ, ನಾಯಿಯ ಆಕಾರವು ಬಂದರೆ ರೋಗಭಯವೂ, ವೃಷಭಾಕಾರದಲ್ಲಿ ಬಂದರೆ ಧನಲಾಭವೂ, ಗರ್ದಭಾಕಾರದಲ್ಲಿದ್ದರೆ ದುಃಖಿಯೂ, ಗಜಾಯದಲ್ಲಿ ಪ್ರೀತ್ಯತಿಶಯವೂ, ಕಾಗೆಯ ಆಯದಲ್ಲಿ ದ್ರವ್ಯನಾಶವೂ ಉಂಟಾಗುವುದೆಂದು ತಿಳಿಯಬೇಕು. ಕತ್ತಿಯ ಪ್ರಮಾಣವು ಮಟುವಿನ ಹನ್ನೊಂದು ಅಂಗುಲಕ್ಕಿಂತ ಮೀರಕೂಡದು. ಹನ್ನೊಂದು ಅಂಗುಲದ ಖಡ್ಗವನ್ನೂ ತ್ಯಜಿಸಬೇಕು. ಹತ್ತು ಅಂಗುಲ ಪ್ರಮಾಣವುಳ್ಳ ಖಡ್ಗದ ಫಲವು ಈರೀತಿಯಾಗಿ ತೋರಿಬರುವುದು. ಪುತ್ರಲಾಭ, ಶತ್ರುವಧ ಸ್ತ್ರೀಲಾಭ, ಶುಭಪ್ರಯಾಣ. ಅರ್ಥಹಾನಿ, ಅರ್ಥವೃದ್ಧಿ. ಪ್ರೀತಿ, ಸಿದ್ಧಿ, ಜಯ ಸ್ತುತಿ ಮುಂತಾದ ಫಲಗಳು ದೊರೆಯುವುವು.

ಸ್ಥಿತೋ ಧ್ವಜೇ ವೃಷಾಯೇ ವಾ ನಷ್ಟಾ ಚೇತ್ಪೂರ್ವತೋ ವ್ರಣಂ ।
ಸಿಂಹೇ ಗಜೇ ಮಧ್ಯಭಾಗೇ ತ್ವಂತಭಾಗೇ ಶ್ವಕಾಕಯೋಃ ॥ ೩೯೦ ॥

ಧೂಮ್ರಗರ್ದಭಯೋರ್ನೈವ ವ್ರಣಂ ಶ್ರೇಯೋಂತ್ಯಭಾಗಗಂ ।
ಅಥೋತ್ತರಾಯಣೇ ಶುಕ್ರಜೀವಯೋರ್ದೃಶ್ಯಮಾನಯೋಃ ॥ ೩೯೧ ॥

ದ್ವಿಜಾತೀನಾಂ ಗುರೋರ್ಗೇಹಾನ್ನಿವೃತ್ತಾನಾಂ ಯತಾತ್ಮನಾಂ ।
ಚಿತ್ರೋತ್ತರಾದಿತೀಜ್ಯಾಂತ್ಯ ಹರಿಮಿತ್ರವಿಧಾತೃಷು ॥ ೩೯೨ ॥

ಭೇಷ್ವರ್ಕೇಂದುಜ್ಞೇಜ್ಯ ಶುಕ್ರವಾರಲಗ್ನಾಂಶಕೇಷು ಚ ।
ಪ್ರತಿಪತ್ಪರ್ವರಿಕ್ತಾಮಾ ಚಾಷ್ಟಮೀ ಚ ದಿನತ್ರಯಂ ॥ ೩೯೩ ॥

ಹಿತ್ವಾನ್ಯದಿವಸೇ ಕಾರ್ಯಂ ಸಮಾವರ್ತನಮುಂಡನಂ ।
ಸರ್ವಾಶ್ರಮಾಣಾಂ ವಿಪ್ರೇಂದ್ರ ಹ್ಯುತ್ತಮೋಯಂ ಗೃಹಾಶ್ರಮಃ ॥ ೩೯೪ ॥

---

೩೯೦-೩೯೧. ಧ್ವಜ ಮತ್ತು ವೃಷ ಇವುಗಳ ಆಯದಲ್ಲಿ ಛುರಿಕೆಯು ನಷ್ಟವಾದರೆ ಪೂರ್ವಭಾಗದಲ್ಲಿ ವ್ರಣವಾಗುವುದು. ಸಿಂಹ ಮತ್ತು ಆನೆ ಇವುಗಳ ಆಯವಲ್ಲಿ ಭಗ್ನವಾದರೆ ಮಧ್ಯದಲ್ಲಿ ಗಾಯವೂ, ನಾಯಿ, ಕಾಗೆ ಇವುಗಳ ಆಯದಲ್ಲಿ ಮುರಿದರೆ ಅಂತ್ಯಭಾಗದಲ್ಲಿಯೂ ಗಾಯವಾಗುವುದು. ಧೂಮ್ರ ಮತ್ತು ಗರ್ದಭಾಕಾರದಲ್ಲಿ ಮುರಿದರೆ ವ್ರಣಾದಿಗಳಾಗದೇ ಶ್ರೇಯಸ್ಸುಂಟಾಗುವುದು. ಇನ್ನು ಮುಂದೆ ಸಮಾವರ್ತನೆಗೆ ಮುಹೂರ್ತವು ಹೇಳಲ್ಪಡುವುದು.

೩೯೨.೩೯೪. ಉತ್ತರಾಯಣದಲ್ಲಿ ಗುರುಶುಕ್ರಾಸ್ತಮಯಗಳಿಲ್ಲದಿರುವಾಗ ವಿದ್ಯಾಭ್ಯಾಸಸಮಾಪ್ತಿಯಾದ ಮೇಲೆ ಗುರುಗೃಹದಿಂದ ಸ್ವಗೃಹಕ್ಕೆ ಬಂದು ಜಿತೇಂದ್ರಿಯನಾಗಿ ಸಮಾವರ್ತನೆಯನ್ನು ಮಾಡಿಕೊಳ್ಳಬೇಕು. ಇದಕ್ಕೆ ಚಿತ್ತ, ಉತ್ತರ, ಪುನರ್ವಸು, ಪುಷ್ಯ, ರೇವತಿ, ಶ್ರವಣ, ಅನೂರಾಧ, ರೋಹಿಣಿ ಈ ನಕ್ಷತ್ರಗಳು ಪ್ರಶಸ್ತವಾದುವುಗಳು. ಭಾನು, ಸೋಮ, ಬುಧ, ಗುರು ಮತ್ತು ಶುಕ್ರವಾರಗಳೂ, ಅದೇ ಗ್ರಹಗಳ ಕಾಲಹೋರೆಗಳೂ, ಪ್ರಶಸ್ತವಾದುವುಗಳು. ಪಾಡ್ಯ, ಪರ್ವತಿಥಿಗಳು, ರಿಕ್ತತಿಥಿಗಳೂ, ಅಮಾವಾಸ್ಯೆ, ಅಷ್ಟಮ್ಯಾದಿಯಾದ ಮೂರು ತಿಥಿಗಳೂ ಇವುಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿ ಸಮಾವರ್ತನ

ಸುಖಂ ತತ್ರಾಪಿ ಭಾಮಿನ್ಯಾಂ ಶೀಲವತ್ಯಾಂ ಸ್ಥಿತಂ ತತಃ ।
ತಸ್ಯಾಃ ಸತ್ಫಲಲಬ್ಧಿಸ್ತು ಸುಲಗ್ನವಶತಃ ಖಲು ॥ ೩೯೫ ॥

ಪಿತಾಮಹೋಕ್ತಂ ಸಂವೀಕ್ಷ್ಯ ಲಗ್ನಶುದ್ಧಿಂ ಪ್ರವಚ್ಮ್ಯಹಂ ।
ಪುಣ್ಯೇಹ್ನಿ ಲಕ್ಷಣೋಪೇತಂ ಸುಖಾಸೀನಂ ಸುಚೇತಸಂ ॥ ೩೯೬ ॥

ಪ್ರಣಮ್ಯ ದೇವವತ್ಪೃಚ್ಛೇದ್ದೈವಜ್ಞಂ ಭಕ್ತಿಪೂರ್ವಕಂ ।
ತಾಂಬೂಲಫಲಪುಷ್ಪಾದ್ಯೈಃ ಪೂರ್ಣಾಂಜಲಿರುಪಾಗತಃ ॥ ೩೯೭ ॥

ತತ್ರ ಚೇಲ್ಲಗ್ನಗಃ ಕ್ರೂರಸ್ತಸ್ಮಾತ್ಸಪ್ತಮಗಃ ಕುಜಃ ।
ದಂಪತ್ಯೋರ್ಮರಣಂ ವಾಚ್ಯಂ ವರ್ಷಾಣಾಮಷ್ಟಕಾತ್ಪುರಾ ॥ ೩೯೮ ॥

ಯದಿ ಲಗ್ನಗತಶ್ಚಂದ್ರಸ್ತಸ್ಮಾತ್ಸಪ್ತಮಗಃ ಕುಜಃ ।
ವಿಜ್ಞೇಯಂ ಭರ್ತೃಮರಣಮಷ್ಟವರ್ಷಾಂತರೇ ಬುಧೈಃ ॥ ೩೯೯ ॥

ಕರ್ಮಾಂಗಭೂತವಾದ ಮುಂಡನವನ್ನು ಮಾಡಿಸಿಕೊಳ್ಳಬೇಕು. ಮಾನವ ಜನ್ಮದಲ್ಲಿ ಎಲ್ಲಾ ಆಶ್ರಮಗಳಿಗಿಂತಲೂ ಗೃಹಸ್ಥಾಶ್ರಮವೇ ಶ್ರೇಷ್ಠವಾದುದು. ಆ ಆಶ್ರಮದಲ್ಲಿ ಶೀಲವತಿಯಾದ ಕನ್ಯಾಸಂಬಂಧದಿಂದ ಅನೇಕಸುಖಗಳು ಲಭಿಸುತ್ತವೆ. ಅಂತಹ ಸೌಶೀಲ್ಯಾದಿಗುಣಗಳು ಕನ್ಯೆಗೆ ಲಭಿಸಬೇಕಾದರೆ ಬ್ರಹ್ಮಪ್ರೋಕ್ತವಾದ ಶುಭಲಗ್ನದಲ್ಲಿ ಕನ್ಯೆಗೆ ವಿವಾಹವನ್ನು ಮಾಡಬೇಕು.

೩೯೬-೪೦೦. ಈಗ ಪಿತಾಮಹಪ್ರೋಕ್ತವಾದ ವಿವಾಹಲಗ್ನಶುದ್ಧಿಯನ್ನು ಹೇಳುವೆನು. ವಿವಾಹದಿನ ನಿಶ್ಚಯಕ್ಕಾಗಿ ಶುಭದಿನವೊಂದರಲ್ಲಿ ಸುಖಾಸೀನನಾಗಿ ಸಂತುಷ್ಟಾಂತರಂಗವುಳ್ಳ ದೈವಜ್ಞನ ಸಮೀಪಕ್ಕೆ ಹೋಗಬೇಕು. ಫಲಪುಷ್ಪತಾಂಬೂಲಾದಿಗಳಿಂದ ದೈವಜ್ಞನನ್ನು ಸಂತೋಷಗೊಳಿಸಬೇಕು. ಈರೀತಿ ಪ್ರಶ್ನಾರ್ಥವಾಗಿ ಬಂದ ಕಾಲದಲ್ಲಿ ಬರುವ ಲಗ್ನದಲ್ಲಿ ಕ್ರೂರಗ್ರಹಗಳಿದ್ದು ಲಗ್ನಾತ್ಸಪ್ತಮದಲ್ಲಿ ಅಂಗಾರಕನಿದ್ದರೆ ಗಣಕನು ಆ ದಂಪತಿಗಳ ಮರಣವು ಎಂಟುವರ್ಷಗಳ ಒಳಗೆ ಆಗುವುದೆಂದು ತಿಳಿಯಬೇಕು. ಅಥವ ಆ ತಾತ್ಕಾಲಿಕಲಗ್ನದಲ್ಲಿ ಚಂದ್ರನಿದ್ದು ತತ್ಸಪ್ತಮದಲ್ಲಿ ಕುಜನಿದ್ದರೆ (ಆಗಲೂ) ಎಂಟುವರ್ಷದೊಳಗೇ ಭರ್ತೃಮರಣವುಂಟಾಗುವುದೆಂದು ತಿಳಿಯಬೇಕು.

ಲಗ್ನಾತ್ಪಂಚಮಗಃ ಪಾಪಃ ಶತ್ರುದೃಷ್ಟಶ್ಚ ನೀಚಗಃ ।
ಮೃತಪುತ್ರಾಥವಾ ಕನ್ಯಾ ಕುಲಟಾ ವಾ ನ ಸಂಶಯಃ ॥ ೪೦೦ ॥

ತೃತೀಯಪಂಚಸಪ್ತಾಯಕರ್ಮಗೋ ವಾ ನಿಶಾಕರಃ ।
ಲಗ್ನಾತ್ಕರೋತಿ ಸಂಬಂಧಂ ದಂಪತ್ಯೋರ್ಗುರುವೀಕ್ಷಿತಃ ॥ ೪೦೧ ॥

ತುಲಾಗೋಕರ್ಕಟಾಲಗ್ನಸಂಸ್ಥಾಃ ಶುಕ್ರೇಂದುಸಂಯುತಾಃ ।
ವೀಕ್ಷಿತಾ ಪೃಚ್ಛತಾಂ ನೄಣಾಂ ಕನ್ಯಾಲಾಭೋ ಭವೇತ್ತದಾ ॥ ೪೦೨ ॥

ಸ್ತ್ರೀದ್ರೇಷ್ಕಾಣಃ ಸ್ತ್ರೀನವಾಂಶೇ ಯುಗ್ಮಲಗ್ನಂ ಸಮಾಗತಂ ।
ವೀಕ್ಷಿತಂ ಚಂದ್ರಶುಕ್ರಾಭ್ಯಾಂ ಕನ್ಯಾಲಾಭೋ ಭವೇತ್ತದಾ ॥ ೪೦೩ ॥

ಏವಂ ಸ್ತ್ರೀಣಾಂ ಭರ್ತೃಲಬ್ಧಿಃ ಪುಂಲಗ್ನೇ ಪುಂನವಾಂಶಕೇ ।
ಪೃಚ್ಛಕಸ್ಯ ಭವೇಲ್ಲಗ್ನಂ ಪುಂಗ್ರಹೈರವಲೋಕಿತಂ ॥ ೪೦೪ ॥

---

ಲಗ್ನಾತ್ಪಂಚಮಸ್ಥಾನದಲ್ಲಿ ಪಾಪಗ್ರಹಗಳಿದ್ದು ಶತ್ರುದೃಷ್ಟರಾಗಿ ನೀಚರಾಶಿಗತರಾಗಿದ್ದರೆ ಆ ಕನ್ಯೆಯು ಮೃತಪುತ್ರಳಾಗಿಯೂ ವ್ಯಭಿಚಾರಿಣಿಯಾಗಿಯೂ ಆಗುವಳೆಂದು ದೈವಜ್ಞನು ತೀರ್ಮಾನಿಸಬೇಕು.

೪೦೧-೪೦೪. ಪ್ರಶ್ನೆಲಗ್ನಾಪೇಕ್ಷಯಾ ಮೂರು, ಐದು, ಏಳು, ಹತ್ತು ಹನ್ನೊಂದು ಈ ಸ್ಥಾನಗಳಲ್ಲಿ ಚಂದ್ರನಿದ್ದು ಗುರುವೀಕ್ಷಿತನಾಗಿದ್ದರೆ ಪ್ರಶ್ನೆ ಮಾಡುವ ವಧೂವರರಿಗೆ ಸಂಬಂಧವಾಗುವುದೆಂದು ತಿಳಿಯಬೇಕು. ಪ್ರಶ್ನೆ ಲಗ್ನವು ತುಲಾ, ವೃಷಭ, ಕಟಕಗಳಲ್ಲೊಂದಾಗಿ ಅಲ್ಲಿ ಶುಕ್ರಚಂದ್ರರ ಸಂಬಂಧವಾಗಲೀ, ದೃಷ್ಟಿಯಾಗಲೀ ಇದ್ದರೆ ಆ ಕನ್ಯಾಸಂಬಂಧವೇ ಆಗುವುದೆಂದು ತಿಳಿಯಬೇಕು. ಕನ್ಯಾಪ್ರಾಪ್ತಿಗೆ ಸ್ತ್ರೀದ್ರೇಕ್ಕಾಣ, ಸ್ತ್ರೀನವಾಂಶ, ಯುಗ್ಮಲಗ್ನ ಚಂದ್ರಶುಕ್ರರ ದೃಷ್ಟಿ ಇವು ಅವಶ್ಯಕ, ಹೀಗೆ ಭರ್ತೃಪ್ರಾಪ್ತಿಗೆ ಪುಂಲಗ್ನ, ಪುನ್ನವಾಂಶ, ಪುಂಗ್ರಹಗಳ ದೃಷ್ಟಿ, ಓಜಲಗ್ನ ಇವುಗಳು ಅವಶ್ಯವಾಗಿರಬೇಕು.

ಕೃಷ್ಣಪಕ್ಷೇ ಪ್ರಶ್ನಲಗ್ನಾದ್ಯಸ್ಯ ರಾಶೌ ಶಶೀ ಯದಾ ।
ಪಾಪದೃಷ್ಟೋಽಥವಾ ರಂಧ್ರೇ ನ ಸಂಬಂಧೋ ಭವೇತ್ತದಾ ॥ ೪೦೫ ॥

ಪೃಚ್ಛ್ಯೈರ್ನಿಮಿತ್ತಶಕುನೈಃ ಪ್ರಶ್ನಕಾಲೇ ತು ಮಂಗಲಂ ।
ದಂಪತ್ಯೋರಶುಭೈರೇತೈರಶುಭಂ ಸರ್ವತೋ ಭವೇತ್ ॥ ೪೦೬ ॥

ಪಂಚಾಂಗಶುದ್ಧಿದಿವಸೇ ಚಂದ್ರತಾರಾಬಲಾನ್ವಿತೇ ।
ವಿವಾಹಭಸ್ಯೋದಯೇ ವಾ ಕನ್ಯಾವರಣಮುತ್ತಮಂ ॥ ೪೦೭ ॥

ಭೂಷಣೈಃ ಪುಷ್ಪತಾಂಬೂಲಫಲೈರ್ಗಂಧಾಕ್ಷತಾದಿಭಿಃ ।
ಶುಕ್ಲಾಂಬರೈರ್ಗೀತವಾದ್ಯೈರ್ವಿಪ್ರಾಶೀರ್ವಚನೈಸ್ಸಹ ॥ ೪೦೮ ॥

ಕಾರಯೇತ್ಕನ್ಯಕಾಗೇಹೇ ವರಃ ಪ್ರಣವಪೂರ್ವಕಂ ।
ತದಾ ಕುರ್ಯಾತ್ಪಿತಾ ತಸ್ಯಾಃ ಪ್ರದಾನಂ ಪ್ರೀತಿಪೂರ್ವಕಂ ॥ ೪೦೯ ॥

೪೦೫-೪೦೭. ಕೃಷ್ಣಪಕ್ಷವಾಗಿದ್ದು ಪ್ರಶ್ನಲಗ್ನಾದಷ್ಟಮದಲ್ಲಿ ಪಾಪಗ್ರಹವೀಕ್ಷಿತನಾದ ಚಂದ್ರನಿರುವಾಗ ನಿರ್ದಿಷ್ಟಕನ್ಯಾಸಂಬಂಧವು ಆಗುವುದಿಲ್ಲವೆಂದು ತಿಳಿಯಬೇಕು ಮತ್ತು ಪ್ರಶ್ನಕಾಲದಲ್ಲಿ ಒದಗುವ ಶುಭಾಶುಭಶಕುನಗಳಿಂದ ವಿವಾಹದ ಸಂಭವಾಸಂಭವಗಳನ್ನು ಊಹಿಸಿ ಹೇಳಬೇಕು. ಪಂಚಾಂಗಶುದ್ಧವಾಗಿರುವ (ಅಂದರೆ ತಿಥಿ, ವಾರ, ನಕ್ಷತ್ರ, ಯೋಗ ಮತ್ತು ಕರಣ ಈ ಐದೂ ಶುಭವಾಗಿರುವ) ದಿನದಲ್ಲಿ ವಧೂವರರಿಗೆ ಚಂದ್ರತಾರಾಬಲವಿರುವಾಗ ವಿವಾಹಕ್ಕೆ ಪ್ರಶಸ್ತವೆಂದು ಹೇಳಿರುವ ನಕ್ಷತ್ರದಲ್ಲಿ ಕನ್ಯಾವರಣಮಾಡಬೇಕು.

೪೦೮-೪೦೯. ಕನ್ಯಾಗೃಹದಲ್ಲಿ ಕನ್ಯಾಪಿತನು ಪುಷ್ಪ ತಾಂಬೂಲಗಳನ್ನು ಗಂಧಾಕ್ಷತಾದಿಗಳನ್ನೂ ಅಣಿಮಾಡಿಕೊಂಡು ಶುಕ್ಲವಸ್ತ್ರಧಾರಿಯಾಗಿ ವೃದ್ಧಾಶೀರ್ವಾದವನ್ನು ಪಡೆದು ಪ್ರಣವಪೂರ್ವಕವಾಗಿ ಕನ್ಯಾವರಣಕ್ಕೆ ಸಂಕಲ್ಪಮಾಡಬೇಕು. ಕುಲ, ಶೀಲ, ವಯಸ್ಸು, ರೂಪ, ದ್ರವ್ಯ, ವಿದ್ಯೆ ಮೊದಲಾದವುಗಳಿಂದ ಉತ್ತಮವೆನಿಸಿರುವ ವರನಿಗೆ ವಯಸ್ಸಿನಲ್ಲಿ ಅವನಿಗಿಂತ ಚಿಕ್ಕವಳಾಗಿರುವ ಕನ್ಯೆಯನ್ನು ಅರ್ಪಿಸಬೇಕು. ವಿವಾಹಕ್ಕೆ ಮುಂಚೆ ತ್ರಿಲೋಕಸುಂದರಿಯೂ, ದಿವ್ಯಗಂಧಮಾಲ್ಯಾದಿಗಳಿಂದ ಅಲಂಕೃತಳೂ ಸರ್ವಲಕ್ಷಣಸಂಪನ್ನಳೂ, ಸರ್ವಾಭರಣ

ಕುಲಶೀಲವಯೋರೂಪವಿತ್ತವಿದ್ಯಾಯುತಾಯ ಚ ।
ವರಾಯ ತಾಂ ರೂಪವತೀಂ ಕನ್ಯಾಂ ದದ್ಯಾದ್ಯವೀಯಸೀಂ ॥ ४೧೦ ॥

ಸಂಪೂಜ್ಯ ಪ್ರಾರ್ಥಯಿತ್ವಾ ಚ ಶಚೀಂ ದೇವೀಂ ಗುಣಾಶ್ರಯಾಂ ।
ತ್ರೈಲೋಕ್ಯಸುಂದರೀಂ ದಿವ್ಯಗಂಧಮಾಲ್ಯಾಂಬರಾವೃತಾಂ ॥ ४೧೧ ॥

ಸರ್ವಲಕ್ಷಣಸಂಯುಕ್ತಾಂ ಸರ್ವಾಭರಣಭೂಷಿತಾಂ ।
ಅನರ್ಘ್ಯಮಣಿಮಾಲಾಭಿರ್ಭಾಸಯಂತೀಂ ದಿಗಂತರಾನ್ ॥ ४೧೨ ॥

ವಿಲಾಸಿನೀಸಹಸ್ರಾದ್ಯೈಃ ಸೇವಮಾನಾಮಹರ್ನಿಶಂ ।
ಏವಂ ವಿಧಾಂ ಕುಮಾರೀಂ ತಾಂ ಪೂಜಾಂತೇ ಪ್ರಾರ್ಥಯೇದಿತಿ ॥ ४೧३ ॥

ದೇವೀಂದ್ರಾಣಿ ನಮಸ್ತುಭ್ಯಂ ದೇವೇಂದ್ರಪ್ರಿಯಭಾಮಿನಿ ।
ವಿವಾಹೇ ಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿ ಮೇ ॥ ४೧४ ॥

ಭೂಷಿತಳೂ, ಅಮೂಲ್ಯವಾದ ರತ್ನಮಾಲೆಗಳನ್ನು ಧರಿಸಿ, ದಿಗಂತವನ್ನೆಲ್ಲಾ ತನ್ನ ಕಾಂತಿಯಿಂದ ಬೆಳಗಿಸುತ್ತಿರುವವಳೂ ಆದ ಶಚೀದೇವಿಯನ್ನು ವಧುವು ಪೂಜಿಸಬೇಕು. ಕ್ರಮವಾಗಿ ಪೂಜೆಮಾಡಿದ ನಂತರ ಕೊನೆಯಲ್ಲಿ "ಎಲೌ ಇಂದ್ರಾಣೀದೇವಿಯೇ! ದೇವೇಂದ್ರನ ಪ್ರಿಯಪತ್ನಿಯಾದ ನಿನಗೆ ನಮಸ್ಕಾರ ಮಾಡುವೆನು. ದೇವಿಯೇ! ನೀನು ನನಗೆ ಈ ವಿವಾಹಕರ್ಮದಿಂದ ಸಮಸ್ತ ಐಶ್ವರ್ಯವೂ, ಪುತ್ರಪೌತ್ರಾದಿ ಸಂಸಾರವೃದ್ಧಿಯೂ ಸಕಲ ಸೌಭಾಗ್ಯಗಳೂ ಮತ್ತು ಸೌಮಂಗಲ್ಯವೂ ಉಂಟಾಗುವಂತೆ ಅನುಗ್ರಹಿಸುವವಳಾಗು ಎಂದು ಪ್ರಾರ್ಥಿಸಿಕೊಳ್ಳಬೇಕು.

४೧೫-४೧೬. ವಧುವಿನ ಸಮವಯಸ್ಸಿನಲ್ಲಿಯೂ, ವರನ ವಿಷಮ ವಯಸ್ಸಿನಲ್ಲಿಯೂ, ವಿವಾಹವಾಡುವುದು ಒಳ್ಳೆಯದು. ಇದಕ್ಕೆ ವಿರುದ್ಧವಾಗಿ ನಡೆಯುವುದು ಅಶುಭಕರವಾದುದು. ಮಾಘ, ಫಾಲ್ಗುನ, ವೈಶಾಖ, ಜ್ಯೇಷ್ಠ ಮಾಸಗಳು ವಿವಾಹಕ್ಕೆ ಪ್ರಶಸ್ತವಾದುವುಗಳು. ಕಾರ್ತಿಕ, ಮಾರ್ಗಶಿರಗಳು ಮಧ್ಯಮವಾದುವುಗಳು ಉಳಿದ ತಿಂಗಳುಗಳು ಅಪ್ರಶಸ್ತವೆಂದು ತಿಳಿಯಬೇಕು. ಸೂರ್ಯನು ಆರ್ದ್ರಾನಕ್ಷತ್ರವನ್ನು ಪ್ರವೇಶಮಾಡಿದಮೇಲೆ ಹತ್ತು ನಕ್ಷತ್ರ

ಯುಗ್ಮೇಬ್ದೇ ಜನ್ಮತಃ ಸ್ತ್ರೀಣಾಂ ಪ್ರೀತಿದಂ ಪಾಣಿಪೀಡನಂ ।
ಏತತ್ಪುಂಸಾಮಯುಗ್ಮೇಬ್ದೇ ವ್ಯತ್ಯಯೇ ನಾಶನಂ ತಯೋಃ ॥ ೪೧೫ ॥

ಮಾಘಫಾಲ್ಗುಣವೈಶಾಖಜ್ಯೇಷ್ಠಮಾಸಾಃ ಶುಭಪ್ರದಾಃ ।
ಮಧ್ಯಮಃ ಕಾರ್ತಿಕೋ ಮಾರ್ಗಶೀರ್ಷೋ ವೈ ನಿಂದಿತಾಃ ಪರೇ ॥ ೪೧೬ ॥

ನ ಕದಾಚಿದ್ದಶರ್ಕ್ಷೇಷು ಭಾನೋರಾರ್ದ್ರಾಪ್ರವೇಶನಾತ್ ।
ವಿವಾಹೋ ದೇವತಾದೀನಾಂ ಪ್ರತಿಷ್ಠಾಂ ಚೋಪನಾಯನಂ ॥ ೪೧೭ ॥

ನಾಸ್ತಂಗತೇ ಸಿತೇ ಜೀವೇ ನ ತಯೋರ್ಬಾಲವೃದ್ಧಯೋಃ ।
ನ ಗುರೌ ಸಿಂಹರಾಶಿಸ್ಥೇ ಸಿಂಹಾಂಶಕಗತೇಪಿ ವಾ ॥ ೪೧೮ ॥

ಪಶ್ಚಾತ್ಪ್ರಾಗುದಿತಃ ಶುಕ್ರೋ ದಶತ್ರಿದಿವಸಂ ಶಿಶುಃ ।
ವೃದ್ಧಃ ಪಂಚದಿನಂ ಪಕ್ಷಂ ಗುರುಃ ಪಕ್ಷಂ ಚ ಸರ್ವತಃ ॥ ೪೧೯ ॥

---

ಗಳು ಸೂರ್ಯನಿಗೆ ಕಳೆಯುವವರೆಗೆ ವಿವಾಹ, ದೇವತಾಪ್ರತಿಷ್ಠೆ, ಉಪನಯನ ಮುಂತಾದುವುಗಳನ್ನು ನಡೆಸಬಾರದು. ಗುರುಶುಕ್ರಾಸ್ತಗಳು ಉದಯಾತ್ಪೂರ್ವದಲ್ಲಿ ಬರುವ ಬಾಲತ್ವ, ವೃದ್ಧತ್ವಾದಿಗಳು, ಗುರುವಿನ ಸಿಂಹರಾಶಿಸಂಚಾರಕಾಲ ಅಥವ ಸಿಂಹಾಂಶಗತವಾದಕಾಲ ಇವುಗಳನ್ನು ವಿವಾಹಕ್ಕೆ ಪ್ರಶಸ್ತವಾದ ಸಮಯಗಳಲ್ಲವೆಂದು ತಿಳಿಯಬೇಕು.

೪೧೯. ಶುಕ್ರನು ಪಶ್ಚಾದುದಿತನಾದರೆ ಹತ್ತುದಿನಗಳೂ ಪ್ರಾಗುದಿತನಾದರೆ ಮೂರು ದಿನಗಳೂ, ಶುಕ್ರನಿಗೆ ಶಿಶುತ್ವವಿರುವುದು. ಹಾಗೆಯೇ ಅಸ್ತಕ್ಕೆ ಮುಂಚೆ ಪಶ್ಚಾತ್ ಐದು ದಿನಗಳೂ, ಪ್ರಾಗಸ್ತದಲ್ಲಿ ಹದಿನೈದು ದಿನಗಳೂ, ಶುಕ್ರನಿಗೆ ವೃದ್ಧತ್ವವಿರುವುದು. ಗುರುವಿಗೆ ಸರ್ವದಾ ಬಾಲ್ಯವೃದ್ಧತ್ವಗಳು ಹದಿನೈದು ದಿವಸಗಳಾಗಿಯೇ ಇರುತ್ತವೆ.

ಅಪ್ರಬುದ್ಧೋ ಹೃಷೀಕೇಶೋ ಯಾವತ್ತಾವನ್ನ ಮಂಗಲಂ ।
ಉತ್ಸವೇ ವಾಸುದೇವಸ್ಯ ದಿವಸೇ ನಾನ್ಯಮಂಗಲಂ ॥ ೪೨೦ ॥

ನ ಜನ್ಮಮಾಸೇ ಜನ್ಮರ್ಕ್ಷೇ ನ ಜನ್ಮದಿವಸೇಽಪಿ ಚ ।
ಆದ್ಯಗರ್ಭಸುತಸ್ಯಾಥ ದುಹಿತುರ್ವಾ ಕರಗ್ರಹಃ ॥ ೪೨೧ ॥

ನೈವೋದ್ವಾಹೋ ಜ್ಯೇಷ್ಠಪುತ್ರೀ ಪುತ್ರಯೋಶ್ಚ ಪರಸ್ಪರಂ ।
ಜ್ಯೇಷ್ಠಮಾಸೇ ತಯೋರೇಕಜ್ಯೇಷ್ಠೇ ಶ್ರೇಷ್ಠಶ್ಚ ನಾನ್ಯಥಾ ॥ ೪೨೨ ॥

ಉತ್ಪಾತಗ್ರಹಣಾದೂರ್ಧ್ವಂ ಸಪ್ತಾಹಮಖಿಲಗ್ರಹೇ ।
ನಾಖಿಲೇ ತ್ರಿದಿನಂ ನೇಷ್ಟಂ ತ್ರಿದ್ಯುಸ್ಪೃಕ್ಚ ಕ್ಷಯಂ ತಥಾ ॥ ೪೨೩ ॥

ಗ್ರಸ್ತಾಸ್ತೇ ತ್ರಿದಿನಂ ಪೂರ್ವಂ ಪಶ್ಚಾದ್ಗ್ರಸ್ತೋದಯೇಽಥವಾ ।
ಸಂಧ್ಯಾಯಾಂ ತ್ರಿದಿನಂ ತದ್ವನ್ನಿಶೀಥೇ ಸಪ್ತ ಏವ ಚ ॥ ೪೨೪ ॥

೪೨೦-೪೨೪. ಶಯನದ್ವಾದಶಿಯಿಂದ ಉತ್ಥಾನದ್ವಾದಶಿಯವರೆವಿಗೆ ಮಂಗಳಕಾರ್ಯವನ್ನು ನಡೆಯಿಸುವುದು ಪ್ರಶಸ್ತವಲ್ಲ. ಅನಂತರ ಮಂಗಳಕಾರ್ಯವನ್ನು ನಡೆಯಿಸುವುದು ಪ್ರಶಸ್ತವೆನಿಸುವುದು ಮತ್ತು ಮಂಗಳಕರವಾದುದು. ಜನ್ಮಮಾಸ, ಜನ್ಮನಕ್ಷತ್ರ, ಜನ್ಮದಿನ ಇವು ವಿವಾಹಕ್ಕೆ ಪ್ರಶಸ್ತವಲ್ಲ. ಅಲ್ಲದೇ ಜ್ಯೇಷ್ಠಪುತ್ರೀ ಮತ್ತು ಪುತ್ರರಿಗೆ ಜ್ಯೇಷ್ಠಮಾಸದಲ್ಲಿ ವಿವಾಹವನ್ನು ಮಾಡಬಾರದು. ಅಂತೂ ಯಾವರೀತಿಯಲ್ಲಿಯೂ ತ್ರಿಜ್ಯೇಷ್ಠ ಬರದಂತೆ ವಿವಾಹವನ್ನು ನಡೆಯಿಸಬೇಕು. ಏಕಜ್ಯೇಷ್ಠವಾಗುವುದು ಶ್ರೇಷ್ಠವು. ಉತ್ಪಾತ, ಗ್ರಹಣ ಇವುಗಳು ಸಂಭವಿಸಿದಮೇಲೆ ಏಳು ದಿನಗಳವರೆಗೆ ವಿವಾಹಕರ್ಮವನ್ನು ಮಾಡಬಾರದು. ಪೂರ್ಣಗ್ರಾಸವಲ್ಲದ ಗ್ರಹಣದಲ್ಲಿ ಮೂರು ದಿನಗಳನ್ನು ಮಾತ್ರ ಬಿಟ್ಟು ನಂತರ ಶುಭಕರ್ಮಗಳನ್ನಾಚರಿಸಬಹುದು. ಹಿಂದೆ ಹೇಳಿದ ತ್ರಿದ್ಯುಸ್ಪೃಕ್, ಕ್ಷಯತಿಥಿಗಳು ಇವುಗಳು ವಿವಾಹಕ್ಕೆ ವರ್ಜ್ಯವಾದುವುಗಳು. ಸಂಧ್ಯಾಕಾಲಗಳಲ್ಲಿ ಗ್ರಸ್ತಾಸ್ತ ಅಥವ ಗ್ರಸ್ತೋದಯಗಳು ಸಂಭವಿಸಿದರೆ ಮೂರು ದಿನಗಳನ್ನೂ ಅರ್ಧರಾತ್ರಿಯ ಪೂರ್ಣಗ್ರಹಣದಲ್ಲಿ ಏಳುದಿನಗಳನ್ನೂ ಬಿಟ್ಟು ವಿವಾಹಮಾಡುವುದು ಶ್ರೇಯಸ್ಕರವೆಂದು ತಿಳಿಯಬೇಕು.

ಮಾಸಾಂತೇ ಪಂಚದಿವಸಾಂಸ್ತ್ಯಜೇದ್ರಿಕ್ತಾಂ ತಥಾಷ್ಟಮೀಂ ।
ವ್ಯತೀಪಾತಂ ವೈಧೃತಿಂ ಚ ಸಂಪೂರ್ಣಂ ಪರಿಘಾರ್ಧಕಂ ॥ ೪೨೫ ॥

ಪೌಷ್ಣಭತ್ರ್ಯುತ್ತರಾಮೈತ್ರಮರುಚ್ಚಂದ್ರಾರ್ಕ ಪಿತ್ರ್ಯಭೈಃ ।
ಸಮೂಲಭೈರವಿದ್ಧೈಸ್ತೈಃ ಸ್ತ್ರೀಕರಗ್ರಹ ಇಷ್ಯತೇ ॥ ೪೨೬ ॥

ವಿವಾಹೇ ಬಲಮಾವಶ್ಯಂ ದಂಪತ್ಯೋರ್ಗುರುಸೂರ್ಯಯೋಃ ।
ಚೇತ್ಪೂಜಾ ಯತ್ನತಃ ಕಾರ್ಯಾ ದುರ್ಬಲಗ್ರಹಯೋಸ್ತಯೋಃ ॥ ೪೨೭ ॥

ಗೋಚರಂ ವೇಧಜಂ ಚಾಷ್ಟವರ್ಗಜಂ ರೂಪಜಂ ಬಲಂ ।
ಯಥೋತ್ತರಂ ಬಲಾಧಿಕ್ಯಂ ಸ್ಥೂಲಂ ಗೋಚರಮಾರ್ಗಜಂ ॥ ೪೨೮ ॥

ಚಂದ್ರತಾರಾಬಲಂ ವೀಕ್ಷ್ಯ ತತಃ ಪಂಚಾಂಗಜಂ ಬಲಂ ।
ತಿಥಿರೇಕಗುಣಾ ವಾರೋ ದ್ವಿಗುಣಸ್ತ್ರಿಗುಣಂ ಚ ಭಂ ॥ ೪೨೯ ॥

ಯೋಗಶ್ಚತುರ್ಗುಣಂ ಪಂಚಗುಣಂ ತಿಥ್ಯರ್ಧಸಂಜ್ಞಿತಂ ।
ತತೋ ಮುಹೂರ್ತೋ ಬಲವಾಂಸ್ತತೋ ಲಗ್ನಂ ಬಲಾಧಿಕಂ ॥ ೪೩೦ ॥

೪೨೫-೪೩೦. ಮಾಸಾಂತ್ಯದ ಐದುದಿನಗಳು, ರಿಕ್ತತಿಥಿ, ಅಷ್ಟಮೀ, ವ್ಯತೀಪಾತ, ವೈಧೃತಿ, ಪರಿಘಾರ್ಧಕಾಲ ಇವುಗಳು ವಿವಾಹಕ್ಕೆ ಪ್ರಶಸ್ತವಲ್ಲ. ರೇವತೀ ಉತ್ತರಾತ್ರಯ ಅಂದರೆ ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ಅನೂರಾಧ ಸ್ವಾತಿ, ಮೃಗಶಿರ, ಹಸ್ತ, ಮಖ, ಮೂಲ ಈ ನಕ್ಷತ್ರಗಳು ಪಾಪಗ್ರಹವಿದ್ಧಗಳಾಗದಿದ್ದರೆ ವಿವಾಹಕ್ಕೆ ಪ್ರಶಸ್ತವಾಗುವುವು. ವಿವಾಹದಲ್ಲಿ ದಂಪತಿಗಳಿಗೆ ಗುರು ಮತ್ತು ಸೂರ್ಯರ ಬಲವಿರಬೇಕು. ದುರ್ಬಲರಾಗಿರುವ ಗ್ರಹಗಳಿಗಾಗಿ ಶಾಂತಿಯನ್ನು ನಡೆಸಬೇಕು. ಗೋಚರ, ವೇಧಜ, ಅಷ್ಟವರ್ಗಜ ಈ ಮೂರು ಬಲಗಳು ಉತ್ತರೋತ್ತರವಾಗಿ ಅಧಿಕ ಬಲವುಳ್ಳವುಗಳು. ಅದರಲ್ಲಿ ಗೋಚರ ಬಲವು ಬಹಳ ಸ್ಥೂಲವಾದದ್ದು. ಚಂದ್ರತಾರಾಬಲ ಪಂಚಾಂಗಗಳ ಬಲ ಇವುಗಳನ್ನು ನೋಡಿ ವಿವಾಹಲಗ್ನವನ್ನು ನಿಷ್ಕರ್ಷಿಸಬೇಕು. ತಿಥಿ, ವಾರ ನಕ್ಷತ್ರ, ಯೋಗ, ಕರಣ ಇವು ಉತ್ತರೋತ್ತರ ಬಲವತ್ತರಗಳು. (ತಿಥಿ,

**ತತೋ ಬಲವತೀ ಹೋರಾ ದ್ರೇಕ್ಕಾಣೋ ಬಲವಾಂಸ್ತತಃ ।**
**ತತೋ ನವಾಂಶೋ ಬಲವಾನ್ದ್ವಾದಶಾಂಶೋ ಬಲೀ ತತಃ ॥ ೪೩೧ ॥**

**ತ್ರಿಂಶಾಂಶೋ ಬಲವಾಂಸ್ತಸ್ಮಾದ್ವೀಕ್ಷ್ಯಮೇತದ್ಬಲಾಬಲಂ ।**
**ಶುಭೇಕ್ಷಿತಯುತಾಃ ಶಸ್ತಾ ಉದ್ವಾಹೇಽಖಿಲರಾಶಯಃ ॥ ೪೩೨ ॥**

**ಚಂದ್ರಾರ್ಕೇಜ್ಯಾದಯಃ ಪಂಚ ಯಸ್ಯ ರಾಶೇಸ್ತು ಖೇಚರಾಃ ।**
**ಇಷ್ಟಾಸ್ತಚ್ಛುಭದಂ ಲಗ್ನಂ ಚತ್ವಾರೋಽಪಿ ಬಲಾನ್ವಿತಾಃ ॥ ೪೩೩ ॥**

**ಜಾಮಿತ್ರಶುದ್ಧ್ಯೈಕವಿಂಶನ್ಮಹಾದೋಷವಿವರ್ಜಿತಂ ।**
**ಏಕವಿಂಶತಿದೋಷಾಣಾಂ ನಾಮರೂಪಫಲಾನಿ ಚ ॥ ೪೩೪ ॥**

**ವಕ್ಷ್ಯಂತೇಽತ್ರ ಸಮಾಸೇನ ಶೃಣು ನಾರದ ಸಾಂಪ್ರತಂ ।**
**ಪಂಚಾಂಗಶುದ್ಧಿರಾಹಿತ್ಯಂ ದೋಷಸ್ತ್ವಾದ್ಯಃ ಪ್ರಕೀರ್ತಿತಃ ॥ ೪೩೫ ॥**

---

ಕರಣ, ವಾರ, ಯೋಗ, ನಕ್ಷತ್ರ ಇವು ಪರಸ್ಪರ ಬಲವತ್ತರಗಳೆಂದು ಪ್ರಾಚೀನ ಮತ) ಇವುಗಳೆಲ್ಲಕ್ಕಿಂತ ಮುಹೂರ್ತವು ಬಲಿಷ್ಠವಾದುದು. ಅದಕ್ಕಿಂತ ಲಗ್ನವು ಪರಮ ಬಲಿಷ್ಠವೆನಿಸಿರುವುದು. ಅದರಲ್ಲಿ ಹೋರಾ. ದ್ರೇಕ್ಕಾಣ. ನವಾಂಶ ದ್ವಾದಶಾಂಶ, ತ್ರಿಂಶಾಂಶ ಇವು ಉತ್ತರೋತ್ತರವಾಗಿ ಬಲಿಷ್ಠವಾದುವುಗಳು. ಇವೆಲ್ಲವೂ ಶುಭಗ್ರಹವೀಕ್ಷತಗಳೋ ಯುತಗಳೋ ಆಗಿದ್ದರೆ ತುಂಬಾ ಪ್ರಶಸ್ತ ಗಳೆನಿಸುವುವು.

೪೩೩-೪೪೪. ವಿವಾಹಲಗ್ನವಲ್ಲಿ ಚಂದ್ರ, ಸೂರ್ಯ, ಗುರು ಇವರೇ ಮೊದಲಾದ ಐದು ಗ್ರಹಗಳು ಷಡ್ಬಲಯುಕ್ತರಾಗಿದ್ದರೆ ಅದು ಪ್ರಶಸ್ತಲಗ್ನವೆನಿಸುವುದು. ನಾಲ್ಕು ಗ್ರಹಗಳು ಬಲಿಷ್ಠರಾಗಿದ್ದರೂ ಅದನ್ನೂ ಪ್ರಶಸ್ತವೆಂದೇ ತಿಳಿಯಬೇಕು. ಸಪ್ತಮಶುದ್ಧಿ, ಏಕವಿಂಶತಿದೋಷಾಭಾವ ಇವು ಲಗ್ನಕ್ಕೆ ಅತ್ಯಗತ್ಯವಾಗಿರಬೇಕು. ಇಪ್ಪತ್ತೊಂದು ಮಹಾದೋಷಗಳಾವುವೆಂದರೆ:- ಪಂಚಾಂಗಶುದ್ಧಿಯಿಲ್ಲದಿರುವುದೇ ಮೊದಲನೆಯ ದೋಷ. ಗುರು, ಶುಕ್ರರ ಉದಯಾಸ್ತಗಳು ದ್ವಿತೀಯದೋಷ. ಸೂರ್ಯಸಂಕ್ರಮಶುದ್ಧಿಯೇ ಮೂರನೆಯ ದೋಷ. ಪಾಪಗ್ರಹಷಡ್ವರ್ಗಗಳಿರುವುದು ನಾಲ್ಕನೆಯ ದೋಷ. ಕುಜ ಶುಕ್ರರು ಆರನೆಯ

ಉದಯಾಸ್ತಶುದ್ಧೇರ್ಹಾನಿರ್ದ್ವಿತೀಯಃ ಸೂರ್ಯಸಂಕ್ರಮಃ ।
ತೃತೀಯಃ ಪಾಪಷಡ್ವರ್ಗೋ ಭೃಗುಃ ಷಷ್ಠಃ ಕುಜೋಽಷ್ಟಮಃ ॥ ೪೩೬ ॥

ಗಂಡಾಂತಂ ಕರ್ತರೀ ರಿಃಫಷಡಷ್ಟೇಂದುಗತೋ ಗ್ರಹಃ ।
ದಂಪತ್ಯೋರಷ್ಟಮಂ ಲಗ್ನಂ ರಾಶಿರ್ವಿಷಘಟೀ ತಥಾ ॥ ೪೩೭ ॥

ದುರ್ಮುಹೂರ್ತೋ ವಾರದೋಷಃ ಖಾರ್ಜೂರಿಕಸಮಾಂಘ್ರಿಭಂ ।
ಗ್ರಹಣೋತ್ಪಾತಭಂ ಕ್ರೂರವಿದ್ಧರ್ಕ್ಷಂ ಕ್ರೂರಸಂಯುತಂ ॥ ೪೩೮ ॥

ಕುನವಾಂಶೋ ಮಹಾಪಾತೋ ವೈಧೃತಿಶ್ಚೈಕವಿಂಶತಿಃ ।
ತಿಥಿವಾರರ್ಕ್ಷಯೋಗಾನಾಂ ಕರಣಸ್ಯ ಚ ಮೇಲನಂ ॥ ೪೪೯ ॥

ಪಂಚಾಂಗಮಸ್ಯ ಶುದ್ಧಿಸ್ತು ಪಂಚಾಂಗಸಿದ್ಧಿರುದೀರಿತಾ ।
ಯಸ್ಮಿನ್ಪಂಚಾಂಗದೋಷೋಽಸ್ತಿ ತಸ್ಮಿನ್ಲಗ್ನೇ ನಿರರ್ಥಕಂ ॥ ೪೪೦ ॥

ರಾಶಿಯಲ್ಲಿರುವುದು ಐದನೆಯ ದೋಷ. ಹೀಗೆಯೇ ಗಂಡಾಂತ ನಕ್ಷತ್ರಗಳು ಕರ್ತರೀದೋಷ. ಹನ್ನೆರಡು, ಆರು, ಎಂಟು ಈ ರಾಶಿಗಳಲ್ಲಿ ಗ್ರಹಸಹಿತವಾಗಿ ಚಂದ್ರನಿರುವುದು ದಂಪತಿಗಳ ಅಷ್ಟಮರಾಶಿಯು ಲಗ್ನವಾಗುವುದು, ವಿಷ ಘಟಿಕೆಗಳಿರುವುದು, ದುರ್ಮುಹೂರ್ತ, ವಾರದೋಷ, ಖಾರ್ಜೂರಿಕಾಚಕ್ರದಲ್ಲಿ ಸಮಪಾದವಿರುವಿಕೆ, ಗ್ರಹಣ, ಉತ್ಪಾತಗಳಾಗುವ ನಕ್ಷತ್ರ, ಕ್ರೂರಗ್ರಹವಿದ್ಧವಾದ ನಕ್ಷತ್ರ, ಕ್ರೂರಗ್ರಹಯುತವಾದ ಲಗ್ನ, ಕ್ರೂರನವಾಂಶ, ಮಹಾಪಾತ, ವೈಧೃತಿ ಇವು ಏಕವಿಂಶತಿದೋಷಗಳಿಗೆ ಸೇರುವುವು. ತಿಥಿ, ವಾರ, ನಕ್ಷತ್ರ, ಯೋಗ ಕರಣ ಈ ಐದು ಅಂಗಗಳೂ ಶುದ್ಧಗಳಾಗಿ ದೋಷವರ್ಜಿತಗಳಾಗಿರುವುದೇ ಪಂಚಾಂಗಶುದ್ಧಿಯೆನಿಸುವುದು. ಇವುಗಳಲ್ಲಿ ಯಾವುದೊಂದು ದೋಷವಿದ್ದರೂ ವಿಷಸಿಕ್ತವಾದ ಹಾಲಿನ ಗಡಿಗೆಯಂತೆ ದೂಷ್ಯವಾಗುವುದು. ಈ ಪಂಚೇಷ್ಟಿಕ ದೋಷಗಳಿಲ್ಲದಂತೆ ವಿವಾಹಮುಹೂರ್ತವನ್ನು ನಿಶ್ಚಯಿಸಬೇಕು. ವಿವಾಹಲಗ್ನ ಮತ್ತು ನವಾಂಶ ಇವು ಆಯಾ ರಾಜ್ಯಾಧಿಪತಿಗಳಿಂದ ವೀಕ್ಷಿತಗಳಾದರೆ ಶ್ರೇಷ್ಠವೆನಿಸಿಕೊಳ್ಳುವುವು. ಅಥವಾ ಶುಭಗ್ರಹಗಳಿಂದಲಾಗಲೀ ಮಿತ್ರಗ್ರಹಗಳಿಂದಲಾಗಲೀ ದೃಷ್ಟಗಳಾಗಿರಬೇಕು. ಹಾಗಿಲ್ಲದೇ ಶತ್ರುಗ್ರಹವೀಕ್ಷಿತಗಳಾಗಿದ್ದರೆ

ತ್ಯಜೇತ್ಪಂಚ್ಯೈಷ್ಟಿಕಂ ಚಾಪಿ ವಿಷಸಂಯುಕ್ತದುಗ್ಧವತ್ ।
ಲಗ್ನಲಗ್ನಾಂಶಕೌ ಸ್ವಸ್ವಪತಿನಾ ವೀಕ್ಷಿತೌ ಯುತೌ ॥ ೪೪೧ ॥

ನ ಚೇ ದ್ವಾನ್ಯೋನ್ಯಪತಿನಾ ಶುಭಮಿತ್ರೇಣ ವಾ ತಥಾ ।
ಪರಸ್ಯ ಮೃತ್ಯುಃ ಸ್ಯಾತ್ತಾಭ್ಯಾಂ ಸಪ್ತಸಪ್ತೋದಯಕಾಂಶಪೌ ॥ ೪೪೨ ॥

ಏವಂ ತೌ ನ ಯುತೌ ದೃಷ್ಟೌ ಮೃತ್ಯುರ್ವಧ್ವಾಃ ಕರಗ್ರಹೇ ।
ತ್ಯಾಜ್ಯಾಃ ಸೂರ್ಯಸ್ಯ ಸಂಕ್ರಾಂತೇಃ ಪೂರ್ವತಃ ಪರತಸ್ತಥಾ ॥ ೪೪೩ ॥

ವಿವಾಹಾದಿಷು ಕಾರ್ಯೇಷು ನಾಡ್ಯಃ ಷೋಡಶ ಷೋಡಶ ।
ಷಡ್ವರ್ಗಃ ಶುಭದಃ ಶ್ರೇಷ್ಠೋ ವಿವಾಹಸ್ಥಾಪನಾದಿಷು ॥ ೪೪೪ ॥

ಭೃಗುಷಷ್ಠಾಹ್ವಯೋ ದೋಷೋ ಲಗ್ನಾಚ್ಛಷ್ಠಗತೇ ಸಿತೇ ।
ಉಚ್ಚಗೇ ಶುಭಸಂಯುಕ್ತೇ ತಲ್ಲಗ್ನಂ ಸರ್ವದಾ ತ್ಯಜೇತ್ ॥ ೪೪೫ ॥

---

ದಂಪತಿಗಳಿಗೆ ಅಮಂಗಳಪ್ರಾಪ್ತಿಯಾಗುವುದು ಮತ್ತು ವಧೂವರರ ರಾಶಿಗಳಾಗಲೀ, ಅಂಶಗಳಾಗಲೀ ಪರಸ್ಪರ ಏಳನೆಯವಾಗಿ ಮೈತ್ರೀಯುತಗಳಾಗಿದ್ದರೆ ಒಳ್ಳೆಯದು, ಹಾಗಿಲ್ಲದಿದ್ದರೆ ದಂಪತಿಗಳಿಗೆ ಅಶುಭವುಂಟಾಗುವುದು. ಸೂರ್ಯ ಸಂಕ್ರಮಣದ ಕಾಲದಿಂದ ಹಿಂದೆ ಮತ್ತು ಮುಂದಿನ ಹದಿನಾರು ಗಳಿಗೆಗಳನ್ನು ಬಿಟ್ಟು ವಿವಾಹಾದಿ ಮಂಗಳಕಾರ್ಯಗಳಿಗೆ ಲಗ್ನವನ್ನಿಡಬೇಕು. ಈ ಮಂಗಳ ಕಾರ್ಯಗಳಿಗೆಲ್ಲಾ ನಿಶ್ಚಯಿಸಿರುವ ಲಗ್ನಕ್ಕೆ ಸಂಪೂರ್ಣವಾಗಿ ಷಡ್ವರ್ಗ ಬಲವಿರಬೇಕು.

೪೪೫-೪೪೭. ವಿವಾಹಲಗ್ನಕ್ಕೆ ಆರನೆಯ ಸ್ಥಾನದಲ್ಲಿ ಶುಕ್ರನಿದ್ದರೆ ಅದಕ್ಕೆ ಭೃಗುಷಟ್ಕದೋಷವೆಂದು ಹೆಸರು. ಶುಕ್ರನು ಆ ಸ್ಥಾನದಲ್ಲಿ ಉಚ್ಚನಾಗಿ ಶುಭಯುಕ್ತನಾಗಿದ್ದರೂ, ಆ ಲಗ್ನವನ್ನು ತ್ಯಾಜ್ಯಮಾಡಬೇಕು. ಹಾಗೆಯೇ ಅಷ್ಟಮದಲ್ಲಿ ಕುಜನಿರುವುದೂ, ದೋಷಕರವೆಂದು ತಿಳಿಯಬೇಕು. ವಿವಾಹ ಲಗ್ನದಲ್ಲಿ ಮೂರು ಶುಭಗ್ರಹಗಳಿದ್ದು, ಅದೇ ಕುಜನು ಉಚ್ಚಸ್ಥಾನದಲ್ಲಿದ್ದರೆ

ಕುಜೋऽಷ್ಟಮೋ ಮಹಾದೋಷೋ ಲಗ್ನಾದಷ್ಟಮಗೇ ಕುಜೇ ।
ಶುಭತ್ರಯಯುತಂ ಲಗ್ನಂ ನ ತ್ಯಜೇತ್ತುಂಗಗೋ ಯದಿ ॥ ೪೪೬ ॥

ಪೂರ್ಣಾನಂದಾಖ್ಯಯೋಸ್ತಿಥ್ಯೋಃ ಸಂಧಿರ್ನಾಡೀದ್ವಯಂ ಯದಾ ।
ಗಂಡಾಂತಂ ಮೃತ್ಯುದಂ ಜನ್ಮಯಾತ್ರೋದ್ವಾಹವ್ರತಾದಿಷು ॥ ೪೪೭ ॥

ಕುಲೀರಸಿಂಹಯೋಃ ಕೀಟಚಾಪಯೋರ್ಮೀನಮೇಷಯೋಃ ।
ಗಂಡಾಂತಮಂತರಾಲಂ ಸ್ಯಾದ್ಘಟಿಕಾರ್ಧಂ ಮೃತಿಪ್ರದಂ ॥ ೪೪೮ ॥

ಸಾರ್ಪೇಂದ್ರಪೌಷ್ಣಭೇಷ್ವಂತ್ಯಷೋಡಶಾಂಶಾ ಭಸಂಧಯಃ ।
ತದಗ್ರಿಮೇಷ್ವಾದ್ಯಪಾದಾ ಭಾನಾಂ ಗಂಡಾಂತಸಂಜ್ಞಕಾಃ ॥ ೪೪೯ ॥

ಉಗ್ರಂ ಚ ಸಂಧಿತ್ರಿತಯಂ ಗಂಡಾಂತಂ ತ್ರಿವಿಧಂ ಮಹತ್ ।
ಲಗ್ನಾಭಿಮುಖಯೋಃ ಪಾಪಗ್ರಹಯೋರೃಜುವಕ್ರಯೋಃ ॥ ೪೫೦ ॥

ಕುಜಾಷ್ಟಮದೋಷವಿರುವುದಿಲ್ಲ. ಪೂರ್ಣ ಮತ್ತು ನಂದತಿಥಿಗಳ ಸಂಧಿಕಾಲದಲ್ಲಿ ಎರಡುಗಳಿಗೆಗಳಿಗೆ ಗಂಡಾಂತಕಾಲವೆಂದು ಹೆಸರು. ಅದು ಯಾತ್ರೆ ವಿವಾಹ, ಉಪನಯನ ಮುಂತಾದುವುಗಳಿಗೆ ಪ್ರಶಸ್ತವಾದುದಲ್ಲ

೪೪೮-೪೫೧. ಕಟಕ ಮತ್ತು ಸಿಂಹ, ವೃಶ್ಚಿಕ ಮತ್ತು ಧನುಸ್ಸು ಮೀನ ಮತ್ತು ಮೇಷ ಈ ರಾಶಿಗಳ ಸಂಧಿಕಾಲವನ್ನು ಅರ್ಧಗಳಿಗೆಯವರೆಗೆ ಗಂಡಾಂತ ಕಾಲವೆಂದು ತಿಳಿಯಬೇಕು. ಆ ಕಾಲಗಳಲ್ಲಿ ನಡೆಯುವ ಕರ್ಮಗಳು ಮೃತಿ ಪ್ರದಗಳಾಗುವುವು. ಆಶ್ಲೇಷ, ಜ್ಯೇಷ್ಠ, ರೇವತಿ ಈ ನಕ್ಷತ್ರಗಳ ಕೊನೆಯ ಹದಿನಾರು ಗಳಿಗೆಗಳನ್ನೂ ಮುಂದಿನ ನಕ್ಷತ್ರಗಳ ಆದಿಯ ಹದಿನಾರು ಗಳಿಗೆಗಳನ್ನೂ ಭಸಂಧಿಕಾಲವೆಂದು ತಿಳಿಯಬೇಕು. ಅದೂ ಗಂಡಾಂತಕಾಲವೆನಿಸುವುದು. ಈ ಮೂರು ತಿಥಿ, ವಾರ, ಗಂಡಾಂತಕಾಲವನ್ನೂ ದೂಷ್ಯಕಾಲವೆಂದು ತಿಳಿಯಬೇಕು. ಲಗ್ನದ ಮುಂದಿನ ಮತ್ತು ಹಿಂದಿನ ರಾಶಿಗಳಲ್ಲಿ ವಕ್ರ ಮತ್ತು ಋಜುಗತಿಯ ಗ್ರಹಗಳು ಕ್ರಮವಾಗಿದ್ದರೆ ಆ ಲಗ್ನವು ಕರ್ತರೀಯೋಗಕ್ಕೆ ಸಿಕ್ಕು

**ಸಾ ಕರ್ತರೀತಿ ವಿಜ್ಞೇಯಾ ದಂಪತ್ಯೋರ್ಗಲಕರ್ತರೀ ।**
**ಕರ್ತರೀಯೋಗದುಷ್ಟಂ ಯಲ್ಲಗ್ನಂ ತತ್ಪರಿವರ್ಜಯೇತ್ ॥ ೪೫೧ ॥**

**ಅಪಿ ಸೌಮ್ಯಗ್ರಹೈರ್ಯುಕ್ತಂ ಗುಣೈಃ ಸರ್ವೈಃ ಸಮನ್ವಿತಂ ।**
**ಷಡಷ್ಟರಿಃಫಗೇ ಚಂದ್ರೇ ಲಗ್ನದೋಷಃ ಸ್ವಸಂಜ್ಞಕಃ ॥ ೪೫೨ ॥**

**ತಲ್ಲಗ್ನಂ ವರ್ಜಯೇದ್ಯತ್ನಾಜ್ಜೀವಶುಕ್ರಸಮನ್ವಿತಂ ।**
**ಉಚ್ಚಗೇ ನೀಚಗೇ ವಾಪಿ ಮಿತ್ರಭೇ ಶತ್ರುರಾಶಿಗೇ ॥ ೪೫೩ ॥**

**ಅಪಿ ಸರ್ವಗುಣೋಪೇತಂ ದಂಪತ್ಯೋರ್ನಿಧನಪ್ರದಂ ।**
**ಶಶಾಂಕೇ ಗ್ರಹಸಂಯುಕ್ತೇ ದೋಷಃ ಸಂಗ್ರಹಸಂಜ್ಞಕಃ ॥ ೪೫೪ ॥**

**ತಸ್ಮಿನ್ಸಂಗ್ರಹದೋಷೇ ತು ವಿವಾಹಂ ನೈವ ಕಾರಯೇತ್ ।**
**ಸೂರ್ಯೇಣ ಸಂಯುತೇ ಚಂದ್ರೇ ದಾರಿದ್ರ್ಯಂ ಭವತಿ ಸ್ಫುಟಂ ॥ ೪೫೫ ॥**

---

ವುದು. ಈ ಯೋಗದಿಂದ ಕೂಡಿದ ಲಗ್ನವು ದಂಪತಿಗಳಿಗೆ ಮೃತಿಪ್ರದವಾಗುವುದು. ಆದ್ದರಿಂದ ಈ ದೋಷಯುತವಾದ ಲಗ್ನವನ್ನು ಬಿಡಬೇಕು.

೪೫೨-೪೫೭. ಕರ್ತರೀದೋಷವಿಶಿಷ್ಟವಾದ ಲಗ್ನವು ಅನೇಕ ಶುಭಗ್ರಹಗಳಿಂದ ಕೂಡಿದ್ದರೂ ಅದನ್ನು ದೂರಮಾಡಬೇಕು. ಚಂದ್ರನು ವಿವಾಹಲಗ್ನಕ್ಕಿಂತ ಆರು, ಹನ್ನೆರಡು, ಎಂಟನೆಯ ರಾಶಿಗಳಲ್ಲಿದ್ದು ಉಚ್ಚನಾಗಿದ್ದರೂ, ನೀಚನಾಗಿದ್ದರೂ, ಲಗ್ನವು ಗುರುಶುಕ್ರಸಮನ್ವಿತವಾಗಿದ್ದರೂ ಆ ಲಗ್ನವು ವಿವಾಹಕ್ಕೆ ಪ್ರಶಸ್ತವಲ್ಲವೆಂದು ತಿಳಿಯಬೇಕು. ಅದು ದಂಪತಿಗಳಿಗೆ ಮೃತ್ಯುಪ್ರದವಾದ ಲಗ್ನವಾಗುವುದು. ಚಂದ್ರನು ಗ್ರಹಯುಕ್ತನಾಗಿದ್ದರೆ ಸಗ್ರಹಚಂದ್ರನೆಂಬ ದೋಷವು ಬರುವುದು. ಇದು ವಿವಾಹಕ್ಕೆ ಪ್ರಬಲವಾದ ದೋಷವೆನಿಸುವುದು. ಚಂದ್ರನು ರವಿಯುಕ್ತನಾಗಿದ್ದರೆ ದಾರಿದ್ರ್ಯವೂ, ಶುಭಯುಕ್ತನಾಗಿದ್ದರೆ ಮರಣವೂ, ವ್ಯಾಧಿಯೂ, ಬುಧನಿಂದ ಕೂಡಿದ್ದರೆ ಅನಪತ್ಯತ್ವವೂ, ಗುರುಯುಕ್ತನಾಗಿದ್ದರೆ ದಾರಿದ್ರ್ಯವೂ, ಶುಕ್ರಯುಕ್ತನಾಗಿದ್ದರೆ ದ್ವಿಕಳತ್ರಯೋಗವೂ, ಶನಿ

ಕುಜೇನ ಮರಣಂ ವ್ಯಾಧಿಃ ಸೌಮ್ಯೇನ ತ್ವನಪತ್ಯತಾ ।
ದೌರ್ಭಾಗ್ಯಂ ಗುರುಣಾ ಯುಕ್ತೇ ಸಾಪತ್ನ್ಯಂ ಭಾರ್ಗವೇಣ ತು ॥ ೪೫೬ ॥

ಪ್ರವ್ರಜ್ಯಾ ಸೂರ್ಯಪುತ್ರೇಣ ರಾಹುಣಾ ಮೂಲಸಂಕ್ಷಯಃ ।
ಕೇತುನಾ ಸಂಯುತೇ ಚಂದ್ರೇ ನಿತ್ಯಂ ಕಷ್ಟಂ ದರಿದ್ರತಾ ॥ ೪೫೭ ॥

ಪಾಪಗ್ರಹಯುತೇ ಚಂದ್ರೇ ದಂಪತ್ಯೋರ್ಮರಣಂ ಭವೇತ್ ।
ಶುಭಗ್ರಹಯುತೇ ಚಂದ್ರೇ ಸ್ವೋಚ್ಚಸ್ಥೇ ಮಿತ್ರರಾಶಿಗೇ ॥ ೪೫೮ ॥

ದೋಷಾಯ ನ ಭವೇಲ್ಲಗ್ನಂ ದಂಪತ್ಯೋಃ ಶ್ರೇಯಸೇ ಸದಾ ।
ಸ್ವೋಚ್ಚಗೋ ವಾ ಸ್ವರ್ಕ್ಷಗೋ ವಾ ಮಿತ್ರಕ್ಷೇತ್ರಗತೋಽಪಿ ವಾ ॥ ೪೫೯ ॥

ಪಾಪಗ್ರಹಯುತಶ್ಚಂದ್ರಃ ಕರೋತಿ ಮರಣಂ ತಯೋಃ ।
ದಂಪತ್ಯೋರಷ್ಟಮಂ ಲಗ್ನಮಷ್ಟಮೋ ರಾಶಿರೇವ ಚ ॥ ೪೬೦ ॥

---

ಯುಕ್ತನಾಗಿದ್ದರೆ ಸಂನ್ಯಾಸವೂ, ರಾಹುಯುಕ್ತನಾಗಿದ್ದರೆ ಮೂಲನಾಶವೂ ಕೇತುಸಂಬಂಧದಿಂದ ಬಡತನವೂ ಮತ್ತು ನಿತ್ಯಕಷ್ಟಗಳೂ ಲಭಿಸುವುವು. ಇದು ಸಗ್ರಹದೋಷವಿಶಿಷ್ಟನಾದ ಚಂದ್ರನಿಂದ ಬರುವ ಫಲವಾಗಿರುವುದು.

೪೫೮-೪೬೦. ಚಂದ್ರನು ಪಾಪಗ್ರಹಯುತನಾಗಿದ್ದರೆ ದಂಪತಿಗಳಿಗೆ ಮರಣಸಂಭವಿಸುವುದು. ಶುಭಗ್ರಹಯುತನಾಗಿ ಚಂದ್ರನು ಉಚ್ಚ ಅಥವ ಸ್ವೀಚಕ್ಷೇತ್ರದಲ್ಲಿದ್ದರೆ ಲಗ್ನವು ಅಷ್ಟು ದೋಷಯುಕ್ತವೆಂದು ಹೇಳಲಾಗದು. ದಂಪತಿಗಳಿಗೆ ಅದರಿಂದ ಶ್ರೇಯಸ್ಸುಂಟಾಗುವುದು. ಪಾಪಗ್ರಹಯುತನಾದ ಚಂದ್ರನು ಉಚ್ಚ, ಸ್ವಕ್ಷೇತ್ರ, ಮಿತ್ರಕ್ಷೇತ್ರ ಮುಂತಾದ ಶುಭಸ್ಥಾನಗಳಲ್ಲಿದ್ದರೂ ದಂಪತಿಗಳಿಗೆ ಶುಭಪ್ರದನಲ್ಲ. ದಂಪತಿಗಳ ಅಷ್ಟಮಲಗ್ನದಲ್ಲಾಗಲೀ, ಅಷ್ಟಮ ರಾಶಿಯಲ್ಲಾಗಲೀ ಚಂದ್ರನಿರುವುದೂ ಅಥವ ಅದೇ ವಿವಾಹಲಗ್ನವಾಗುವುದೂ ವಿವಾಹಕ್ಕೆ ಅಷ್ಟು ಪ್ರಶಸ್ತವಲ್ಲ. ಶುಭಗ್ರಹಯುತವಾಗಿದ್ದರೂ ಆ ಲಗ್ನಗಳು ಅಷ್ಟು ಪ್ರಶಸ್ತಗಳಲ್ಲ. ಕೇವಲ ಲಗ್ನಮಾತ್ರವಲ್ಲದೇ ಆ ಅಂಶವೂ ದುಷ್ಟವೆನಿಸುವುದು. ದಂಪತಿಗಳ ಜನ್ಮಲಗ್ನಕ್ಕಿಂತ ಹನ್ನೆರಡನೆಯ ರಾಶಿಯು ವಿವಾಹಲಗ್ನಕ್ಕೆ ಯೋಗ್ಯವಾದುದಲ್ಲ. ಅದರಿಂದ ಅರ್ಥಹಾನಿಯುಂಟಾಗುವುದು.

ಯದಿ ಲಗ್ನಗತಃ ಸೋಽಪಿ ದಂಪತ್ಯೋರ್ಮರಣಪ್ರದಃ ।
ಸ ರಾಶಿಃ ಶುಭಸಂಯುಕ್ತೋ ಲಗ್ನಂ ವಾ ಶುಭಸಂಯುತಂ ॥ ೪೬೧ ॥

ಲಗ್ನಂ ವಿವರ್ಜಯೇದ್ಯಸ್ಮಾತ್ತದಂಶಾಂಶಕದೀಶ್ವರಾನ್ ।
ದಂಪತ್ಯೋರ್ದ್ವಾದಶಂ ಲಗ್ನಂ ರಾಶಿರ್ವಾ ಯದಿ ಲಗ್ನಗಃ ॥ ೪೬೨ ॥

ಅರ್ಥಹಾನಿಸ್ತಯೋರಸ್ಮಾತ್ತದಂಶಸ್ವಾಮಿನಂ ತ್ಯಜೇತ್ ।
ಜನ್ಮರಾಶ್ಯುದಯಶ್ಚೈವ ಜನ್ಮಲಗ್ನೋದಯಃ ಶುಭಃ ॥ ೪೬೩ ॥

ತಯೋರುಪಚಯಸ್ಥಾನಂ ಲಗ್ನೇಽತ್ಯಂತಶುಭಪ್ರದಂ ।
ಖಮಾರ್ಗಣಾಃ ವೇದಪಕ್ಷಾಃ ಖರಾಮಾಃ ವೇದಮಾರ್ಗಣಾಃ ॥ ೪೬೪ ॥

ವಹ್ನಿಚಂದ್ರಾ ರೂಪದಸ್ರಾಃ ಖರಾಮಾ ವ್ಯೋಮಬಾಹವಃ ।
ದ್ವಿರಾಮಾಃ ಸ್ವಾಗ್ನಯಃ ಶೂನ್ಯದಸ್ರಾಃ ಕುಂಜರಭೂಮಯಃ ॥ ೪೬೫ ॥

ಅದಕ್ಕಾಗಿ ಆ ರಾಶಿಯನ್ನೂ ಆ ಅಂಶವನ್ನೂ ತ್ಯಜಿಸಬೇಕು. ಆದರೆ ದಂಪತಿಗಳ ಜನ್ಮಲಗ್ನವಾಗಲೀ ಜನ್ಮರಾಶಿಯಾಗಲೀ ವಿವಾಹಕ್ಕೆ ಪ್ರಶಸ್ತವೆನಿಸುವುದು. ಆದರೆ ದಂಪತಿಗಳ ಜನ್ಮಲಗ್ನಕ್ಕೆ ಬರುವ ಉಪಚಯರಾಶಿಗಳು ವಿವಾಹಲಗ್ನವಾದರೆ ಅದು ಬಹಳ ಪ್ರಶಸ್ತವೆನಿಸುವುದು.

೪೬೪-೪೬೮. ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಕ್ರಮವಾಗಿ (೫೦) ಐವತ್ತು (೨೪) ಇಪ್ಪತ್ತುನಾಲ್ಕು (೩೦) ಮೂವತ್ತು (೪೦) ನಲವತ್ತು (೧೪) ಹದಿನಾಲ್ಕು (೨೧) ಇಪ್ಪತ್ತೊಂದು (೩೦) ಮೂವತ್ತು (೨೦) ಇಪ್ಪತ್ತು (೩೨) ಮೂವತ್ತೆರಡು (೩೦) ಮೂವತ್ತು (೨೦) ಇಪ್ಪತ್ತು (೧೮) ಹದಿನೆಂಟು (೨೧) ಇಪ್ಪತ್ತೊಂದು (೨೦) ಇಪ್ಪತ್ತು (೧೪) ಹದಿನಾಲ್ಕು (೧೪) ಹದಿನಾಲ್ಕು (೧೦) ಹತ್ತು (೧೪) ಹದಿನಾಲ್ಕು (೫೬) ಐವತ್ತಾರು (೨೪) ಇಪ್ಪತ್ತನಾಲ್ಕು (೨೦) ಇಪ್ಪತ್ತು (೧೦) ಹತ್ತು (೧೦) ಹತ್ತು (೧೮) ಹದಿನೆಂಟು (೧೬) ಹದಿನಾರು (೨೪) ಇಪ್ಪತ್ತ

ರೂಪಪಕ್ಷಾ ವ್ಯೋಮದಸ್ರಾ ವೇದಚಂದ್ರಾಶ್ಚತುರ್ದಶ ।
ಶೂನ್ಯಚಂದ್ರಾ ವೇದಚಂದ್ರಾ ಷಡ್ದೃಕ್ಷಾ ವೇದಬಾಹವಃ ॥ ೪೬೬ ॥

ಶೂನ್ಯದಸ್ರಾಃ ಶೂದ್ಯಚಂದ್ರಾಃ ಪೂರ್ಣಚಂದ್ರಾ ಗತೇಂದವಃ ।
ತರ್ಕಚಂದ್ರಾ ವೇದಪಕ್ಷಾಃ ಖರಾಮಾಕ್ಷಾಶ್ವಿಭಾತ್ಕ್ರಮಾತ್ ॥ ೪೬೭ ॥

ಆಭ್ಯಃ ಪರಾಸ್ತು ಘಟಿಕಾಶ್ಚತಸ್ರೋ ವಿಷಸಂಜ್ಞಿತಾಃ ।
ವಿವಾಹಾದಿಷು ಕಾರ್ಯೇಷು ವಿಷನಾಡೀಂ ವಿವರ್ಜಯೇತ್ ॥ ೪೬೮ ॥

ಭಾಸ್ಕರಾದಿಷು ವಾರೇಷು ಯೇ ಮುಹೂರ್ತಾಶ್ಚ ನಿಂದಿತಾಃ ।
ವಿವಾಹಾದಿಷು ತೇ ವರ್ಜ್ಯಾ ಅಪಿ ಲಕ್ಷಗುಣೈರ್ಯುತಾಃ ॥ ೪೬೯ ॥

ನಿಹಿತಾ ವಾರದೋಷಾ ಯೇ ಸೂರ್ಯವಾರಾದಿಷು ಕ್ರಮಾತ್ ।
ಅಪಿ ಸರ್ವಗುಣೋಪೇತಾಸ್ತೇ ವರ್ಜ್ಯಾಃ ಸರ್ವಮಂಗಲೇ ॥ ೪೭೦ ॥

ಏಕಾರ್ಗಲಾಂಘ್ರಿತುಲ್ಯಂ ಯತ್ತಲ್ಲಗ್ನಂ ಚ ವಿವರ್ಜಯೇತ್ ।
ಅಪಿ ಶುಕ್ರೇಜ್ಯಸಂಯುಕ್ತಂ ವಿಷಸಂಯುಕ್ತದುಗ್ಧವತ್ ॥ ೪೭೧ ॥

---

ನಾಲ್ಕು (೩೦) ಮೂವತ್ತು ಇಪ್ಪು ಗಳಿಗೆಗಳು ಆದಮೇಲೆ ಮುಂದಿನ ನಾಲ್ಕು ಗಳಿಗೆಗಳು ವಿಷಗಳಿಗೆಗಳೆಂದು ತಿಳಿಯಬೇಕು. ಆ ಕಾಲದಲ್ಲಿ ವಿವಾಹಾದಿಶುಭ ಕರ್ಮಗಳು ಪ್ರಶಸ್ತಗಳೆನಿಸುವುದಿಲ್ಲ.

೪೬೯-೪೭೧. ಭಾನುವಾರಾದಿಗಳಲ್ಲಿ ಹಿಂದೆ ಹೇಳಿದ ನಿಂದ್ಯಮುಹೂರ್ತ ಕಾಲಗಳಲ್ಲಿಯೂ ವಾರದೋಷಗಳಿರುವ ವೇಳೆಯಲ್ಲಿಯೂ ಉಳಿದ ಎಷ್ಟೇಗುಣಗಳು ಕಂಡುಬಂದರೂ ವಿವಾಹಾದಿಗಳನ್ನು ಮಾಡಬಾರದು. ಖಾರ್ಜೂರಿಕಾ ಚಕ್ರದ ರೀತಿಯಿಂದ ಬಂದ ಏಕಾರ್ಗಲದೋಷಯುಕ್ತವಾದ ನಕ್ಷತ್ರಕ್ಕೆ ಸಂಬಂಧಿಸಿದ ಲಗ್ನವು ಅನೇಕಶುಭಗ್ರಹಯುತವಾಗಿದ್ದರೂ ವಿವಾಹಕ್ಕೆ ಶುಭಕರವೆನಿಸುವುದಿಲ್ಲ. ಒಂದುವೇಳೆ ಆ ಲಗ್ನದಲ್ಲಿ ಗುರುಶುಕ್ರರಿದ್ದರೂ ವಿಷಯುಕ್ತಕ್ಷೀರರಾಶಿಯಂತೆ ಅಮಂಗಳಪ್ರದವಾಗುವುದು. ಶುಭಕರ್ಮಗಳ ಆಚರಣೆಗೆ ಗ್ರಹಣ

ಗ್ರಹಣೋತ್ಪಾತಭಂ ತ್ಯಾಜ್ಯಂ ಮಂಗಲೇಷು ಋತುತ್ರಯಂ ।
ಯಾವಚ್ಚ ಶಶಿನಾ ಭುಕ್ತ್ವಾ ಮುಕ್ತಭಂ ದಗ್ಧಕಾಷ್ಠವತ್ ॥ ೪೭೨ ॥

ಮಂಗಲೇಷು ತ್ಯಜೇತ್ಸ್ವೇಟ್ಟೈರ್ವಿದ್ಧಂ ಚ ಕ್ರೂರಸಂಯುತಂ ।
ಅಖಿಲರ್ಕ್ಷಂ ಪಂಚಗವ್ಯಂ ಸುರಾಬಿಂದುಯುತಂ ಯಥಾ ॥ ೪೭೩ ॥

ಪಾದ ಏವ ಶುಭೈರ್ವಿದ್ಧಮಶುಭಂ ನೈವ ಕೃತ್ಸ್ನಭಂ ।
ಕ್ರೂರವಿದ್ಧಂ ಯುತಂ ಧಿಷ್ಣ್ಯಂ ನಿಖಿಲಂ ನೈವ ಮಂಗಲಂ ॥ ೪೭೪ ॥

ತುಲಾಮಿಥುನಕನ್ಯಾಂಶಾ ಧನುರಂತ್ಯಾರ್ಧಸಂಯುತಾಃ ।
ಏತೇ ನವಾಂಶಾಃ ಶುಭದಾ ವೃಷಭಸ್ಯಾಂಶಕಾಃ ಖಲು ॥ ೪೭೫ ॥

ಅಂತ್ಯಾಂಶಾಸ್ತೇಽಪಿ ಶುಭದಾ ಯದಿ ವರ್ಗೋತ್ತಮಾಹ್ವಯಾಃ ।
ಅನ್ಯೇ ನವಾಂಶಾ ನಗ್ರಾಹ್ಯಾ ಯತಸ್ತೇ ಕುನವಾಂಶಕಾಃ ॥ ೪೭೬ ॥

ಕುನವಾಂಶಕಲಗ್ನಂ ಯತ್ತ್ಯಾಜ್ಯಂ ಸರ್ವಗುಣಾನ್ವಿತಂ ।
ಯಸ್ಮಿನ್ದಿನೇ ಮಹಾಪಾತಸ್ತದ್ದಿನಂ ವರ್ಜಯೇಚ್ಛುಭೇ ॥ ೪೭೭ ॥

ಉತ್ಪಾತ ಇವುಗಳು ಬಂದ ನಕ್ಷತ್ರವನ್ನು ಮೂರು ಋತುಗಳಕಾಲ ಪೂರ್ತಿ ಯಾಗಿ ಉಪಯೋಗಿಸಬಾರದು. ಆ ನಕ್ಷತ್ರವು ಅರ್ಧ ಉರಿದ ಕೊಳ್ಳಿಯಂತೆ ಅಪ್ರಯೋಜಕವಾಗುವುದು.

೪೭೩-೪೭೭. ಮಂಗಳಕಾರ್ಯಗಳಲ್ಲಿ ಕ್ರೂರಗ್ರಹಳಿಂದ ವಿದ್ಧವಾದ ನಕ್ಷತ್ರಗಳನ್ನು ಬಳಸಬಾರದು. ಒಂದು ನಕ್ಷತ್ರದ ಒಂದು ಪಾದವು ಕ್ರೂರಾ ಕ್ರಾಂತವಾದರೂ ಆ ಪೂರ್ತ ನಕ್ಷತ್ರವನ್ನೇ ಬಿಡಬೇಕು. ಸುರಾಬಿಂದುವಿನಿಂದ ಅಪವಿತ್ರವಾದ ಪಂಚಗವ್ಯದಂತೆ ಪೂರ್ತ ನಕ್ಷತ್ರವೇ ದುಷ್ಟವಾಗುವುದು. ನವಾಂಶಗಳಲ್ಲಿ ತುಲಾ ಮಿಥುನ, ಕನ್ಯಾ, ಧನುಸ್ಸಿನ ಅಪರಾರ್ಧ, ವೃಷಭ ಈ ಅಂಶಗಳು ಪ್ರಶಸ್ತವಾದುವುಗಳು. ವರ್ಗೋತ್ತಮಾಂಶಗಳು ಮಾತ್ರ ಅಂತ್ಯಾಂ ಶಗಳಾದರೂ ಶ್ರೇಷ್ಠವೆನಿಸುವವು. ಉಳಿದ ನವಾಂಶಗಳನ್ನೂ ಶುಭಕಾರ್ಯ ಗಳಲ್ಲಿ ಬಿಡಬೇಕು. ಪಾಪನವಾಂಶಯುತವಾದ ಲಗ್ನವನ್ನೇ ತ್ಯಜಿಸಬೇಕು. ವ್ಯತೀಪಾತ, ವೈಧೃತಿಗಳೆಂಬ ಮಹಾಪಾತಗಳಿಂದ ಕೂಡಿದ ದಿನವು ಎಷ್ಟೇ ಶುಭವಾಗಿದ್ದರೂ ಅದನ್ನು ದೂರಮಾಡಬೇಕು.

ಅಪಿ ಸರ್ವಗುಣೋಪೇತಂ ದಂಪತ್ಯೋರ್ಮೃತ್ಯುದಂ ಯತಃ ।
ಅನುಕ್ತಾಃ ಸ್ವಲ್ಪದೋಷಾಃ ಸ್ಯುರ್ವಿದ್ಯುನ್ನೀಹಾರವೃಷ್ಟಯಃ ॥ ೪೭೮ ॥

ಪ್ರತ್ಯರ್ಕಪರಿವೇಷೇಂದ್ರಚಾಪಾಂಬುಧರಗರ್ಜನಾಃ ।
ಲತ್ತೋಪಗ್ರಹಪಾತಾಖ್ಯಾ ಮಾಸದಗ್ಧಾಹ್ವಯಾ ತಿಥಿಃ ॥ ೪೭೯ ॥

ದಗ್ಧಲಗ್ನಾಂಧಬಧಿರಪಂಗುಸಂಜ್ಞಾಶ್ಚ ರಾಶಯಃ ।
ಏವಮಾದ್ಯಾಸ್ತತಸ್ತೇಷಾಂ ವ್ಯವಸ್ಥಾ ಕ್ರಿಯತೇಽಧುನಾ ॥ ೪೮೦ ॥

ಅಕಾಲಜಾ ಭವಂತ್ಯೇತೇ ವಿದ್ಯುನ್ನೀಹಾರವೃಷ್ಟಯಃ ।
ದೋಷಾಯ ಮಂಗಲೇ ನೂನಮದೋಷಾಯೈವ ಕಾಲತಃ ॥ ೪೮೧ ॥

ಬೃಹಸ್ಪತಿಃ ಕೇಂದ್ರಗತಃ ಶುಕ್ರೋ ವಾ ಯದಿ ವಾ ಬುಧಃ ।
ಏಕೋಽಪಿ ದೋಷನಿಚಯಂ ಹರತ್ಯೇವ ನ ಸಂಶಯಃ ॥ ೪೮೨ ॥

ತಿರ್ಯಕ್ಪಂಚೋರ್ಧ್ವಗಾಃ ಪಂಚ ರೇಖಾ ದ್ವೇ ದ್ವೇ ಚ ಕೋಣಯೋಃ ।
ದ್ವಿತೀಯೇ ಶಂಭುಕೋಣೇಗ್ನಿಧಿಷ್ಣ್ಯಂ ಚಕ್ರೇ ಪ್ರವಿನ್ಯಸೇತ್ ॥ ೪೮೩ ॥

---

೪೭೮-೪೮೨. ಇನ್ನು ಉಳಿದ ವಿದ್ಯುತ್ತು, ನೀಹಾರ, ವೃಷ್ಟಿ, ಸೂರ್ಯ ಚಂದ್ರರ ಪರಿವೇಷ, ಇಂದ್ರಚಾಪ, ಘನಗರ್ಜನೆ, ಗ್ರಹಲತ್ತೆ, ಗ್ರಹಪಾತ ಮಾಸದಗ್ಧ, ದಗ್ಧತಿಥಿ, ದಗ್ಧಲಗ್ನ, ಅಂಧ, ಬಧಿರ, ಪಂಗು ಈ ಸಂಜ್ಞೆಗಳುಳ್ಳ ರಾಶಿಗಳು ಇವುಗಳನ್ನು ಸರಿಯಾಗಿ ನೋಡಿ ವಿವಾಹಾದಿಕಾರ್ಯಗಳನ್ನು ನೆರವೇರಿಸಬೇಕು. ವಿದ್ಯುತ್, ವೃಷ್ಟ್ಯಾದಿ ಮೇಲೆ ಹೇಳಿದ ಉತ್ಪಾತಗಳು ಅಕಾಲದಲ್ಲಿ ಹುಟ್ಟತಕ್ಕವುಗಳು. ಇವುಗಳು ಮಂಗಳಕಾರ್ಯದಲ್ಲಿ ಅಮಂಗಳವನ್ನುಂಟು ಮಾಡತಕ್ಕವುಗಳು. ಲಗ್ನಕೇಂದ್ರದಲ್ಲಿ ಗುರು, ಶುಕ್ರ, ಬುಧ ಇವರಲ್ಲಿ ಯಾವಗ್ರಹಗಳಿದ್ದರೂ ಅನೇಕ ಲಗ್ನದೋಷಗಳು ನಿವಾರಣೆಯಾಗುವುವು.

೪೮೩.೪೯೦. ಇನ್ನು ನಕ್ಷತ್ರಗತರಾದ ಗ್ರಹಗಳಿಗೆ ಪರಸ್ಪರವೇಧೆಯನ್ನು ತಿಳಿಯಲು ಪಂಚಶಲಾಕಾಚಕ್ರವನ್ನು ರಚಿಸಿಕೊಳ್ಳಬೇಕು. ಐದೈದು ರೇಖೆಗಳನ್ನು ಪೂರ್ವಾಪರವಾಗಿಯೂ, ದಕ್ಷಿಣೋತ್ತರವಾಗಿಯೂ ಬರೆದು ಕೋಣಗಳಿಗೆ

ಧಾನ್ಯತ್ರ ಸಾಭಿಜಿಂಶ್ಕೇ ಕರೇಖಾಖೇಟೇನ ವಿದ್ಧಭಂ ।
ಪುರತಃ ಪೃಷ್ಠತೋಽರ್ಕಾದ್ಯಾ ದಿನರ್ಕ್ಷಂ ಲತ್ತಯಂತಿ ಯತ್ ॥ ೪೮೪ ॥

ಅರ್ಕಾಕೃತಿಗುಣಾದ್ರ್ಯಂಗಬಾಣಾಷ್ಟನವಸಂಖ್ಯಭಂ ।
ಸೂರ್ಯಭಾತ್ಸಾರ್ಪಪಿತ್ರ್ಯಂತ್ಯತ್ವಾಷ್ಟ್ರವಿಶ್ವೋಡುವಿಷ್ಣುಭಂ ॥ ೪೮೫ ॥

ಸಂಖ್ಯಯಾ ದಿನಭೇ ತಾವದಶ್ವಿಭಾತ್ಪಾತದುಷ್ಟಭಂ ।
ಸೌರಾಷ್ಟ್ರೇ ಸಾಲ್ವದೇಶೇ ತು ಲತ್ತಿತಂ ಭಂ ವಿವರ್ಜಯೇತ್ ॥ ೪೮೬ ॥

ಕಲಿಂಗವಂಗದೇಶೇಷು ಪಾತಿತಂ ನ ಶುಭಪ್ರದಂ ।
ಬಾಹ್ಲಿಕೇ ಕುರುದೇಶೇ ಚಾನ್ಯಸ್ಮಿನ್ದೇಶೇ ನ ದೂಷಣಂ ॥ ೪೮೭ ॥

ತಿಥಯೋ ಮಾಸದಗ್ಧಾಶ್ಚ ದಗ್ಧಲಗ್ನಾನಿ ಯಾನ್ಯಪಿ ।
ಮಧ್ಯದೇಶೇ ವಿವರ್ಜ್ಯಾನಿ ನ ದುಷ್ಟಾನೀತರೇಷು ಚ ॥ ೪೮೮ ॥

ಬರುವಂತೆ ಎರಡೆರಡು ರೇಖೆಗಳನ್ನು ವಿನ್ಯಾಸಮಾಡಬೇಕು. ಇದರಿಂದ ೨೮ ಇಪ್ಪತ್ತೆಂಟು ರೇಖಾಮೂಲಗಳುಂಟಾಗುವವು. ಅದರಲ್ಲಿ ಕೃತ್ತಿಕಾದಿಯಾಗಿ ಅಭಿಜಿನ್ನಕ್ಷತ್ರವನ್ನೂ ಸೇರಿಸಿಕೊಂಡು ೨೮ ನಕ್ಷತ್ರಗಳನ್ನೂ ಬರೆದು ಏಕರೇಖಾ ಗತವಾದ ಎರಡು ನಕ್ಷತ್ರಗಳಲ್ಲಿರುವ ಗ್ರಹಗಳಿಂದ ಆ ನಕ್ಷತ್ರಗಳು ವಿದ್ಧಗಳಾ ಗಿವೆಯೆಂದು ತಿಳಿಯಬೇಕು. ಸೂರ್ಯಾದಿಯಾದ ಏಳು ಗ್ರಹಗಳಿಗೂ ಆಶ್ಲೇಷ ಮಖ, ರೇವತಿ, ಚಿತ್ತ, ಅನೂರಾಧ, ಅಶ್ವಿನಿ, ಶ್ರವಣ ಈ ನಕ್ಷತ್ರಗಳ ವೇಧೆ ಯಲ್ಲಿ ಕ್ರಮವಾಗಿ ಹನ್ನೆರಡು, ಒಂಭತ್ತು, ಏಳು, ಐದು, ಐದು, ಎಂಟು ಒಂಭತ್ತು ಇಪ್ಪು ಗಳಿಗೆಗಳು ತ್ಯಾಜ್ಯಕಾಲಗಳು. ಇದನ್ನು ಪಾತದುಷ್ಟಕಾಲ ವೆನ್ನುವರು. ಸೌರಾಷ್ಟ್ರ, ಸಾಲ್ವ ಈ ದೇಶಗಳಲ್ಲಿ ಲತ್ತಾದೋಷವನ್ನು ಪ್ರಬಲ ವಾದದ್ದನ್ನಾಗಿ ಗಣಿಸಬೇಕು. ಕಳಿಂಗ, ವಂಗದೇಶಗಳಲ್ಲಿ ಪಾತದೋಷವು ಪ್ರಬಲವಾದದ್ದು. ಇವು ಬಾಹ್ಲೀಕ, ಕುರುದೇಶ ಇನ್ನೂ ಇತರ ದೇಶಗಳಲ್ಲಿ ದೋಷಗಳೆಂದು ಗಣಿಸಲ್ಪಡುವುದಿಲ್ಲ. ಮಾಸದಗ್ಧ, ತಿಥಿದಗ್ಧ, ಲಗ್ನದಗ್ಧ ಇವು ಗಳನ್ನು ಮಧ್ಯದೇಶಗಳಲ್ಲಿ ಮುಖ್ಯವಾಗಿ ನೋಡಬೇಕು. ಉಳಿದ ದೇಶಗಳಲ್ಲಿ

ಪಂಗ್ವಂಧಕಾಣಲಗ್ನಾನಿ ಮಾಸಶೂನ್ಯಾಶ್ಚ ರಾಶಯಃ ।
ಗೌಡಮಾಲವಯೋಸ್ತ್ಯಾಜ್ಯಾ ಅನ್ಯದೇಶೇ ನ ಗರ್ಹಿತಾಃ ॥ ೪೮೯ ॥

ದೋಷದುಷ್ಟಂ ಸದಾ ಕಾಲಂ ಸನ್ನಿಮಾಷ್ಟುರ್ಗಂ ನ ಶಕ್ಯತೇ ।
ಅಪಿ ಧಾತುರತೋ ಗ್ರಾಹ್ಯಂ ದೋಷಾಲ್ಪತ್ವಂ ಗುಣಾಧಿಕಂ ॥ ೪೯೦ ॥

ಏವಂ ಸುಲಗ್ನೇ ದಂಪತ್ಯೋಃ ಕಾರಯೇತ್ಸಮ್ಮಗೀಕ್ಷಣಂ ।
ಹಸ್ತೋಚ್ಛ್ರಿತಾಂ ಚತುರ್ಹಸ್ತೈಶ್ಚತುರಸ್ರಾಂ ಸಮಂತತಃ ॥ ೪೯೧ ॥

ಸ್ತಂಭೈಶ್ಚತುರ್ಭಿಃ ಸುಶ್ಲಕ್ಷ್ಣೈರ್ವಾಮಭಾಗೇ ತು ಸನ್ನತಾಂ ।
ಸಮಂಡಪಾಂ ಚತುರ್ದಿಕ್ಷು ಸೋಪಾನೈರತಿಶೋಭಿತಾಂ ॥ ೪೯೨ ॥

ಪ್ರಾಗುದಕ್ಪ್ರವಣಾಂ ರಂಭಾಸ್ತಂಭೈರ್ಹಂಸಶುಕಾದಿಭಿಃ ।
ವಿಚಿತ್ರಿತಾಂ ಚಿತ್ರಕುಂಭೈರ್ವಿವಿಧೈಸ್ತೋರಣಾಂಕುರೈಃ ॥ ೪೯೩ ॥

---

ಇವು ದೋಷವಲ್ಲ. ಪಂಗು, ಅಂಧ ಮುಂತಾದ ಲಗ್ನಗಳು ಶೂನ್ಯಮಾಸಗಳು ಗೌಡ ಮತ್ತು ಮಾಲವದೇಶಗಳಲ್ಲಿ ತ್ಯಾಜ್ಯವಾದುವುಗಳು. ಉಳಿದ ದೇಶಗಳಲ್ಲಿ ದೋಷವಲ್ಲ. ದೋಷಗಳಿಂದ ಆಕ್ರಾಂತವಾದ ಲಗ್ನಗಳನ್ನು ಗುಣಯುಕ್ತವನ್ನಾಗಿ ಮಾಡಲು ಬ್ರಹ್ಮನಿಂದಲೂ ಸಾಧ್ಯವಾಗಲಾರದು. ಆದ್ದರಿಂದ ವಿವಾಹದಲ್ಲಿ ನಿರ್ದೋಷವಾಗಿ ಗುಣಾಧಿಕವಾದ ಲಗ್ನವನ್ನು ಬುದ್ಧಿವಂತಿಕೆಯಿಂದ ಊಹಿಸಿ ತಿಳಿಯಬೇಕು.

೪೯೧-೪೯೫. ಇಂತಹ ಶುಭಲಗ್ನದಲ್ಲಿ ವಧೂವರರು ಪರಸ್ಪರ ನೋಡಬೇಕು. ವಿವಾಹಮಂಟಪವು ನಾಲ್ಕುಮೊಳ ಎತ್ತರವಾಗಿಯೂ ಚಚ್ಚೌಕವಾಗಿಯೂ ಇರಬೇಕು. ನಾಲ್ಕು ದಿಕ್ಕುಗಳಲ್ಲಿಯೂ ನಯವಾದ ನಾಲ್ಕು ಕಂಭಗಳಿರಬೇಕು. ಆ ಮಂಡಪಕ್ಕೆ ನಾಲ್ಕು ಕಡೆಗಳಲ್ಲಿಯೂ ಮೆಟ್ಟಿಲುಗಳಿರಬೇಕು. ಪೂರ್ವ ಅಥವ ಉತ್ತರಕ್ಕೆ ದೊಡ್ಡದಾದ ಪ್ರವೇಶಸ್ಥಾನವಿರಬೇಕು. ಬಾಳೆಯ ಕಂಬವನ್ನು ಅದಕ್ಕೆ ಕಟ್ಟಿರಬೇಕು. ಚಿತ್ರಕಲಶಗಳಿಂದಲೂ ವಿಚಿತ್ರವಾದ ತೋರಣಗಳಿಂದಲೂ, ಅಲಂಕೃತವಾಗಿರಬೇಕು. ನೆಲಕ್ಕೆಲ್ಲಾ ಮನೋಹರ

ಶೃಂಗಾರಪುಷ್ಪನಿಚಯೈರ್ವರ್ಣಕೈಃ ಸಮಲಂಕೃತಾಂ ।
ವಿಪ್ರಾಶೀರ್ವಚನೈಃ ಪುಣ್ಯಸ್ತ್ರೀಭಿರ್ದಿವ್ಯೈರ್ಮನೋರಮಾಂ ॥ ೪೯೪ ॥

ವಾದಿತ್ರನೃತ್ತಗೀತಾದ್ಯೈರ್ಹೃದಯಾನಂದಿನೀಂ ಶುಭಾಂ ।
ಏವಂ ವಿಧಾಂ ಸಮಾರೋಹೇನ್ಮಿಥುನಂ ಸ್ವಾಗ್ನಿವೇದಿಕಾಂ ॥ ೪೯೫ ॥

ಅಷ್ಟಧಾ ರಾಶಿಕೂಟಂ ಚ ಸ್ವಾದೂಡುಗಣರಾಶಯಃ ।
ರಾಶೀಶಯೋನಿವರ್ಣಾಖ್ಯಯುತವಃ ಪುತ್ರಪೌತ್ರದಾಃ ॥ ೪೯೬ ॥

ಏಕರಾಶೌ ಪೃಥಗ್ಧಿಷ್ಣ್ಯೇ ದಂಪತ್ಯೋಃ ಪಾಣಿಪೀಡನಂ ।
ಉತ್ತಮಂ ಮಧ್ಯಮಂ ಭಿನ್ನಂ ರಾಶ್ಯೇಕತ್ವಂ ಯಯೋಸ್ತಯೋಃ ॥ ೪೯೭ ॥

ಏಕರ್ಕ್ಷೇ ತ್ವೇಕರಾಶೌ ಹಿ ವಿವಾಹಃ ಪ್ರಾಣಹಾನಿದಃ ।
ಸ್ತ್ರೀಧಿಷ್ಣ್ಯಾದಾದ್ಯನವಕೇ ಸ್ತ್ರೀದೂರಮತಿನಿಂದಿತಂ ॥ ೪೯೮ ॥

---

ವಾಗಿರುವಂತೆ ಪುಷ್ಪಗಳನ್ನು ವಿರಚಿಸಬೇಕು. ನಿರೀಕ್ಷಣಕಾಲದಲ್ಲಿ ಬ್ರಾಹ್ಮಣರು ಮುತ್ತೈದೆಯರು, ವಧೂವರರನ್ನು ಆಶೀರ್ವದಿಸುತ್ತಿರಬೇಕು. ಮಂಗಳವಾದ್ಯಗಳು ಇಂಪಾಗಿ ಶಬ್ದಮಾಡುತ್ತಿರುವಾಗ ಅಗ್ನಿವೇದಿಕೆಯ ಸಮೀಪಕ್ಕೆ ವಧೂವರರನ್ನು ಕರೆದುತರಬೇಕು.

೪೯೬. ವಿವಾಹದಲ್ಲಿ ವಧೂವರರ ನಕ್ಷತ್ರಗಳು, ರಾಶಿ, ವಶ್ಯ, ವರ್ಣ ತಾರಾ, ಯೋನಿ, ಗ್ರಹಮೈತ್ರ, ನಾಡೀ, ಗಣ ಎಂಬ ಎಂಟು ಕೂಟಗಳೂ ಅನುಕೂಲವಾಗಿರಬೇಕು. ಈ ಕೂಟಗಳಿಂದ ಅನುಕೂಲವಾಗಿರುವ ದಂಪತಿಗಳ ಯೋಜನೆಯು ಪುತ್ರಪೌತ್ರಾದಿಗಳ ಸಂಪತ್ತನ್ನು ಕೊಡುವುದು.

೪೯೭-೪೯೯. ಒಂದೇರಾಶಿಗೆ ಸೇರಿದ ದಂಪತಿಗಳ ನಕ್ಷತ್ರಗಳು ಬೇರೆ ಬೇರೆಯಾಗಿರಬೇಕು. ಹೀಗಿದ್ದರೆ ಉತ್ತಮವಾದ ಸಂಬಂಧವೆನಿಸುವುದು. ರಾಶಿಗಳು ಬೇರೆಯಾಗಿದ್ದು ನಕ್ಷತ್ರವು ಒಂದೇ ಆಗಿರುವುದು ಮಧ್ಯಮವಾದುದು. ಒಂದೇ ನಕ್ಷತ್ರ ಮತ್ತು ಒಂದೇ ರಾಶಿಯಾಗಿರುವುದು ಅಧಮವೆನಿಸುವುದು. ಪುರುಷನಕ್ಷತ್ರವು ಸ್ತ್ರೀನಕ್ಷತ್ರಕ್ಕಿಂತ ಒಂಭತ್ತು (೯) ನಕ್ಷತ್ರಗಳೊಳಗಿದ್ದರೆ ಅಶು

ದ್ವಿತೀಯೇ ಮಧ್ಯಮಂ ಶ್ರೇಷ್ಠಂ ತೃತೀಯೇ ನವಕೇ ನೃಭಂ ।
ತಿಸ್ರಃ ಪೂರ್ವೋತ್ತರಾ ಧಾತೃಯಾಮ್ಯಮಾಹೇಶತಾರಕಾಃ ॥ ೨೯೯ ॥

ಇತಿ ಮರ್ತ್ಯಗಣೋ ಜ್ಞೇಯಃ ಸ್ಯಾದಮರ್ತ್ಯಗಣಃ ಪರಃ ।
ಹರ್ಯಾದಿತ್ಯಾರ್ಕವಾಯ್ವಂತ್ಯಮಿತ್ರಾಶ್ವೀಜ್ಯೇಂದುತಾರಕಾಃ ॥ ೩೦೦ ॥

ರಕ್ಷೋಗಣಃ ಪಿತೃತ್ವಾಷ್ಟ್ರದ್ವಿದೈವಾಗ್ನೀಂದ್ರತಾರಕಾಃ ।
ವಸುವಾರೀಶಮೂಲಾಹಿತಾರಕಾಭಿರ್ಯುತಾಸ್ತತಃ ॥ ೩೦೧ ॥

ದಂಪತ್ಯೋರ್ಜನ್ಮಭೇ ಚೈಕಗಣೇ ಪ್ರೀತಿರನೇಕಧಾ ।
ಮಧ್ಯಮಾ ದೇವಮರ್ತ್ಯಾನಾಂ ರಾಕ್ಷಸಾನಾಂ ತಯೋರ್ಮೃತಿಃ ॥ ೩೦೨ ॥

ಭವೂ, ಹದಿನೆಂಟು (೧೮) ನಕ್ಷತ್ರಗಳೊಳಗಿದ್ದರೆ ಮಧ್ಯಮವೂ ಕೊನೆಯ ಒಂಭತ್ತು (೯) ನಕ್ಷತ್ರಗಳೊಳಗೆ ಸೇರಿದ್ದರೆ ಶುಭಕರವೂ ಆಗುವುದೆಂದು ತಿಳಿಯ ಬೇಕು. ಇದನ್ನೇ ಸ್ತ್ರೀದೀರ್ಘಕೂಟವೆನ್ನುವರು.

೩೦೦.೩೦೨. ಭರಣೀ, ರೋಹಿಣೀ, ಆರ್ದ್ರಾ. ಪೂರ್ವಾತ್ರಯ (ಅಂದರೆ ಪೂರ್ವಪಾಲ್ಗುಣೀ, ಪೂರ್ವಾಷಾಢ, ಪೂರ್ವಾಭಾದ್ರ) ಉತ್ತರಾತ್ರಯ (ಅಂದರೆ ಉತ್ತರ, ಉತ್ತರಾಷಾಢ, ಉತ್ತರಾಭಾದ್ರ) ಈ ನಕ್ಷತ್ರಗಳು ಮನುಷ್ಯಗಣಕ್ಕೆ ಸೇರಿದುವುಗಳು.

ಅಶ್ವಿನೀ, ಮೃಗಶಿರ, ಪುನರ್ವಸು, ಪುಷ್ಯ, ಹಸ್ತ, ಸ್ವಾತೀ, ಅನೂರಾಧ ಶ್ರವಣ, ರೇವತೀ ಈ ನಕ್ಷತ್ರಗಳು ದೇವಗಣಕ್ಕೆ ಸೇರಿದವುಗಳು.

ಕೃತ್ತಿಕ, ಆಶ್ಲೇಷಾ, ಮಖ, ಚಿತ್ತ. ವಿಶಾಖ, ಜ್ಯೇಷ್ಠ, ಮೂಲ, ಧನಿಷ್ಠ ಶತಭಿಷ ಇವು ರಾಕ್ಷಸಗಣಕ್ಕೆ ಸೇರಿದ ನಕ್ಷತ್ರಗಳು.

ಸ್ತ್ರೀಪುರುಷರ ಜನ್ಮನಕ್ಷತ್ರಗಳು ಏಕಗಣೈಕ್ಯಗಳಾದರೆ (ಒಂದೇ ಗಣಕ್ಕೆ ಸೇರಿದವುಗಳಾದರೆ) ಶುಭವೆಂದು ತಿಳಿಯಬೇಕು. ದೇವ, ಮಾನುಷಗಣ ಗಳಾದರೆ ಮಧ್ಯಮವೆನಿಸುವುದು. ದೇವ, ರಾಕ್ಷಸಗಣಗಳಾದರೆ ಅಧಮ ವೆನಿಸುವುದು.

ಮೃತ್ಯುಃ ಷಷ್ಠಾಷ್ಟಕೇ ಪಂಚನವಮೇ ತ್ವನಪತ್ಯತಾ ।
ನೈಃಸ್ವಂ ದ್ವಿರ್ದ್ವಾದಶೇಽನ್ಯೇಷು ದಂಪತ್ಯೋಃ ಪ್ರೀತಿರುತ್ತಮಾ ॥ ೫೦೩ ॥

ಏಕಾಧಿಪೇ ಮಿತ್ರಭಾವೇ ಶುಭದಂ ಪಾಣಿಪೀಡನಂ ।
ದ್ವಿರ್ದ್ವಾದಶೇ ತ್ರಿಕೋಣೇ ಚ ನ ಕದಾಚಿತ್ ಷಡಷ್ಟಕೇ ॥ ೫೦೪ ॥

ಅಶ್ವೇಭಮೇಷಸರ್ಪಾಹಿ ಶ್ವೋತುಮೇಷಾತುಮೂಷಕಾಃ ।
ಆಖುಗೋಮಹಿಷವ್ಯಾಘ್ರಕಾಲೀವ್ಯಾಘ್ರಮೃಗದ್ವಯಂ ॥ ೫೦೫ ॥

ಶ್ವಾನಃ ಕಪಿರ್ಬಭ್ರುಯುಗಂ ಕಪಿಸಿಂಹತುರಂಗಮಾಃ ।
ಸಿಂಹಗೋದಂತಿನೋ ಭಾನಾಂ ಯೋನಯಃ ಸ್ಯುರ್ಯಥಾಶ್ವಿಭಾತ್ ॥೫೦೬॥

ಶ್ವೈಣಂ ಬಭ್ರೂರಗಂ ಮೇಷವಾನರೌ ಸಿಂಹವಾರಣಂ ।
ಗೋವ್ಯಾಘ್ರಮಾಖುಮಾರ್ಜಾರಂ ಮಹಿಷಾಶ್ವಂ ಚ ಶಾತ್ರವಂ ॥ ೫೦೭ ॥

---

೫೦೩-೫೦೪. ಪುರುಷರಾಶಿಯು ಸ್ತ್ರೀರಾಶಿಯಿಂದ ಆರನೆಯದಾಗಿದ್ದರೆ ಮೃತ್ಯುಕರವಾದ ಷಷ್ಠಾಷ್ಟಕದೋಷವೂ, ಐದನೆಯದಾದರೆ ಅನಪತ್ಯತ್ವಪ್ರದವಾದ ಪಂಚಮನವಮದೋಷವೂ ಎರಡನೆಯದಾದರೆ ದಾರಿದ್ರ್ಯಪ್ರದವಾದ ದ್ವಿರ್ದ್ವಾದಶದೋಷವೂ ಬರುವದು. ಈ ದೋಷಗಳನ್ನು ಬಿಟ್ಟು ಕನ್ಯಾವಿವಾಹ ಮಾಡಬೇಕು.

೫೦೫.೫೦೭. ಅಶ್ವಿನ್ಯಾದಿಯಾದ ನಕ್ಷತ್ರಗಳಿಗೆ ಕ್ರಮವಾಗಿ ಕುದುರೆ ಆನೆ, ಆಡು, ಸರ್ಪ, ಹಾವು, ನಾಯಿ, ಬೆಕ್ಕು, ಆಡು, ಇಲಿ, ಎತ್ತು, ಎಮ್ಮೆ ಹುಲಿ, ಎಮ್ಮೆ, ಹುಲಿ, ಜಿಂಕೆ, ಜಿಂಕೆ, ನಾಯಿ, ಕಪಿ, ಕೀರ, ಕಪಿ, ಸಿಂಹ ಕುದುರೆ, ಸಿಂಹ, ಹಸು, ಆನೆ ಈರೀತಿಯಾಗಿ ಯೋನಿಗಳು ಉಕ್ತವಾಗಿರುವುವು. ಇವುಗಳಲ್ಲಿ ನಾಯಿ, ಜಿಂಕೆ; ಹಾವು, ಮುಂಗಸಿ; ಆಡು, ಕಪಿ; ಸಿಂಹ, ಆನೆ; ಹಸು, ಹುಲಿ; ಇಲಿ, ಬೆಕ್ಕು; ಎಮ್ಮೆ, ಕುದುರೆ ಇವು ಪರಸ್ಪರವಾದ ವೈರಿವರ್ಗದ ಪ್ರಾಣಿಗಳು. ಈ ವೈರಿವರ್ಗಕ್ಕೆ ಸ್ತ್ರೀಪುರುಷರ ನಕ್ಷತ್ರಗಳು ಸೇರಿರಕೂಡದು-ಇದನ್ನೇ ಯೋನಿಕೂಟವೆಂದು ಹೇಳುವರು.

ಝುಷಾಲಿಕರ್ಕಟಾ ವಿಪ್ರಾಸ್ತದೂರ್ಧ್ವಾಃ ಕ್ಷತ್ರಿಯಾದಯಃ ।
ಪುಂವರ್ಣರಾಶೇಃ ಸ್ತ್ರೀರಾಶೌ ಸತಿ ಹೀನೇ ಯಥಾಶುಭಂ ॥ ೫೦೮ ॥

ಚತುಸ್ತ್ರಿದ್ವ್ಯಂಘ್ರಿಭೋತ್ಥಾಯಾಃ ಕನ್ಯಾಯಾಶ್ಚಾಶ್ವಿಭಾತ್ಕ್ರಮಾತ್ ।
ವಹ್ನಿಭಾದಿಂದುಭಾನ್ನಾಡೀ ತ್ರಿಚತುಃಪಂಚಪರ್ವಸು ॥ ೫೦೯ ॥

ಗಣಯೇತ್ಸಂಖ್ಯಯಾ ಚೈಕನಾಡ್ಯಾಂ ಮೃತ್ಯುರ್ನ ಪಾರ್ಶ್ವಯೋಃ ।
ಪ್ರಾಜಾಪತ್ಯಬ್ರಾಹ್ಮದೈವಾ ವಿವಾಹಾಶ್ಚಾರ್ಷಸಂಯುತಾಃ ॥ ೫೧೦ ॥

ಉಕ್ತಕಾಲೇ ತು ಕರ್ತವ್ಯಾಶ್ಚತ್ವಾರಃ ಫಲದಾಯಕಾಃ ।
ಗಂಧರ್ವಾಸುರಪೈಶಾಚರಾಕ್ಷಸಾಖ್ಯಾಸ್ತು ಸರ್ವದಾ ॥ ೫೧೧ ॥

---

೫೦೮-೫೦೯. ಮೀನ, ವೃಶ್ಚಿಕ, ಕಟಕ ಈ ರಾಶಿಗಳು ಬ್ರಾಹ್ಮಣ ವರ್ಗದವುಗಳು. ಮೇಷ, ಧನುಸ್ಸು ಸಿಂಹಗಳು ಕ್ಷತ್ರಿಯವರ್ಗಕ್ಕೆ ಸೇರಿದುವುಗಳು. ವೃಷಭ, ಮಕರ, ಕನ್ಯಾರಾಶಿಗಳು ವೈಶ್ಯಜಾತಿಯವು. ಉಳಿದ ಮೂರು ಅಂದರೆ ಮಿಥುನ, ಸಿಂಹ, ತುಲಾರಾಶಿಗಳು ಶೂದ್ರವರ್ಗಕ್ಕೆ ಸೇರಿದುವುಗಳು. ಪುಂರಾಶಿಯ ವರ್ಣಕ್ಕೆ ಸಮವಾಗಿಯೋ ಅಥವ ಸ್ವಲ್ಪ ಕಮ್ಮಿಯಾಗಿಯೋ ಇರುವುದು ಒಳ್ಳೆಯದು. ಇದನ್ನೇ ವರ್ಣಕೂಟವೆಂದು ಹೇಳುವರು.

೫೧೦-೫೧೧. ಇನ್ನೂ ನಾಡೀಕೂಟದಲ್ಲಿ ತ್ರಿನಾಡೀ, ಚತುರ್ನಾಡೀ ಪಂಚನಾಡೀ ಎಂಬ ಹೆಸರಿನಿಂದ ನಾಡೀಕೂಟವು ಮೂರು ವಿಧವಾಗಿರುವುದು. ತ್ರಿನಾಡಿಯನ್ನು ಅಶ್ವಿನ್ಯಾದಿಯಾಗಿಯೂ, ಚತುರ್ನಾಡಿಯನ್ನು ಕೃತ್ತಿಕಾದಿಯಾಗಿಯೂ, ಪಂಚನಾಡಿಯನ್ನು ಮೃಗಶಿರಾದಿಯಾಗಿಯೂ ಎಣಿಸಬೇಕು. ವಧೂವರರ ನಕ್ಷತ್ರಗಳು ಒಂದೇ ನಾಡಿಯಲ್ಲಿರಬೇಕು. "ತ್ರಿನಾಡೀ ಸರ್ವದೇಶೇಷು" ಎಂಬ ನಿಯಮಾನುಸಾರವಾಗಿ ತ್ರಿನಾಡೀಕೂಟವೇ ಈಗ ಪ್ರಸಿದ್ಧಿಯಲ್ಲಿರುವುದು. ವಿವಾಹದಲ್ಲಿ ಬ್ರಾಹ್ಮ, ಪ್ರಾಜಾಪತ್ಯ, ದೈವ, ಆರ್ಷ ಎಂಬುದಾಗಿ ನಾಲ್ಕು ವಿಧಗಳಿವೆ. ಇವುಗಳಿಗೆ ಉಕ್ತವಾಗಿರುವ ಕಾಲಗಳಲ್ಲಿಯೇ ಆಚರಿಸುವುದರಿಂದ ಅವುಗಳಿಗೆ ಹೇಳಿರುವ ಫಲವು ದೊರೆಯುವುದು. ಇವಲ್ಲದೇ

ಚತುರ್ಥಮಭಿಜಿಲ್ಲಗ್ನಮುದಯರ್ಕ್ಷಾಚ್ಚ ಸಪ್ತಮಂ ।
ಗೋಧೂಲಿಕಂ ತದುಭಯಂ ವಿವಾಹೇ ಪುತ್ರಪೌತ್ರದಂ ॥ ೫೧೨ ॥

ಪ್ರಾಚ್ಯಾನಾಂ ಚ ಕಲಿಂಗಾನಾಂ ಮುಖ್ಯಂ ಗೋಧೂಲಿಕಂ ಸ್ಮೃತಂ ।
ಅಭಿಜಿತ್ಸರ್ವದೇಶೇಷು ಮುಖ್ಯೋ ದೋಷವಿನಾಶಕೃತ್ ॥ ೫೧೩ ॥

ಮಧ್ಯಂದಿನಗತೇ ಭಾನೌ ಮುಹೂರ್ತೋಽಭಿಜಿದಾಹ್ವಯಃ ।
ನಾಶಯತ್ಯಖಿಲಾನ್ದೋಷಾನ್ಪಿನಾಕೀ ತ್ರಿಪುರಂ ಯಥಾ ॥ ೫೧೪ ॥

ಪುತ್ರೋದ್ವಾಹಾತ್ಪರಂ ಪುತ್ರೀವಿವಾಹೋ ನ ಋತುತ್ರಯೇ ।
ನ ತಯೋರ್ವ್ರತಮುದ್ವಾಹಾನ್ಮಂಗಲೇ ನಾನ್ಯಮಂಗಲಂ ॥ ೫೧೫ ॥

ವಿವಾಹಶ್ಚೈಕಜನ್ಯಾನಾಂ ಷಣ್ಮಾಸಾಭ್ಯಂತರೇ ಯದಿ ।
ಅಸಂಶಯಂ ತ್ರಿಭಿರ್ವರ್ಷೈಸ್ತತ್ರೈಕಾ ವಿಧವಾ ಭವೇತ್ ॥ ೫೧೬ ॥

ಗಂಧರ್ವ, ಆಸುರ, ಪೈಶಾಚ, ರಾಕ್ಷಸ ಎಂದೂ ಬೇರೆಬೇರೆಯಾದ ರೀತಿಗಳಿವೆ. ಉದಯಲಗ್ನಕ್ಕಿಂತ ನಾಲ್ಕನೆಯದು ಅಭಿಜಿಲ್ಲಗ್ನವೆಂದೂ, ಏಳನೆಯದು ಗೋಧೂಳೀಲಗ್ನವೆಂದೂ ಸಿದ್ಧಿತವಾಗಿದೆ. ಇವೆರಡೂ ವಿವಾಹಕ್ಕೆ ಪ್ರಶಸ್ತ ವಾದುವುಗಳು. ಪೂರ್ವದೇಶದವರಿಗೂ, ಕಳಿಂಗದೇಶದವರಿಗೂ, ಗೋಧೂಲೀ ಲಗ್ನವು ಶ್ರೇಷ್ಠವಾದದ್ದೆಂದು ಹೇಳಿದೆ- ಅಭಿಜಿಲ್ಲಗ್ನವು ಸರ್ವದೇಶದಲ್ಲಿಯೂ ಶ್ರೇಷ್ಠವೆನಿಸಿದೆ- ಸೂರ್ಯನು ಖಮಧ್ಯವನ್ನು ಹೊಂದಿದಾಗ ಬರುವಲಗ್ನವು ಅಭಿಜಿಲ್ಲಗ್ನವೆನಿಸುವುದು. ಇದು ಈಶ್ವರನು ತ್ರಿಪುರಗಳನ್ನು ನಾಶವಾಡಿದಂತೆ ಸಕಲದೋಷಗಳನ್ನೂ ನಿವಾರಣೆಮಾಡುವುದು.

೫೧೫-೫೧೬- ಮಗನ ಮದುವೆಯ ಅನಂತರ (೬) ಆರು ತಿಂಗಳಾದ ಮೇಲೆಯೇ ಮದುವೆಯನ್ನು ಮಾಡಬೇಕು. ಮಗಳ ಮದುವೆಯಾದ ಮೇಲೆ ಮಗನಿಗೆ ಉಪನಯನ ಮಾಡಕೂಡದು. ಉಪನಯನಾನಂತರ ವಿವಾಹ ಮಾಡುವುದೇ ಮಂಗಳಕರವಾದುದು- ಆರು ತಿಂಗಳ ಒಳಗೆ ಸಹೋದರಿಯು ರಿಬ್ಬರ ಮದುವೆಯಾದರೆ ಅವರಲ್ಲಿ ಒಬ್ಬಳು ಮೂರು ವರ್ಷದೊಳಗೆ ವಿಧವೆಯಾ

ಪ್ರತ್ಯುದ್ವಾಹೋ ನೈವ ಕಾರ್ಯೋ ನೈಕಸ್ಮೈ ದುಹಿತೃದ್ವಯಂ ।
ನ ಚೈಕಜನ್ಮಯೋಃ ಪುಂಸೋರೇಕಜನ್ಯೇ ತು ಕನ್ಯಕೇ ॥ ೫೧೭ ॥

ನೈವಂ ಕದಾಚಿದುದ್ವಾಹೋ ನೈಕದಾ ಮುಂಡನದ್ವಯಂ ।
ದಿವಾಜಾತಸ್ತು ಪಿತರಂ ರಾತ್ರೌ ತು ಜನನೀಂ ತಥಾ ॥ ೫೧೮ ॥

ಆತ್ಮಾನಂ ಸಂಧ್ಯಯೋರ್ಹಂತಿ ನಾಸ್ತಿ ಗಂಡೇ ವಿಪರ್ಯಯಃ ।
ಸುತಃ ಸುತಾ ವಾ ನಿಯತಂ ಶ್ವಶುರಂ ಹಂತಿ ಮೂಲಜಃ ॥ ೫೧೯ ॥

ತದಂತ್ಯಪಾದಜೋ ನೈವ ತಥಾಶ್ಲೇಷಾದ್ಯಪಾದಜಃ ।
ಜ್ಯೇಷ್ಠಾಂತ್ಯಪಾದಜೌ ಜ್ಯೇಷ್ಠಂ ಬಾಲೋ ಹಂತಿ ನ ಬಾಲಿಕಾ ॥ ೫೨೦ ॥

ಗುವಳು. ಒಬ್ಬನೇ ವರನಿಗೆ ಇಬ್ಬರು ಅಕ್ಕತಂಗಿಯರನ್ನು ಕೊಟ್ಟು ಮದುವೆ ಮಾಡಬಾರದು. ಅಣ್ಣತಮ್ಮಂದಿರಿಗೆ ಅಕ್ಕತಂಗಿಯರನ್ನು ಕೊಟ್ಟು ಮದುವೆ ಮಾಡಕೂಡದು.

೫೧೮–೫೨೦. ಒಂದೇ ಲಗ್ನದಲ್ಲಿ ಸಹೋದರಿಯರಿಗೆ ವಿವಾಹವನ್ನೂ, ಸಹೋದರರಿಗೆ ಮುಂಡನವನ್ನೂ (ಉಪನಯನವನ್ನೂ) ಮಾಡಬಾರದು. ಹಗಲು ಹುಟ್ಟಿದವನಿಂದ ತಂದೆಗೂ, ರಾತ್ರಿಯಲ್ಲಿ ಹುಟ್ಟಿದ ಮಗುವಿನಿಂದ ತಾಯಿಗೂ ಬಾಧಕವುಂಟು. ಸಂಧ್ಯಾಕಾಲದಲ್ಲಿ ಜನಿಸುವುದು ತನಗೂ ಭಾಧಕವಾಗುವುದು. ಗಂಡಕಾಲದಲ್ಲಿ ಜನನವಾಗಿರುವುದು ಇವೆಲ್ಲಕ್ಕೂ ಹೆಚ್ಚಿನ ದುಷ್ಫಲವನ್ನು ಕೊಡುವುದು. ಮೂಲಾನಕ್ಷತ್ರದಲ್ಲಿ ಹುಟ್ಟಿದ ಮಗಳಾಗಲೀ ಮಗನಾಗಲೀ ಅವರ ಮಾವನಿಗೆ ತೊಂದರೆಯನ್ನುಂಟುಮಾಡುವರು. ಆದರೆ ಮೂಲಾಂತ್ಯಪಾದದಲ್ಲಾಗುವ ಜನನವು ಈ ದೋಷವನ್ನು ತರುವುದಿಲ್ಲ. ಆಶ್ಲೇಷಾನಕ್ಷತ್ರದ ಆದಿಪಾದವನ್ನು ಬಿಟ್ಟು ಉಳಿದ ಪಾದಗಳು ಶ್ವಶ್ರೂವಿನಾಶಕರಗಳು (ಅತ್ತೆಗೆ ತೊಂದರೆಯನ್ನುಂಟುಮಾಡುವುದು) ಜ್ಯೇಷ್ಠಾಂತ್ಯಪಾದದಲ್ಲಿ ಹುಟ್ಟಿದ ಗಂಡುಮಗುವು ಅಣ್ಣನಿಗೆ ಬಾಧಕವಾಗುವುದು. ಹೆಣ್ಣುಮಗುವಿನ ಜನನದಿಂದ (ಅಂದರೆ ಜ್ಯೇಷ್ಠಾನಕ್ಷತ್ರದಲ್ಲಿ ಹುಟ್ಟುವ ಹೆಣ್ಣುಮಗುವಿನಿಂದ) ಅಣ್ಣನಿಗೆ ಬಾಧಕವಾಗುವುದಿಲ್ಲ.

ನ ಬಾಲಿಕಾಂಬುಮೂಲರ್ಕ್ಷೇ ಮಾತರಂ ಪಿತರಂ ತಥಾ ।
ಸೈಂಧ್ರೀ ಧವಾಗ್ರಜಂ ಹಂತಿ ದೇವರಂ ತು ದ್ವಿದೈವಜಾ ॥ ೫೨೧ ॥

ಆರಭ್ಯೋದ್ವಾಹದಿವಸಾತ್ಷಷ್ಠೇ ವಾಷ್ಟಷ್ಟಮೇ ದಿನೇ ।
ವಧೂಪ್ರವೇಶಸಂಪತ್ತ್ಯೈ ದಶಮೇ ಸಪ್ತಮೇ ದಿನೇ ॥ ೫೨೨ ॥

ಹಾಯನದ್ವಿತಯಂ ಜನ್ಮಭಲಗ್ನ ದಿವಸಾನಪಿ ।
ಸಂತ್ಯಜ್ಯ ಹ್ಯತಿಶುಕ್ರೇಽಪಿ ಯಾತ್ರಾ ವೈವಾಹಿಕೀ ಶುಭಾ ॥ ೫೨೩ ॥

ಶ್ರೇಷದಂ ಸರ್ವಗೀರ್ವಾಣಸ್ಥಾಪನಂ ಚೋತ್ತರಾಯಣೇ ।
ಗೀರ್ವಾಣಪೂರ್ವಗೀರ್ವಾಣಮಂತ್ರಿಣೋರ್ದೃಶ್ಯಮಾನಯೋಃ ॥ ೫೨೪ ॥

ವಿಚಿತ್ರೇಷ್ವೇವ ಮಾಸೇಷು ಮಾಘಾದಿಷು ಚ ಪಂಚಸು ।
ಶುಕ್ಲಪಕ್ಷೇಷು ಕೃಷ್ಣೇಷು ತದಾದಿಷ್ಟಷ್ಟಸು ಶುಭಂ ॥ ೫೨೫ ॥

---

೫೨೧-೫೨೩. ಮೂಲಾ, ಪೂರ್ವಾಷಾಢಾನಕ್ಷತ್ರಗಳಲ್ಲಿ ಹುಟ್ಟಿದ ಹೆಣ್ಣು ಮಗುವಿನಿಂದ ತಾಯಿಗಾಗಲೀ, ತಂದೆಗಾಗಲೀ ಬಾಧಕವಾಗಲಾರದು. ಜ್ಯೇಷ್ಠಾ ನಕ್ಷತ್ರೋದ್ಭವಳು ಗಂಡನ ಅಣ್ಣನಿಗೂ ವಿಶಾಖಾನಕ್ಷತ್ರದಲ್ಲಿ ಜನಿಸಿದವಳು ಮೈದುನನಿಗೂ ಹಾನಿಪ್ರದಳಾಗುವಳು. ವಿವಾಹವಾದ ದಿನದಿಂದ ಆರು, ಎಂಟು, ಏಳು, ಹತ್ತು ಈ ದಿನಗಳು ವಧೂಪ್ರವೇಶಕ್ಕೆ ಯೋಗ್ಯವಾದುವುಗಳು. ವಿವಾಹಾನಂತರ ಎರಡನೆಯ ವರ್ಷದಲ್ಲಿಯೂ, ಜನ್ಮಲಗ್ನ, ಜನ್ಮಮಾಸ, ಜನ್ಮ ದಿನ, ಶುಕ್ರಾಸ್ತಸಮಯ ಈ ಕಾಲಗಳಲ್ಲಿ ಪತಿಗೃಹಪ್ರಯಾಣವು ಸ್ತ್ರೀಯರಿಗೆ ಶುಭಕರವಲ್ಲವೆಂದು ಹೇಳಿದೆ.

೫೨೪-೫೨೫. ಸಕಲದೇವತಾಪ್ರತಿಷ್ಠೆಗಳಿಗೂ ಉತ್ತರಾಯಣವೇ ಶ್ರೇಷ್ಠವಾದ ಕಾಲವಾಗಿರುವುದು. ಆಗ ಗುರು ಶುಕ್ರಾಸ್ತಗಳಿರಕೂಡದು. ಮಾಘಾದಿ ಪಂಚಮಾಸಗಳಲ್ಲಿ ಚೈತ್ರಮಾಸವು ದೇವತಾಪ್ರತಿಷ್ಠೆಗೆ ಯೋಗ್ಯವಲ್ಲ. ಶುಕ್ಲ ಪಕ್ಷ, ಮತ್ತು ಕೃಷ್ಣಪಕ್ಷದ ಅಷ್ಟಮಿಯ ಒಳಗಿರುವ ತಿಥಿಗಳು ಶ್ರೇಷ್ಠವಾದುವು ಗಳು. ಯಾವ ದೇವತೆಗೆ ಯಾವ ತಿಥಿಗಳು ಉಕ್ತವಾಗಿವೆಯೋ ಆ ತಿಥಿಗಳೇ

ದಿನೇಷು ಯಸ್ಯ ದೇವಸ್ಯ ಯಾ ತಿಥಿಸ್ತತ್ರ ತಸ್ಯ ಚ ।
ದ್ವಿತೀಯಾದಿದ್ವಯೇ ಪಂಚಮ್ಯಾದಿತಸ್ತ್ರಿಷು ಕ್ರಮಾತ್ ॥ ೫೨೬ ॥

ದಶಮ್ಯಾದೇಶ್ಚತುರ್ಷು ಪೌರ್ಣಮಾಸ್ಯಾಂ ವಿಶೇಷತಃ ।
ತ್ರ್ಯುತ್ತರಾದಿತಿಚಂದ್ರಾಂತ್ಯ ಹಸ್ತತ್ರಯಗುರೂಡುಷು ॥ ೫೨೭ ॥

ಸಾಶ್ವಿಧಾತೃಜಲಾಧೀಶಹರಿಮಿತ್ರವಸುಷ್ವಪಿ ।
ಕುಜವರ್ಜಿತವಾರೇಷು ಕರ್ತುಃ ಸೂರ್ಯೇ ಬಲಪ್ರದೇ ॥ ೫೨೮ ॥

ಚಂದ್ರತಾರಾಬಲೋಪೇತೇ ಪೂರ್ವಾಹ್ಣೇ ಶೋಭನೇ ದಿನೇ ।
ಶುಭಲಗ್ನೇ ಶುಭಾಂಶೇ ಚ ಕರ್ತುರ್ನ ನಿಧನೋದಯೇ ॥ ೫೨೯ ॥

ರಾಶಯಃ ಸಕಲಾಃ ಶ್ರೇಷ್ಠಾಃ ಶುಭಗ್ರಹಯುತೇಕ್ಷಿತಾಃ ।
ಪಂಚಾಷ್ಟಕೇ ಶುಭೇ ಲಗ್ನೇ ನೈಧನೇ ಶುದ್ಧಿಸಂಯುತೇ ॥ ೫೩೦ ॥

...ಯಸ್ಸಾ ದೇವತೆಗಳ ಪ್ರತಿಷ್ಠಾಕಾರ್ಯಗಳಿಗೆ ಯೋಗ್ಯವಾದುವುಗಳೆಂದು ತಿಳಿಯಬೇಕು. ಬಿದಿಗೆ, ತದಿಗೆ, ಪಂಚಮಿ, ಷಷ್ಠೀ, ಸಪ್ತಮಿ, ದಶಮಿಯಿಂದ ಯಿಂದ ಮುಂದಿನ ನಾಲ್ಕು ತಿಥಿಗಳು, ಪೌರ್ಣಮಾಸೀ ಈ ತಿಥಿಗಳು ದೇವತಾಪ್ರತಿಷ್ಠೆಗೆ ಪ್ರಶಸ್ತವಾದುವುಗಳು. ಉತ್ತರಾತ್ರಯ (ಅಂದರೆ ಉತ್ತರಾ, ಉತ್ತರಾಷಾಢ, ಉತ್ತರಾಭಾದ್ರ ಈ ಮೂರು ನಕ್ಷತ್ರಗಳು) ಪುನರ್ವಸು, ಮೃಗಶಿರ ರೇವತೀ, ಹಸ್ತ, ಚಿತ್ತ, ಸ್ವಾತೀ, ಪುಷ್ಯ, ಅಶ್ವಿನೀ, ರೋಹಿಣೀ, ಶತಭಿಷಾ, ಶ್ರವಣ, ಅನೂರಾಧಾ, ಧನಿಷ್ಠಾ ಈ ನಕ್ಷತ್ರಗಳು ಸಕಲದೇವತಾಪ್ರತಿಷ್ಠೆಗಳಿಗೂ ಶ್ರೇಷ್ಠವಾದುವುಗಳೆಂದು ತಿಳಿಯಬೇಕು. ಮಂಗಳವಾರವೊಂದನ್ನು ಬಿಟ್ಟು ಉಳಿದ ವಾರಗಳಲ್ಲೆಲ್ಲಾ ದೇವತಾಪ್ರತಿಷ್ಠೆಯನ್ನು ಮಾಡಬಹುದು.

೫೨೯-೫೩೩. ಪ್ರತಿಷ್ಠೆ ಮಾಡುವ ಯಜಮಾನನಿಗೆ ರವಿಬಲವಿರಬೇಕು. ಚಂದ್ರತಾರಾಬಲಗಳಿಂದ ಶ್ರೇಷ್ಠವೆನಿಸಿದ ದಿನದಲ್ಲಿ ಪೂರ್ವಾಹ್ಣದ ಶುಭಲಗ್ನದಲ್ಲಿ ದೇವತಾಪ್ರತಿಷ್ಠೆಯನ್ನು ಮಾಡಬೇಕು. ಕರ್ತೃವಿನ ಜನ್ಮಲಗ್ನಾಷ್ಟಮರಾಶಿಯನ್ನು ಪ್ರತಿಷ್ಠಾಲಗ್ನವನ್ನಾಗಿ ಇಡಕೂಡದು. ಪ್ರತಿಷ್ಠಾಮುಹೂರ್ತಕ್ಕೆ

ಲಗ್ನಸ್ಥಾಶ್ಚಂದ್ರಸೂರ್ಯಾರರಾಹುಕೇತ್ವರ್ಕಸೂನವಃ ।
ಕರ್ತುರ್ಮೃತ್ಯುಪ್ರದಾಶ್ಚಾನ್ಯೇ ಧನಧಾನ್ಯಸುಖಪ್ರದಾಃ ॥ ೫೩೧ ॥

ದ್ವಿತೀಯೇ ನೇಷ್ಟದಾಃ ಪಾಪಾಃ ಸೌಮ್ಯಾಶ್ಚಂದ್ರಶ್ಚ ವಿತ್ತದಾಃ ।
ತೃತೀಯೇ ನಿಖಿಲಾಃ ಖೇಟಾಃ ಪುತ್ರಪೌತ್ರಸುಖಪ್ರದಾಃ ॥ ೫೩೨ ॥

ಚತುರ್ಥೇ ಸುಖದಾಃ ಸೌಮ್ಯಾಃ ಕ್ರೂರಾಃ ಖೇಟಾಶ್ಚ ದುಃಖದಾಃ ।
ಗ್ಲಾನಿದಾಃ ಪಂಚಮೇ ಕ್ರೂರಾಃ ಸೌಮ್ಯಾಃ ಪುತ್ರಸುಖಪ್ರದಾಃ ॥ ೫೩೩ ॥

ಷಷ್ಠೇ ಶುಭಾಃ ಶತ್ರುದಾಃ ಸ್ಯುಃ ಪಾಪಾಃ ಶತ್ರುಕ್ಷಯಂಕರಾಃ ।
ವ್ಯಾಧಿದಾಃ ಸಪ್ತಮೇ ಪಾಪಾಃ ಸೌಮ್ಯಾಃ ಶುಭಫಲಪ್ರದಾಃ ॥ ೫೩೪ ॥

ಶುಭಗ್ರಹಯುತವೂ, ದೃಷ್ಟವೂ ಆಗಿರುವ ಎಲ್ಲಾ ರಾಶಿಗಳೂ ಶ್ರೇಷ್ಠವಾದುವುಗಳೇ ಎಂದು ತಿಳಿಯಬೇಕು. ಪಂಚಾಂಗಶುದ್ಧಿಯಿರುವ (ಅಂದರೆ ತಿಥಿ, ವಾರ ನಕ್ಷತ್ರ, ಯೋಗ ಮತ್ತು ಕರಣ ಈ ಐದೂ ಶುದ್ಧವಾಗಿರುವ) ದಿನದಲ್ಲಿ ಅಷ್ಟಮ ಶುದ್ಧಿಯಿರುವ ಲಗ್ನದಲ್ಲಿ ಚಂದ್ರ, ಸೂರ್ಯ, ಕುಜ, ರಾಹು, ಕೇತು ಮತ್ತು ಶನಿ ಈ ಗ್ರಹಗಳಿಲ್ಲದಿರುವಾಗ ದೇವತಾಪ್ರತಿಷ್ಠೆಯನ್ನು ಮಾಡಬೇಕು. ಈ ಗ್ರಹಗಳು ಲಗ್ನದಲ್ಲಿದ್ದರೆ ಕರ್ತೃವಿಗೆ ಮೃತ್ಯುವೂ, ಧನಧಾನ್ಯಾದಿನಾಶವೂ ಉಂಟಾಗುವುದು. ಉಳಿದ ಗ್ರಹಗಳು ಲಗ್ನದಲ್ಲಿದ್ದರೆ ಧನಧಾನ್ಯಾದಿಗಳ ಅಭಿವೃದ್ಧಿರೂಪವಾದ ಶುಭಫಲಗಳನ್ನೂ ಕೊಡುತ್ತವೆ. ದ್ವಿತೀಯದಲ್ಲಿರುವ ಪಾಪಗ್ರಹಗಳು ಕೆಟ್ಟ ಫಲವನ್ನೂ, ಚಂದ್ರಬುಧರು ದ್ರವ್ಯರೂಪವಾದ ಫಲವನ್ನೂ ಕೊಡುವರು. ತೃತೀಯದಲ್ಲಿರುವ ಎಲ್ಲಾ ಗ್ರಹಗಳೂ ಪುತ್ರಪೌತ್ರಾದಿಫಲಗಳನ್ನು ಕೊಡುವರು. ಚತುರ್ಥದಲ್ಲಿರುವ ಶುಭಗ್ರಹಗಳು ಶುಭಫಲವನ್ನೂ, ಪಾಪಗ್ರಹಗಳು ಪಾಪಫಲವನ್ನೂ ಕೊಡುತ್ತವೆ. ಪಂಚಮದಲ್ಲಿ ಕ್ರೂರಗ್ರಹಗಳಿದ್ದರೆ ಗ್ಲಾನಿಯನ್ನೂ, ಶುಭಗ್ರಹಗಳು ಪುತ್ರಸಂಪತ್ತನ್ನೂ ಕೊಡುವರು.

೫೩೪-೫೩೮. ಷಷ್ಠಸ್ಥಾನದಲ್ಲಿ ಶುಭಗ್ರಹಗಳಿದ್ದರೆ ಶತ್ರುವೃದ್ಧಿಯನ್ನೂ ಪಾಪಗ್ರಹಗಳು ಶತ್ರುಕ್ಷಯವನ್ನೂ ಕೊಡುವರು. ಸಪ್ತಮದಲ್ಲಿ ಪಾಪಗ್ರಹಗಳಿದ್ದರೆ ವ್ಯಾಧಿಯನ್ನುಂಟುಮಾಡುವರು. ಸೌಮ್ಯಗ್ರಹಗಳು ಶುಭಫಲವನ್ನುಂಟು

ಅಷ್ಟಮಸ್ಥಾಃ ಖಗಾಃ ಸರ್ವೇ ಕರ್ತುರ್ಮೃತ್ಯುಪ್ರದಾಯಕಾಃ ।
ಧರ್ಮೇ ಪಾಪಾ ಘ್ನಂತಿ ಸೌಮ್ಯಾಃ ಶುಭದಾಃ ಮಂಗಲಪ್ರದಾಃ ॥ ೫೩೫ ॥

ಕರ್ಮಗಾಃ ದುಃಖದಾಃ ಪಾಪಾಃ ಸೌಮ್ಯಾಶ್ಚಂದ್ರಶ್ಚ ಕೀರ್ತಿದಾಃ ।
ಲಾಭಸ್ಥಾನಗತಾಸ್ಸರ್ವೇ ಭೂರಿಲಾಭಪ್ರದಾ ಗ್ರಹಾಃ ॥ ೫೩೬ ॥

ವ್ಯಯಸ್ಥಾನಗತಾಃ ಶಶ್ವದ್ಬಹುವ್ಯಯಕರಾ ಗ್ರಹಾಃ ।
ಹಂತ್ಯರ್ಥಹೀನಾಃ ಕರ್ತಾರಂ ಮಂತ್ರಹೀನಾಸ್ತು ಋತ್ವಿಜಂ ॥ ೫೩೭ ॥

ಸ್ತ್ರಿಯಂ ಲಕ್ಷಣಹೀನಾಸ್ತು ನ ಪ್ರತಿಷ್ಠಾಸಮೋ ರಿಪುಃ ।
ಗುಣಾಧಿಕತಮೋ ಲಗ್ನೇ ದೋಷಃ ಸ್ವಲ್ಪತರೋ ಯದಿ ॥ ೫೩೮ ॥

ಸುರಾಣಾಂ ಸ್ಥಾಪನಂ ತತ್ರ ಕರ್ತುರಿಷ್ಟಾರ್ಥಸಿದ್ಧಿದಂ ।
ನಿರ್ಮಾಣಾಯತನಗ್ರಾಮಗೃಹಾದೀನಾಂ ಸಮಾಸತಃ ॥ ೫೩೯ ॥

---

ಮಾಡುವುವು. ಅಷ್ಟಮಸ್ಥಾನದಲ್ಲಿರುವ ಎಲ್ಲಾಗ್ರಹಗಳೂ ಕರ್ತೃವಿಗೆ ಅನಿಷ್ಟವನ್ನುಂಟುಮಾಡುವುವು. ಕ್ರೂರಗ್ರಹಗಳು ನವಮದಲ್ಲಿದ್ದರೆ ಪಾಪಫಲವನ್ನೂ ಶುಭಗ್ರಹಗಳು ಸನ್ಮಂಗಲವನ್ನೂ ಉಂಟುಮಾಡುವರು. ದಶಮಸ್ಥಾನದಲ್ಲಿ ಅಶುಭಗ್ರಹಗಳಿದ್ದರೆ ದುಃಖವನ್ನೂ, ಚಂದ್ರ ಮತ್ತು ಇತರ ಶುಭಗ್ರಹಗಳು ದಶಮಸ್ಥಾನದಲ್ಲಿದ್ದರೆ ಒಳ್ಳೆಯ ಫಲವನ್ನೂ ಕೊಡುವರು. ಏಕಾದಶಸ್ಥಾನದಲ್ಲಿರುವ ಸಕಲ ಗ್ರಹಗಳೂ ಶುಭಪ್ರದರೇ ಆಗುವರು. ದ್ವಾದಶಸ್ಥಾನದಲ್ಲಿರುವ ಪಾಪಗ್ರಹಗಳು ಕರ್ತೃವಿಗೆ ಬಹು ವ್ಯಯವನ್ನುಂಟುಮಾಡುವರು. ಋತ್ವಿಕ್ಕುಗಳಿಗೆ ಮಂತ್ರನಷ್ಟವನ್ನೂ ಸ್ತ್ರೀಯರಿಗೆ ಸೌಂದರ್ಯನಾಶವನ್ನೂ ಉಂಟುಮಾಡುವರು. ಆದಕ್ಕಾಗಿಯೇ ಅಶುಭಲಗ್ನದಲ್ಲಿ ಮಾಡಿದ ದೇವತಾಪ್ರತಿಷ್ಠೆಯೆಂಬುದು ನಿಜವಾಗಿಯೂ ಮನುಷ್ಯನಿಗೆ ಮೃತ್ಯುಪ್ರಾಯವಾಗುವುದು. ಪ್ರತಿಷ್ಠಾಲಗ್ನದಲ್ಲಿ ಗುಣಾಧಿಕ್ಯವೂ, ಅಲ್ಪದೋಷವೂ ಇರುವುದಾದರೆ ಅದರಿಂದ ಕರ್ತೃವಿಗೆ ಸಕಲೇಷ್ಟಸಾಧನಗಳೂ ದೊರಕುವುವು.

೫೩೯-೫೪೧. ದೇವಾಲಯಾದಿ ಪುಣ್ಯಕ್ಷೇತ್ರಗಳನ್ನು ನಿರ್ಮಿಸಲು ಮುಂಚಿತವಾಗಿ ಭೂಮಿಯನ್ನು ಪರೀಕ್ಷಿಸಬೇಕು. ಭೂಪರೀಕ್ಷೆಯು ಭೂಮಿಯ

ಕ್ಷೇತ್ರಮಾದೌ ಪರೀಕ್ಷೇತ ಗಂಧವರ್ಣರಸಾಂಶಕೈಃ ।
ಮಧುಪುಷ್ಪಾಮ್ಲಪಿಶಿತಗಂಧಂ ವಿಪ್ರಾಸುಪೂರ್ವಕಂ ॥ ೫೪೦ ॥

ಸಿತಂ ರಕ್ತಂ ಚ ಹರಿತಂ ಕೃಷ್ಣವರ್ಣಂ ಯಥಾಕ್ರಮಂ ।
ಮಧುರಂ ಕಟುಕಂ ತಿಕ್ತಂ ಕಷಾಯಕರಸಂಕ್ರಮಾತ್ ॥ ೫೪೧ ॥

ಅತ್ಯಂತವೃದ್ಧಿದಂ ನೄಣಾಮೀಶಾನಪ್ರಾಗುದಕ್ಪ್ಲವಂ ।
ಅನ್ಯದಿಕ್ಷು ಪ್ಲವೇ ತೇಷಾಂ ಶಶ್ವದತ್ಯಂತಹಾನಿದಂ ॥ ೫೪೨ ॥

ಸಮಗರ್ತಾರತ್ನಿಮಾತ್ರಂ ಖನಿತ್ವಾ ತತ್ರ ಪೂರಯೇತ್ ।
ಅತ್ಯಂತವೃದ್ಧಿರಧಿಕೇ ಹೀನೇ ಹಾನಿಃ ಸಮೇ ಸಮಂ ॥ ೫೪೩ ॥

ತಥಾ ನಿಶಾದೌ ತತ್ಕೃತ್ವಾ ಪಾನೀಯೇನ ಪ್ರಪೂರಯೇತ್ ।
ಪ್ರಾತರ್ದೃಷ್ಟೇ ಜಲೇ ವೃದ್ಧಿಃ ಸಮಂ ಪಂಕೇ ಕ್ಷಯಃ ಕ್ಷಯೇ ॥ ೫೪೪ ॥

ವಾಸನೆ, ಬಣ್ಣ, ರುಚಿ ಇವುಗಳಿಂದ ತಿಳಿಯುವುದು. ಜೇನು, ಹೂವು, ಹುಳಿ ಮಾಂಸ ಇವುಗಳ ವಾಸನೆಯು ಬ್ರಾಹ್ಮಣಾದಿ ಚಾತುರ್ವರ್ಣ್ಯಗಳಿಗೆ ಕ್ರಮವಾಗಿ ಶುಭಕರವೆನಿಸುವುದು. ಹಾಗೆಯೇ ಬಿಳುಪು, ಕೆಂಪು, ಹಳದಿ, ಕಪ್ಪು ಈ ವರ್ಣಗಳೂ, ಸಿಹಿ, ಕಹಿ, ಒಗರು ಕಷಾಯ, ರಸ ಈ ರಸಗಳೂ ಬ್ರಾಹ್ಮಣಾದಿ ವರ್ಣಗಳಿಗೆ ಕ್ರಮವಾಗಿ ವಿಧಿಸಲ್ಪಟ್ಟಿವೆ.

೫೪೨-೫೪೪. ಈಶಾನ್ಯದಿಕ್ಕಿನಲ್ಲಿ ಅಥವ ಪೂರ್ವದಲ್ಲಿ ಮಾಡುವ ಒಂದು ಹಳ್ಳವೇ ಕಟ್ಟಡಕ್ಕೆ ಒಳ್ಳೆಯದು. ಇತರ ದಿಕ್ಕುಗಳಲ್ಲಿ ಅದನ್ನು ಮಾಡುವುದರಿಂದ ಕರ್ತೃವಿಗೆ ಹಾನಿಯು ಸಂಭವಿಸುವುದು. ಅಲ್ಲಿ ಮೊದಲು ೨೪ ಇಪ್ಪತ್ತನಾಲ್ಕು ಅಂಗುಲ ಪರಿಮಿತಿಯಲ್ಲಿ ಸಮಗರ್ತವೊಂದನ್ನು ನಿರ್ಮಿಸಬೇಕು. ಆ ಗರ್ತವು ಮರುದಿನ ಅಧಿಕಪ್ರಮಾಣವಾಗಿ ಕಂಡುಬಂದರೆ ಶುಭಫಲಾಧಿಕವೆಂದೂ ಅತ್ಯಂತ ನ್ಯೂನವಾಗಿ ಕಂಡುಬಂದರೆ ಹೀನಫಲವೆಂದೂ ಊಹಿಸಬೇಕು. ಮತ್ತು ಸಮವಾಗಿ ಕಂಡುಬಂದರೆ ಸಮಫಲವೆಂದೂ ತಿಳಿದುಕೊಳ್ಳಬೇಕು. ನೀರನ್ನು ಹಿಂದಿನದಿನ ಸಾಯಂಕಾಲ ಗರ್ತಕ್ಕೆ ತುಂಬಿ ಮರುದಿನ ಪ್ರಾತಃಕಾಲ ನೋಡಿದಾಗ ಜಲವು ಕಂಡುಬಂದರೆ ಶುಭಫಲವೆಂದೂ ಕೆಸರಾಗಿದ್ದರೆ ಸಮಫಲವೆಂದೂ

ಏವಂ ಲಕ್ಷಣಸಂಯುಕ್ತಂ ಸಮ್ಯಕ್ಕ್ಷೇತ್ರಂ ಪರೀಕ್ಷ್ಯತೇ ।
ದೀಕ್ಷಾಸಾಧನಾಯ ತನ್ಮಧ್ಯೇ ಸಮಂ ಮಂಡಲಮಾಲಿಖೇತ್ ॥ ೫೪೫ ॥

ದ್ವಾದಶಾಂಗುಲಕಂ ತಂಕುಂ ಸ್ಥಾಪ್ಯೇಕ್ಷೇತ್ರತ್ರ ದಿಕ್ಕ್ರಮಂ ।
ಚತುರಸ್ರೀಕೃತೇ ಕ್ಷೇತ್ರೇ ಷಡ್ವರ್ಗಪರಿಶೋಧಿತೇ ॥ ೫೪೬ ॥

ರೇಖಾಮಾರ್ಗೇ ಚ ಕರ್ತವ್ಯಂ ಪ್ರಾಕಾರಂ ಸುಮನೋಹರಂ ।
ಆಯಾಮೇಷು ಚತುರ್ದಿಕ್ಷು ಪ್ರಾಗಾದಿಷು ಚ ಸತ್ಸ್ವಪಿ ॥ ೫೪೭ ॥

ಅಷ್ಟಾವಷ್ಟೌ ಪ್ರತಿದಿಶಂ ದ್ವಾರಾಣಿ ಸ್ಯುರ್ಯಥಾಕ್ರಮಂ ।
ಪ್ರದಕ್ಷಿಣಕ್ರಮಾತ್ತೇಷಾಮಮೂನಿ ಚ ಫಲಾನಿ ವೈ ॥ ೫೪೮ ॥

ಹಾನಿರ್ನೈಃಸ್ವಂ ಧನಪ್ರಾಪ್ತಿರ್ನೃಪಪೂಜಾ ಮಹದ್ಧನಂ ।
ಅತಿಚೌರ್ಯಮತಿಕ್ರೋಧೋ ಭೀತಿರ್ದಿಶಿ ಶಚೀಪತೇಃ ॥ ೫೪೯ ॥

ನೀರು ಇಂಗಿಹೋಗಿದ್ದರೆ ಅಶುಭಫಲವೆಂದೂ ತಿಳಿಯಬೇಕು. ಈರೀತಿ ಭೂ ಲಕ್ಷಣವನ್ನು ತಿಳಿದು ಮುಂದೆ ದೀಕ್ಷಾಸಾಧನಕ್ಕಾಗಿ ಆ ಸ್ಥಳದಲ್ಲಿ ಸಮಮಂಡಲ ಮಾಡಬೇಕು.

೫೪೬-೫೪೯. ಅದರ ಮಧ್ಯದಲ್ಲಿ ೧೨ ಹನ್ನೆರಡು ಅಂಗುಲಾತ್ಮಕವಾದ ಶಂಕು ವೊಂದನ್ನು (ಮೊಳೆಯೊಂದನ್ನು) ನೆಡಬೇಕು. ಅದರ ಸುತ್ತಲೂ ಚೌಕವಾಗಿ ಮಂಡಲವನ್ನು ಮಾಡಿ ಅದನ್ನು ಆರು ಭಾಗವಾಗಿ ವಿಭಾಗಿಸಿ ಕೊಳ್ಳಬೇಕು. ಅವುಗಳನ್ನು ಆರು ರೇಖೆಗಳಿಂದ ಗುರ್ತಿಸಿ ಅದನ್ನು ಪ್ರಾಕಾರ ಸ್ಥಾನವನ್ನಾಗಿ ತಿಳಿಯಬೇಕು. ಪೂರ್ವಾದಿಯಾದ ಚತುರಶ್ರಾಕಾರದ ರೇಖೆಗ ಳಲ್ಲಿ ಸಮಪ್ರಮಾಣದಿಂದ ಎಂಟು ಸ್ಥಾನಗಳನ್ನು ಗುರ್ತಿಸಿ ಅದರಲ್ಲಿ ಒಂದನ್ನು ಪ್ರತಿದಿಕ್ಕಿನಲ್ಲಿಯೂ ದ್ವಾರಸ್ಥಾನವನ್ನಾಗಿ ಭಾವಿಸಿಕೊಳ್ಳಬೇಕು. ಈ ಎಂಟು ದ್ವಾರಸ್ಥಾನಗಳಿಗೂ ಈ ಪ್ರದಕ್ಷಿಣಕ್ರಮದಲ್ಲಿ ಈರೀತಿ ಫಲವಿರುವುದು. ಪೂರ್ವ ದಿಕ್ಕಿನ ಅಷ್ಟದ್ವಾರಪ್ರದೇಶಗಳಿಗೆ ಕ್ರಮವಾಗಿ ಹಾನಿ, ದಾರಿದ್ರ್ಯ, ಧನಪ್ರಾಪ್ತಿ ರಾಜಪೂಜಾ, ಮಹೈಶ್ವರ್ಯ, ಅತಿಚೌರ್ಯ, ಅತಿಕ್ರೋಧ, ಭೀತಿ ಈ ಫಲ ಗಳಿರುತ್ತವೆ.

ನಿಧನಂ ಬಂಧನಂ ಭೀತಿರರ್ಥಾಪ್ತಿರ್ಧನವರ್ಧನಂ ।
ಅನಾತಂಕಂ ವ್ಯಾಧಿಭಯಂ ನಿಃಸತ್ವಂ ದಕ್ಷಿಣಾದಿಶಿ ॥ ೫೫೦ ॥

ಪುತ್ರಹಾನಿಃ ಶತ್ರುವೃದ್ಧಿರ್ಲಕ್ಷ್ಮೀಪ್ರಾಪ್ತಿರ್ಧನಾಗಮಃ ।
ಸೌಭಾಗ್ಯಮತಿದೌರ್ಭಾಗ್ಯಂ ದುಃಖಂ ಶೋಕಶ್ಚ ಪಶ್ಚಿಮೇ ॥ ೫೫೧ ॥

ಕಲತ್ರಹಾನಿರ್ನಿಸ್ಸತ್ವಂ ಹಾನಿರ್ಧಾನ್ಯಧನಾಗಮಃ ।
ಸಂಪದ್ವೃದ್ಧಿರ್ಮಾಸಭೀತಿರಾಮಯಂ ದಿಶಿ ಶೀತಗೋಃ ॥ ೫೫೨ ॥

ಏವಂ ಗೃಹಾದಿಷು ದ್ವಾರವಿಸ್ತಾರಾದ್ದ್ವಿಗುಣೋಚ್ಛ್ರಿತಂ ।
ಪಶ್ಚಿಮೇ ದಕ್ಷಿಣೇ ವಾಪಿ ಕಪಾಟಂ ಸ್ಥಾಪಯೇದ್ಗೃಹೇ ॥ ೫೫೩ ॥

ಪ್ರಾಕಾರಾಂತಃ ಕ್ಷಿತಿಂ ಕುರ್ಯಾದೇಕಾಶೀತಿಪದಂ ಯಥಾ ।
ಮಧ್ಯೇ ನವಪದೇ ಬ್ರಹ್ಮಸ್ಥಾನಂ ತದತಿನಿಂದಿತಂ ॥ ೫೫೪ ॥

---

೫೫೦-೫೫೩. ನಿಧನ, ಬಂಧನ, ಭೀತಿ, ಅರ್ಥಪ್ರಾಪ್ತಿ, ಧನವೃದ್ಧಿ, ಅನಾತಂಕ, ವ್ಯಾಧಿಭಯ, ದಾರಿದ್ರ್ಯ ಇವು ದಕ್ಷಿಣದಿಗ್ಭಾಗದ ಅಷ್ಟಫಲಗಳು. ಪುತ್ರಹಾನಿ, ಶತ್ರುವೃದ್ಧಿ, ಲಕ್ಷ್ಮೀಪ್ರಾಪ್ತಿ, ಧನಾಗಮ, ಸೌಭಾಗ್ಯ, ಅತಿ ದಾರಿದ್ರ್ಯ, ದುಃಖ, ಶೋಕ ಇವು ಪಶ್ಚಿಮದಿಕ್ಕಿನ ಫಲಗಳು. ಕಳತ್ರಹಾನಿ, ದಾರಿದ್ರ್ಯ, ಹಾನಿ, ಧನಧಾನ್ಯಪ್ರಾಪ್ತಿ, ಸಂಪದ್ವೃದ್ಧಿ, ಮಾನಭೀತಿ, ರೋಗ ಇತ್ಯಾದಿಯಾದ ಎಂಟು ಫಲಗಳು ಉತ್ತರ ದ್ವಾರದಲ್ಲಿ ಸಂಭವಿಸುವವು. ಹೀಗೆ ಗೃಹಗಳಲ್ಲಿ ದ್ವಾರನಿರ್ಮಾಣವಾದಮೇಲೆ ಅದರ ದ್ವಿಗುಣಿತವಾದ ಎತ್ತರದಲ್ಲಿ ದಕ್ಷಿಣ ಅಥವ ಪಶ್ಚಿಮದಿಕ್ಕಿನಲ್ಲಿ ಒಂದು ಕಪಾಟ ಅಂದರೆ ಹೆಬ್ಬಾಗಿಲನ್ನು ನಿರ್ಮಿಸಬೇಕು.

೫೫೪-೫೫೮. ಮನೆಯನ್ನು ಕಟ್ಟುವ ಪ್ರಾಕಾರದ ಒಳಭಾಗದ ಭೂಮಿಯನ್ನು ಊರ್ಧ್ವಾಧೋರೇಖೆಗಳಾದ ಒಂಭತ್ತರಿಂದಲೂ ಪೂರ್ವಾಪರ ರೇಖೆಯಾದ ಒಂಭತ್ತರಿಂದಲೂ ಒಟ್ಟು (೮೧) ಎಂಭತ್ತೊಂದು ಸ್ಥಾನ ಗಳಾಗುವಂತೆ ಸರ್ವತೋಭದ್ರಮಂಡಲವನ್ನು ರಚಿಸಬೇಕು. ಅದರ ಮಧ್ಯದಲ್ಲಿ ಬರುವ ಒಂಭತ್ತು ಸ್ಥಾನಗಳಿಗೆ ಬ್ರಹ್ಮಸ್ಥಾನವೆಂದು ಹೆಸರು

ದ್ವಾತ್ರಿಂಶದಂಶಾಃ ಪ್ರಾಕಾರಸಮೀಯಾಂಶಾಃ ಸಮಂತತಃ ।
ಪಿಶಾಚಾಂಶೇ ಗೃಹಾರಂಭೋ ದುಃಖಶೋಕಭಯಪ್ರದಃ ॥ ೫೫೫ ॥

ಶೇಷಾಂಶಾಃ ಸ್ಯುಃ ಸ್ಟೃ ನಿರ್ಮಾಣೇ ಪುತ್ರಪೌತ್ರಧನಪ್ರದಾಃ ।
ಶಿರಾಃ ಸ್ಯುರ್ವಾಸ್ತುನೋ ರೇಖಾ ದಿಗ್ವಿದಿಙ್ಮಧ್ಯಸಂಭವಾಃ ॥ ೫೫೬ ॥

ಬ್ರಹ್ಮಭಾಗಾಃ ಪಿಶಾಚಾಂಶಾಃ ಶಿರಾಣಾಂ ಯತ್ರ ಸಂಹತಿಃ ।
ತತ್ರ ತತ್ರ ವಿಜಾನೀಯಾದ್ವಾಸ್ತುನೋ ಮರ್ಮಸಂಧಯಃ ॥ ೫೫೭ ॥

ಮರ್ಮಾಣಿ ಸಂಧಯೋ ನೇಷ್ಟಾಃ ಸ್ವಸ್ಥೇಽಪ್ಯೇವಂ ನಿವೇಶನೇ ।
ಸೌಮ್ಯಫಾಲ್ಗುಣವೈಶಾಖಮಾಘಶ್ರಾವಣಕಾರ್ತಿಕಾಃ ॥ ೫೫೮ ॥

ಮಾಸಾಃ ಸ್ಯುರ್ಗೃಹನಿರ್ಮಾಣೇ ಪುತ್ರಾರೋಗ್ಯಧನಪ್ರದಾಃ ।
ಅಕಾರಾದಿಷು ಭಾಗೇಷು ದಿಕ್ಷು ಪ್ರಾಗಾದಿಷು ಕ್ರಮಾತ್ ॥ ೫೫೯ ॥

ಅದು ವಾಸ್ತುಪುರುಷನ ಶಿರಸ್ಥಾನಕ್ಕೆ ಯೋಗ್ಯಪ್ರದೇಶವಲ್ಲ. ಅಥವ ಗೃಹಾರಂಭಕಾರ್ಯವನ್ನು ಅಲ್ಲಿಂದ ಪ್ರಾರಂಭಿಸಕೂಡದು. ಸುತ್ತಲೂ ಬರುವ ೩೨ ಮೂವತ್ತೆರಡು ಮನೆಗಳು ಪ್ರಾಕಾರಕ್ಕೆ ಸಮಾನಾಂತರವಸ್ಥಲಗಳು ಪಿಶಾಚಾಂಶಕ್ಕೆ ಸೇರಿದುವುಗಳು. ಈ ಅಂಶದಲ್ಲಿ ಗೃಹಾರಂಭಮಾಡಿದರೆ ದುಃಖ, ಶೋಕ ಮತ್ತು ಭಯ ಇವುಗಳುಂಟಾಗುವುವು. ಉಳಿದ ಭಾಗದಲ್ಲಿ ಗೃಹಾರಂಭಮಾಡುವುದು ಪುತ್ರಪೌತ್ರಾದಿ ಅಭಿವೃದ್ಧಿಯನ್ನುಂಟುಮಾಡುವುದು. ವಾಸ್ತುರೇಖೆಯಲ್ಲಿ ಶಿರಸ್ಥಾನವು ದಿಕ್ಕು ಮತ್ತು ವಿದಿಕ್ಕುಗಳ ಮಧ್ಯೆ ಇರಬೇಕು. ಅದರಲ್ಲಿ ಬ್ರಹ್ಮಭಾಗ, ಪಿಶಾಚಭಾಗ, ಮರ್ಮಸಂಧಿಗಳು ಇವುಗಳನ್ನು ಆಯಾ ಪ್ರಕರಣಗಳಲ್ಲಿ ಹೇಳಿರುವಂತೆ ಸರಿಯಾಗಿ ತಿಳಿದು ನಿರ್ದಿಷ್ಟವಾದ ಸ್ಥಾನಗಳಿಂದ ಕಾರ್ಯಾರಂಭಮಾಡಬೇಕು. ಮರ್ಮಸ್ಥಾನಗಳಿಂದ ಕಾರ್ಯಾರಂಭಮಾಡುವುದು ಉಚಿತವಲ್ಲ. ಗೃಹಾರಂಭಕಾರ್ಯಕ್ಕೆ ಫಾಲ್ಗುಣ, ವೈಶಾಖ, ಮಾಘ, ಶ್ರಾವಣ, ಕಾರ್ತಿಕ ಈ ತಿಂಗಳುಗಳು ಶ್ರೇಷ್ಠವಾದುವುಗಳು.

೫೫೯-೫೬೪. ಮನೆಯ ಆಯಾದಿಗಳನ್ನು ಕಂಡು ಹಿಡಿಯಬೇಕಾದರೆ

ಖರೋಽಶ್ವೋಽಥ ಹರಿಃ ಶ್ವಾಖುಃ ಸರ್ಪಾಖುಗಜಶಾಶಕಾಃ ।
ದಿಗ್ವರ್ಗಾಣಾಮಿಯಂ ಯೋನಿಃ ಸ್ವವರ್ಗಾತ್ಪಂಚಮೋ ರಿಪುಃ ॥ ೫೬೦ ॥

ಸಾಧ್ಯವರ್ಗಂ ಪುರಃ ಸ್ಥಾಪ್ಯ ಪೃಷ್ಠತಃ ಸಾಧಕಂ ನ್ಯಸೇತ್ ।
ವ್ಯತ್ಯಯೇ ನಾಶನಂ ತಸ್ಯ ಋಣಮಧ್ಯಂ ಧನಾಚ್ಛುಭಂ ॥ ೫೬೧ ॥

ಆರಭ್ಯ ಸಾಧಕಂ ಧಿಷ್ಣ್ಯಂ ಸಾಧ್ಯಂ ಯಾವಚ್ಚತುರ್ಗುಣಂ ।
ವಿಭಜೇತ್ಸಪ್ತಭಿಃ ಶೇಷಂ ಸಾಧಕಸ್ಯ ಧನಂ ತದಾ ॥ ೫೬೨ ॥

ವಿಸ್ತಾರ ಆಯಾಮಗುಣೋ ಗೃಹಸ್ಯ ಪದಮುಚ್ಯತೇ ।
ತಸ್ಮಾದ್ಧನಾಧನಾಯುರ್ಕ್ಷವಾರಾಂಶಾಃ ಸಂಖ್ಯಯಾ ಕ್ರಮಾತ್ ॥ ೫೬೩ ॥

ಒಟ್ಟು ಕ್ಷೇತ್ರಫಲವನ್ನು ಒಂಭತ್ತುಕಡೆ ಇಟ್ಟು ಕ್ರಮವಾಗಿ ೯ ಒಂಭತ್ತು ೬ ಆರು, ೮ ಎಂಟು, ೩ ಮೂರು, ೮ ಎಂಟು, ೮ ಎಂಟು, ೪ ನಾಲ್ಕು, ೯ ಒಂಭತ್ತು ಈ ಅಂಕಿಗಳಿಂದ ಗುಣಿಸಿ ೮ ಎಂಟು, ೭ ಏಳು, ೯ ಒಂಭತ್ತು, ೧೨ ಹನ್ನೆರಡು ೭ ಎಂಟು, ೨೭ ಇಪ್ಪತ್ತೇಳು, ೧೫ ಹದಿನೈದು, ೨೭ ಇಪ್ಪತ್ತೇಳು, ೧೨೦ ನೂರಿಪ್ಪತ್ತು ಈ ಸಂಖ್ಯೆಗಳಿಂದ ಭಾಗಿಸಿದರೆ ಕ್ರಮವಾಗಿ ಆಯಗಳು ವಾರ, ಅಂಶ, ದ್ರವ್ಯ, ಋಣ, ತಿಥಿ, ಯೋಗ, ಆಯುಸ್ಸು ಇವುಗಳು ಲಭಿಸುವವು. ಮೇಲೆ ಹೇಳಿದಂತೆ ಆಯಗಳು ಎಂಟು. ಖರ, ಅಶ್ವ, ಸಿಂಹ, ನಾಯಿ, ಸರ್ಪ, ಇಲಿ ಗಜ, ಶಶ ಈ ಹೆಸರಿನ ಆಯಗಳು ಎಂಟು ಬರುವುವು. ಕ್ಷೇತ್ರಫಲವನ್ನು ಎಂಟರಿಂದ ಗುಣಿಸಿ ವರ್ಗತೆಗೆದು ಎಂಟರಿಂದ ಭಾಗಿಸಿದರೆ ದಿಕ್ಕು (ಯೋನಿಯೂ) ಐದರಿಂದ ಭಾಗಿಸಿದರೆ ಬರುವುದು ಶತ್ರುಸ್ಥಾನವೂ ಆಗುವುದು. ವಾಸ್ತುವಿನ ನಕ್ಷತ್ರಾದಿಗಳು ಮುಂದಾಗಿಯೂ, ಕರ್ತೃವಿನ ನಕ್ಷತ್ರಾದಿಗಳು ಹಿಂದಾಗಿಯೂ ಇರಬೇಕು. ವ್ಯತ್ಯಾಸವಾದರೆ ಗೃಹನಾಶವಾಗುವುದು. ಧನರ್ಣಸಂಖ್ಯೆಯಲ್ಲಿ ಋಣಕ್ಕಿಂತ ಧನವು ಹೆಚ್ಚಾಗಿರಬೇಕು. ಗೃಹಯಜಮಾನನ ನಕ್ಷತ್ರದಿಂದ ವಾಸ್ತು ನಕ್ಷತ್ರದವರೆಗಿರುವ ಸಂಖ್ಯೆಯನ್ನು ನಾಲ್ಕರಿಂದ ಗುಣಿಸಿ, ಏಳರಿಂದ ಭಾಗಿಸಿದರೆ ಬರುವುದೇ ಧನವೆನಿಸುವುದು. ಕ್ಷೇತ್ರಫಲವೆಂದರೆ ನಿವೇಶನದ ಉದ್ದ ಮತ್ತು ಅಗಲವನ್ನು ಗುಣಿಸುವುದರಿಂದ ಉಂಟಾಗುವ ಫಲವೆಂದರ್ಥ.

ಧನಾಧಿಕಂ ಗೃಹಂ ವೃದ್ಧ್ಯೈ ಋಣಾದಿಕಮಶೋಭನಂ ।
ವಿಷಮಾಯಃ ಶುಭಾಯೈವ ಸಮಾಯೋ ನಿರ್ಧನಾಯ ಚ ॥ ೫೬೪ ॥

ಧನಕ್ಷಯಸ್ತ್ರಿತೀಯರ್ಕ್ಷೇ ಪಂಚಮರ್ಕ್ಷೇ ಪರಃ ಕ್ಷಯಃ ।
ಆತ್ಮಕ್ಷಯಃ ಸಪ್ತಮರ್ಕ್ಷೇ ಭವತ್ಯೇವ ಹಿ ಭರ್ತೃಭಾತ್ ॥ ೫೬೫ ॥

ದ್ವಿದ್ವಾದಶೋ ನಿರ್ಧನಾಯ ತ್ರಿಕೋಣಮಸುತಾಯ ಚ ।
ಷಷ್ಠಾಷ್ಟಕಂ ಮೃತ್ಯವೇ ಸ್ಯಾಚ್ಛುಭದಾ ರಾಶಯಃ ಪರೇ ॥ ೫೬೬ ॥

ಸೂರ್ಯಾಂಗಾರಕವಾರಾಂಶಾಃ ವೈಶ್ವಾನರಭಯಪ್ರದಾಃ ।
ಇತರೇ ಗ್ರಹವಾರಾಂಶಾಃ ಸರ್ವಕಾಮಾರ್ಥಸಿದ್ಧಿದಾಃ ॥ ೫೬೭ ॥

ನಭಸ್ಯಾದಿಷು ಮಾಸೇಷು ತ್ರಿಷು ತ್ರಿಷು ಯಥಾಕ್ರಮಂ ।
ಪೂರ್ವಾದಿಕಶಿರೋ ವಾಮಪಾರ್ಶ್ವೇಶಾಯಾಪ್ರದಕ್ಷಿಣಂ ॥ ೫೬೮ ॥

---

ಆ ಕ್ಷೇತ್ರಫಲದಿಂದಲೇ ಧನ, ಋಣ ಮತ್ತು ಆಯಾದಿಗಳನ್ನು ತಿಳಿಯಬೇಕು. ಧನರ್ಣದಲ್ಲಿ ಧನವು ಅಧಿಕವಾದರೆ ಗೃಹವೃದ್ಧಿಯೂ ಋಣವು ಅಧಿಕವಾದರೆ ಗೃಹನಾಶವೂ ಉಂಟಾಗುವುದು. ಆಯಗಳಲ್ಲಿಯೂ ವಿಷಮಾಯವು ಶುಭವನ್ನೂ ಸಮಾಯವು ಅಮಂಗಲವನ್ನೂ ಕೊಡುವುದು.

೫೬೫-೫೬೭. ಯಜಮಾನನ ಜನ್ಮನಕ್ಷತ್ರಕ್ಕಿಂತ ವಾಸ್ತುನಕ್ಷತ್ರವು ಮೂರನೆಯದಾದರೆ ಧನಕ್ಷಯವೂ, ಐದನೆಯದಾದರೆ ಹೆಚ್ಚು ನಾಶವೂ, ಏಳನೆಯದಾದರೆ ಆತ್ಮಕ್ಷಯವೂ ಉಂಟಾಗುತ್ತದೆ. ರಾಶಿಗಳು ದ್ವಿದ್ವಾದಶವಾದರೆ ದಾರಿದ್ರ್ಯವೂ, ನವಮಪಂಚಮವಾದರೆ ಪುತ್ರನಾಶವೂ, ಷಷ್ಠಾಷ್ಟಕವಾದರೆ ಮೃತ್ಯುಭಯವೂ, ಉಳಿದ ರಾಶಿಗಳಾದರೆ ಶುಭವೂ ಉಂಟಾಗುವುದು. ಸೂರ್ಯ ಅಂಗಾರಕ ಇವರ ವಾರಾಂಶವಾದರೆ ಅಗ್ನಿಭಯವು ಹೆಚ್ಚುವುದು. ಉಳಿದ ವಾರಾಂಶಗಳು ಶುಭಕರಗಳಾಗಿರುವುವೆಂದು ತಿಳಿಯಬೇಕು.

೫೬೮-೫೭೦. ವಾಸ್ತುಪುರುಷನು ಭಾದ್ರಪದಾದಿಯಾಗಿ ಮೂರುಮೂರು ತಿಂಗಳು ಪೂರ್ವಾದಿಯಾದ ದಿಕ್ಕುಗಳಲ್ಲಿ ಶಿರಸ್ಸನ್ನಿಟ್ಟು ಅಪ್ರದಕ್ಷಿಣೆಯಾಗಿ ತಿರುಗುವನು. ಆದ್ದರಿಂದಲೇ ವಾಸ್ತುಪುರುಷನು ಚರರೂಪಿಯು. ಅವನ ಉದರವು

ಚರಾಖ್ಯಯೋ ವಾಸ್ತುಪುಮಾನ್ ಚರತ್ಯೇವಂ ಮಹೋದರಃ ।
ಯದ್ದಿಙ್ಮುಖೋ ವಾಸ್ತುಪುಮಾನ್ ಕುರ್ಯಾತ್ತದ್ದಿಙ್ಮುಖಂ ಗೃಹಂ ॥ ೫೬೯ ॥

ಪ್ರತಿಕೂಲಮುಖಂ ಗೇಹಂ ರೋಗಶೋಕಭಯಪ್ರದಂ ।
ಸಬಲೋ ಮುಖಗೇಹಾನಾಮೇಷ ದೋಷೋ ನ ವಿದ್ಯತೇ ॥ ೫೭೦ ॥

ವೃತ್ಯೇಟಿಕಾಂ ಸ್ವರ್ಣರೇಣುಧಾನ್ಯಶೈವಲಸಂಯುತಂ ।
ಗೃಹಮಧ್ಯೇ ಹಸ್ತಮಾತ್ರೇ ಗರ್ತೇ ನ್ಯಾಸಾಯ ವಿನ್ಯಸೇತ್ ॥ ೫೭೧ ॥

ವಸ್ತ್ರಾಯಾನುದಲಂ ನಾಭಿಸ್ತಸ್ಮಾದಧ್ಯಂಗುಲತ್ರಯಂ ।
ಕುಕ್ಷಿಸ್ತಸ್ಮಿನ್ಸ್ಥೇಚ್ಛಂಕುಂ ಪುತ್ರಪೌತ್ರವಿವರ್ಧನಂ ॥ ೫೭೨ ॥

ಚತುರ್ವಿಂಶತ್ಯಯೋವಿಂಶಚ್ಛೋಡಶದ್ವಾದಶಾಂಗುಲೈಃ ।
ವಿಪ್ರಾದೀನಾಂ ಕುಕ್ಷಿಮಾನಂ ಸ್ವರ್ಣವಸ್ತ್ರಾದ್ಯಲಂಕೃತಂ ॥ ೫೭೩ ॥

ಬಹುದೊಡ್ಡದು. ಅವನ ಮುಖವು ಯಾವ ಕಡೆಯಲ್ಲಿರುತ್ತದೋ ಅದೇ ಮುಖವಾಗಿಯೇ ಗೃಹವಿರಬೇಕು. ತದ್ವಿರುದ್ಧವಾದ ಮುಖವುಳ್ಳ ಮನೆಗೆ ರೋಗಶೋಕಾದಿಗಳ ಭಯವು ಹೆಚ್ಚಾಗಿರುವುದು. ಅದೇ ಮುಖವುಳ್ಳ ಗೃಹಕ್ಕೆ ಯಾವ ಭಯವೂ ಇರುವುದಿಲ್ಲ.

೫೭೧ ೫೭೫. ಮನೆಯನ್ನು ಕಟ್ಟಲು ಮೊದಲು ಮುಂಡಾದ ಇಟ್ಟಿಗೆಯನ್ನೂ, ಸುವರ್ಣರೇಣು, ಧಾನ್ಯ, ಶೈವಲ, (ಪಾಚೀ) ಇವನ್ನೂ ಗೃಹಮಧ್ಯವಲ್ಲಿ ಒಂದು ಹಳ್ಳವನ್ನು ತೋಡಿ ಅಲ್ಲಿ ಇರಿಸಬೇಕು. ಶಂಕುಪ್ರಮಾಣದ ಅರ್ಧಭಾಗವನ್ನು ನಾಭಿಪ್ರದೇಶವೆಂದೂ, ಅದರಮೇಲಿನ ಅಂಗುಲತ್ರಯವನ್ನು ಕುಕ್ಷಿಯೆಂದೂ ಭಾವಿಸಿ ಅದನ್ನು ಅಲ್ಲಿ ಸ್ಥಾಪಿಸಬೇಕು. ಈ ಶಂಕುಸ್ಥಾಪನೆಯಿಂದ ಮನೆಯಲ್ಲಿ ಪುತ್ರಪೌತ್ರಾದಿಗಳು ಅಭಿವೃದ್ಧಿಯನ್ನು ಹೊಂದುವರು. ೨೪ ಇಪ್ಪತ್ತನಾಲ್ಕು, ೨೫ ಇಪ್ಪತ್ತೈದು, ೧೬ ಹದಿನಾರು, ೧೨ ಹನ್ನೆರಡು ಅಂಗುಲಗಳು ಕ್ರಮವಾಗಿ ಬ್ರಾಹ್ಮಣಾದಿ ನಾಲ್ಕುಜಾತಿಗಳಿಗೂ ಕುಕ್ಷಿಪ್ರಮಾಣವಾಗಿ ಎಣಿಸಲ್ಪಟ್ಟಿವೆ. ಈ ಶಂಕುವನ್ನು ಸುವರ್ಣ, ವಸ್ತ್ರ ಮುಂತಾದುವುಗಳಿಂದ ಲಂಕರಿಸಿ ಪೂಜಿಸಬೇಕು. ಕಗ್ಗಲಿ, ಅರ್ಜುನ, ಸಾಲ, ಅಥವ ನೊಗಗಳನ್ನು

ಖಾದಿರಾರ್ಜುನಶಾಲೋತ್ಥಂ ಯುಗಯಂತ್ರಂ ತರೂದ್ಭವಂ ।
ರಕ್ತಚಂದನಪಾಲಾಶ ರಕ್ತಶಾಲವಿಶಾಲಜಂ ॥ ೫೭೪ ॥

ಶಂಕುಂ ತ್ರಿಧಾ ವಿಭಜ್ಯಾದ್ಯಂ ಚತುರಸ್ರಂ ತತಃ ಪರಂ ।
ಅಷ್ಟಾಸ್ರಂ ಚ ತೃತೀಯಾಸೌ ಮನ್ವಸ್ತಂ ಮೃದುಮವ್ರಣಂ ॥ ೫೭೫ ॥

ಏವಂ ಲಕ್ಷಣಸಂಯುಕ್ತಂ ಪರಿಕಲ್ಪ್ಯ ಶುಭೇ ದಿನೇ ।
ಷಡ್ವರ್ಗಶುದ್ಧಿಸೂತ್ರೇಣ ಸೂತ್ರಿತೇ ಧರಣೀತಲೇ ॥ ೫೭೬ ॥

ಮೃದುಧ್ರುವಕ್ಷಿಪ್ರಭೇಷು ರಿಕ್ತಾಮಾವರ್ಜಿತೇ ದಿನೇ ।
ವ್ಯರ್ಕಾರಚರಲಗ್ನೇಷು ಪಾಪೇ ಚಾಷ್ಟಮವರ್ಜಿತೇ ॥ ೫೭೭ ॥

ನೈಧನೇ ಶುದ್ಧಿಸಂಯುಕ್ತೇ ಶುಭಲಗ್ನೇ ಶುಭಾಂಶಕೇ ।
ಶುಭೇಕ್ಷಿತೇಽಥವಾ ಯುಕ್ತೇ ಲಗ್ನೇ ಶಂಕುಂ ವಿನಿಕ್ಷಿಪೇತ್ ॥ ೫೭೮ ॥

ಮಾಡುವ ವೃಕ್ಷವಿಶೇಷಗಳು ಇವುಗಳಲ್ಲಿ ಯಾವುದಾದರೂ ಒಂದರಿಂದ ಶಂಕುವನ್ನು ನಿರ್ಮಿಸಬೇಕು. ಆ ಶಂಕುವನ್ನು ಮೂರುಭಾಗವಾಗಿ ಗುರ್ತುಮಾಡಿಕೊಂಡು ಮೊದಲನೆಯ ಭಾಗವನ್ನು ಚೌಕವಾಗಿಯೂ, ಎರಡನೆಯ ಭಾಗವನ್ನು ಎಂಟು ಮೂಲೆಗಳುಳ್ಳದನ್ನಾಗಿಯೂ ಮೂರನೆಯದನ್ನು ಹದಿನಾಲ್ಕು ಮೂಲೆಗಳುಳ್ಳದನ್ನಾಗಿಯೂ ಮಾಡಬೇಕು. ಅವು ಮೃದುವಾಗಿಯೂ ಮತ್ತು ರಂಧ್ರವಿಲ್ಲದ್ದಾಗಿಯೂ ಇರಬೇಕು.

೫೭೬-೫೭೮. ಹೀಗೆ ಎಲ್ಲಾ ಲಕ್ಷಣಗಳಿಂದಲೂ ಶುದ್ಧವಾಗಿರುವ ಶಂಕುವನ್ನು ಷಡ್ವರ್ಗಶುದ್ಧಿಯಿರುವ ಶುಭದಿನದಲ್ಲಿ ಭೂಸ್ಥಾಪನೆ ಮಾಡಬೇಕು. ಮೃದು, ಕ್ಷಿಪ್ರ ಮತ್ತು ಧ್ರುವನಕ್ಷತ್ರಗಳಿರುವ ದಿನದಲ್ಲಿಯೂ, ರಿಕ್ತ ಮತ್ತು ಅಮಾತಿಥಿಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿಯೂ, ಸೂರ್ಯ, ಕುಜ ಇವರ ರಾಶಿಗಳನ್ನೂ ಚರಲಗ್ನಗಳನ್ನೂ ಬಿಟ್ಟು ಉಳಿದ ರಾಶಿ ಮತ್ತು ಲಗ್ನಗಳಲ್ಲಿಯೂ ಲಗ್ನಾಷ್ಟಮವು ಪಾಪಗ್ರಹಾಕ್ರಾಂತವಾಗದೇ ಶುದ್ಧಿಯಿಂದಿರುವಾಗ ಶುಭಲಗ್ನ ಮತ್ತು ಶುಭಾಂಶದಲ್ಲಿ ಶುಭಗ್ರಹನಿರೀಕ್ಷಿತವಾದ ಮುಹೂರ್ತದಲ್ಲಿ ಈ ಶಂಕು ಸ್ಥಾಪನೆಯನ್ನು ಮಾಡಬೇಕು.

ಪುಣ್ಯಾಹಘೋಷೈರ್ವಾದಿತ್ರೈಃ ಪುಣ್ಯಪುಣ್ಯಾಂಗನಾದಿಭಿಃ ।
ಸ್ವಸ್ತಿಕೇಂದ್ರತ್ರಿಕೋಣಸ್ಥೈಃ ಶುಭೈಸ್ತ್ರ್ಯಾಯಾರಿಗೈಃ ಪರೈಃ ॥ ೫೭೯ ॥

ಲಗ್ನಾಂಶಾಷ್ಟಾರಿಚಂದ್ರೇಣ ದೈವಜ್ಞಾರ್ಚನಪೂರ್ವಕಂ ।
ಏಕದ್ವಿತ್ರಿಚತುಃ ಶಾಲಾಃ ಸಪ್ತಶಾಲಾಃ ದಶಾಹ್ವಯಾಃ ॥ ೫೮೦ ॥

ತಾಃ ಪುನಃ ಷಡ್ವಿಧಾಃ ಶಾಲಾಃ ಪ್ರತ್ಯೇಕಂ ದಶಷಡ್ವಿಧಾಃ ।
ಧ್ರುವಂ ಧಾನ್ಯಂ ಜಯಂ ನಂದಂ ಖರಂ ಕಾಂತಂ ಮನೋರಮಂ ॥ ೫೮೧ ॥

ಸುಮುಖಂ ದುರ್ಮುಖಂ ಕ್ರೂರಂ ಶತ್ರುಂ ಸ್ವರ್ಣಪ್ರದಂ ಕ್ಷಯಂ ।
ಆಕ್ರಂದಂ ವಿಪುಲಾಖ್ಯಂ ಚ ವಿಜಯಂ ಷೋಡಶಂ ಗೃಹಂ ॥ ೫೮೨ ॥

ಗೃಹಾಣಿ ಗಣಯೇದೇವಂ ತೇಷಾಂ ಪ್ರಸ್ತಾರಸಿದ್ಧಿತಃ ।
ಗುರೋರಧೋ ಲಘುಃ ಸ್ಥಾಪ್ಯಃ ಪುರಸ್ತಾದೂರ್ಧ್ವವನ್ನ್ಯಸೇತ್ ॥ ೫೮೩ ॥

೫೭೯–೫೮೩. ಶಂಕುಸ್ಥಾಪನೆಯನ್ನು ಮಾಡುವುದಕ್ಕೆ ಮೊದಲು ಮಂಗಳವಾದ್ಯಪುರಸ್ಸರವಾಗಿ ವೃದ್ಧ ಸುಮಂಗಲಿಯರೊಡನೆಯೂ ಬ್ರಾಹ್ಮಣರೊಡನೆಯೂ ಪುಣ್ಯಾಹವಾಚನವನ್ನು ನೆರವೇರಿಸಬೇಕು. ಶಂಕುಸ್ಥಾಪನಲಗ್ನದ ಒಂದು, ನಾಲ್ಕು, ಏಳು, ಹತ್ತು, ಐದು, ಮತ್ತು ಒಂಭತ್ತು ಈ ಸ್ಥಾನಗಳಲ್ಲಿ ಶುಭಗ್ರಹಗಳೂ, ಮೂರು, ಆರು, ಮತ್ತು ಹನ್ನೊಂದರಲ್ಲಿ ಪಾಪಗ್ರಹಗಳೂ ಇರಬೇಕು. ಲಗ್ನಾಂಶದಲ್ಲಾಗಲೀ ಅಷ್ಟಮ ಅಥವ ಷಷ್ಠದಲ್ಲಾಗಲೀ ಚಂದ್ರನಿರಬಾರದು. ಇಂತಹ ಶುಭವೇಳೆಯಲ್ಲಿ ದೈವಜ್ಞನನ್ನು ಪೂಜಿಸುವುದರ ಮೂಲಕ ಆತನ ಅನುಗ್ರಹವನ್ನು ಪಡೆದು ಶಂಕುಸ್ಥಾಪನೆಯನ್ನು ಮಾಡಬೇಕು. ಮನೆಗಳಲ್ಲಿ ಒಂದು, ಎರಡು, ಮೂರು, ನಾಲ್ಕು, ಐದು ಚೌಕಗಳುಳ್ಳಹಾಗೆಯೇ ಏಳು ಹತ್ತು ಹೀಗೆ ಶಾಲೆಗಳಿಂದ ಕೂಡಿದ ಹದಿನಾರುವಿಧದ ಮನೆಗಳಿವೆ. ಅವುಗಳಿಗೆ ಕ್ರಮವಾಗಿ ಧ್ರುವ, ಧಾನ್ಯ, ಜಯ, ನಂದ, ಖರ, ಕಾಂತ, ಮನೋರಮ ನೀಲಮುಖ, ದುರ್ಮುಖ, ಕ್ರೂರ, ಶತ್ರು, ಸ್ವರ್ಣಪ್ರದ, ಕ್ಷಯ, ಆಕ್ರಂದ, ವಿಪುಲ, ವಿಜಯ ಎಂಬ ಹದಿನಾರು ಹೆಸರುಗಳಿವೆ. ಇವುಗಳಿಗೆಲ್ಲಾ ಆಯಾಮದಲ್ಲಿ ಪರಸ್ಪರ ಭೇದವಿವೆ. ವಿಶಾಲವಾದ ಪದವನ್ನು ಪೂರ್ತಿಮಾಡುವ ಮೊದಲು

ಗುರುಭಿಃ ಪೂರಯೇತ್ಪಶ್ಚಾತ್ಸರ್ವಲಘ್ವಾವಧೀರ್ವಿಧಿಃ ।
ಕುರ್ಯಾಲ್ಲಘುಪದೇಽಲಿಂದಂ ಗೃಹದ್ವಾರಾತ್ಪ್ರದಕ್ಷಿಣಂ ॥ ೫೮೪ ॥

ಪೂರ್ವಾದಿಗೇಷ್ವಲಿಂದೇಷು ಗೃಹಭೇದಾಸ್ತು ಷೋಡಶ ।
ಸ್ನಾನಾಗಾರಂ ದಿಶಿ ಪ್ರಾಚ್ಯಾಮಾಗ್ನೇಯ್ಯಾಂ ಪಾಕಮಂದಿರಂ ॥ ೫೮೫ ॥

ಯಾಮ್ಯಾಂ ಚ ಶಯನಾಗಾರಂ ನೈರ್ಋತ್ಯಾಂ ಶಾಸ್ತ್ರಮಂದಿರಂ ।
ಪ್ರತೀಚ್ಯಾಂ ಭೋಜನಗೃಹಂ ವಾಯವ್ಯಾಂ ಧಾನ್ಯಮಂದಿರಂ ॥ ೫೮೬ ॥

ಕೌಬೇರ್ಯಾಂ ದೇವತಾಗಾರಮೀಶಾನ್ಯಾಂ ಕ್ಷೀರಮಂದಿರಂ ।
ಶಯ್ಯಾಮೂತ್ರಾಸ್ತ್ರತದ್ವಿಚ್ಚ ಭೋಜನಂ ಮಂಗಲಾಶ್ರಯಂ ॥ ೫೮೭ ॥

ಧಾನ್ಯಸ್ತ್ರೀಭೋಗವಿತ್ತಂ ಚ ಶೃಂಗಾರಾಯತನಾನಿ ಚ ।
ಈಶಾನ್ಯಾದಿಕ್ರಮಸ್ತೇಷಾಂ ಗೃಹನಿರ್ಮಾಣಕಂ ಶುಭಂ ॥ ೫೮೮ ॥

ಲಘುಪದಗಳನ್ನು ಅಂದರೆ ಸಣ್ಣಭಾಗಗಳನ್ನು ರಚನೆಯಲ್ಲಿ ಮುಗಿಸಬೇಕು. ಲಘುಕಾರ್ಯಗಳೆಲ್ಲಾ ಮುಗಿದಮೇಲೆ ಗುರುಕಾರ್ಯವನ್ನು ಆರಂಭಿಸಬೇಕು. ಲಘು ಪದದಲ್ಲಿಯೇ ಮನೆಯ ಹೊರಸುತ್ತಿನಲ್ಲಿ ಜಗಲಿಯನ್ನು ನಿರ್ಮಿಸಬೇಕು. ಆ ಜಗಲಿಯು ಪೂರ್ವಾದಿಯಾಗಿ ಪ್ರದಕ್ಷಿಣಾಕಾರವಲ್ಲಿ ಬರಬೇಕು.

೫೮೫-೫೮೮. ಈ ಷೋಡಶವಿಧವಾದ ಗೃಹಗಳಲ್ಲಿಯೂ, ಪೂರ್ವದಿಕ್ಕಿನಲ್ಲಿ ಸ್ನಾನದಮನೆ, ಆಗ್ನೇಯದಲ್ಲಿ ಅಡಿಗೆಯಮನೆ, ದಕ್ಷಿಣಭಾಗದಲ್ಲಿ ಶಯನ ಗೃಹ, ನೈಋತ್ಯದಲ್ಲಿ ಶಾಸ್ತ್ರಗೃಹ, ಪಶ್ಚಿಮದಲ್ಲಿ ಭೋಜನಗೃಹ, ವಾಯುವ್ಯದಲ್ಲಿ ಧಾನ್ಯಗೃಹ, ಉತ್ತರದಲ್ಲಿ ದೇವರಮನೆ, ಈಶಾನ್ಯದಲ್ಲಿ ಕ್ಷೀರಗೃಹ ಈರೀತಿಯಾಗಿ ಗೃಹಭಾಗಗಳಿಗೆ ದಿಗ್ವ್ಯವಸ್ಥೆಯಿರಬೇಕು. ಶಯ್ಯಾಗೃಹಕ್ಕೆ ಸಂಬಂದಿಸಿದಂತೆ ವಸ್ತ್ರಾಗಾರ, ಮಲಮೂತ್ರಾದಿಗಳ ಮನೆ ಇವುಗಳಿರಬೇಕು. ಊಟದಮನೆಗೆ ಸಂಬಂಧಿಸಿದಂತೆ ಆಭರಣಗೃಹವಿರಬೇಕು. ಧಾನ್ಯಗೃಹಕ್ಕೆ ಹತ್ತಿರದಲ್ಲಿ ಅಂತಃಪುರ, ಶೃಂಗಾರಗೃಹ ಇವುಗಳಿರಬೇಕು. ಒಟ್ಟಿನಲ್ಲಿ ಗೃಹನಿರ್ಮಾಣವು ಈಶಾನ್ಯಾದಿಯಾಗಿ ಆರಂಭವಾಗುವುದು ಕ್ಷೇಮಕರವೆಂದು ತಿಳಿಯಬೇಕು. ಇಂತಹ ಗೃಹದಲ್ಲಿ ಎಲ್ಲಿಬೇಕಾದರೂ ಶಸ್ತ್ರವನ್ನೂ ಮತ್ತು ನಿಧಿಯನ್ನೂ ಇಟ್ಟು ಕೊಳ್ಳಬಹುದು.

ಏತೇಷ್ವೇತಾನಿ ಶಸ್ತ್ರಾಣಿ ಸಂಸ್ಥಾಪ್ಯಾನಿ ಸ್ವದಿಕ್ಷ್ವಪಿ ।
ಧ್ವಜೋ ಧೂಮ್ರೋಽಥ ಸಿಂಹಃ ಶ್ವಾ ಸೌರಮೇಯಃ ಖರೋ ಗಜಃ ॥೫೮೯॥

ಧ್ವಾಂಕ್ಷಶ್ಚೈವ ಭವಂತ್ಯಷ್ಟೌ ಕ್ರಮಾತ್ಪೂರ್ವಾಧಿಪಾ ಅಮೀ ।
ಪ್ಲಕ್ಷೋದುಂಬರಚೂತಾಖ್ಯಾ ನಿಂಬಸ್ನುಹಿ ವಿಭೀತಕಾಃ ॥ ೫೯೦ ॥

ಯೇ ಕಂಟಕಾ ದುಗ್ಧವೃಕ್ಷಾ ವೃಕ್ಷಾಶ್ವತ್ಥಕಪಿತ್ಥಕಾಃ ।
ಅಗಸ್ತಿಸಿಂಧುವಾಲಾಖ್ಯತಿಂತಿಡೀಕಾಶ್ಚ ನಿಂದಿತಾಃ ॥ ೫೯೧ ॥

ಪಿತ್ತವಾಗ್ರ್ಯಜದೇಹಃ ಸ್ಯಾತ್ಪಶ್ಚಿಮೇ ದಕ್ಷಿಣೇ ತಯಾ ।
ಗೃಹಪಾದಾ ಗೃಹಸ್ತಂಭಾಃ ಸಮಾಃ ಶಸ್ತಾಶ್ಚ ನಾಸಮಾಃ ॥ ೫೯೨ ॥

ನಾತ್ಯುಚ್ಛ್ರಿತಂ ನಾತಿನೀಚಂ ಕುಡ್ಯೋತ್ಸೇಧಂ ಯಥಾರುಚಿ ।
ಗೃಹೋಪರಿ ಗೃಹಾದೀನಾಮೇವಂ ಸರ್ವತ್ರ ಚಿಂತಯೇತ್ ॥ ೫೯೩ ॥

೫೮೯-೫೯೧. ಹಿಂದೆ ಹೇಳಿದ ಎಂಟು ವಿಧದ ಆಯಗಳಿಗೆ ಕ್ರಮವಾಗಿ ಧ್ವಜ, ಧೂಮ್ರ, ಸಿಂಹ, ಶ್ವಾ, ಸಾರಮೇಯ, ಖರ, ಗಜ, ಧ್ವಾಂಕ್ಷ ಎಂಬ ಪ್ರತ್ಯೇಕ ಸಂಕೇತಗಳಿಗೆ. ಇವು ಒಂದು ಪ್ರದೇಶದಲ್ಲಿ ಪೂರ್ವಾದಿಯಾದ ಆಯಗಳಿಗೆ ಸಲ್ಲುತ್ತವೆ. ಮನೆಯನ್ನು ಕಟ್ಟುವುದಕ್ಕೆ ಬಸರಿ, ಅತ್ತಿ, ಮಾವು, ಬೇವು, ವಿಭೀತಕ, ಮುಳ್ಳುಮರಗಳು, ಹಾಲು ಬರುವ ಮರಗಳು, ಅರಳಿ, ಬೇಲ ಅಗಸ್ತಿವೃಕ್ಷ, ಸಿಂಧುವಾಲ, ತಿಂತೀಡೀಕ ಈ ಮರಗಳನ್ನು ಬಳಸಬಾರದು. ಇವು ಗಳನ್ನು ಉಪಯೋಗಿಸುವುದರಿಂದ ಯಜಮಾನನು ಪಿತ್ತರೋಗಿಯಾಗುವನು.

೫೯೨-೫೯೩. ಮನೆಯ ಪಶ್ಚಿಮ ಮತ್ತು ದಕ್ಷಿಭಾಗದಲ್ಲಿ ಗೃಹಪಾದ ಗಳೂ, ಗೃಹಸ್ತಂಭಗಳೂ ಒಂದೇ ಸಮನಾದ ಆಕಾರದಲ್ಲಿರಬೇಕು. ಗೋಡೆಯ ಅಳತೆಗೆ ಮೀರಗದಂತೆಯೂ, ಕಮ್ಮಿಯಾಗದಂತೆಯೂ ಅವುಗಳು ರಚಿಸಲ್ಪಟ್ಟಿರ ಬೇಕು. ಈರೀತಿಯಾದ ಲಕ್ಷಣಗಳಿಂದ ಕೂಡಿದ ಗೃಹನಿರ್ಮಾಣವನ್ನು ಮಾಡುವುದು ಶ್ರೇಯಸ್ಕರವಾದುದೆಂದು ತಿಳಿಯಬೇಕು.

ಗೃಹಾದೀನಾಂ ಗೃಹಸ್ರಾವಂ ಕ್ರಮಶೋಽಷ್ಟವಿಧಂ ಸ್ಮೃತಂ ।
ಪಾಂಚಾಲಮಾನಂ ವೈದೇಹಂ ಕೌರವಂ ಚ ಕುಜನ್ಯಕಂ ॥ ೫೯೪ ॥

ಮಾಗಧಂ ಶೂರಸೇನಂ ಚ ಗಾಂಧಾರಾವಂತಿಕಾ ಸ್ಮೃತಂ ।
ಸಚತುರ್ಭಾಗವಿಸ್ತಾರಮುತ್ಸೇಧಂ ಯತ್ರದುಚ್ಯತೇ ॥ ೫೯೫ ॥

ಪಾಂಚಾಲಮಾತುಲಾನಾಂ ಚ ಹ್ಯುತ್ತರೋತ್ತರವೃದ್ಧಿತಃ ।
ವೈದೇಹಾದೀನ್ಯಶೇಷಾಣಿ ಮಾನಾನಿ ಸ್ಯುರ್ಯಥಾಕ್ರಮಂ ॥ ೫೯೬ ॥

ಪಾಂಚಾಲಮಾನಂ ಸರ್ವೇಷಾಂ ಸಾಧಾರಣಮತಃ ಪರಂ ।
ಅವಂತಿಮಾನಂ ವಿಪ್ರಾಣಾಂ ಗಾಂಧಾರಂ ಕ್ಷತ್ರಿಯಸ್ಯ ಚ ॥ ೫೯೭ ॥

ಕೌಜನ್ಯಮಾನಂ ವೈಶ್ಯಾನಾಂ ವಿಪ್ರಾ ದೀನಾಂ ಯಥೋತ್ತರಂ ।
ಯಥೋದಿತಂ ಜಲಸ್ರಾವ್ಯಂ ದ್ವಿತ್ರಿಭೂಮಿಕವೇಶ್ಮನಾಂ ॥ ೫೯೮ ॥

೫೯೪-೫೯೮. ಈ ಮನೆಯ ಆಯ, ಪ್ರಮಾಣಗಳು ಪ್ರಮಾರು ಎಂಟು ವಿಧಗಳಾಗಿವೆ. ಪಾಂಚಾಲಮಾನ, ವೈದೇಹಮಾನ, ಕೌರವಮಾನ, ಕುಜನ್ಯಮಾನ, ಮಾಗಧಮಾನ, ಶೂರಸೇನಮಾನ, ಗಾಂಧಾರಮಾನ, ಅವಂತೀಮಾನಗಳೆಂದು ಆಯಗಳು ಎಂಟು ವಿಧಗಳಾಗಿರುವುವು. ಅದರಲ್ಲಿ ಪಾಂಚಾಲಮಾನವೇ ಸ್ಥಾಯಿಯಾದುದು. ಅದಕ್ಕಿಂತ ಉಳಿದ ಎಲ್ಲಾ ಮಾನಗಳಲ್ಲಿಯೂ ನಾಲ್ಕನೆಯ ಒಂದು ಭಾಗವು ವಿಸ್ತಾರ ಮತ್ತು ಔನ್ನತ್ಯ ಇವುಗಳಲ್ಲಿ ಅಧಿಕವಾಗಿಯೇ ಇರುವುದು. ಪಾಂಚಾಲಮಾನಕ್ಕಿಂತ ವೈದೇಹಾದಿಯಾದ ಇನ್ನು ಏಳು ಮಾನಗಳೂ ಉತ್ತರೋತ್ತರವೃದ್ಧಿಯಾಗಿರತಕ್ಕವುಗಳು. ಅದರಲ್ಲಿ ಪಾಂಚಾಲಮಾನವೇ ಸರ್ವಸಾಧಾರಣವಾಗಿರತಕ್ಕದ್ದು. ಅವಂತಿಮಾನವು ಬ್ರಾಹ್ಮಣರಿಗೂ ಗಾಂಧಾರಮಾನವು ಕ್ಷತ್ರಿಯರಿಗೂ, ಕೌಜನ್ಯಮಾನವು ವೈಶ್ಯರಿಗೂ ಉಕ್ತವಾಗಿದೆ- ಹಾಗೆಯೇ ಜಲಸ್ರಾವಿಯಾದ ಬಾವಿಯೇ ಮೊದಲಾದವುಗಳು ಬ್ರಾಹ್ಮಣಾದಿ ಜಾತಿಗಳಿಗೆ ಉತ್ತರೋತ್ತರ ವೃದ್ಧಿಯಾಗಿರಬೇಕು.

ಉಷ್ಟ್ರಕುಂಜರಶಾಲಾನಾಂ ಧ್ವಜಾಯೇಷ್ವಥವಾ ಗಜೇ ।
ಪಶುಶಾಲಾಶ್ಚ ಶಾಲಾನಾಂ ಧ್ವಜಾಯೇಷ್ವಥವಾ ಗಜೇ ॥ ೫೯೯ ॥

ದ್ವಾರಶಯ್ಯಾಶನಾಮತ್ರಧ್ವಜಾಃ ಸಿಂಹವೃಷಧ್ವಜಾಃ ।
ವಾಸ್ತುಪೂಜಾವಿಧಿಂ ವಕ್ಷ್ಯೇ ನವವೇಶ್ಮಪ್ರವೇಶನೇ ॥ ೬೦೦ ॥

ಹಸ್ತಮಾತ್ರಾ ಲಿಖೇದ್ರೇಖಾ ದಶಪೂರ್ವಾ ದಶೋತ್ತರಾಃ ।
ಗೃಹಮಧ್ಯೇ ತಂಡುಲೋಪರ್ಯೇಕಾಶೀತಿಪದಂ ಭವೇತ್ ॥ ೬೦೧ ॥

ಪಂಚೋತ್ತರಾನ್ನಕ್ಷ್ಯಮಾಣಾಂಶ್ಚತ್ವಾರಿಂಶತ್ಸುರಾನ್ಲಿಖೇತ್ ।
ದ್ವಾತ್ರಿಂಶದ್ಬಾಹ್ಯತಃ ಪೂಜ್ಯಾಸ್ತತ್ರಾಂತಸ್ಥಾಃ ತ್ರಯೋದಶ ॥ ೬೦೨ ॥

ತೇಷಾಂ ಸ್ಥಾನಾನಿ ನಾಮಾನಿ ವಕ್ಷ್ಯಾಮಿ ಕ್ರಮಶೋಽಧುನಾ ।
ಈಶಾನಕೋಣತೋ ಬಾಹ್ಯೇ ದ್ವಾತ್ರಿಂಶತ್ತ್ರಿದಶಾ ಅಮೀ ॥ ೬೦೩ ॥

೫೯೯-೬೦೦. ಒಂಟೆ, ಆನೆ, ಪಶು ಇವುಗಳ ಮನೆಯನ್ನು ಧ್ವಜಾಯ ಅಥವ ಗಜಾಯದಲ್ಲಿ ನಿರ್ಮಿಸಬೇಕು. ದ್ವಾರ, ಶಯ್ಯಾಗೃಹ, ಆಸನಗೃಹ ಇವುಗಳನ್ನು ಸಿಂಹ, ವೃಷ, ಧ್ವಜ ಈ ಆಯುಗಳಲ್ಲಿ ನಿರ್ಮಾಣಮಾಡಬಹುದು. ಇನ್ನುಮುಂದೆ ಹೊಸಮನೆಯನ್ನು ಕಟ್ಟಿದನಂತರ ಅಲ್ಲಿ ಮಾಡುವ ವಾಸ್ತು ಪೂಜಾವಿಧಿಯನ್ನು ತಿಳಿಸುವೆನು.

೬೦೧-೬೧೪. ಹೊಸಮನೆಯ ಮಧ್ಯಭಾಗದಲ್ಲಿ ಅಕ್ಕಿಯರಾಶಿಯಮೇಲೆ ಪೂರ್ವಾಪರವಾಗಿ ಹತ್ತು ರೇಖೆಗಳನ್ನೂ, ದಕ್ಷಿಣೋತ್ತರವಾಗಿ ಹತ್ತುರೇಖೆ ಗಳನ್ನೂ ಹಾಕಿ (೮೧) ಎಂಭತ್ತೊಂದು ಮನೆಗಳನ್ನು ಮಂಡಲಮಾಡಿಕೊಳ್ಳ ಬೇಕು. ಅದರಲ್ಲಿ ಮುಂದೆ ಹೇಳುವ (೪೫) ನಲವತ್ತೈದು ಜನ ದೇವತೆ ಗಳನ್ನೂ ಆವಾಹನೆಮಾಡಬೇಕು. ಹೊರಭಾಗದಲ್ಲಿ ೩೨ ಮೂವತ್ತೆರಡು ದೇವತೆಗಳಿಗೂ ಒಳಭಾಗದಲ್ಲಿ ೧೩ ಹದಿಮೂರು ದೇವತೆಗಳಿಗೂ ಸ್ಥಾನ ವಿರಬೇಕು. ಇವುಗಳ ಸ್ಥಾನ ಮತ್ತು ಹೆಸರು ಈರೀತಿಯಾಗಿರುವುದು. ಹೊರಭಾಗದಲ್ಲಿ ಈಶಾನ್ಯದಿಂದ ಹಿಡಿದು ೩೨ ಮೂವತ್ತೆರಡು ದೇವತೆಗಳನ್ನೂ ಆವಾಹಿಸಬೇಕು. ಆ ದೇವತೆಗಳ ಹೆಸರು ಈರೀತಿಯಿರಬೇಕು. ಕೃಪೀಟ

ಕೃಪೀಟಯೋನಿಃ ಪರ್ಜನ್ಯೋ ಜಯಂತಃ ಪಾಕಶಾಸನಃ ।
ಸೂರ್ಯಃ ಶಶೀ ಮೃಗಾಕಾಶೌ ವಾಯುಃ ಪೂಷಾ ಚ ನೈರ್ಋತಿಃ ॥ ೬೦೪ ॥

ಗೃಹಾಕ್ಷತೋ ದಂಡಧರೋ ಗಾಂಧರ್ವೋ ಭೃಗುರಾಜಕಃ ।
ಮೃಗಃ ಪಿತೃಗಣಾಧೀಶಸ್ತತೋ ದೌವಾರಿಕಾಹ್ವಯಃ ॥ ೬೦೫ ॥

ಸೋಮಃ ಸೂರ್ಯೋಽದಿತಿದಿತೀ ದ್ವಾತ್ರಿಂಶತ್ತ್ರಿದಶಾ ಅಮೀ ।
ಅಥೇಶಾನಾದಿಕೋಣಸ್ಥಾಶ್ಚತ್ವಾರಸ್ತತ್ಸಮೀಪಗಾಃ ॥ ೬೦೬ ॥

ಆಪಃ ಸಾವಿತ್ರಸಂಜ್ಞಶ್ಚ ಜಯೋರುದ್ರಃ ಕ್ರಮಾದಮೀ ।
ವಿಕಾಂತರಾಃ ಸ್ಯುಃ ಪ್ರಾಗಾದ್ಯಾಃ ಪರಿತೋ ಬ್ರಹ್ಮಣಃ ಸ್ಮೃತಾಃ ॥ ೬೦೭ ॥

ಅರ್ಯಮಾ ಸವಿತಾ ಬಿಂಬವಿವಸ್ವಾನ್ವಸುಧಾಧಿಪಃ ।
ಮಿತ್ರೋಽಥ ರಾಜಯಕ್ಷ್ಮಾ ಚ ತಥಾ ಪೃಥ್ವೀಧರಾಹ್ವಯಃ ॥ ೬೦೮ ॥

ಆಪವತ್ಸೋಽಷ್ಟಮಃ ಪಂಚಚತ್ವಾರಿಂಶತ್ಸುರಾ ಅಮೀ ।
ಆಪಶ್ಚೈವಾಪವತ್ಸಶ್ಚ ಪರ್ಜನ್ಯೋಽಗ್ನಿರ್ದಿತಿಃ ಕ್ರಮಾತ್ ॥ ೬೦೯ ॥

ಯೋನಿ, ಪರ್ಜನ್ಯ, ಜಯಂತ, ಪಾಕಶಾಸನ, ಸೂರ್ಯ, ಚಂದ್ರ, ಮೃಗ ಆಕಾಶ, ವಾಯು, ಪೂಷಾ, ನೈರ್ಋತಿ, ಗೃಹಾಕ್ಷತ, ದಂಡಧರ, ಗಂಧರ್ವ, ಭೃಗು ರಾಜಕ, ಮೃಗ, ಪಿತೃಗಣಾಧೀಶ, ದೌವಾರಿಕ, ಸೋಮ, ಸೂರ್ಯ, ಅದಿತಿ ದಿತಿ ಹೀಗೆ ಮೂವತ್ತೆರಡು (೩೨) ದೇವತೆಗಳನ್ನೂ ಆವಾಹಿಸಬೇಕು. (ಇಲ್ಲಿ ೨೩ ಇಪ್ಪತ್ತಮೂರು ಹೆಸರುಗಳು ಮಾತ್ರ ಇವೆ. ಬಾಕಿಯವುಗಳು ಬಿಟ್ಟು ಹೋಗಿವೆ ಇದಕ್ಕೆ ಮೂಲ ಬೇರೆ ಸಿಕ್ಕಿಲ್ಲ). ಇದಲ್ಲದೇ ಈಶಾನಾದಿ ನಾಲ್ಕು ಕೋಣಗಳಲ್ಲಿ ಆಪ್ದೇವತಾ, ಸಾವಿತ್ರೀ, ಜಯ, ರುದ್ರ ಎಂಬ ನಾಲ್ಕು ದೇವತೆಗಳನ್ನೂ, ಅರ್ಯಮ, ಸವಿತೃ, ಬಿಂಬ, ವಿವಸ್ವಾನ್, ವಸುಧಾಧಿಪ, ಮಿತ್ರ, ರಾಜಯಕ್ಷ್ಮ, ಪೃಥ್ವೀಧರ ಎಂಬ ಎಂಟು ದೇವತೆಗಳನ್ನೂ ಮಧ್ಯಭಾಗದಲ್ಲಿರುವ ಬ್ರಹ್ಮನ ಸುತ್ತಲೂ ಸ್ಥಾಪಿಸಬೇಕು. ಹೀಗೆ ಬ್ರಹ್ಮನೂ ಸೇರಿ ವಾಸ್ತುಮಂಡಲ ದಲ್ಲಿ (೪೫) ನಲವತ್ತೈದು ದೇವತೆಗಳಾಗುವುವು. ಆದರಲ್ಲಿ ಹೊರಭಾಗದ ೨೦

ಯದ್ದಿಕ್ಕಾನಾಂ ಚ ವರ್ಗೋಽಯಮೇವಂ ಕೋಣೇಷ್ವಶೇಷತಃ ।
ತನ್ಮಧ್ಯೇ ವಿಂಶತಿರ್ಬಾಹ್ಯಾ ದ್ವಿಪದಾಸ್ತೇ ತು ಸರ್ವದಾ ॥ ೬೧೦ ॥

ಅರ್ಯಮಾ ಚ ವಿವಸ್ವಾಂಶ್ಚ ಮಿತ್ರಃ ಪೃಥ್ವೀಧರಾಹ್ವಯಃ ।
ಬ್ರಹ್ಮಣಃ ಪರಿತೋ ದಿಕ್ಷು ಚತ್ವಾರಸ್ತ್ರಿಪದಾಃ ಸ್ಮೃತಾಃ ॥ ೬೧೧ ॥

ಬ್ರಹ್ಮಾಣಂ ಚ ತಥೈಕದ್ವಿತ್ರಿಪದಾನರ್ಚಯೇತ್ಸುರಾನ್ ।
ವಾಸ್ತುಮಂತ್ರೇಣ ವಾಸ್ತುಜ್ಞೋ ದೂರ್ವಾದಧ್ಯಕ್ಷತಾದಿಭಿಃ ॥ ೬೧೨ ॥

ಬ್ರಹ್ಮಮಂತ್ರೇಣ ವಾ ಶ್ವೇತವಸ್ತ್ರಯುಗ್ಮಂ ಪ್ರದಾಪಯೇತ್ ।
ಆವಾಹನಾದಿಸರ್ವೋಪಚಾರಾಂಶ್ಚ ಕ್ರಮಶಸ್ತಥಾ ॥ ೬೧೩ ॥

ನೈವೇದ್ಯಂ ತ್ರಿವಿಧಾನ್ನೇನ ವಾದ್ಯೈಃ ಸಹ ಸಮರ್ಪಯೇತ್ ।
ತಾಂಬೂಲಂ ಚ ತತಃ ಕರ್ತಾ ಪ್ರಾರ್ಥಯೇದ್ವಾಸ್ತುಪೂರುಷಂ ॥ ೬೧೪ ॥

ವಾಸ್ತುಪುರುಷ ನಮಸ್ತೇಽಸ್ತು ಭೂಶಯ್ಯಾನಿರತಪ್ರಭೋ ।
ಮದ್ಗೃಹಂ ಧನಧಾನ್ಯಾದಿಸಮೃದ್ಧಂ ಕುರು ಸರ್ವದಾ ॥ ೬೧೫ ॥

ಇಪ್ಪತ್ತು ದೇವತೆಗಳನ್ನು ಎರಡೆರಡು ಪದಗಳಲ್ಲಿಯೂ (ಮಂಡಲಗಳಲ್ಲಿಯೂ) ಆರ್ಯನು, ವಿವಸ್ವಾನ್, ವಸುಧಾಧಿಪ, ಮಿತ್ರ, ರಾಜಯಕ್ಷ್ಮ, ಪೃಥ್ವೀಧರ ಮತ್ತು ಬ್ರಹ್ಮನ ಸುತ್ತಲೂ ಇರುವ ನಾಲ್ಕು ದೇವತೆಗಳು ಇವರನ್ನು ಮೂರು ಮೂರು ಪದಗಳಲ್ಲಿಯೂ ಆವಾಹಿಸಬೇಕು. ಮಧ್ಯೆ ಬ್ರಹ್ಮನನ್ನು ಒಂದು, ಎರಡು, ಮೂರರ ಪದಗಳಲ್ಲಿಟ್ಟು ಪೂಜಿಸಬೇಕು. ವಾಸ್ತುಮಂತ್ರವನ್ನು ತಿಳಿದವನು ಆ ಮಂತ್ರದಿಂದ ವಾಸ್ತುಪುರುಷನನ್ನೂ, ಬ್ರಹ್ಮಮಂತ್ರದಿಂದ ಬ್ರಹ್ಮನನ್ನೂ ಆವಾಹಿಸಿ, ದೂರ್ವಾಕ್ಷತ, ಶ್ವೇತವಸ್ತ್ರದ್ವಯ ಇವುಗಳನ್ನು ಸಮರ್ಪಿಸಬೇಕು. ಆವಾಹನಾದಿ ಷೋಡಶೋಪಚಾರ ಪೂಜೆಗಳಿಂದ ವಾಸ್ತುಪುರುಷನನ್ನೂ ಬ್ರಹ್ಮನನ್ನೂ ಪೂಜಿಸಿ, ಮೂರುವಿಧವಾದ ಅನ್ನಗಳನ್ನು ನಿವೇದನ ಮಾಡಬೇಕು. ನಂತರ ತಾಂಬೂಲಾದಿಗಳನ್ನು ಸಮರ್ಪಿಸಿ, ವಾಸ್ತುಪುರುಷನನ್ನು ಈರೀತಿಯಾಗಿ ಪ್ರಾರ್ಥಿಸಿಕೊಳ್ಳಬೇಕು.

೬೧೫-೬೧೯. ಎಲೈ ವಾಸ್ತುಪುರುಷನೇ! ನೀನು ಸರ್ವದಾ ಭೂಮಿಯಲ್ಲಿಯೇ ಮಲಗಿರುವವನಲ್ಲವೇ? ಪ್ರಭುವೇ! ಈ ನನ್ನ ಮನೆಯು ಸಸ್ಯ

ಇತಿ ಪ್ರಾರ್ಥ್ಯ ಯಥಾಶಕ್ತ್ಯಾ ದಕ್ಷಿಣಾಮರ್ಚಕಾಯ ಚ ।
ದದ್ಯಾತ್ತದಗ್ರೇ ವಿಪ್ರೇಭ್ಯೋ ಭೋಜನಂ ಚ ಸ್ವಶಕ್ತಿತಃ ॥ ೬೧೬ ॥

ಅನೇನ ವಿಧಿನಾ ಸಮ್ಯಗ್ವಾಸ್ತುಪೂಜಾಂ ಕರೋತಿ ಯಃ ।
ಆರೋಗ್ಯಂ ಪುತ್ರಲಾಭಂ ಚ ಧನಂ ಧಾನ್ಯಂ ಲಭೇನ್ನರಃ ॥ ೬೧೭ ॥

ಅಕೃತ್ವಾ ವಾಸ್ತುಪೂಜಾಂ ಯಃ ಪ್ರವಿಶೇನ್ನವಮಂದಿರಂ ।
ರೋಗಾನ್ನಾನಾವಿಧಾನ್ಕ್ಲೇಶಾನಶ್ನುತೇ ಸರ್ವಸಂಕಟಂ ॥ ೬೧೮ ॥

ಅಕಪಾಟಮನಾಚ್ಛನ್ನಮದತ್ತಬಲಿಭೋಜನಂ ।
ಗೃಹಂ ನ ಪ್ರವಿಶೇದೇವಂ ವಿಪದಾಮಾಕರಂ ಹಿ ತತ್ ॥ ೬೧೯ ॥

ಅಥೋ ಯಾತ್ರಾ ನೃಪಾದೀನಾಮಭೀಷ್ಟಫಲಸಿದ್ಧಯೇ ।
ಸ್ಯಾತ್ತಥಾ ತಾಂ ಪ್ರವಕ್ಷ್ಯಾಮಿ ಸಮ್ಯಗ್ವಿಜ್ಞಾತಜನ್ಮನಾಂ ॥ ೬೨೦ ॥

ಕಾಲದಲ್ಲಿಯೂ ಧನಧಾನ್ಯಾದಿಗಳಿಂದ ತುಂಬಿರುವಂತೆ ಅನುಗ್ರಹಿಸುವವನಾಗು ಎಂದು ಭಕ್ತಿಯಿಂದ ಪ್ರಾರ್ಥಿಸಿ ಪೂಜೆಯನ್ನು ಮಾಡಿದವನಿಗೂ ಅಲ್ಲಿ ಬಂದಿದ್ದ ಬ್ರಾಹ್ಮಣರಿಗೂ ಯಥಾಶಕ್ತಿಯಾಗಿ ದಕ್ಷಿಣಾದಿಗಳನ್ನು ಕೊಟ್ಟು ಅವರನ್ನು ತೃಪ್ತಿಪಡಿಸಬೇಕು. ಈರೀತಿಯಾಗಿ ಯಾರು ವಾಸ್ತುಪೂಜೆಯನ್ನು ಮಾಡುವರೋ ಅವರು ಪುತ್ರ, ಧನ, ಧಾನ್ಯ, ಆರೋಗ್ಯ ಮುಂತಾದ ಸಕಲ ಇಷ್ಟಾರ್ಥಗಳನ್ನೂ ತಪ್ಪದೇ ಹೊಂದುವರು. ಯಾರು ವಾಸ್ತುಪೂಜೆಮಾಡದೇ ಹೊಸ ಮನೆಯನ್ನು ಪ್ರವೇಶಿಸುವರೋ ಅವರು ರೋಗಗಳಿಗೂ ನಾನಾವಿಧವಾದ ಕ್ಲೇಶಗಳಿಗೂ ಗುರಿಯಾಗಿ ನರಳುವರು. ಬಾಗಿಲಿಲ್ಲದೇ ಮೇಲುಹೊದಿಕೆಯೂ ಇಲ್ಲದೇ ವಾಸ್ತುಹೋಮದಿಗ್ಬಲ್ಯಾದಿಗಳು ನಡೆಯದೇ ಇರುವ ಮನೆಗೆ ಯಾರೂ ಪ್ರವೇಶವಾಡಬಾರದು. ಅಂತಹ ಮನೆಯು ಸಕಲ ವಿಪತ್ತುಗಳಿಗೂ ಗಣಿಯಂತಿರುವುದೆಂದು ತಿಳಿಯಬೇಕು. ಆದುದರಿಂದ ಸುಖವನ್ನೂ ಧನಧಾನ್ಯಾದಿ ಸಂಪತ್ತನ್ನೂ ಅಪೇಕ್ಷಿಸುವ ಮಾನವನು ನೂತನ ಗೃಹಪ್ರವೇಶ ಸಮಯದಲ್ಲಿ ತಪ್ಪದೇ ವಾಸ್ತುಪೂಜೆಯನ್ನು ಮಾಡಬೇಕು.

೬೨೦–೬೨೩. ಈಗ ರಾಜರು ಸುಖಪ್ರಯಾಣದಿಂದ ಇಷ್ಟಾರ್ಥಗಳನ್ನು ಹೊಂದುವಂತಹ ಯಾತ್ರಾಮುಹೂರ್ತಗಳನ್ನು ವಿವರಿಸಿ ಹೇಳುವೆನು :—ಜನ್ಮ

ಅಜ್ಞಾತಜನ್ಮನಾಂ ನೃಣಾಂ ಫಲಾಪ್ತಿರ್ಧ್ರುವಮರ್ಣವತ್ ।
ಪ್ರಶ್ನೋದಯನಿಮಿತ್ತಾದ್ಯೈಸ್ತೇಷಾಮಪಿ ಫಲೋದಯಃ ॥ ೬೨೧ ॥

ಷಷ್ಠ್ಯಷ್ಟಮೀದ್ವಾದಶೀಷು ರಿಕ್ತಾಮಾಪೂರ್ಣಿಮಾಸು ಚ ।
ಯಾತ್ರಾ ಶುಕ್ಲಪ್ರತಿಪದಿ ನಿರ್ಧನಾಯ ಕ್ಷಯಾಯ ಚ ॥ ೬೨೨ ॥

ಮೈತ್ರಾದಿತೀಂದ್ವರ್ಕಾಂತ್ಯಾಶ್ವಿಹರಿಪುಷ್ಯವಸೂಡುಷು ।
ಅಸಪ್ತಪಂಚತ್ರ್ಯಾದ್ಯೇಷು ಯಾತ್ರಾಭೀಷ್ಟಫಲಪ್ರದಾ ॥ ೬೨೩ ॥

ನ ಮಂದೇಂದುದಿನೇ ಪ್ರಾಚೀಂ ನ ವ್ರಜೇದ್ದಕ್ಷಿಣಾಂ ಗುರೌ ।
ಸಿತಾರ್ಕಯೋರ್ನಪ್ರತೀಚೀಂ ನೋದೀಚೀಂ ಜ್ಞಾರಯೋರ್ದಿನೇ ॥ ೬೨೪ ॥

ಇಂದ್ರಾಜಪಾದಚತುರಾಷ್ಟ್ರಾರ್ಯಮರ್ಕ್ಷಾಣಿ ಪೂರ್ವತಃ ।
ಶೂಲಾನಿ ಸರ್ವದ್ವಾರಾಣಿ ಮಿತ್ರಾರ್ಕೇಜ್ಯಾಶ್ವಭಾನಿ ಚ ॥ ೬೨೫ ॥

---

ಕಾಲವನ್ನು ಸರಿಯಾಗಿ ತಿಳಿದು ಜಾತಕದಿಂದ ಫಲವನ್ನರಿಯುವುದು ಸುಲಭ ಮಾರ್ಗವಾಗಿರುವುದು. ಹಾಗೆ ಜಾತಕಾದಿಗಳಿಲ್ಲದವರು ಪ್ರಶ್ನೆ, ಯಾತ್ರಾ ಶಕುನ ಇತ್ಯಾದಿಗಳಿಂದ ಫಲವನ್ನು ಊಹಿಸಿ ತಿಳಿದುಕೊಳ್ಳಬಹುದು. ಇವಾವುದರಿಂದಲೂ ತಿಳಿಯದೇ ಫಲವನ್ನನುಭವಿಸುವುದು ಹುಳುವು ಅಕ್ಷರವನ್ನು ಕೊರೆದಂತೆ ಆಕಸ್ಮಿಕವೆಂದು ತಿಳಿಯಬೇಕು. ಷಷ್ಠಿ, ಅಷ್ಟಮಿ, ದ್ವಾದಶಿ, ರಿಕ್ತ ತಿಥಿಗಳು, ಅಮಾವಾಸ್ಯೆ, ಪೂರ್ಣಿಮಾ, ಶುಕ್ಲಪ್ರತಿಪತ್ ಈ ತಿಥಿಗಳಲ್ಲಿ ಪ್ರಯಾಣಮಾಡುವುದರಿಂದ ದಾರಿದ್ರ್ಯವೂ, ಕಾರ್ಯನಾಶವೂ ಸಂಭವಿಸುವುದು. ಅನೂರಾಧಾ, ಪುನರ್ವಸು, ಮೃಗಶಿರ, ಹಸ್ತ, ರೇವತೀ, ಅಶ್ವಿನೀ, ಸ್ವಾತೀ ಪುಷ್ಯ, ಧನಿಷ್ಠ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ಈ ನಕ್ಷತ್ರಗಳು ಪ್ರಯಾಣಕ್ಕೆ ಶ್ರೇಷ್ಠವಾದುವುಗಳು. ಇಂತಹ ನಕ್ಷತ್ರಗಳಲ್ಲಿ ಪ್ರಯಾಣಮಾಡುವುದರಿಂದ ಯಾತ್ರಾಫಲಗಳು ಮಾನವನಿಗೆ ಸಿದ್ಧಿಸುವುವು.

೬೨೪-೬೩೨. ಶನಿವಾರ ಮತ್ತು ಸೋಮವಾರಗಳಲ್ಲಿ ಪೂರ್ವದಿಕ್ಕಿಗೂ ಗುರುವಾರದಲ್ಲಿ ದಕ್ಷಿಣಕ್ಕೂ, ಭಾನು, ಶುಕ್ರವಾರಗಳಲ್ಲಿ ಪಶ್ಚಿಮಕ್ಕೂ ಮಂಗಳ ಬುಧವಾರಗಳಲ್ಲಿ ಉತ್ತರಕ್ಕೂ ಪ್ರಯಾಣ ಮಾಡಕೂಡದು. ಜ್ಯೇಷ್ಠಾ, ಪೂರ್ವಾ

ಕ್ರಮಾದ್ದಿಗ್ದ್ವಾರಭಾನಿ ಸ್ಯುಃ ಸಪ್ತಸಪ್ತಾಗ್ನಿ ಧಿಷ್ಣ್ಯತಃ ।
ಪರಿಘಂ ಲಂಘಯೇದ್ದಂಡಂ ನಾಗ್ನಿ ಶ್ವಸನದಿಗ್ಗಮಂ ॥ ೬೨೬ ॥

ಆಗ್ನೇಯಂ ಪೂರ್ವದಿಗ್ಧಿಷ್ಣ್ಯಾದಿದಿಶಶ್ಚೈವಮೇವ ಹಿ ।
ದಿಗ್ದ್ವಾರಶಯಸ್ತು ಕ್ರಮಶೋ ಮೇಷಾದ್ಯಾಶ್ಚ ಪುನಃ ಪುನಃ ॥ ೬೨೭ ॥

ದಿಗೀಶ್ವರೇ ಲಲಾಟಸ್ಥೇ ಯಾತುರ್ನ ಪುನರಾಗಮಃ ।
ಲಗ್ನಸ್ಥೋ ಭಾಸ್ಕರಃ ಪ್ರಾಚ್ಯಾಂ ದಿಶಿ ಯಾತುರ್ಲಲಾಟಗಃ ॥ ೬೨೮ ॥

ದ್ವಾದಶೈಕಾದಶಃ ಶುಕ್ರೋऽಸ್ಯಾಗ್ನೇಯ್ಯಾಂ ತು ಲಲಾಟಗಃ ।
ದಶಮಸ್ಥಃ ಕುಜೋ ಲಗ್ನಾದ್ಯಾಮ್ಯಾಂ ಯಾತುರ್ಲಲಾಟಗಃ ॥ ೬೨೯ ॥

ನವಮಾಷ್ಟಮಗೋ ರಾಹುರ್ನೈರೃತ್ಯಾಂ ತು ಲಲಾಟಗಃ ।
ಲಗ್ನಾತ್ಸಪ್ತಮಗಃ ಸೌರಿಃ ಪ್ರತೀಚ್ಯಾಂ ತು ಲಲಾಟಗಃ ॥ ೬೩೦ ॥

---

ಭಾದ್ರಾ, ರೋಹಿಣೀ, ಉತ್ತರಾ ಈ ನಕ್ಷತ್ರಗಳು ಪೂರ್ವಾದಿಯಾದ ನಾಲ್ಕು ದಿಕ್ಕುಗಳ ಶೂಲನಕ್ಷತ್ರಗಳು. ಅನೂರಾಧ, ಹಸ್ತ, ಪುಷ್ಯ, ಅಶ್ವಿನೀ ಈ ನಾಲ್ಕು ನಕ್ಷತ್ರಗಳು ದಿಗ್ದ್ವಾರಗಳು. ಕೃತ್ತಿಕಾನಕ್ಷತ್ರಾದಿಯಾಗಿ ಉಳಿದ ಏಳು ಏಳು ನಕ್ಷತ್ರಗಳು ಕ್ರಮವಾಗಿ ದಿಕ್ಕುಗಳ ಬಾಗಿಲುಗಳಾಗಿ ಆಗುಳಿಯುಂತೆ ಇರತಕ್ಕವುಗಳು. ಈ ನಕ್ಷತ್ರಗಳನ್ನು ದಾಟಿ, ಅಗ್ನಿದಿಕ್ಕಿಗೆ ಪ್ರಯಾಣಮಾಡಕೂಡದು. ಕೃತ್ತಿಕಾದಿಯಾದ ಮೂರುಮೂರು ನಕ್ಷತ್ರಗಳು ಕ್ರಮವಾಗಿ ವಿದಿಕ್ಕುಗಳಾಗುವವು. ಮೇಷಾದಿರಾಶಿಗಳು ಆಯಾ ದಿಕ್ಕುಗಳಿಗೆ ರಾಶಿಗಳೆನಿಸುವವು. ದಿಗಧಿಪತಿಯು ಲಲಾಟಗತನಾಗಿದ್ದರೆ ಪ್ರಯಾಣಮಾಡುವವನು ಮತ್ತೆ ಹಿಂದಿರುಗಿ ಬರುತ್ತಾನೆಂಬ ಭರವಸೆಯಿರುವುದಿಲ್ಲ. ಪೂರ್ವದಿಕ್ಕಿಗೆ ಪ್ರಯಾಣಮಾಡುವವನಿಗೆ ಲಗ್ನಸ್ಥನಾದ ಸೂರ್ಯನು ಲಲಾಟಗತನಾಗುವನು. ಆಗ್ನೇಯಕ್ಕೆ ಹೋಗುವವನಿಗೆ ಲಗ್ನಾತ್ ಹನ್ನೊಂದು ಮತ್ತು ಹನ್ನೆರಡನೆಯ ರಾಶಿಯಲ್ಲಿರುವ ಶುಕ್ರನು ಲಲಾಟಸ್ಥನಾಗುವನು. ದಕ್ಷಿಣದಿಕ್ಕಿಗೆ ಪ್ರಯಾಣಮಾಡುವವನಿಗೆ ಹತ್ತಿರದಲ್ಲಿರುವ ಕುಜನು ಲಲಾಟಗತನಾಗುವನು. ನೈರುತ್ಯದಿಕ್ಕಿಗೆ ಪ್ರಯಾಣಮಾಡುವವನಿಗೆ ಒಂಬತ್ತು ಮತ್ತು ಎಂಟನೆಯ ಸ್ಥಾನದಲ್ಲಿರುವ ರಾಹುವು ಲಲಾಟಸ್ಥಾನ

ಷಷ್ಠಃ ಪಂಚಮಗಶ್ಚಂದ್ರೋ ವಾಯವ್ಯಾಂ ಚ ಲಲಾಟಗಃ ।
ಚತುರ್ಥಸ್ಥಾನಗಃ ಸೌಮ್ಯಶ್ಚೋತ್ತರಸ್ಯಾಂ ಲಲಾಟಗಃ ॥ ೬೩೦ ॥

ದ್ವಿತ್ರಿಸ್ಥಾನಗಶೋ ಜೀವ ಈಶಾನ್ಯಾಂ ವೈ ಲಲಾಟಗಃ ।
ಲಲಾಟಂ ತು ಪರಿತ್ಯಜ್ಯ ಜೀವಿತೇಚ್ಛುರ್ವ್ರಜೇನ್ನರಃ ॥ ೬೩೨ ॥

ವಿಲೋಮಗೋ ಗ್ರಹೋ ಯಸ್ಯ ಯಾತ್ರಾಲಗ್ನೋಪಗೋ ಯದಿ ।
ತಸ್ಯ ಭಂಗಪ್ರದೋ ರಾಜ್ಞಸ್ತದ್ವರ್ಗೋಽಪಿ ವಿಲಗ್ನಗಃ ॥ ೬೩೩ ॥

ರವೀಂದ್ವಯನಯೋರ್ಯಾತಮನುಕೂಲಂ ಶುಭಪ್ರದಂ ।
ತದಭಾವೇ ದಿವಾರಾತ್ರೌ ಯಾಯಾದ್ಯಾತುರ್ವಧೋಽನ್ಯಥಾ ॥ ೬೩೪ ॥

ನಾಗುವನು. ಪಶ್ಚಿಮದಿಕ್ಕನ್ನು ಕುರಿತು ತೆರಳುವವನಿಗೆ ಸಪ್ತಮಸ್ಥಾನದಲ್ಲಿರುವ ಶನಿಯೂ ಲಲಾಟಗತನಾಗುವನು. ವಾಯುವ್ಯದಿಗ್ಗಾಮಿಯಾದವನಿಗೆ ಪಂಚಮ, ಷಷ್ಠ ಈ ಸ್ಥಾನಗತನಾದ ಚಂದ್ರನು ಲಲಾಟಸ್ಥಾನಕ್ಕೆ ಬರುವನು. ಉತ್ತರದಿಕ್ಕಿಗೆ ಪ್ರಯಾಣಮಾಡುವನಿಗೆ ಲಗ್ನಾತ್ ನಾಲ್ಕನೆಯ ಸ್ಥಾನಗತನಾದ ಬುಧನು ಲಲಾಟಗತನಾಗುವನು. ಈಶಾನ್ಯದಿಗ್ಗಮನವುಳ್ಳವನಿಗೆ ದ್ವಿತೀಯ ಮತ್ತು ತೃತೀಯ ಈ ಸ್ಥಾನಗತನಾದ ಗುರುವು ಲಲಾಟಸ್ಥಿತಿಯನ್ನು ಹೊಂದುವನೆಂದು ತಿಳಿಯಬೇಕು. ಜೀವಿತದಲ್ಲಿ ಅಪೇಕ್ಷೆಯಿರುವವನು ಈ ಲಲಾಟಸ್ಥ ಗ್ರಹಗಳು ಸಂಬಂಧಿಸಿದಾಗ ಎಂದಿಗೂ ಪ್ರಯಾಣಮಾಡಬಾರದು. ಇದರಿಂದ ತಪ್ಪದೇ ತೊಂದರೆಯುಂಟಾಗುವುದು.

೬೩೩–೬೩೪. ವಿಲೋಮವಾಗಿ ಹೋಗುವ ಗ್ರಹವು ಯಾತ್ರಾಲಗ್ನದಲ್ಲಿದ್ದರೆ ರಾಜನಿಗೆ ಪ್ರಯಾಣದಲ್ಲಿ ಭಂಗ ಉಂಟಾಗುವುದು. ಅಥವ ವಿಲೋಮ ಗ್ರಹವಿರುವ ಅಂಶದಲ್ಲಿಯೂ ಪ್ರಯಾಣ ಮಾಡಬಾರದು. ಸೂರ್ಯಚಂದ್ರರಿರುವ ರಾಶಿಗಿಂತ ಆರುರಾಶಿಗಳಲ್ಲೊಂದನ್ನು ಪ್ರಯಾಣಲಗ್ನವನ್ನಾಗಿಟ್ಟು, ಅದು ಸೂರ್ಯಾಯನವಾಗಿದ್ದರೆ ಹಗಲೂ ಚಂದ್ರಾಯನವಾಗಿದ್ದರೆ ರಾತ್ರಿಯೂ ಪ್ರಯಾಣ ಮಾಡುವುದು ಒಳ್ಳೆಯದು. ಇದಕ್ಕೆ ವಿರುದ್ಧವಾಗಿ ಯಾತ್ರೆಯನ್ನು ಹೊರಡು

ಮೂಢೇ ಶುಕ್ರೇ ಕಾರ್ಯಹಾನಿಃ ಪ್ರತಿಶುಕ್ರೇ ಪರಾಜಯಃ ।
ಪ್ರತಿಶುಕ್ರಕೃತಂ ದೋಷಂ ಹಂತುಂ ಶಕ್ತಾ ಗ್ರಹಾ ನ ಹಿ ॥ ೬೩೫ ॥

ವಾಸಿಷ್ಠಕಾಶ್ಯಪೇಯಾತ್ರಿಭಾರದ್ವಾಜಾಃ ಸಗೌತಮಾಃ ।
ಏತೇಷಾಂ ಪಂಚಗೋತ್ರಾಣಾಂ ಪ್ರತಿಶುಕ್ರೋ ನ ವಿದ್ಯತೇ ॥ ೬೩೬ ॥

ಏಕಗ್ರಾಮೇ ವಿವಾಹೇ ಚ ದುರ್ಭಿಕ್ಷೇ ರಾಜವಿಗ್ರಹೇ ।
ದ್ವಿಜಕ್ಷೋಭೇ ನೃಪಕ್ಷೋಭೇ ಪ್ರತಿಶುಕ್ರೋ ನ ವಿದ್ಯತೇ ॥ ೬೩೭ ॥

ನೀಚಗೋಽರಿಗೃಹಸ್ಥೋ ವಾ ವಕ್ರಗೋ ವಾ ಪರಾಜಿತಃ ।
ಯಾತುರ್ಭಂಗಪ್ರದಃ ಶುಕ್ರಃ ಸ್ವೋಚ್ಚಸ್ಥಶ್ಚೇಜ್ಜಯಪ್ರದಃ ॥ ೬೩೮ ॥

ಸ್ವಾಷ್ಟಲಗ್ನೇಽಷ್ಟರಾಶೌ ವಾ ಶತ್ರುಭಾತ್ತ್ಯಷ್ಟಮೇಽಪಿ ವಾ ।
ತೇಷಾಮೀಶಸ್ಥರಾಶೌ ವಾ ಯಾತುರ್ಮೃತ್ಯುರ್ನಸಂಶಯಃ ॥ ೬೩೯ ॥

---

ವುದು ಕ್ಷೇಮಕರವಲ್ಲ. ಶುಕ್ರಾಸ್ತದಲ್ಲಿ ಮಾಡುವ ಪ್ರಯಾಣವು ಕಾರ್ಯಹಾನಿಯನ್ನುಂಟುಮಾಡುವುದು. ಪ್ರತಿಶುಕ್ರ ಎಂದರೆ ಪಶ್ಚಾದುದಯ ಶುಕ್ರನಿರುವಾಗ ಪ್ರಯಾಣಮಾಡುವುದರಿಂದ ಪರಾಜಯ ಉಂಟಾಗುವುದು. ಪ್ರತಿಶುಕ್ರಕೃತವಾದ ದೋಷವನ್ನು ಯಾವ ಗ್ರಹವೂ ಪರಿಹರಿಸಲಾರವು.

೬೩೬-೬೩೭. ವಸಿಷ್ಠ, ಕಶ್ಯಪ, ಅತ್ರಿ, ಭರದ್ವಾಜ, ಗೌತಮ ಈ ಐದು ಗೋತ್ರದವರಿಗೆ ಶುಕ್ರಾಸ್ತಕೃತವಾದ ದೋಷವಿರುವುದಿಲ್ಲ. ಒಂದೇ ಊರಿನಲ್ಲಿ ವಿವಾಹ, ದುರ್ಭಿಕ್ಷ, ರಾಜಯುದ್ಧ, ಬ್ರಾಹ್ಮಣಕ್ಷೋಭೆ, ರಾಜರಿಗೆ ಬಂದಿರುವ ಹಿಂಸೆ ಇಂತಹ ಸಂದರ್ಭಗಳಲ್ಲಿ ಪ್ರತಿ ಶುಕ್ರದೋಷವನ್ನು ನೋಡಬೇಕಾಗಿಲ್ಲ ಶುಕ್ರನು ನೀಚರಾಶಿಯಲ್ಲಿರುವುದು, ಶತ್ರುಕ್ಷೇತ್ರದಲ್ಲಿರುವುದು ವಕ್ರಿಯಾಗಿ ಯುದ್ಧದಲ್ಲಿ ಪರಾಜಿತನಾಗಿರುವಿಕೆ, ಈ ಸ್ಥಿತಿಯಲ್ಲಿರುವಾಗ ಪ್ರಯಾಣಮಾಡುವುದು ಹಾನಿಕರವೆನಿಸುವುದು. ಶುಕ್ರನು ಉಚ್ಚಂಗತನಾದಾಗ ಪ್ರಯಾಣಮಾಡುವುದು ಶುಭಕರ.

೬೩೯-೬೪೩. ಜನ್ಮಲಗ್ನಾಪೇಕ್ಷಯಾ, ಅಷ್ಟಮಲಗ್ನ, ಅಷ್ಟಮರಾಶಿ, ಲಗ್ನಾಧಿಪತಿಯ ಶತ್ರುಕ್ಷೇತ್ರ ಅಥವಾ ಶತ್ರುಗೃಹಸ್ಥರಾಶಿ ಇವುಗಳಲ್ಲಿ ಪ್ರಯಾಣ

ಜನ್ಮೇಶಾಷ್ಟಮಲಗ್ನೇಶೌ ಮಿಥೋ ಮಿತ್ರೇ ವ್ಯವಸ್ಥಿತೌ ।
ಜನ್ಮರಾಶ್ಯಷ್ಟಮುಕ್ಷೋರ್ತ್ಥದೋಷಾ ನಶ್ಯಂತಿ ಭಾವತಃ ॥ ೬೪೦ ॥

ಕ್ರೂರಗ್ರಹೇಕ್ಷಿತೋ ಯುಕ್ತೋ ದ್ವಿಃ ಸ್ವಭಾವೋಽಪಿ ಭಂಗದಃ ।
ಯಾನೇ ಸ್ಥಿರೋದಯೋ ನೇಷ್ಟೋ ಭವ್ಯಯುಕ್ತೇಕ್ಷಿತಃ ಸ್ವಯಂ ॥ ೬೪೧ ॥

ವಸ್ವಂತ್ಯಾದ್ರಾರ್ದಿಪಂಚರ್ಕ್ಷೇ ಸಂಗ್ರಹಂ ತೃಣಕಾಷ್ಠಯೋಃ ।
ಯಾಮ್ಯದಿಗ್ಗಮನಂ ಶಯ್ಯಾ ನ ಕುರ್ಯಾದ್ಗೇಹಗೋಪನಂ ॥ ೬೪೨ ॥

ಜನ್ಮೋದಯೇ ಜನ್ಮಭೇ ವಾ ತಯೋರೀಶಸ್ಯ ಭೇಽಪಿ ವಾ ।
ತಾಭ್ಯಾಂ ತಯೋರಿಕೇಂದ್ರೇಷು ಯಾತುಃ ಶತ್ರುಕ್ಷಯೋ ಭವೇತ್ ॥ ೬೪೩ ॥

ಶೀರ್ಷೋದಯೇ ಲಗ್ನಗತೇ ದಿಗ್ಲಗ್ನೇ ಲಗ್ನಗೇಽಪಿ ವಾ ।
ಶುಭವರ್ಗೇಽಥವಾ ಲಗ್ನೇ ಯಾತುಃ ಶತ್ರುಕ್ಷಯಸ್ತದಾ ॥ ೬೪೪ ॥

---

ಮಾಡುವುದು ಮೃತ್ಯುಕರವೆನಿಸುವುದು. ಆದರೆ ಜನ್ಮಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿಗಳು ಪರಸ್ಪರ ಮಿತ್ರರಾಗಿದ್ದರೆ ಅಂತಹ ಜನ್ಮಾಷ್ಟಮಲಗ್ನಗಳಲ್ಲಿ ಪ್ರಯಾಣಮಾಡುವುದು ದೋಷಕರವಲ್ಲವೆಂದು ತಿಳಿಯಬೇಕು. ಕ್ರೂರಗ್ರಹಾವಲೋಕಿತವಾದ ದ್ವಿಸ್ವಭಾವರಾಶಿಯೂ, ಶುಭಗ್ರಹಯುಕ್ತವೂ, ದೃಷ್ಟವೂ ಆದ ಸ್ಥಿರರಾಶಿಯೂ ಪ್ರಯಾಣಕ್ಕೆ ಅಷ್ಟು ಮುಖ್ಯವಲ್ಲ. ಧನಿಷ್ಠ, ರೇವತೀ, ಆದ್ರಾರ್ದಿ ಐದು ನಕ್ಷತ್ರಗಳು ಅಂದರೆ ಆದ್ರಾರ್, ಪುನರ್ವಸು, ಪುಷ್ಯ, ಆಶ್ಲೇಷಾ ಮಖ ಈ ನಕ್ಷತ್ರಗಳೂ ಇವುಗಳಲ್ಲಿ ತೃಣ, (ಹುಲ್ಲು) ಸೌದೆ ಇವುಗಳನ್ನು ಸಂಗ್ರಹಿಸುವುದೂ, ದಕ್ಷಿಣದಿಕ್ಕಿಗೆ ಪ್ರಯಾಣಮಾಡುವುದೂ ಶಯ್ಯಾಗೃಹಾದಿಗಳನ್ನು ನಿರ್ಮಿಸುವುದೂ ಅಷ್ಟು ಶ್ರೇಷ್ಠವಲ್ಲ.

೬೪೩-೬೪೬. ಜನ್ಮಲಗ್ನ ಅಥವಾ ಜನ್ಮರಾಶಿ, ಅಥವಾ ತದಧಿಪತಿಗಳು ಇರುವ ರಾಶಿ ಇವುಗಳಲ್ಲೊಂದನ್ನು ಪ್ರಯಾಣಲಗ್ನವನ್ನಾಗಿ ಮಾಡಿಕೊಂಡು ಅದರ ಕೇಂದ್ರಗಳಲ್ಲಿ ಮತ್ತು ಷಷ್ಠಸ್ಥಾನದಲ್ಲಿ ಶತ್ರುಗ್ರಹಗಳಿರುವಾಗ ಪ್ರಯಾಣಮಾಡಿದರೆ ಶತ್ರುನಾಶವಾಗುವುದು. ಅಥವ ಲಗ್ನವು ಶೀರ್ಷೋದಯವಾಗಿದ್ದು ಪ್ರಯಾಣಮಾಡುವ ದಿಕ್ಕಿನ ಲಗ್ನವೂ, ಅದೇ ಆಗಿದ್ದು ಶುಭಾಂಶದಲ್ಲಿ ಪ್ರಯಾಣ

ಶತ್ರುಜನ್ಮೋದಯೇ ಜನ್ಮರಾಶೇರ್ವಾ ನಿಧನೋದಯೇ ।
ತಯೋರೀಶಸ್ಥಿತೇ ರಾಶೌ ಯಾತುಃ ಶತ್ರುಕ್ಷಯೋ ಭವೇತ್ ॥ ೬೪೫ ॥

ವಕ್ರಃ ಪಂಥಾ ಮೀನಲಗ್ನೇ ಯಾತುರ್ಮೀನಾಂಶಕೇಽಪಿ ವಾ ।
ನಿಂದ್ಯೋ ನಿಖಿಲಯಾತ್ರಾಸು ಘಟಲಗ್ನೋ ಘಟಾಂಶಕಃ ॥ ೬೪೬ ॥

ಜಲಲಗ್ನೋ ಜಲಾಂಶೋ ವಾ ಜಲಯೋನೇಃ ಶುಭಾವಹಃ ।
ಮೂರ್ತಿಃ ಕೋಶೋ ಧನ್ವಿನಶ್ಚ ವಾಹನಂ ಮಂತ್ರಸಂಜ್ಞಕಂ ॥ ೬೪೭ ॥

ಶತ್ರುಮಾರ್ಗಸ್ತಥಾಯುಶ್ಚ ಮನೋವ್ಯಾಪಾರಸಂಜ್ಞಕಂ ।
ಪ್ರಾಪ್ತಿರಪ್ರಾಪ್ತಿರುದಯಾದ್ಭಾವಾಃ ಸ್ಯುರ್ದ್ವಾದಶೈವ ತೇ ॥ ೬೪೮ ॥

ಘ್ನಂತಿ ಕ್ರೂರಾಸ್ತ್ರ್ಯಪ್ತಿವರ್ಗಂ ಭಾವಾನ್ಸೂರ್ಯಮಹೀಸುತೌ ।
ನ ನಿಘ್ನತೋ ಹಿ ವ್ಯಾಪಾರಂ ಸೌಮ್ಯಾಃ ಪುಷ್ಣಂತ್ಯರಿಂ ವಿನಾ ॥ ೬೪೯ ॥

---

ಮಾಡಿದ್ದಾದರೆ ಶತ್ರುಕ್ಷಯವಾಗುವುದು. ಶತ್ರುವಿನ ಜನ್ಮಲಗ್ನ ಅಥವ ಜನ್ಮರಾಶಿಯ ಅಷ್ಟಮಲಗ್ನ ಅಥವ ತದಧಿಪತಿಗಳಿರುವ ಲಗ್ನ ಇವುಗಳಲ್ಲಿ ಪ್ರಯಾಣ ಮಾಡಿದರೆ ಶತ್ರುನಾಶವಾಗುವುದು. ಮೀನಲಗ್ನ ಅಥವ ಮೀನಾಂಶದಲ್ಲಿ ಪ್ರಯಾಣಮಾಡುವುದರಿಂದ ದಾರಿಯು ಬಳಸಾಗುವುದು. ಕುಂಭಲಗ್ನ ಮತ್ತು ಕುಂಭಾಂಶಗಳು ಪ್ರಯಾಣಕ್ಕೆ ನಿಷಿದ್ಧವಾದುವುಗಳು.

೬೪೭-೬೫೦. ಜಲಲಗ್ನ, ಜಲಾಂಶ, ಜಲಯೋನಿ ರಾಶಿಗಳು ಇವುಗಳಲ್ಲಿ ಪ್ರಯಾಣಮಾಡುವುದು ಶುಭಕರವೆನಿಸುವುದು. ಯಾತ್ರಾಲಗ್ನಕ್ಕಿರುವ ದ್ವಾದಶಭಾವಗಳಿಗೂ ಕ್ರಮವಾಗಿ ಲಗ್ನವನ್ನು ಬಿಟ್ಟು ಮೂರ್ತಿ, ಕೋಶ, ಧನ್ವೀ ವಾಹನ, ಮಂತ್ರ, ಶತ್ರುಮಾರ್ಗ, ಆಯುಸ್ಸು, ಮನಸ್ಸು, ವ್ಯಾಪಾರ, ಪ್ರಾಪ್ತಿ, ಅಪ್ರಾಪ್ತಿ ಎಂಬ ಸಂಕೇತಗಳಿವೆ. ಇವುಗಳಲ್ಲಿ ಪ್ರಾಪ್ತಿಭಾವವನ್ನು, ಸೂರ್ಯ ಕುಜರನ್ನು ಬಿಟ್ಟು ಉಳಿದ ಪಾಪಗ್ರಹಗಳು ನಾಶಮಾಡುವುವು. ಶುಭಗ್ರಹಗಳು ಶತ್ರುವನ್ನೂ ಉಳಿದ ವ್ಯಾಪಾರಮಾರ್ಗವನ್ನೂ ನಾಶಮಾಡುವುವು. ಅಸ್ತಂಗತ

ಶುಕ್ರೋಽಸ್ತಂ ಚ ನ ಪುಷ್ಣಾತಿ ಮೂರ್ತಿಂ ಮೃತ್ಯುಂ ಚ ಚಂದ್ರಮಾಃ ।
ಯಾಮ್ಯದಿಗ್ಗಮನಂ ತ್ಯಕ್ತ್ವಾ ಸರ್ವಕಾಷ್ಠಾಸು ಯಾಯಿನಾಂ ॥ ೬೫೦ ॥

ಅಭಿಜಿತ್ಕ್ಷಣಯೋಗೋಽಯಮಭೀಷ್ಟಫಲಸಿದ್ಧಿದಃ ।
ಪಂಚಾಂಗಶುದ್ಧಿರಹಿತೇ ದಿವಸೇಽಪಿ ಫಲಪ್ರದಃ ॥ ೬೫೧ ॥

ಯಾತ್ರಾಯೋಗಾ ವಿಚಿತ್ರಾಸ್ತಾನ್ಯೋಗಾನ್ವಕ್ಷ್ಯೇ ಯತಸ್ತತಃ ।
ಫಲಸಿದ್ಧಿರ್ಯೋಗಲಗ್ನಾದ್ರಾಜ್ಞಾಂ ವಿಪ್ರಸ್ಯ ಧಿಷ್ಣ್ಯತಃ ॥ ೬೫೨ ॥

ಮುಹೂರ್ತಶಕ್ತಿತೋಽನ್ಯೇಷಾಂ ಶಕುನೈಸ್ತಸ್ಕರಸ್ಯ ಚ ।
ಕೇಂದ್ರತ್ರಿಕೋಣೇ ಹ್ಯೇಕೇನ ಯೋಗಃ ಶುಕ್ರಜ್ಞಸೂರಿಣಾಂ ॥ ೬೫೩ ॥

ಅಧಿಯೋಗೋ ಭವೇದ್ವಾಭ್ಯಾಂ ತ್ರಿಭಿರ್ಯೋಗಾಧಿಯೋಗತಃ ।
ಯೋಗೋಽಪಿ ಯಾಯಿನಾಂ ಕ್ಷೇಮಮಧಿಯೋಗೇ ಜಯೋ ಭವೇತ್ ॥

ನಾದ ಶುಕ್ರನು ಮೂರ್ತಿಭಾವವನ್ನೂ ಚಂದ್ರನು ದಕ್ಷಿಣದಿಗ್ಗಾಮಿಯಾದವನನ್ನೂ ಬಿಟ್ಟು ಉಳಿದ ದಿಕ್ಕುಗಳಿಗೆ ಪ್ರಯಾಣಮಾಡುವ ಜನಗಳಿಗೆ ಮೃತ್ಯುವನ್ನೂ ತೊಂದರೆಯನ್ನೂ ಕೊಡುವನು.

೬೫೧-೬೫೪. ಪಂಚಾಂಗಶುದ್ಧಿಯಿಲ್ಲದಿರುವ ದಿನದಲ್ಲಿಯೂ, ಅಭಿಜಿಲ್ಲಗ್ನದಲ್ಲಿ ಪ್ರಯಾಣಮಾಡಿದರೆ ಕಾರ್ಯಸಿದ್ಧಿಯುಂಟಾಗುವುದೆಂದು ತಿಳಿಯಬೇಕು. ಯಾತ್ರಾಯೋಗಗಳು ಬಹು ವಿಚಿತ್ರಗಳಾಗಿವೆ. ಕ್ಷತ್ರಿಯರಿಗೆ ಯಾತ್ರಾಫಲವು ಲಗ್ನಯೋಗಗಳಿಂದಲೂ, ಬ್ರಾಹ್ಮಣರಿಗೆ ನಕ್ಷತ್ರಯೋಗಗಳಿಂದಲೂ, ಉಳಿದವರಿಗೆ (ಅಂದರೆ ವೈಶ್ಯ ಮತ್ತು ಶೂದ್ರವರ್ಣಗಳಿಗೆ) ಮುಹೂರ್ತಬಲದಿಂದಲೂ ಕಳ್ಳರಿಗೆ ಶಕುನದಿಂದಲೂ ಫಲ ದೊರೆಯುವುದು. ಶುಕ್ರ, ಬುಧ ಮತ್ತು ಗುರುಗಳಲ್ಲಿ ಒಂದುಗ್ರಹವು ಲಗ್ನಕೇಂದ್ರ ಅಥವ ತ್ರಿಕೋಣಗಳಲ್ಲಿದ್ದರೆ ಅಧಿಯೋಗವೆನಿಸುವುದು ಎರಡು ಮತ್ತು ಮೂರು ಗ್ರಹಗಳು ಕೇಂದ್ರಾದಿಗಳಲ್ಲಿದ್ದರೆ ಅದರಲ್ಲಿಯೂ ಶ್ರೇಷ್ಠವಾದ ಅಧಿಯೋಗವೆನಿಸುವುದು. ಈ ಅಧಿಯೋಗಗಳಲ್ಲಿ ಪ್ರಯಾಣಮಾಡುವುದರಿಂದ ಕ್ಷೇಮವೂ, ಕಾರ್ಯಸಿದ್ಧಿಯೂ ಲಭಿಸುವುದು. ಇಂತಹ ಯೋಗದಿಂದ ಯುಕ್ತವಾದ ಲಗ್ನದಲ್ಲಿಯೂ ಚಂದ್ರ, ಶನಿ, ಮತ್ತು ಸೂರ್ಯರು ಕ್ರಮವಾಗಿ

ಯೋಗಾಧಿಯೋಗೇ ಕ್ಷೇಮಂ ಚ ವಿಜಯಾರ್ಥವಿಭೂತಯಃ ।
ವ್ಯಾಪಾರಶತ್ರುಮೂರ್ತಿಸ್ಥೈಶ್ಚಂದ್ರಮಂದದಿವಾಕರೈಃ ॥ ೬೫೫ ॥

ರಣೇ ಗತಸ್ಯ ಭೂಪಸ್ಯ ಜಯಲಕ್ಷ್ಮೀಃ ಪ್ರಮಾಣಿಕಾ ।
ಶುಕ್ರಾರ್ಕಜ್ಞಾರ್ಕಿಭೌಮೇಷು ಲಗ್ನಾದ್ವಸ್ತ್ರತ್ರಿಶತ್ರುಷು ॥ ೬೫೬ ॥

ಗತಸ್ಯಾಗ್ರೇ ವೈರಿಚಮೂರ್ವಹ್ನೌ ಲಾಕ್ಷೇವ ಲೀಯತೇ ।
ಲಗ್ನಸ್ಥೇ ತ್ರಿದಿಶಾಚಾರ್ಯೇ ಧನಾಯಸ್ಥೈಃ ಪರಗ್ರಹೈಃ ॥ ೬೫೭ ॥

ಗತಸ್ಯ ರಾಜ್ಞೋಽರಿಸೇನಾ ನೀಯತೇ ಯಮಮಂದಿರಂ ।
ಲಗ್ನೇ ಶುಕ್ರೇ ರವೌ ಲಾಭೇ ಚಂದ್ರೇ ಬಂಧುಸ್ಥಿತೇ ಯದಾ ॥ ೬೫೮ ॥

ಗತೋ ನೃಪೋ ರಿಪೂನ್ಹಂತಿ ಕೇಸರೀ ವೇಭಸಂಹತಿಂ ।
ಸ್ವೋಚ್ಚಸಂಸ್ಥೇ ಸಿತೇ ಲಗ್ನೇ ಸ್ವೋಚ್ಚೇ ಚಂದ್ರೇ ಚ ಲಾಭಗೇ ॥ ೬೫೯ ॥

---

ವ್ಯಾಪಾರ ಶತ್ರು ಮತ್ತು ಮೂರ್ತಿಭಾವಗಳಲ್ಲಿದ್ದರೆ ಯುದ್ಧಕ್ಕಾಗಿ ಹೊರಟ ರಾಜನಿಗೆ ನಿಜವಾಗಿಯೂ ಜಯಲಕ್ಷ್ಮಿಯು ಪ್ರಾಪ್ತವಾಗುವಳು ಅಥವಾ ಲಗ್ನ ಚತುರ್ಥ, ಸಪ್ತಮ, ತೃತೀಯ ಮತ್ತು ಷಷ್ಠಸ್ಥಾನಗಳಲ್ಲಿ ಕ್ರಮವಾಗಿ ಶುಕ್ರ ರವಿ, ಬುಧ, ಶನಿ, ಕುಜ ಇವರು ಇರುವಾಗ ಹೊರಟ ರಾಜನಿಗೆ ಶತ್ರುಸೈನ್ಯವು ಬೆಂಕಿಯಲ್ಲಿ ಅರಗು ಕರಗಿ ಹೋಗುವಂತೆ ಧ್ವಂಸವಾಗಿ ಹೋಗುವುದು ಲಗ್ನದಲ್ಲಿ ಗುರುವೂ, ದ್ವಿತೀಯ ಮತ್ತು ಏಕಾದಶಸ್ಥಾನಗಳಲ್ಲಿ ಇತರ ಗ್ರಹಗಳೂ ಇದ್ದರೆ ಶತ್ರುಸೇನೆಯು ಸುಲಭವಾಗಿ ನಾಶವಾಗುವುದು. ಲಗ್ನದಲ್ಲಿ ಶುಕ್ರ ಲಾಭಸ್ಥಾನದಲ್ಲಿ ರವಿ, ಚತುರ್ಥದಲ್ಲಿ ಚಂದ್ರ ಹೀಗಿರುವಾಗ ಪ್ರಯಾಣಮಾಡಿದರೆ ಸಿಂಹವು ಆನೆಗಳನ್ನು ಲೀಲಾಮಾತ್ರದಿಂದ ಕೊಲ್ಲುವಂತೆ ರಾಜನು ಶತ್ರುಗಳನ್ನು ಸುಲಭವಾಗಿ ನಾಶಮಾಡುವನು.

೬೫೯-೬೬೫. ಶುಕ್ರನು ಲಗ್ನದಲ್ಲಿ ಉಚ್ಚನಾಗಿರುವಾಗ ಚಂದ್ರನು ಉಚ್ಚರಾಶಿಯಲ್ಲಾಗಲೀ, ಲಾಭದಲ್ಲಾಗಲೀ ಇರುವಾಗ ಪ್ರಯಾಣಮಾಡಿದ ರಾಜನು ಕೃಷ್ಣನು ಪೂತನಿಯೆಂಬ ರಾಕ್ಷಸಿಯ ಪ್ರಾಣವನ್ನು ಹೀರಿದಂತೆ ಶತ್ರುಗಳ ಸಾರವನ್ನೆಲ್ಲಾ ನಾಶಮಾಡಿಬಿಡುವನು. ಸೌಮ್ಯಗ್ರಹಗಳು ತ್ರಿಕೋಣ

ಹಂತಿ ಯಾತೋರಿಪ್ವತನಾಂ ಕೇಶವಃ ಪೂತನಾಮಿವ ।
ತ್ರಿಕೋಣೇ ಕೇಂದ್ರಗಾಃ ಸೌಮ್ಯಾಃ ಕ್ರೂರಾಖ್ಯಾಯಾರಿಗಾ ಯದಿ ॥ ೬೬೦ ॥

ಯಸ್ಯ ಯಾತೋರಲಕ್ಷ್ಮೀಸ್ತಮುಪೈತೀವಾಭಿಸಾರಿಕಾ ।
ಜೀವಾರ್ಕಚಂದ್ರಾ ಲಗ್ನಾರಿರಂಧ್ರಗಾ ಯದಿ ಗಚ್ಛತಃ ॥ ೬೬೧ ॥

ತಸ್ಯಾಗ್ರೇ ಖಿಲವೈತ್ರೀವ ನ ಸ್ಥಿರಾ ರಿಪುವಾಹಿನೀ ।
ತ್ರಿಷಡಾಯೇಷು ಮಂದಾರೌ ಬಲವಂತಃ ಶುಭಾ ಯದಿ ॥ ೬೬೨ ॥

ಯಾತ್ರಾಯಾಂ ನೃಪತೇಸ್ತಸ್ಯ ಹಸ್ತಸ್ಥಾ ಶತ್ರುಮೇದಿನೀ ।
ಸ್ವೋಚ್ಚಸ್ಥೇ ಲಗ್ನಗೇ ಜೀವೇ ಚಂದ್ರೇ ಲಾಭಗತೇ ಯದಿ ॥ ೬೬೩ ॥

ಗತೋ ರಾಜಾ ರಿಪೂನ್ಹಂತಿ ಪಿನಾಕೀ ತ್ರಿಪುರಂ ಯಥಾ ।
ಮಸ್ತಕೋದಯಗೇ ಶುಕ್ರೇ ಲಗ್ನಸ್ಥೇ ಲಾಭಗೇ ಗುರೌ ॥ ೬೬೪ ॥

---

ಮತ್ತು ಕೇಂದ್ರಗಳಲ್ಲಿದ್ದು ಕ್ರೂರಗ್ರಹಗಳು ಮೂರು, ಆರು ಮತ್ತು ಹನ್ನೊಂದರಲ್ಲಿದ್ದಾಗ ಪ್ರಯಾಣಮಾಡಿದರೆ ಸಂಪತ್ತು ತಾನಾಗಿಯೇ ಸ್ವೈರಿಣಿಯಾದ ಸ್ತ್ರೀಯು ಪುರುಷನನ್ನು ಹಿಂಬಾಲಿಸಿ ಬರುವಂತೆ ಬರುವುದು. ಮತ್ತು ಗುರು ಸೂರ್ಯ, ಚಂದ್ರರು ಕ್ರಮವಾಗಿ ಲಗ್ನ, ಷಷ್ಠಸ್ಥಾನ ಮತ್ತು ಅಷ್ಟಮರಾಶಿ ಇವುಗಳಲ್ಲಿದ್ದರೆ ಆಗ ಪ್ರಯಾಣ ಮಾಡಿದ ರಾಜನ ಶತ್ರುಸೈನ್ಯವು ಕಣದಲ್ಲಿ ಉಂಟಾದ ಸ್ನೇಹದಂತೆ ಉತ್ತರಕ್ಷಣದಲ್ಲಿಯೇ ಮಾಯವಾಗುವುದು. ಅಥವಾ ಮೂರು, ಆರು ಮತ್ತು ಹನ್ನೊಂದರಲ್ಲಿ ಶನಿ, ಕುಜರು, ಅಥವಾ ಬಲಿಷ್ಠವಾದ ಗ್ರಹಗಳು ಇರುವುದಾದರೆ ಆಗ ಪ್ರಯಾಣಮಾಡಿದರೆ ಶತ್ರುಭೂಮಿಯು ಅನಾಯಾಸವಾಗಿ ಹಸ್ತಗತವಾಗುವುದು. ಅಥವಾ ಗುರು ಉಚ್ಚನಾಗಿ ಲಗ್ನದಲ್ಲಿದ್ದು ಚಂದ್ರನು ಉಚ್ಚನಾಗಿ ಲಾಭದಲ್ಲಿರುವಾಗ ದಿಗ್ವಿಜಯಕ್ಕೆ ಹೊರಟ ರಾಜನು ಈಶ್ವರನು ತ್ರಿಪುರಾಸುರಪಟ್ಟಣವನ್ನು ನಾಶಮಾಡಿದಂತೆ ಶತ್ರುಗಳ ದೇಶವನ್ನೆಲ್ಲಾ ನಾಶಮಾಡುತ್ತಾನೆ. ಮತ್ತು ಶುಕ್ರನು ಶೀರ್ಷೋದಯರಾಶಿಯಲ್ಲಿದ್ದು ಲಗ್ನಗತನಾದಾಗ ಗುರು ಲಾಭದಲ್ಲಿದ್ದರೆ ಪ್ರಯಾಣಮಾಡಿದ ರಾಜನು ಷಣ್ಮುಖಸ್ವಾಮಿಯು ತಾರಕಾಸುರನನ್ನು ಕೊಂದಂತೆ ಶತ್ರುಗಳನ್ನೆಲ್ಲಾ ನಾಶಮಾಡುವನು.

ಗತೋ ರಾಜಾ ರಿಪೂನ್ಹಂತಿ ಕುಮಾರಸ್ತಾರಕಂ ಯಥಾ ।
ಜೀವೇ ಲಗ್ನಗತೇ ಶುಕ್ರೇ ಕೇಂದ್ರೇ ವಾಪಿ ತ್ರಿಕೋಣಗೇ ॥ ೬೬೫ ॥

ಗತೋ ದಹತ್ಯರೀನ್ರಾಜಾ ಕೃಷ್ಣವರ್ತ್ಮಾ ಯಥಾ ವನಂ ।
ಲಗ್ನಗೇ ಜ್ಞೇ ಶುಭೇ ಕೇಂದ್ರೇ ಧಿಷ್ಣ್ಯೇ ಚೋಪಕುಲೇ ಗತಃ ॥ ೬೬೬ ॥

ನೃಪಾಃ ಶುಷ್ಯಂತ್ಯರೀಣ್ಗ್ರೀಷ್ಮೇ ಹ್ರಾದಿನೀಂ ವಾರ್ಕರಶ್ಮಯಃ ।
ಶುಭೇ ತ್ರಿಕೋಣೇ ಕೇಂದ್ರಸ್ಥೇ ಲಾಭೇ ಚಂದ್ರೇಽಥವಾ ರವೌ ॥ ೬೬೭ ॥

ಶತ್ರೂನ್ಹಂತಿ ಗತೋ ರಾಜಾ ಹ್ಯಂಧಕಾರಂ ಯಥಾ ರವಿಃ ।
ಸ್ವಕ್ಷೇತ್ರಗೇ ಶುಭೇ ಕೇಂದ್ರೇ ತ್ರಿಕೋಣಾಯಗತೇ ಗತಃ ॥ ೬೬೮ ॥

ವಿನಾಶಯತ್ಯರೀನ್ರಾಜಾ ತೂಲರಾಶಿಮಿವಾನಲಃ ।
ಇಂದೌ ಸ್ವಸ್ಥೇ ಗುರೌ ಕೇಂದ್ರೇ ಮಂತ್ರಃ ಸಪ್ರಣವೋ ಗತಃ ॥ ೬೬೯ ॥

ಅಥವ ಶುಕ್ರನು ಕೇಂದ್ರ ಅಥವ ತ್ರಿಕೋಣರಾಶಿಯಲ್ಲಿದ್ದು ಗುರು ಲಗ್ನದಲ್ಲಿ ದ್ದಾಗ ದಿಗ್ವಿಜಯಾರ್ಥವಾಗಿ ಹೊರಟ ರಾಜನು ಅಗ್ನಿಯು ದಟ್ಟವಾದ ಕಾಡನ್ನು ದಹಿಸುವಂತೆ ಶತ್ರುಮೂಲವನ್ನೆಲ್ಲಾ ಸುಟ್ಟುಹಾಕುವನು.

೬೬೬-೬೭೦. ಲಗ್ನದಲ್ಲಿ ಬುಧನೂ, ಕೇಂದ್ರಗಳಲ್ಲಿ ಶುಭಗ್ರಹಗಳೂ ಇದ್ದು ನಕ್ಷತ್ರವು ಅನುಕೂಲವಾಗಿರುವ ಮುಹೂರ್ತದಲ್ಲಿ ದಿಗ್ವಿಜಯಕ್ಕೆ ಹೊರಟ ರಾಜನು ಸೂರ್ಯನ ಕಿರಣಗಳು ಬೇಸಿಗೆಯಲ್ಲಿ ಕೊಳಗಳನ್ನು ಬತ್ತಿಸುವಂತೆ ಶತ್ರುಗಳ ಪರಿವಾರವನ್ನು ನಾಶಮಾಡುವನು. ತ್ರಿಕೋಣಗಳಲ್ಲಿ ಶುಭಗ್ರಹ ಗಳೂ, ಕೇಂದ್ರದಲ್ಲಾಗಲೀ, ಲಾಭಸ್ಥಾನದಲ್ಲಾಗಲೀ ಚಂದ್ರ ಅಥವ ಬುಧರೂ ಇದ್ದರೆ ರವಿಯು ಕತ್ತಲೆಯನ್ನು ಧ್ವಂಸಮಾಡುವಂತೆ ರಾಜನು ಶತ್ರುಗಳನ್ನು ನಿಗ್ರಹಿಸುವನು. ಶುಭಗ್ರಹಗಳು ಸ್ವಕ್ಷೇತ್ರಗತರಾಗಿದ್ದು ಚಂದ್ರನು ಕೇಂದ್ರ ತ್ರಿಕೋಣ ಅಥವ ಏಕಾದಶಸ್ಥಾನಗತನಾಗಿದ್ದರೆ ಅಗ್ನಿಯು ಹತ್ತಿಯರಾಶಿ ಯನ್ನು ಸುಡುವಂತೆ ರಾಜನು ಶತ್ರುಗಳನ್ನು ಅನಾಯಾಸವಾಗಿ ನಿಗ್ರಹಿಸುವನು. ಚಂದ್ರನು ಸ್ವಕ್ಷೇತ್ರದಲ್ಲಿಯೂ ಗುರುವು ಕೇಂದ್ರದಲ್ಲಿಯೂ ಇದ್ದರೆ ಮಂತ್ರವು

ನೃಪೋ ಹಂತಿ ರಿಪೂನ್ಸರ್ವಾನ್ಪಾಪಾನ್ಪಂಚಾಕ್ಷರೋ ಯಥಾ ।
ವರ್ಗೋತ್ತಮಗತೇ ಶುಕ್ರೇ ಹ್ಯೇಕಸ್ಮಿನ್ನೇವ ಲಗ್ನಗೇ ॥ ೬೭೦ ॥

ಹರಿಸ್ಮೃತಿರ್ಯಥಾಘೌಘಾನ್ಹಂತಿ ಶತ್ರೂನ್ಗತೋ ನೃಪಃ ।
ಶುಭೇ ಕೇಂದ್ರೇ ತ್ರಿಕೋಣಸ್ಥೇ ಚಂದ್ರೇ ವರ್ಗೋತ್ತಮೇ ಗತಃ ॥ ೬೭೧ ॥

ಸಗೋತ್ರಾರೀನ್ನೃಪಾನ್ಹಂತಿ ಯಥಾ ಗೋತ್ರಾಂಸ್ತು ಗೋತ್ರಭಿತ್ ।
ಮಿತ್ರಭೇಽಥ ಗುರೌ ಕೇಂದ್ರೇ ತ್ರಿಕೋಣಸ್ಥೇಽಥವಾ ಸಿತೇ ॥ ೬೭೨ ॥

ಶತ್ರೂನ್ಹಂತಿ ಗತೋ ರಾಜಾ ಭುಜಂಗಾನ್ಗರುಡೋ ಯಥಾ ।
ಶುಭಕೇಂದ್ರತ್ರಿಕೋಣಸ್ಥೇ ವರ್ಗೋತ್ತಮಗತೇ ಗತಃ ॥ ೬೭೩ ॥

ವಿನಾಶಯತ್ಯರೀನ್ರಾಜಾ ಪಾಪಾನ್ಭಾಗೀರಥೀ ಯಥಾ ।
ಯೇ ನೃಪಾ ಯಾಂತ್ಯರೀಞ್ಜೇತುಂ ತೇಷಾಂ ಯೋಗೈರ್ನೃಪಾಹ್ವಯೈಃ ॥

---

ಪ್ರಣವದೊಡನೆ ಕೂಡಿವಂತೆ ಯೋಗವು ಬಲಿಷ್ಠವಾಗಿ, ಶಿವಪಂಚಾಕ್ಷರಮಂತ್ರವು ಸಕಲ ಪಾಪಗಳನ್ನೂ ನಾಶಮಾಡುವಂತೆ ಶತ್ರುವೃಂದವನ್ನೆಲ್ಲಾ ಧ್ವಂಸ ಮಾಡುವುದು.

೬೭೧-೬೭೪. ಶುಕ್ರನು ವರ್ಗೋತ್ತಮಗತನಾಗಿ ಲಗ್ನದಲ್ಲಿ ಯಾವ ಸಂಬಂಧವೂ ಇಲ್ಲದೇಇರುವಾಗ ದಿಗ್ವಿಜಯಕ್ಕೆ ಹೊರಟ ರಾಜನು ಹರಿಸ್ಮರಣೆಯು ಪಾಪರಾಶಿಯನ್ನು ತೊಲಗಿಸುವಂತೆ ಶತ್ರುಗಳನ್ನು ಸುಲಭವಾಗಿ ಕೊಡೆದು ಓಡಿಸುವನು.

ಕೇಂದ್ರ, ತ್ರಿಕೋಣಗಳು, ಶುಭಗ್ರಹಾಕ್ರಾಂತರಾಗಿ ಚಂದ್ರನು ವರ್ಗೋತ್ತಮಸ್ಥಾನದಲ್ಲಿದ್ದಾಗ ಪ್ರಯಾಣಮಾಡಿದವನು ಇಂದ್ರನು ಪರ್ವತಗಳನ್ನು ಸದೆಬಡಿದಂತೆ ಶತ್ರುಗಳ ಸಮೂಹವನ್ನು ಮುರಿವಟ್ಟುವನು.

ಗುರುವು ಮಿತ್ರಕ್ಷೇತ್ರಗತನಾಗಿ ಕೇಂದ್ರದಲ್ಲಿದ್ದು ಶುಕ್ರನು ಹಾಗೆಯೇ ತ್ರಿಕೋಣದಲ್ಲಿದ್ದರೆ ಗರುಡನು ಸರ್ಪಗಳನ್ನು ಓಡಿಸುವಂತೆ ರಾಜನು ಶತ್ರುಗಳನ್ನು ಧ್ವಂಸಮಾಡುವನು.

ಉಪೈತಿ ಶಾಂತಿಂ ಕೋಪಾಗ್ನಿಃ ಶತ್ರುಯೋಷಾಶ್ರುಬಿಂದುಭಿಃ ।
ಆಶ್ವಯುಜಶುದ್ಧದಶಮೀ ಸಿದ್ಧಿದಾ ವಿಜಯಾಭಿಧಾ ॥ ೬೭೫ ॥

ವಿಜಯಸ್ತತ್ರ ಯಾತ್ರಾಣಾಂ ಸಂಧಿರ್ವಾ ನ ಪರಾಜಯಃ ।
ನಿಮಿತ್ತಶಕುನಾದಿಭ್ಯಃ ಪ್ರಧಾನಂ ಹಿ ಮನೋದಯಃ ॥ ೬೭೬ ॥

ತಸ್ಮಾನ್ಮನಸ್ವಿನಾಂ ಯಸ್ಮಾತ್ಫಲಹೇತುರ್ಮನೋದಯಃ ।
ಉತ್ಸವೋಪನಯೋದ್ವಾಹಪ್ರತಿಷ್ಠಾಶೌಚಸೂತಕೇ ॥ ೬೭೭ ॥

ಅಸಮಾಪ್ತೇ ನ ಕುರ್ವೀತ ಯಾತ್ರಾಂ ಮರ್ತ್ಯೋ ಜಿಜೀವಿಷುಃ ।
ಮಹಿಷೋಷ್ಟ್ರ(?)ದುರಯೋರ್ಯುದ್ಧೇ ಕಲತ್ರಕಲಹಾರ್ತವೇ ॥ ೬೭೮ ॥

ಶುಕ್ರನು (ಶುಭಗ್ರಹಗಳು) ಕೇಂದ್ರತ್ರಿಕೋಣಗತರಾಗಿ ವರ್ಗೋತ್ತಮಾಂಶದಲ್ಲಿ ಇರುವವರಾದರೆ ಆಗ ಪ್ರಯಾಣಮಾಡಿದವನು ಗಂಗೆಯು ಮಾನವರ ಪಾಪಸಮೂಹವನ್ನು ತೊಳೆಯುವಂತೆ ರಾಜನು ಶತ್ರುಜಾಲವನ್ನು ಮುಳುಗಿಸಿಬಿಡುವನು. ಈರೀತಿಯಾಗಿ ಇಲ್ಲಿನವರೆಗೆ ಹೇಳಿದ ರಾಜಯೋಗಗಳಲ್ಲಿ ಪ್ರಯಾಣಮಾಡಿದವರ ಕೋಪಾಗ್ನಿಯು ಶತ್ರುಸ್ತ್ರೀಯರ ಕಣ್ಣೀರಿನ ಕೋಡಿಯಿಂದ ಶಾಂತವಾದೀತು.

೬೭೫-೬೭೬. ಆಶ್ವಯುಜ ಶುದ್ಧ ದಶಮಿಯ ತಿಥಿಯನ್ನು ವಿಜಯದಶಮಿಯೆಂದು ಕರೆಯುವರು. ಆ ದಿವಸ ದಿಗ್ವಿಜಯಕ್ಕಾಗಿ ಹೊರಟ ರಾಜನಿಗೆ ಸ್ನೇಹ ಅಥವ ವಿಜಯ ಇವು ದೊರಕುವುದೇ ಹೊರತು ಪರಾಜಯ ಎಂದಿಗೂ ಲಭಿಸಲಾರದು. ನಿಮಿತ್ತಗಳಿಂದಲೂ, ಶಕುನಗಳಿಂದಲೂ ಮನೋದಾರ್ಢ್ಯವನ್ನು ಪಡೆಯಬಹುದು. ಶೂರರಾದವರಿಗೆ ಮನೋನಿಶ್ಚಯಕ್ಕಿಂತ ಬೇರೆಯದಾದ ಕಾರ್ಯಸಿದ್ಧಿಯು ಬೇಕಿಲ್ಲ.

೬೭೭-೬೮೪. ಉತ್ಸವ, ಉಪನಯನ, ವಿವಾಹ ದೇವತಾಪ್ರತಿಷ್ಠೆ ಆಶೌಚ, ಸೂತಕ, (ಜಾತಾಶೌಚ) ಇವುಗಳು ಪೂರ್ತಿಯಾದ ಹೊರತೂ ಮಧ್ಯೆ ಪ್ರಯಾಣಮಾಡಬಾರದು. ಪ್ರಯಾಣಕಾಲದಲ್ಲಿ ಎಮ್ಮೆಗಳು, ಬೆಕ್ಕುಗಳು

ವಸ್ತ್ರಾದೇಃ ಸ್ಖಲಿತೇ ಕ್ರೋಧೇ ದುರುಕ್ತೇ ನ ವ್ರಜೇನ್ನೃಪಃ ।
ಘೃತಾನ್ನಂ ತಿಲಪಿಷ್ಟಾನ್ನಂ ಮತ್ಸ್ಯಾನ್ನಂ ಘೃತಪಾಯಸಂ ॥ ೬೭೯ ॥

ಪ್ರಾಗಾದಿಕ್ರಮಶೋ ಭುಕ್ತ್ವಾ ಯಾತಿ ರಾಜಾ ಜಯತ್ಯರೀನ್।
ಸಜ್ಜಿಕಾ ಪರಮಾನ್ನಂ ಚ ಕಾಂಜಿಕಂ ಚ ಪಯೋ ದಧಿ ॥ ೬೮೦ ॥

ಕ್ಷೀರಂ ತಿಲೋದನಂ ಭುಕ್ತ್ವಾ ಭಾನುವಾರಾದಿಷು ಕ್ರಮಾತ್ ।
ಕುಲ್ಮಾಷಾಂಶ್ಚ ತಿಲಾನ್ನಂ ಚ ದಧಿಕ್ಷೌದ್ರಂ ಘೃತಂ ಪಯಃ ॥ ೬೮೧ ॥

ಮೃಗಮಾಂಸಂ ಚ ತತ್ಸಾರಂ ಪಾಯಸಂ ಚ ಖಗಂ ಮೃಗಂ ।
ಶಶಮಾಂಸಂ ಚ ಷಾಷ್ಟಿಕ್ಯಂ ಪ್ರಿಯಂಗುಕಮಪೂಪಕಂ ॥ ೬೮೨ ॥

ಚಿತ್ರಾಂಡಜಫಲಂ ಕೌರ್ಮಂಶ್ವಾವಿದ್ಗೋಧಾಂಶ್ಚ ಶಾಸ್ಯಕಂ ।
ಹವಿಷ್ಯಂ ಕೃಶರಾನ್ನಂ ಚ ಮುದ್ಗಾನ್ನಂ ಯವಪಿಷ್ಟಕಂ ॥ ೬೮೩ ॥

ಜಗಳವಾಡಿದರೆ (ಪರಸ್ಪರವಾಗಿ ಎಮ್ಮೆಗಳೂ ಮತ್ತು ಬೆಕ್ಕುಗಳೂ ಜಗಳವಾಡಿದರೆ) ಅಥವ ಹೆಂಡತಿಯು ಕಲಹಕ್ಕೆ ನಿಂತರೆ ಅಥವ ಹೆಂಡತಿಯು ಬಹಿಷ್ಠೆಯಾದರೆ ಅಥವ ಉಟ್ಟ ಬಟ್ಟೆಯು ಜಾರಿದರೆ ಅಥವ ಕೆಟ್ಟಮಾತುಗಳು ಬಾಯಿಂದ ಬಂದರೆ ಪ್ರಯಾಣಮಾಡಬಾರದು. ಜಯಾಪೇಕ್ಷೆಯುಳ್ಳ ರಾಜನು ಪೂರ್ವಾದಿ ದಿಕ್ಕುಗಳಿಗೆ ಪ್ರಯಾಣಮಾಡುವಾಗ ಕ್ರಮವಾಗಿ ತುಪ್ಪದ ಅನ್ನ, ಎಳ್ಳುಹುಡೀ ಅನ್ನ, ಮೀನಿನಿಂದ ಕೂಡಿ ಪಕ್ವವಾದ ಅನ್ನ, ಪಾಯಸ ಈ ಆಹಾರಗಳನ್ನು ಊಟಮಾಡಿ ಪ್ರಯಾಣಮಾಡಬೇಕು. ಇನ್ನು ವಾರಸಿದ್ಧಿಗಾಗಿ ಭಾನುವಾರಾದಿಯಾಗಿ ಕ್ರಮದಿಂದ ಸಜ್ಜಿಗೆ ಪರಮಾನ್ನ, ಗಂಜಿ, ಹಾಲು ಮೊಸರು, ಹಾಲು, ಎಳ್ಳನ್ನ ಇವುಗಳನ್ನು ಭಕ್ಷಿಸಿ ಹೊರಡಬೇಕು. ಇನ್ನು ಅಶ್ವಿನ್ಯಾದಿಯಾಗಿ ೨೭ ಇಪ್ಪತ್ತೇಳು ನಕ್ಷತ್ರಗಳಿಗೆ ಕ್ರಮವಾಗಿ ಕುಲ್ಮಾಷ, ಎಳ್ಳನ್ನ, ಮೊಸರು, ಜೇನುತುಪ್ಪ, ತುಪ್ಪ, ಹಾಲು, ಮೃಗಮಾಂಸ, ಮಾಂಸಾನ್ನ ಮಾಂಸಸಾರ, ಪಾಯಸ, ಪಕ್ಷಿಗಳು ಮೃಗಗಳು, ಮೊಲದ ಮಾಂಸ, ಷಾಷ್ಟಿಕ್ಯ ಪ್ರಿಯಂಗು, ಒಬ್ಬಟ್ಟು ಚಿತ್ರವಿಚಿತ್ರವಾದ ಮೊಟ್ಟೆಗಳು, ಹಣ್ಣು, ಆಮೆಯಮಾಂಸ ನಾಯಿಯಮಾಂಸ, ಬೆಕ್ಕಿನಮಾಂಸ, ಹವಿಸ್ಸು, ಎಳ್ಳನ್ನ, ಹೆಸರನ್ನ, ಅಕ್ಕಿಯ

ಮತ್ಸ್ಯಾನ್ನಂ ಚ ವಿಚಿತ್ರಾನ್ನಂ ದಧ್ಯನ್ನಂ ದಸ್ರಭಾಕ್ಕ್ರಮಾತ್ ।
ಭುಕ್ತ್ವಾ ರಾಜೇಭಾಶ್ವರಥನರೈರ್ಯಾತಿ ಜಯತ್ಕರೀನ್ ॥ ೬೮೪ ॥

ಹುತಾಶನಂ ತಿಲೈರ್ಹುತ್ವಾ ಪೂಜಯೇತ ದಿಗೀಶ್ವರಂ ।
ಪ್ರಣಮ್ಯ ದೇವಭೂದೇವಾನಾಶೀರ್ವಾದೈರ್ನೃಪೋ ವ್ರಜೇತ್ ॥ ೬೮೫ ॥

ಯದ್ವರ್ಣವಸ್ತ್ರಗಂಧಾದ್ಯೈಸ್ತನ್ಮಂತ್ರೇಣ ವಿಧಾನತಃ ।
ಇಂದ್ರಮೈರಾವತಾರೂಢಂ ಶಚ್ಯಾ ಸಹ ವಿರಾಜಿತಂ ॥ ೬೮೬ ॥

ವಜ್ರಪಾಣಿಂ ಸ್ವರ್ಣವರ್ಣಂ ದಿವ್ಯಾಭರಣಭೂಷಿತಂ ।
ಸಪ್ತಹಸ್ತಂ ಸಪ್ತಜಿಹ್ವಂ ಷಣ್ಮುಖಂ ಮೇಷವಾಹನಂ ॥ ೬೮೭ ॥

ಸ್ವಾಹಾಪ್ರಿಯಂ ರಕ್ತವರ್ಣಂ ಸ್ರುಕ್ಸ್ರುವಾಯುಧಧಾರಿಣಂ ।
ದಂಡಾಯುಧಂ ಲೋಹಿತಾಕ್ಷಂ ಯಮಂ ಮಹಿಷವಾಹನಂ ॥ ೬೮೮ ॥

ಹಿಟ್ಟು, ಮೀನಿನ ಅನ್ನ, ಚಿತ್ರಾನ್ನ, ಮೊಸರನ್ನ ಇವುಗಳನ್ನು ಭಕ್ಷಿಸಿ ಪಟ್ಟದ ಆನೆ, ಪಟ್ಟದ ಕುದುರೆ, ರಥ ಮತ್ತು ಸೇನಾನೀ ಇವರೊಡನೆ ಶತ್ರುಜಯಕ್ಕಾಗಿ ವಿಜಯ ಯಾತ್ರೆಯನ್ನು ಮಾಡಬೇಕು.

೯೮೫-೬೯೭. ದಿಗ್ವಿಜಯ ಪ್ರಯಾಣಕ್ಕೆ ಮೊದಲು ರಾಜನು ಅಗ್ನಿಯಲ್ಲಿ ವಿಧಿವತ್ತಾಗಿ ದಿಕ್ಪಾಲಕರಿಗೆ ತಿಲದಿಂದ ಆಹುತಿಯನ್ನು ಕೊಟ್ಟು ಆಮೂಲಕ ಅಗ್ನಿಯನ್ನು ಆರಾಧಿಸಿ, ದೇವಬ್ರಾಹ್ಮಣರಿಗೆ ನಮಸ್ಕಾರಮಾಡಿ ಅವರ ಆಶೀರ್ವಾದವನ್ನು ಪಡೆದು ಪ್ರಯಾಣಮಾಡಬೇಕು. ದಿಕ್ಪಾಲಕರ ವರ್ಣವನ್ನನುಸರಿಸಿ ವಸ್ತ್ರಗಂಧಾದಿಗಳನ್ನೂ, ಅವರವರ ಮಂತ್ರಗಳನುಚ್ಚರಿಸುತ್ತಾ ಅರ್ಚನೆಮಾಡಿ ಈರೀತಿ ದಿಕ್ಪಾಲಕರನ್ನು ಧ್ಯಾನಮಾಡಬೇಕು.

"ಇಂದ್ರನು ವಜ್ರಪಾಣಿಯಾಗಿ ಸುವರ್ಣವರ್ಣದಿಂದ ಶಚೀದೇವಿಯೊಡನೆ ಐರಾವತವೆಂಬ ಆನೆಯನ್ನು ಹತ್ತಿ ದಿವ್ಯಾಭರಣಗಳಿಂದ ಪ್ರಕಾಶಿಸುತ್ತಿರುವನು.

'ಅಗ್ನಿಗೆ ಏಳು ಕೈಗಳು. ನಾಲಿಗೆಗಳು ಏಳು. (ಆರು ಮುಖಗಳು) ಮೇಷವೇ ಅವನ ವಾಹನ, ಸ್ವಾಹಾದೇವಿಯು ಅಗ್ನಿಯ ಪತ್ನಿಯು. ಇವನು ಕೆಂಪು ಬಣ್ಣದಿಂದ ಸ್ರುಕ್ ಸ್ರುವಗಳನ್ನೇ ಆಯುಧಗಳನ್ನಾಗಿ ಧರಿಸಿರುವನು.

**ಶ್ಯಾಮಲಂ ಸಹಿತಂ ರಕ್ತವರ್ಣೈರೂರ್ಧ್ವಮುಖಂ ಶುಭಂ ।**
**ಖಡ್ಗಚರ್ಮಧರಂ ನೀಲಂ ನಿರ್ಋತಿಂ ನರವಾಹನಂ ॥ ೬೮೯ ॥**

**ಊರ್ಧ್ವಕೇಶಂ ವಿರೂಪಾಕ್ಷಂ ದೀರ್ಘಗ್ರೀವಾಯುತಂ ವಿಭುಂ ।**
**ನಾಗಪಾಶಧರಂ ಪೀತವರ್ಣಂ ಮಕರವಾಹನಂ ॥ ೬೯೦ ॥**

**ವರುಣಂ ಕಾಲಿಕಾನಾಥಂ ರತ್ನಾಭರಣಭೂಷಿತಂ ।**
**ಪ್ರಾಣಿನಾಂ ಪ್ರಾಣರೂಪಂ ತಂ ದ್ವಿಬಾಹುಂ ದಂಡಪಾಣಿಕಂ ॥ ೬೯೧ ॥**

**ವಾಯುಂ ಕೃಷ್ಣಮೃಗಾರೂಢಂ ಪೂಜಯೇದಂಜನಾಪತಿಂ ।**
**ಅಶ್ವಾರೂಢಂ ಕುಂಭಪಾಣಿಂ ದ್ವಿಬಾಹುಂ ಸ್ವರ್ಣಸನ್ನಿಭಂ ॥ ೬೯೨ ॥**

**ಕುಬೇರಂ ಚಿತ್ರಲೇಖೇಶಂ ಯಕ್ಷಗಂಧರ್ವನಾಯಕಂ ।**
**ಪಿನಾಕಿನಂ ವೃಷಾರೂಢಂ ಗೌರೀಪತಿಮನುತ್ತಮಂ ॥ ೬೯೩ ॥**

ಯಮನು ದಂಡಾಯುಧಧಾರಿಯು. ಕೆಂಪಾದ ಕಣ್ಣುಗಳುಳ್ಳವನು. ಮಹಿಷವಾಹನನು. ಶ್ಯಾಮಲಾದೇವಿಯ ಪತಿಯೆನಿಸಿ ಊರ್ಧ್ವಮುಖಿಯಾಗಿ ರಕ್ತವರ್ಣದಿಂದ ಶೋಭಿಸುವನು.

ನಿರ್ಋತಿಯು ಖಡ್ಗ, ಚರ್ಮ ಇವುಗಳನ್ನು ಧರಿಸಿ ನೀಲವರ್ಣವಿಶಿಷ್ಟನಾಗಿ ನರವಾಹನನೆಂದು ಪ್ರಸಿದ್ಧಿಪಡೆದು ಊರ್ಧ್ವಕೇಶ, ವಿರೂಪವಾದ (ವಿಕಾರವಾದ) ಕಣ್ಣು, ಉದ್ದವಾದ ಕತ್ತು ಇವುಗಳಿಂದ ಶೋಭಿಸುತ್ತಿರುವನು.

ವರುಣನಿಗೆ ನಾಗಪಾಶಗಳೇ ಆಯುಧಗಳು. ಪೀತವರ್ಣದಿಂದಲೂ ವಾಹನವಾದ ಮೊಸಳೆಯಿಂದಲೂ ಪ್ರಕಾಶಿಸುತ್ತಿರುವನು. ಕಾಲಿಕಾಪತಿಯಾಗಿ ರತ್ನಾಭರಣಭೂಷಿತನೆನಿಸಿಕೊಂಡಿರುವನು.

ವಾಯುವು ಪ್ರಾಣಿಗಳಲ್ಲಿ ಪ್ರಾಣರೂಪದಿಂದ ಸಂಚರಿಸತಕ್ಕವನು. ಎರಡು ಭುಜಗಳೂ ಒಂದು ಕೈಯಲ್ಲಿ ದಂಡವೂ ಇರುವುದು. ಕೃಷ್ಣಮೃಗವೇ ವಾಯುವಿಗೆ ವಾಹನವಾಗಿರುವುದು. ಅಂಜನಾದೇವಿಯು ವಾಯುವಿಗೆ ಪತ್ನಿಯಾಗಿರುವಳು.

ಶ್ವೇತವರ್ಣಂ ಚಂದ್ರಮೌಲಿಂ ನಾಗಯಜ್ಞೋಪವೀತಿನಂ ।
ಅಪ್ರಪಾಣೇ ಸ್ವಯಂ ಕಾರ್ಯಾ ಪ್ರೇಕ್ಷಯಾ ಭೂಭುಜಸ್ತಥಾ ॥ ೬೯೪ ॥

ಕಾರ್ಯಂ ನಿಗಮನಂ ಛತ್ರಂ ಧ್ವಜಶಸ್ತ್ರಾಸ್ತ್ರವಾಹನೈಃ ।
ಸ್ವಸ್ಥಾನಾನ್ನಿರ್ಗಮಸ್ಥಾನಂ ದಂಡಾನಾಂ ಚ ಶತದ್ವಯಂ ॥ ೬೯೫ ॥

ಚತ್ವಾರಿಂಶದ್ವಾದಶೈವ ಪ್ರಸ್ಥಿತಃ ಸ ಸ್ವಯಂ ಗತಃ ।
ದಿನಾನ್ಯೇಕತ್ರ ನ ವಸೇತ್ಸಪ್ತಷಡ್ವಾ ಪರೋ ಜನಃ ॥ ೬೯೬ ॥

ಪಂಚರಾತ್ರಂ ಚ ಪುರತಃ ಪುನರ್ಲಗ್ನಾಂತರೇ ವ್ರಜೇತ್ ।
ಅಕಾಲಜೇಷು ನೃಪತಿರ್ವಿದ್ಯುದ್ಗರ್ಜಿತವೃಷ್ಟಿಷು ॥ ೬೯೭ ॥

ಕುಬೇರನು ಅಶ್ವಾರೂಢನಾಗಿ ಕುಂಭವನ್ನೇ ಕೈಯಲ್ಲಿ ಹಿಡಿದು ಹೊರಡುವನು. ಇವನು ಸುವರ್ಣಕಾಂತಿಯಿಂದ ಶೋಭಿಸುವ ದ್ವಿಬಾಹುವುಳ್ಳವನು. ಚಿತ್ರಲೇಖಾದೇವಿಯು ಈ ಕುಬೇರನಿಗೆ ಪತ್ನಿಯಾಗಿರುವಳು. ಇವನು ಯಕ್ಷ ಮತ್ತು ಗಂಧರ್ವ ಇವರಿಗೆ ರಾಜನಾಗಿರುವನು.

ಈಶಾನನು ಗೌರೀಪತಿಯು. ವೃಷಭಾರೂಢನಾಗಿ ಇವನು ಪಿನಾಕಪಾಣಿಯೆನಿಸಿ ಶ್ವೇತವರ್ಣದಿಂದಲೂ, ನಾಗಯಜ್ಞೋಪವೀತದಿಂದಲೂ ಮೆರೆಯುವ ಚಂದ್ರಶೇಖರನೇ ಈಶಾನನೆಂದು ತಿಳಿಯಬೇಕು. ಈರೀತಿ ಅಷ್ಟದಿಕ್ಪಾಲಕರ ಸ್ವರೂಪವನ್ನು ಮನಸ್ಸಿನಲ್ಲಿ ಅನುಸಂಧಾನಮಾಡಿಕೊಳ್ಳಬೇಕು.

ರಾಜರು ಪ್ರಯಾಣಮಾಡುವಾಗ ತನ್ನ ಶರೀರಾದ್ಯಂತವೂ ಜನರಿಗೆ ಕಾಣದಂತೆಯೂ ಛತ್ರೀ, ಚಾಮರ, ಧ್ವಜ, ಶಸ್ತ್ರಾಸ್ತ್ರಗಳು ಇವುಗಳಿಂದ ರಾಜನ ಸ್ಥಾನವನ್ನು ಜನರು ಊಹಿಸುವಂತೆಯೂ ಇರಬೇಕು. ತಾನು ಹೊರಟು ಸೇರುವ ಪ್ರದೇಶವು ತಾನಿರುವ ಪ್ರದೇಶಕ್ಕಿಂತ ಇನ್ನೂರುಮೂರು (ದಂಡ) ಪ್ರಮಾಣದೊಳಗಿರಬೇಕು. ತಾನು ಪ್ರಯಾಣಮಾಡುವುದಾದರೆ ೪೦ ನಲವತ್ತಕ್ಕೆ ಮೀರದಂತೆಯೂ ೧೨ ಹನ್ನೆರಡು ದಂಡಕ್ಕೆ ಕಮ್ಮಿಯಿಲ್ಲದಂತೆಯೂ ಪ್ರಯಾಣಮಾಡಬಹುದು. ಶತ್ರುದೇಶದಲ್ಲಿ ಆರು, ಏಳು ದಿನಗಳು ಒಟ್ಟಾಗಿ ವಾಸಮಾಡಕೂಡದು. ಐದು ದಿನಗಳಾದ ಮೇಲೆ ಮುಂದೆ ಪ್ರಯಾಣಮಾಡಲು

ಸಪ್ತರಾತ್ರಂ ತು ತ್ರಿವಿಧೇಷೂತ್ಪಾತೇಷು ನ ಚ ವ್ರಜೇತ್ ।
ರಕ್ತಾ ಕುದ್ಯಶಿವಾಕಾಕಕಪೋತಾನಾಂ ಗಿರಸ್ತಥಾ ॥ ೬೯೮ ॥

ಝುರ್ಝುೀಭುಕ್ ಹೇಮವಕ್ಷೀರಸ್ವರಾಣಾಂ ವಾಮತೋ ಗತಿಃ ।
ಪೀತಕಾರಭರದ್ವಾಜಪಕ್ಷಿಣಾಂ ದಕ್ಷಿಣಾಗತಿಃ ॥ ೬೯೯

ಚಾಷಂ ತ್ಯಕ್ತ್ವಾ ಚತುಷ್ಪಾತ್ತು ಶುಭದಾ ವಾಮತೋ ಮತಾಃ ।
ಕೃಷ್ಣಂ ತ್ಯಕ್ತ್ವಾ ಪ್ರಯಾಣೇ ತು ಕೃಕಲಾಸೇನ ವೀಕ್ಷಿತಃ ॥ ೭೦೦ ॥

ವಾರಾಹಶಶಗೋಧಾಸ್ತು ಸರ್ಪಾಣಾಂ ಕೀರ್ತನಂ ಶುಭಂ ।
ಹೃತೇಕ್ಷಣಂ ನೇಷ್ಟಮೇವಾವ್ಯತ್ಯಯಂ ಕಪಿಋಕ್ಷಯೋಃ ॥ ೭೦೧ ॥

ಮಯೂರಚ್ಛಾಗನಕುಲಚಾಷಪಾರಾವತಾಃ ಶುಭಾಃ ।
ದೃಷ್ಟಮಾತ್ರೇಣ ಯಾತ್ರಾಯಾಂ ವ್ಯಸ್ತಂ ಸರ್ವಂ ಪ್ರವೇಶನೇ ॥ ೭೦೨ ॥

ಮತ್ತೊಂದು ಶುಭಲಗ್ನವನ್ನು ನೋಡಿಕೊಳ್ಳಬೇಕು. ಅಕಾಲದಲ್ಲಿ ಒದಗುವ ಮಿಂಚು, ಸಿಡಿಲು, ಮಳೆ ಉತ್ಪಾತತ್ರಯಗಳು ಇವುಗಳನ್ನು ನೋಡಿದಮೇಲೆ ಏಳುದಿನ ಸ್ಥಳವನ್ನು ಬಿಟ್ಟು ಕದಲಕೂಡದು ಇದರಿಂದ ರಾಜನಿಗೆ ಶ್ರೇಯಸ್ಸುಂಟಾಗುವುದು.

೬೯೮-೭೦೧. ಹದ್ದು, ಗರುಡ ಮತ್ತು ಬಿಳಿಯ ಹಕ್ಕಿಗಳು ಪ್ರಯಾಣ ಕಾಲದಲ್ಲಿ ಎಡಭಾಗಕ್ಕೆ ಹೋಗುವುದೂ, ಹೊಂಬಣ್ಣದ ಹಕ್ಕಿಗಳು (ಗುಬ್ಬಚ್ಚಿಯನ್ನು ಬಿಟ್ಟು) ಭರದ್ವಾಜಪಕ್ಷೀ ಇವು ಬಲಕ್ಕೆ ಹೋಗುವದೂ ಶುಭಶಕುನವೆನಿಸುವುದು. ನಾಲ್ಕು ಕಾಲಿನ ಪ್ರಾಣಿಗಳಲ್ಲಿ ಜಿಂಕೆಯನ್ನು ಬಿಟ್ಟು ಉಳಿದ ಪ್ರಾಣಿಗಳು ಎಡಕ್ಕೆ ಹೋಗುವದು ಒಳ್ಳೆಯದು. ಪ್ರಯಾಣಕಾಲದಲ್ಲಿ ಕೋಳಿಯಿಂದ ವೀಕ್ಷಿತವಾಗುವದೂ, ಹಂದೀ, ಮೊಲ, ಗೋಧಾ (ಉಡು) ಸರ್ಪ ಇವುಗಳನ್ನು ಸ್ಮರಿಸಿಕೊಳ್ಳುವುದೂ ಒಳ್ಳೆಯದು. ಕಣ್ಣಿಲ್ಲದ ಪ್ರಾಣಿಗಳನ್ನೂ ಕಪಿ, ಕರಡಿ ಇವುಗಳನ್ನೂ ನೋಡಿ ಹೊರಡುವುದು ಶುಭಕರವಲ್ಲ.

೭೦೨-೭೦೯. ನವಿಲು, ಆಡು, ಮುಂಗಸಿ, ಗುಬ್ಬಚ್ಚಿ, ಪಾರಿವಾಳಗಳು ಇವು ಶುಭಪ್ರದವಾದವುಗಳು. ಇವುಗಳ ದರ್ಶನಮಾತ್ರದಿಂದಲೇ ಪ್ರಯಾಣದ

ಯಾತ್ರಾಸಿದ್ಧಿರ್ಭವೇದ್ದೃಷ್ಟೇ ಸರ್ವರೋದನವರ್ಜಿತೇ ।
ಪ್ರವೇಶೇ ರೋದನಯುತಃ ಶವಃ ಶವಪ್ರದಸ್ತಥಾ ॥ ೭೦೩ ॥

ಪತಿತಕ್ಲೀಬಜಟಿಲಮತ್ತವಾಂತೌಷಧಾದಿಭಿಃ ।
ಅಭ್ಯಕ್ತಾಸ್ಥಿವಸಾಚರ್ಮಾಂಗಾರದಾರುಣರೋಗಿಭಿಃ ॥ ೭೦೪ ॥

ಗುಡಕಾರ್ಪಾಸಲವಣರಿಪುಪ್ರಶ್ನತೃಣೋರಗೈಃ ।
ವಂಧ್ಯಾಕುಂಜಕಕಾಷಾಯಮುಕ್ತಕೇಶಬುಭುಕ್ಷಿತೈಃ ॥ ೭೦೫ ॥

ಪ್ರಯಾಣಸಮಯೇ ನಗ್ನೈರ್ದೃಷ್ಟೈಃ ಸಿದ್ಧಿರ್ನಜಾಯತೇ ।
ಪ್ರಜ್ವಲಾಗ್ನೀನ್ಸತುರಗನೃಪಾಸನಪುರಾಂಗನಾಃ ॥ ೭೦೬ ॥

ಗಂಧಪುಷ್ಪಾಕ್ಷತಚ್ಛತ್ರಚಾಮರಾಂದೋಲಿಕಂ ನೃಪಃ ।
ಭಕ್ಷ್ಯೇಕ್ಷುಫಲಮೃತ್ಸ್ನಾನ್ನಮಧ್ವಾಜ್ಯದಧಿಗೋದಯಾಃ ॥ ೭೦೭ ॥

ಫಲಗಳು ಅನುಯಾಸವಾಗಿ ಸಿದ್ಧಿಸುವುವು. ಪ್ರಯಾಣಕಾಲದಲ್ಲಿ ಅಳುವಶಬ್ದವಿರಕೂಡದು. ರೋದನಯುತವಾದ ಪ್ರಯಾಣದಲ್ಲಿ ಹೊರಟವನು ಹೆಣವಂತಾಗುವನು. ಪ್ರಯಾಣಕಾಲದಲ್ಲಿ ಜಾತಿಭ್ರಷ್ಟರು, ನಪುಂಸಕರು, ಜಟಾಧಾರಿಗಳು, ಮದ್ಯಪಾಯಿಗಳು ಔಷಧಪಾನದಿಂದ ಮೂರ್ಛಿತರಾದವರು, ತೈಲಾಭ್ಯಂಜನಮಾಡಲಿರುವರು, ಮಾಂಸ ಮೂಳೆ, ಚರ್ಮ ಇವುಗಳಲ್ಲ ಭಯಂಕರವಾದ ವ್ರಣವನ್ನು ಹೊಂದಿರುವವರು,ಬೆಲ್ಲ, ಹತ್ತಿ ಉಪ್ಪು, ಶತ್ರುಗಳ ಮಾತನಾಡುವವನು, ಹುಲ್ಲು, ಹಾವು, ಬಂಜೆಯಾದ ಹೆಂಗಸು, ಕುಳ್ಳ, ಕಾಷಾಯವಸ್ತ್ರಧಾರೀ, ತಲೆಯನ್ನು ಕೆದರಿಕೊಂಡಿರುವವನು, ಹಸಿವಿನಿಂದ ಕೂಡಿರುವವನು, ದಿಗಂಬರನು ಇವರನ್ನು ನೋಡಿ ಪ್ರಯಾಣಮಾಡಿದರೆ ಕಾರ್ಯಸಿದ್ಧಿಯಾಗುವದಿಲ್ಲ. ಇನ್ನು ಉರಿಯುವ ಬೆಂಕಿ ಶ್ರೇಷ್ಠವಾದ ಕುದುರೆ ಸಿಂಹಾಸನ, ವೇಶ್ಯಾಸ್ತ್ರೀ, ಗಂಧ, ಪುಷ್ಪ, (ತಾಂಬೂಲ) ಅಕ್ಷತ, ಛತ್ರೀ, ಚಾಮರ, ಪಲ್ಲಕ್ಕಿ, ಭಕ್ಷ್ಯಗಳು, ಕಬ್ಬು, ಹಣ್ಣುಗಳು, ಮೃಷ್ಟಾನ್ನ, ಜೇನು,ತುಪ್ಪ, ಮೊಸರು, ಹಸು, ಮದ್ಯ, ಮಾಂಸ, ಸುಣ್ಣ ಬಿಳಿಯಬಟ್ಟೆ, ಶಂಖ,ಎತ್ತು, ಧ್ವಜ, ಮುತ್ತೈದೆ, ಪೂರ್ಣಕುಂಭ, ರತ್ನದಗಿಂಡಿ

ಮದ್ಯಮಾಂಸಸುಧಾಧೌತವಸ್ತ್ರಶಂಖವೃಷಧ್ವಜಾಃ ।
ಪುಣ್ಯಸ್ತ್ರೀಪುಣ್ಯಕಲಶರತ್ನಭೃಂಗಾರಗೋ ದ್ವಿಜಾಃ ॥ ೭೦೮ ॥

ಭೇರೀಮೃದಂಗಪಟಹಘಂಟಾವೀಣಾದಿನಿಃಸ್ವನಾಃ ।
ವೇದಮಂಗಲಘೋಷಾಃ ಸ್ಯುರ್ಯಾಯಿನಾಂ ಕಾರ್ಯಸಿದ್ಧಿದಾಃ ॥ ೭೦೯ ॥

ಆದೌ ವಿರುದ್ಧಶಕುನಂ ದೃಷ್ಟ್ವಾ ಯಾಯೀಷ್ಟದೇವತಾಂ ।
ಸ್ಮೃತ್ವಾ ದ್ವಿತೀಯೇ ವಿಪ್ರಾಣಾಂ ಕೃತ್ವಾ ಪೂಜಾಂ ನಿವರ್ತಯೇತ್ ॥೭೧೦॥

ಸರ್ವದಿಕ್ಷು ಕ್ಷುತಂ ನೇಷ್ಟಂ ಗೋಕ್ಷುತಂ ನಿಧನಪ್ರದಂ ।
ಅಫಲಂ ಯದ್ಬಾಲವೃದ್ಧರೋಗಿಯಾನಸಿಕ್ತೈಃ ಕೃತಂ ॥ ೭೧೧ ॥

ಪರಸ್ತ್ರೀ ದ್ವಿಜದೇವಸ್ವಂ ನ ಸ್ಪೃಶೇದ್ದಿಗ್ಗಜಾಶ್ವಕಾನ್ ।
ಹನ್ಯಾತ್ಪರಪುರಪ್ರಾಪ್ತೋ ನ ಸ್ತ್ರೀರ್ನಿತ್ಯಂ ನಿರಾಯುಧಾನ್ ॥ ೭೧೨ ॥

---

ಗೋವು, ಬ್ರಾಹ್ಮಣರು, ಭೇರಿ, ಮೃದಂಗ, ತಮಟೆ, ಗಂಟೆ, ವೀಣೆ ಇವುಗಳ ಧ್ವನಿ, ವೇದಘೋಷ, ಮಂಗಳವಾದ್ಯ ಇವುಗಳು ಪ್ರಯಾಣಕಾಲದಲ್ಲಿ ಗೋಚರವಾದರೆ ಶುಭಫಲವನ್ನು ಕೊಡುವುವು.

೭೧೦–೭೧೧ ಪ್ರಾರಂಭದಲ್ಲಿ ಅಪಶಕುನವೇನಾದರೂ ಒದಗಿದರೆ ಒಡನೆಯೇ ಇಷ್ಟದೇವತೆಗಳನ್ನು ಧ್ಯಾನಮಾಡಿ ಅನಂತರ ಬ್ರಾಹ್ಮಣರ ಪೂಜೆಯನ್ನು ಮಾಡಬೇಕು. ಅಲ್ಲದೇ ಪ್ರಯಾಣಕಾಲದಲ್ಲಿ ಯಾವಾಗಲು ಸೀನುಬರುವುದು ಅಷ್ಟು ಒಳ್ಳೆಯದಲ್ಲವೆಂದು ತಿಳಿಯಬೇಕು. ಹಸುವು ಸೀತರೆಪ್ರಯಾಣವು ನಿಧನಪ್ರದವಾಗುವುದು. ಅದರಲ್ಲಿ ಬಾಲಕರು, ವೃದ್ಧರು, ರೋಗಿಗಳು, ಯಾನಾರೂಢರು ಇವರು ಸೀತರೆ ಯಾವ ವಿಧವಾದ ದೋಷವೂ ಇಲ್ಲವೆಂದು ತಿಳಿಯಬೇಕು.

೭೧೨. ಶತ್ರುರಾಜ್ಯದಲ್ಲಿ ಸಿಕ್ಕಿದ ಪರಸ್ತ್ರೀಯರನ್ನು, ದೇವಬ್ರಾಹ್ಮಣರ ಸ್ವತ್ತನ್ನೂ ಅಪಹರಿಸಬಾರದು ಮತ್ತು ಅಲ್ಲಿ ಸಿಕ್ಕಿದ ಸ್ತ್ರೀಯರನ್ನೂ ಆಯುಧರಹಿತರಾಗಿರವವರನ್ನೂ ಕೊಲ್ಲಬಾರದು.

ಆದೌ ಸೌಮ್ಯಾಯನೇ ಕಾರ್ಯಂ ನವವಾಸ್ತುಪ್ರವೇಶನಂ ।
ವಿಧಾಯ ಪೂರ್ವದಿವಸೇ ವಾಸ್ತುಪೂಜಾಬಲಿಕ್ರಿಯಾಂ ॥ ೭೧೩ ॥

ಮಾಘಫಾಲ್ಗುನವೈಶಾಖಜ್ಯೇಷ್ಠಮಾಸೇಷು ಶೋಭನಂ ।
ಪ್ರವೇಶೋ ಮಧ್ಯಮೋ ಜ್ಞೇಯಃ ಸೌಮ್ಯಕಾರ್ತಿಕಮಾಸಯೋಃ ॥ ೭೧೪ ॥

ಶಶೀಜ್ಯಾಂಶೇಷು ವರ್ಣತ್ವಾಷ್ಟ್ರಮಿತ್ರಸ್ಥಿರೋಡುಷು ।
ಶುಭಃ ಪ್ರವೇಶೋ ದೇವೇಜ್ಯಶುಕ್ರಯೋರ್ದೃಶ್ಯಮಾನಯೋಃ ॥ ೭೧೫ ॥

ವ್ಯರ್ಕಾರವಾರೇ ತಿಥಿಷು ರಿಕ್ತಾಮಾವರ್ಜಿತೇಷು ಚ ।
ದಿವಾ ವಾ ಯದಿ ವಾ ರಾತ್ರೌ ಪ್ರವೇಶೋ ಮಂಗಳಪ್ರದಃ ॥ ೭೧೬ ॥

ಚಂದ್ರತಾರಾಬಲೋಪೇತೇ ಪೂರ್ವಾಹ್ಣೇ ಶೋಭನೇ ದಿನೇ ।
ಸ್ಥಿರಲಗ್ನೇ ಸ್ಥಿರಾಂಶೇ ಚ ನೈಧನೇ ಶುದ್ಧಿಸಂಯುತೇ ॥ ೭೧೭ ॥

೭೧೩-೭೧೬. ಹೊಸಮನೆಯ ಪ್ರವೇಶವನ್ನು ಉತ್ತರಾಯಣದಲ್ಲಿಯೇ ಮಾಡಬೇಕು. ಪ್ರವೇಶದ ಹಿಂದಿನ ದಿವಸ ವಾಸ್ತುಪೂಜಾ, ದಿಗ್ಬಲಿ ಮುಂತಾದುವುಗಳನ್ನು ನಡೆಸಬೇಕು. ಅದರಲ್ಲಿಯೂ ಮಾಘ, ಫಾಲ್ಗುನ, ವೈಶಾಖ ಜ್ಯೇಷ್ಠ ಈ ನಾಲ್ಕು ತಿಂಗಳು ಬಹಳ ಶ್ರೇಷ್ಠವಾದುವುಗಳೆಂದು ತಿಳಿಯಬೇಕು. ಆಶ್ವಯುಜ ಮತ್ತು ಕಾರ್ತೀಕ ಮಾಸಗಳಲ್ಲಿ ಗೃಹಪ್ರವೇಶಮಾಡುವುದು ಮಧ್ಯಮವಾದುದು. ನವಾಗಾರಪ್ರವೇಶಕ್ಕೆ ಮೃಗಶಿರ, ಪುಷ್ಯ, ರೇವತಿ, ಚಿತ್ರ, ಅನೂರಾಧ, ಸ್ಥಿರನಕ್ಷತ್ರಗಳು ಇವು ಪ್ರಶಸ್ತವಾದುವುಗಳು. ಗುರು ಶುಕ್ರಾಸ್ತಕಾಲಗಳನ್ನು ಬಿಟ್ಟು, ಭಾನು ಮತ್ತು ಮಂಗಳವಾರಗಳನ್ನು ತ್ಯಜಿಸಿ ರಿಕ್ತತಿಥಿ ಮತ್ತು ಅಮಾತಿಥಿಗಳನ್ನೂ ದೂರಮಾಡಿ ಉಳಿದ ಕಾಲಗಳಲ್ಲಿ ಹೊಸಮನೆಗೆ ಹೋಗಬೇಕು. ರಾತ್ರಿಯಾಗಲೀ, ಹಗಲಾಗಲೀ ಶುಭಮುಹೂರ್ತವು ಸಿಕ್ಕಿದಾಗ ಹೊಸಮನೆಗೆ ಹೋಗಬಹುದು.

೭೧೭-೭೧೯. ಚಂದ್ರತಾರಾಬಲಗಳು ಕೂಡಿರಬೇಕು. ಪೂರ್ವಾಹ್ಣದಲ್ಲಿ ಪಂಚಾಂಗಶುದ್ಧಿಯಿರುವ ದಿನದಲ್ಲಿ ಸ್ಥಿರಲಗ್ನ, ಸ್ಥಿರಾಂಶ, ಅಷ್ಟಮಶುದ್ಧಿ ಕೇಂದ್ರತ್ರಿಕೋಣಗಳಲ್ಲಿ ಶುಭಗ್ರಹಗಳೂ ಮೂರು, ಆರು ಮತ್ತು ಹನ್ನೊಂದರಲ್ಲಿ

ತ್ರಿಕೋಣಕೇಂದ್ರಸಂಸ್ಥೈಃ ಸೌಮ್ಯೈಸ್ತ್ರ್ಯಾಯಾರಿಗೈಃ ಪರೈಃ ।
ಲಗ್ನಾಂತ್ಯಾಷ್ಟಮಷಷ್ಠಸ್ಥವರ್ಜಿತೇನ ಹಿಮಾಂಶುನಾ ॥ ೭೦೮ ॥

ಕರ್ತುರ್ವಾ ಜನ್ಮಭೇ ಲಗ್ನೇ ತಾಭ್ಯಾಮುಪಚಯೇಽಪಿ ವಾ ।
ಪ್ರವೇಶಲಗ್ನೇ ಸ್ಯಾದ್ವೃದ್ಧಿರನ್ಯಭೇ ಶೋಕನಿಃಸ್ವತಾ ॥ ೭೦೯ ॥

ದರ್ಶನೀಯಂ ಗೃಹಂ ರಮ್ಯಂ ವಿವಿಧೈರ್ಮಂಗಲಸ್ವನೈಃ ।
ಕೃತ್ವಾರ್ಕಂ ವಾಮತೋ ವಿದ್ವಾನ್ಪೂರ್ಣಂಗಾರಂ ಜಾಗ್ರತೋ ವಿಶೇತ್ ॥ ೭೨೦ ॥

ವರ್ಷಾಪ್ರವೇಶೇ ಶಶಿನಿ ಜಲರಾಶಿಗತೇಽಪಿ ವಾ ।
ಕೇಂದ್ರಗೇ ವಾ ಶುಕ್ಲಪಕ್ಷೇ ಚಾತಿವೃಷ್ಟಿಃ ಶುಭೇಕ್ಷಿತೇ ॥ ೭೨೧ ॥

ಅಲ್ಪವೃಷ್ಟಿಃ ಪಾಪದೃಷ್ಟೇ ಪ್ರಾವೃಟ್ಕಾಲೇಽಚಿರಾದ್ಭವೇತ್ ।
ಚಂದ್ರಶ್ಚೇದ್ಭಾರ್ಗವೇ ಸರ್ವಮೇವಂ ವಿಧಗುಣಾನ್ವಿತೇ ॥ ೭೨೨ ॥

---

ಪಾಪಗ್ರಹಗಳೂ ಇರುವಿಕೆ, ಚಂದ್ರನು ಲಗ್ನ, ಹನ್ನೆರಡು, ಎಂಟು, ಆರು ಈ ರಾಶಿಗಳಲ್ಲಿ ಇಲ್ಲದಿರುವಿಕೆ ಇವುಗಳನ್ನು ನೋಡಿಕೊಂಡು ಯಜಮಾನನ ಜನ್ಮಲಗ್ನ ಅಥವ ಆದರ ಉಪಚಯರಾಶಿಗಳಲ್ಲಿ ಹೊಸಮನೆಯನ್ನು ಪ್ರವೇಶಿಸಬೇಕು. ಇದರಿಂದ ಮನೆಯಲ್ಲಿ ಸಕಲ ಸನ್ಮಂಗಳಗಳೂ ಉಂಟಾಗುವುವು. ಇದಕ್ಕೆ ವಿರುದ್ಧವಾಗಿರುವ ಲಗ್ನದಲ್ಲಿ ಪ್ರವೇಶಿಸುವುದರಿಂದ ದಾರಿದ್ರ್ಯವೇ ಮೊದಲಾದ ದುಷ್ಫಲಗಳು ಸಂಭವಿಸುವುವು.

೭೨೦. ಗೃಹಪ್ರವೇಶಕ್ಕೆ ಮುಂಚೆ ಹೊಸಮನೆಯನ್ನು ಅಲಂಕರಿಸಿ ಅಲ್ಲಿ ಮಂಗಳವಾದ್ಯಗಳು ನಡೆಯುತ್ತಿರುವಂತೆ ಏರ್ಪಡಿಸಬೇಕು. ಮನೆಗೆ ಹೋಗುವಾಗ ಸೂರ್ಯನು ಎಡಭಾಗಕ್ಕೆ ಬರುವಂತೆ ಮಾಡಿಕೊಂಡು ಪೂರ್ಣಕುಂಭವನ್ನು ಕೈಯಲ್ಲಿ ಹಿಡಿದು ಪ್ರವೇಶಿಸಬೇಕು.

೭೨೧-೭೨೪. ಮಳೆಯ ನಕ್ಷತ್ರ ಹುಟ್ಟುವಾಗ ಚಂದ್ರನು ಜಲರಾಶಿಗತನಾಗಿದ್ದು ಅಥವ ಕೇಂದ್ರರಾಶಿಯಲ್ಲಿದ್ದು ಶುಕ್ಲಪಕ್ಷದಲ್ಲಿ ಶುಭಗ್ರಹದೃಷ್ಟನಾಗಿದ್ದರೆ ಈ ಮಳೆಯು ಅತಿಯಾಗಿ ವರ್ಷಿಸುವದು. ಪಾಪಗ್ರಹವೀಕ್ಷಿತನಾದ ಚಂದ್ರನು ಶುಕ್ರಸಂಬಂಧಿಯಾಗಿ ಹಿಂದೆ ಹೇಳಿದ ಗುಣಗಳಿಂದ ಕೂಡಿ

ಪ್ರಾವೃಷೀಂದುಃ ಸಿತಾತ್ಸಪ್ತರಾಶಿಗಃ ಶುಭವೀಕ್ಷಿತಃ ।
ಮಂದತ್ರಿಕೋಣಸಪ್ತಸ್ಥೋ ಯದಿ ವಾ ವೃದ್ಧಿಕೃದ್ಭವೇತ್ ॥ ೭೨೩ ॥

ಸದ್ಯೋವೃಷ್ಟಿಕರಃ ಶುಕ್ರೋ ಯದಾ ಬುಧಸಮೀಪಗಃ ।
ತಯೋರ್ಮಧ್ಯಗತೇ ಭಾನೌ ಭವೇದ್ವೃಷ್ಟಿವಿನಾಶನಂ ॥ ೭೨೪ ॥

ಮಘಾದಿಪಂಚಧಿಷ್ಣ್ಯಸ್ಥಃ ಪೂರ್ವೇ ಸ್ವಾತಿತ್ರಯೇ ಪರೇ ।
ಪ್ರವರ್ಷಣಂ ಭೃಗುಃ ಕುರ್ಯಾದ್ವಿಪರೀತೇ ನ ವರ್ಷಣಂ ॥ ೭೨೫ ॥

ಪುರತಃ ಪೃಷ್ಠತೋ ಭಾನೋರ್ಗ್ರಹಾ ಯದಿ ಸಮೀಪಗಾಃ ।
ತದಾ ವೃಷ್ಟಿಂ ಪ್ರಕುರ್ವಂತಿ ನ ಚೇತ್ ಚೇತ್ಪ್ರತಿಲೋಮಗಾಃ ॥ ೭೨೬ ॥

ವಾಮಭಾಗಸ್ಥಿತಃ ಶುಕ್ರೋ ವೃಷ್ಟಿಕೃಚ್ಚೇತ್ತು ಯಾಮ್ಯಗಃ ।
ಉದಯಾಸ್ತೇಷು ವೃಷ್ಟಿಃ ಸ್ಯಾದ್ಭಾನೋರಾರ್ದ್ರಾಪ್ರವೇಶನೇ ॥ ೭೨೭ ॥

ದ್ದರೆ ಅಲ್ಪವೃಷ್ಟಿಯಾಗುವದು. ವರ್ಷರ್ತುವಿನಲ್ಲಿ ಚಂದ್ರನು ಶುಕ್ರನಿರುವ ಸ್ಥಾನಕ್ಕಂತ ಏಳುರಾಶಿಗಳೊಳಗೆ ಇದ್ದು ಶುಭಗ್ರಹವೀಕ್ಷಿತನಾಗಿದ್ದರೂ ಅಥವ ಶನಿಯಸ್ಥಾನಕ್ಕಿಂತ ತ್ರಿಕೋಣ ಅಥವ ಸಪ್ತಮ ರಾಶಿಯಲ್ಲಿದ್ದರೂ ಮಳೆಯು ಬಹಳವಾಗಿಯೂ ಬರುವುದು. ಶುಕ್ರನು ಬುಧಸಮೀಪಸ್ಥನಾದಾಗ ಹುಟ್ಟಿದ ಮಳೆಯು ತತ್ಕಾಲದಲ್ಲಿ ಮಾತ್ರ ವರ್ಷಿಸಿ, ಅಮೇಲೆ ಶೂನ್ಯವಾಗುವುದು. ಆದರೆ ಶುಕ್ರ, ಬುಧರ ಮಧ್ಯೆ ರವಿಯು ಇರುವುದಾದರೆ ವೃಷ್ಟಿಯೇ ನಿಂತು ಹೋಗುವುದು.

೭೨೫-೭೨೭. ವರ್ಷರ್ತುವಿನಲ್ಲಿ ಶುಕ್ರನು ಮಘಾದಿ ಐದು ನಕ್ಷತ್ರಗಳಲ್ಲಿಯೂ ಸ್ವಾತಿ, ವಿಶಾಖಾ, ಅನೂರಾಧಾ ಈ ನಕ್ಷತ್ರಗಳಲ್ಲಿ ಸಂಚರಿಸಿದರೆ ಆಗ ಮಳೆಯು ವಿಪರೀತವಾಗಿ ಬರುವುದು. ಇತರ ನಕ್ಷತ್ರಗಳಲ್ಲಿರುವುದಾದರೆ ವೃಷಿಯು ನಿಂತುಹೋಗುವುದು. ಸೂರ್ಯನ ಮುಂದೆ, ಹಿಂದೆ ಮತ್ತು ಅತ್ಯಂತ ಸಾಮೀಪ್ಯದಲ್ಲಿ ಇತರ ಗ್ರಹಗಳಿದ್ದರೆ ವೃಷ್ಟಿಯು ಸಮೃದ್ಧಿಯಾಗಿ ಬೀಳುವುದು. ಆದರೆ ಆ ಗ್ರಹಗಳು ವಕ್ರಗಳಾಗಿದ್ದರೆ ಬರುವ ಮಳೆಯೂ ನಿಂತುಹೋಗುವುದು. ಶುಕ್ರನು ದಕ್ಷಿಣಾಯನದಲ್ಲಿ ಸೂರ್ಯನಿಗಿಂತ ವಾಮಭಾಗದ ಕ್ರಾಂತಿಯಲ್ಲಿರುವವನಾದರೆ ವೃಷ್ಟಿಪ್ರದನಾಗುವನು.

ಸಂಧ್ಯಯೋಃ ಸಸ್ಯವೃದ್ಧಿಃ ಸ್ಯಾತ್ಸರ್ವಸಂಪನ್ನ್ಯೃಣಾಂ ನಿಶಿ
ಸ್ತೋಕವೃಷ್ಟಿರನರ್ಘಃ ಸ್ಯಾದವೃಷ್ಟಿಃ ಸಸ್ಯಸಂಪದಃ ॥ ೭೨೮ ॥

ಆರ್ದ್ರೋದಯೇಽಗ್ರಭಿನ್ನಾ ಚೇದ್ಭವೇದಿತಿ ನ ಸಂಶಯಃ ।
ಚಂದ್ರೇಜ್ಯೇ ಜ್ಞೇಽಥ ವಾ ಶುಕ್ರೇ ಕೇಂದ್ರೇ ಭೀತಿರ್ವಿನಶ್ಯತಿ ॥ ೭೨೯ ॥

ಪೂರ್ವಾಷಾಢಾಂ ಗತೋ ಭಾನುರ್ಜೀಮೂತೈಃ ಪರಿವೇಷ್ಟಿತಃ ।
ವರ್ಷತ್ಯಾರ್ದ್ರಾದಿಮೂಲಾಂತಂ ಪ್ರತ್ಯಕ್ಷಂ ಪ್ರತ್ಯಹಂ ತಥಾ ॥ ೭೩೦ ॥

ವೃಷ್ಟಿಶ್ಚೇತ್ಪೌಷ್ಣಭೇ ತಸ್ಮಾದ್ದಶರ್ಕ್ಷೇಷು ನ ವರ್ಷತಿ ।
ಸಿಂಹೇ ಭಿನ್ನೇ ಕುಜೋ ವೃಷ್ಟಿರಭಿನ್ನೇ ಕರ್ಕಟೇ ತಥಾ ॥ ೭೩೧ ॥

ಕನ್ಯೋದಯೇ ಪ್ರಭಿನ್ನೇ ಚೇತ್ಸರ್ವದಾ ವೃಷ್ಟಿರುತ್ತಮಾ ।
ಅಹಿರ್ಬುಧ್ನ್ಯಂ ಪೂರ್ವಶಸ್ಯಂ ಪರತಸ್ತ್ವಾ ಚ ರೇವತೀ ॥ ೭೩೨ ॥

---

೭೨೮-೭೨೯. ಸೂರ್ಯನು ಉದಯ ಅಥವ ಅಸ್ತಕಾಲಗಳಲ್ಲಿ ಆರ್ದ್ರಾ ನಕ್ಷತ್ರವನ್ನು ಪ್ರವೇಶಿಸಿದರೆ ಅತಿವೃಷ್ಟಿಯಾಗುವುದು. ಸಂಧ್ಯಾಕಾಲದಲ್ಲಿ ಪ್ರವೇಶಿಸಿದರೆ ಸಸ್ಯವೃದ್ಧಿಯೂ ಸಂಪತ್ತಿನ ಏಳಿಗೆಯೂ ಲಭಿಸುವುದು. ಅರ್ಧ ರಾತ್ರಿಯಲ್ಲಿ ಪ್ರವೇಶಮಾಡಿದರೆ ಅಲ್ಪವೃಷ್ಟಿಯೂ, ಹೆಚ್ಚು ಬೆಲೆಯೂ ಆಗುವುದು. ದಿನಮಧ್ಯದಲ್ಲಿ ಪ್ರವೇಶಮಾಡಿದರೆ ಸಸ್ಯವೃದ್ಧಿಯೂ ಸಸ್ಯಂಗಳವೂ ಲಭಿಸುವುದು. ವರ್ಷಪ್ರವೇಶಕಾಲದಲ್ಲಿ ಚಂದ್ರ, ಗುರು, ಬುಧ, ಶುಕ್ರರು ಕೇಂದ್ರಗಳಲ್ಲಿದ್ದರೆ ಆವರ್ಷ ಪ್ರಜೆಗಳಿಗೆ ಯಾವ ಭೀತಿಯೂ ಇರುವುದಿಲ್ಲ.

೭೩೦-೭೩೨. ಪೂರ್ವಾಷಾಢಾ ನಕ್ಷತ್ರದಲ್ಲಿ ಸಂಚರಿಸುವ ಸೂರ್ಯನಿಗೆ ಮೇಘಪರಿವೇಷ ಉಂಟಾದರೆ ಆರ್ದ್ರಾ ಮಳೆಯಿಂದ ಹಿಡಿದು ಮೂಲಾಮಳೆಯ ಪೂರ್ತಿಯಾಗಿ ನಿತ್ಯವೂ ಮಳೆಯು ಸುರಿಯುವುದು. ರೇವತೀಮಳೆಯು ಚೆನ್ನಾಗಿ ವರ್ಷಿಸಿದರೆ ಅಲ್ಲಿಂದ ಮುಂದೆ ಹತ್ತು ಮಳೆಗಳು ವೃಷ್ಟಿಪ್ರದಗಳಾಗಲಾರವು. ಸಿಂಹಮಾಸದಲ್ಲಿ ಗುಡುಗು ಬಂದರೂ ಕರ್ಕಾಟಕಮಾಸದಲ್ಲಿ ಗುಡುಗದೇ ಇದ್ದರೂ ಆ ಮಾಸಗಳಲ್ಲಿ ಮಳೆಯು ಬರುವದೇ ಇಲ್ಲ. ಆದರೆ ಕನ್ಯಾಸಂಕ್ರಮಣದ ದಿನ ಘನಘರ್ಜನೆಯಾದರೆ ಮಳೆಯು ಅತ್ಯಂತ ಬಿರುಸಾಗಿ

ಭರಣೀ ಸರ್ವಸಸ್ಯಾ ಚ ಸರ್ವನಾಶಾಯ ಚಾಶ್ವಿನೀ ।
ಗುರೋಃ ಸಪ್ತಮರಾಶಿಸ್ಥಃ ಪ್ರತ್ಯಗ್ಗೋ ಭೃಗುಜೋ ಯದಾ ॥ ೭೩೩ ॥

ತದಾತಿವರ್ಷಣಂ ಭೂರಿ ಪ್ರಾವೃಟ್ಕಾಲೇ ಬಲೋಜ್ಝಿತೇ ।
ಆಸಪ್ತಮರ್ಕ್ಷಗಶಶಿನಃ ಪರಿವೇಷಗತೋತ್ತರಾ ॥ ೭೩೪ ॥

ವಿದ್ಯುತ್ಪೂರ್ಣಮಂಡೂಕಾಸ್ತನಾವೃಷ್ಟಿರ್ಭವೇತ್ತದಾ ।
ಯದಾ ಪ್ರತ್ಯಙ್ನತಾ ಮೇಘಾ ಖಸಪ್ತೋಪರಿ ಸಂಸ್ಥಿತಾಃ ॥ ೭೩೫ ॥

ಪತಂತಿ ದಕ್ಷಿಣಸ್ಥಾ ಯೇ ಭವೇದ್ವೃಷ್ಟಿಸ್ತದಾ ಚಿರಾತ್ ।
ನಖೈರ್ಲಿಖಂತೋ ಮಾರ್ಜಾರಾಶ್ಚಾವನಿಂ ಲೋಹಸಂಯುತೇ ॥ ೭೩೬ ॥

ರಥ್ಯಾಯಾಂ ಸೇತುಬಂಧಾಃ ಸ್ಯುರ್ಬಾಲಾನಾಂ ವೃಷ್ಟಿಹೇತವಃ ।
ಪಿಪೀಲಿಕಾಶ್ರೇಣಯಶ್ಛಿನ್ನಾಃ ಖದ್ಯೋತಾ ಬಹವಸ್ತದಾ ॥ ೭೩೭ ॥

---

ಬರುವುದು. ಉತ್ತರಾಭಾದ್ರೆಯು ಮೊದಲು ಬೆಳೆಯನ್ನೂ, ರೇವತಿಯು ಕೊನೆಯ ಬೆಳೆಯನ್ನೂ, ಭರಣಿಯು ಸಕಲಬೆಳೆಗಳನ್ನೂ ಅಭಿವೃದ್ಧಿಹೊಂದಿಸುವುದು. ಅಶ್ವಿನಿಯು ಮಾತ್ರ ಸಕಲ ಬೆಳೆಗಳನ್ನೂ ನಾಶಪಡಿಸುವುದು. ಗುರುವಿನ ಸ್ಥಾನಕಿಂತ ಸಪ್ತಮಭಾವದಲ್ಲಿರುವ ಶುಕ್ರನು ಪ್ರತ್ಯಗ್ಗಮನದಿಂದ ಕೂಡಿದ್ದರೆ ಅಂದರೆ ಅನುಲೋಮಗತಿಯುಳ್ಳದ್ದರೆ ಎಲ್ಲಾ ಋತುವಿನಲ್ಲಿಯೂ ಅತಿವೃಷ್ಟಿಯು ಸಂಭವಿಸುವುದು. ದುರ್ಬಲನಾಗಿರುವ ಶುಕ್ರನು ಚಂದ್ರನಿರುವ ನಕ್ಷತ್ರದಿಂದ ಏಳು ನಕ್ಷತ್ರಗಳೊಳಗಿದ್ದರೆ ಮಳೆಗಾಲದಲ್ಲಿ ಮಾತ್ರ ಅತಿವೃಷ್ಟಿಯು ಸಂಭವಿಸುವುದು. ಉತ್ತರಾಮಳೆಯಲ್ಲಿ ಚಂದ್ರನಿಗೆ ಪರಿವೇಷಸಂಭವಿಸಿದರೆ ಮಿಂಚು ಗುಡುಗು ಮಂಡೂಕಾದಿಗಳು ಮಾತ್ರ ಹೆಚ್ಚಿ ವೃಷ್ಟಿಶೂನ್ಯವಾಗುವುದು. ಅಲ್ಲದೇ ಪಶ್ಚಿಮದಿಕ್ಕಿಗೆ ವಾಲಿದ ಮೇಘರಾಜಿಯು ಕೇವಲ ಆರ್ಭಟದಿಂದಲೇ ಮುಗಿದುಹೋಗುವುದು. ದಕ್ಷಿಣಕ್ಕೆ ಜೋತುಬಿದ್ದಿರುವ ಮೇಘದಿಂದ ಒಡನೆಯೇ ವೃಷ್ಟಿಯು ಸಂಭವಿಸುವುದು. ಬೆಕ್ಕುಗಳು ಲೋಹಸಂಯುತವಾದ ಭೂಮಿಯನ್ನು ಉಗುರುಗಳಿಂದ ಕೆರೆದರೂ ರಸ್ತೆಯಲ್ಲಿ ಆಡುವ ಮಕ್ಕಳು ಸೇತುವೆಯನ್ನು ಕಟ್ಟಿ ಆಟವಾಡಿದರೂ ಮಳೆಯು ಬರುವುದೆಂಬ ಸೂಚನೆಯುಂಟು.

ದ್ರುಮಾದಿರೋಹಃ ಸರ್ಪಾಣಾಂ ಪ್ರೀತಿರ್ದುರ್ವೃಷ್ಟಿಸೂಚಕಾಃ ।
ಉದಯಾಸ್ತಮಯೇ ಕಾಲೇ ವಿವರ್ಣೋಽರ್ಕೋಽಥವಾ ಶಶೀ ॥ ೭೩೮ ॥

ಮಧುವರ್ಣೋಽತಿವಾಯುಶ್ಚೇದತಿವೃಷ್ಟಿರ್ಭವೇತ್ತದಾ ।
ಪ್ರಾಙ್ಮುಖಸ್ಯ ತು ಕೂರ್ಮಸ್ಯ ನವಾಂಗೇಷು ಧರಾಮಿಮಾಂ ॥ ೭೩೯ ॥

ವಿಭಜ್ಯ ನವಧಾ ಖಂಡೇ ಮಂಡಲಾನಿ ಪ್ರದಕ್ಷಿಣಂ ।
ಅಂತರ್ವೇದಾಶ್ಚ ಪಾಂಚಾಲಸ್ತಸ್ಯೇದಂ ನಾಭಿಮಂಡಲಂ ॥ ೭೪೦ ॥

ಪ್ರಾಚ್ಯಾ ಮಾಗಧಲಾಟೋತ್ಥಾ ದೇಶಾಸ್ತನ್ಮುಖಮಂಡಲಂ ।
ಸ್ತ್ರೀಕಲಿಂಗಕಿರಾತಾಖ್ಯಾ ದೇಶಾಸ್ತದ್ಬಾಹುಮಂಡಲಂ ॥ ೭೪೧ ॥

ಅವಂತೀ ದ್ರವಿಡಾ ಭಿಲ್ಲಾ ದೇಶಾಸ್ತತ್ಪಾರ್ಶ್ವಮಂಡಲಂ ।
ಗೌಡಕೌಂಕಣಶಾಲ್ವಾಂಧ್ರಪೌಂಡ್ರಾಸ್ತತ್ಪಾದಮಂಡಲಂ ॥ ೭೪೨ ॥

---

ಇರುವೆಯ ಸಾಲುಗಳು ಭಿನ್ನಭಿನ್ನವಾಗುವುದೂ, ಮಿಂಚುಹುಳುಗಳು ಅಧಿಕವಾಗುವುದೂ ಸರ್ಪಗಳು ಮರವನ್ನು ಹತ್ತುವದೂ, ಮಳೆಯು ಬರುವ ಸೂಚನೆಯನ್ನು ಕೊಡುವುವು. ಸೂರ್ಯನಾಗಲೀ ಚಂದ್ರನಾಗಲೀ ಉದಯ ಮತ್ತು ಅಸ್ತಮಯಕಾಲಗಳಲ್ಲಿ ವಿವರ್ಣವಾಗಿ ಕಂಡುಬಂದರೂ, ಜೇನುತುಪ್ಪದ ಬಣ್ಣಗಳಲ್ಲಿ ತೋರಿಬಂದರೂ ಅತಿಯಾದ ಗಾಳಿ ಮತ್ತು ಮಳೆ ಇವು ಖಂಡಿತವಾಗಿಯೂ ಬರುತ್ತವೆಯೆಂದು ತಿಳಿಯಬೇಕು.

೭೩೯-೭೪೪. ಕೂರ್ಮಾಕಾರದಲ್ಲಿ ಪೂರ್ವಾಭಿಮುಖವಾಗಿರುವಂತೆ ಕೂರ್ಮಚಕ್ರವನ್ನು ಬರೆದು ಆದರ ಅವಯವಗಳಲ್ಲಿ ಒಂಭತ್ತು ಭಾಗವನ್ನು ಮಾಡಿದರೆ ಆ ಭಾಗಗಳೇ ನವಖಂಡಗಳೆನಿಸುವುವು. ಅಂದರೆ ಪ್ರಾಙ್ಮುಖವಾದ ಭೂಭಾಗವನ್ನು ಅದರ ಅವಯವಾನುಸಾರವಾದ ದಿಕ್ಕುಗಳಲ್ಲಿ ಒಂಭತ್ತು ಖಂಡಗಳಾಗಿ ವಿಭಾಗಿಸಬಹುದು. ಅದರ ನಾಭಿ ಮಂಡಲವೇ ಪಾಂಚಾಲದೇಶವೆನಿಸುವದು. ಮುಂಭಾಗದ ಮುಖಮಂಡಲವೇ ಮಾಗಧ ಮತ್ತು ಲಾಟದೇಶಗಳು. ಬಾಹುಮಂಡಲದಲ್ಲಿ ಬರುವುದೇ ಸ್ತ್ರೀಕಳಿಂಗ ಮತ್ತು ಕಿರಾತದೇಶಗಳು. ಪಾರ್ಶ್ವಮಂಡಲಕ್ಕೆ ಅವಂತೀ, ದ್ರಾವಿಡ ಮತ್ತು ಭಿಲ್ಲದೇಶಗಳು ಸಂಬಂಧಿಸುವುವು.

ಸಿಂಧುಕಾಶಿಮಹಾರಾಷ್ಟ್ರಸೌರಾಷ್ಟ್ರಾಃ ಪುಚ್ಛಮಂಡಲಂ ।
ಪುಲಿಂದಚೀನಯವನಗುರ್ಜರಾಃ ಪಾದಮಂಡಲಂ ॥ ೭೪೩ ॥

ಕುರುಕಾಶ್ಮೀರಮಾದ್ರೇಯಮತ್ಸ್ಯಾಸ್ತತ್ಪಾರ್ಶ್ವಮಂಡಲಂ ।
ಖಸಾಂಗವಂಗಬಾಹ್ಲೀಕಂ ಕಾಂಭೋಜಾಃ ಪಾಣಿಮಂಡಲಂ ॥ ೭೪೪ ॥

ಕೃತ್ತಿಕಾದೀನಿ ಧಿಷ್ಣ್ಯಾನಿ ತ್ರೀಣಿ ತ್ರೀಣಿ ಕ್ರಮಾನ್ನ್ಯಸೇತ್ ।
ನಾಭ್ಯಾದಿಷು ನವಾಂಗೇಷು ಪಾಪೈರ್ದುಷ್ಟಂ ಶುಭೈಶ್ಶುಭಂ ॥ ೭೪೫ ॥

ದೇವತಾ ಯತ್ರ ನೃತ್ಯಂತಿ ಪತಂತಿ ಪ್ರಜ್ವಲಂತಿ ಚ ।
ಮುಹೂರುದಂತಿ ಗಾಯಂತಿ ಪ್ರಸ್ವಿದ್ಯಂತಿ ಹಸಂತಿ ಚ ॥ ೭೪೬ ॥

ವಮಂತ್ಯಗ್ನಿಂ ತಥಾ ಧೂಮಂ ಸ್ನೇಹಂ ರಕ್ತಂ ಪಯೋ ಜಲಂ ।
ಅಧೋಮುಖಾಧಿತಿಷ್ಠಂತಿ ಸ್ಥಾನಾತ್ಸ್ಥಾನಂ ವ್ರಜಂತಿ ಚ ॥ ೭೪೭ ॥

ಪಾದಮಂಡಲದಲ್ಲಿ ಗೌಡ, ಕೊಂಕಣ, ಸಾಲ್ವ, ಆಂಧ್ರ, ಪೌಂಡ್ರ ಈ ದೇಶಗಳು ಅಡಗಿರುತ್ತವೆ. ಪುಚ್ಛಮಂಡಲದಲ್ಲಿ ಸಿಂಧು, ಕಾಶೀ, ಮಹಾರಾಷ್ಟ್ರ, ಸೌರಾಷ್ಟ್ರ ಈ ದೇಶಗಳಿವೆ. ಪಾದಮಂಡಲದಲ್ಲಿ ಪುಲಿಂದ, ಚೀನ ಯವನ, ಗುರ್ಜರ ಈದೇಶಗಳಿವೆ. ಅದರ ಪಾರ್ಶ್ವಮಂಡಲದಲ್ಲಿ ಕುರು ಕಾಶ್ಮೀರ, ಮಾದ್ರೇಯ, ಮತ್ಸ್ಯ ಈ ದೇಶಗಳಿವೆ. ಅಂಗ, ವಂಗ, ಬಾಹ್ಲೀಕ ಕಾಂಬೋಜದೇಶಗಳು ಪಾಣಿಮಂಡಲದಲ್ಲಿವೆ.

೭೪೫-೭೪೬. ಈ ಒಂಭತ್ತು ಭಾಗಗಳಿಗೂ ಕೃತ್ತಿಕಾದಿಯಾದ ೨೭ ಇಪ್ಪತ್ತೇಳು ನಕ್ಷತ್ರಗಳನ್ನೂ ಮೂರು ಮೂರರಂತೆ ಹಂಚಿದರೆ ಯಾವ ಭಾಗವಲ್ಲಿ ಶುಭನಕ್ಷತ್ರಗಳು ಸೇರುತ್ತವೆಯೋ ಆ ದೇಶವು ಸಾಧುದೇಶವೆಂದೂ, ಅಶುಭನಕ್ಷತ್ರಗಳಿಗೆ ಸಂಬಂಧಿಸಿದ ಪ್ರಾಂತಗಳು ದುಷ್ಟವಾದುವುಗಳೆಂದೂ ತಿಳಿಯಬೇಕು. ಶುಭದೇಶಗಳಲ್ಲಿ ಸರ್ವದಾ ದೇವತೆಗಳು ಸಂಚರಿಸುತ್ತಾ, ನರ್ತನ ಮಾಡುತ್ತಾ, ಕಾಂತಿಯನ್ನು ಬೀರುತ್ತಾ ಶಬ್ದಗಳಿಂದ ಗೋಚರಿಸುತ್ತಾ ಜನರನ್ನು ಸಂತೋಷಗೊಳಿಸಿ ತಾವೂ ತೃಪ್ತಿಯನ್ನು ಹೊಂದಿರುತ್ತವೆ.

೭೪೭-೭೫೦. ದುಷ್ಟದೇಶಗಳಲ್ಲಿ ಅಗ್ನಿ, ಧೂಮ, ಎಣ್ಣೆ, ರಕ್ತ, ಹಾಲು ನೀರು ಇವುಗಳು ಅತಿಯಾಗಿ ಸುರಿಯುತ್ತಿರುತ್ತವೆ. ಎಲ್ಲರೂ ಅಧೋಮುಖ

ಏವಮಾದ್ಯಾ ಹಿ ದೃಶ್ಯಂತೇ ವಿಕಾರಾಃ ಪ್ರತಿಮಾಸು ಚ ।
ಗಂಧರ್ವನಗರಂ ಚೈವ ದಿವಾ ನಕ್ಷತ್ರದರ್ಶನಂ ॥ ೭೪೮ ॥

ಮಹೋಲ್ಕಾಪತನಂ ಕಾಷ್ಠತೃಣರಕ್ತಪ್ರವರ್ಷಣಂ ।
ಗಾಂಧರ್ವಂ ದೇಹದಿಗ್ಧೂಪಂ ಭೂಮಿಕಂಪಂ ದಿವಾನಿಶಿ ॥ ೭೪೯ ॥

ಅನಗ್ನೌ ಚ ಸ್ಫುಲಿಂಗಾಶ್ಚ ಜ್ವಲನಂ ಚ ವಿನೇಂಧನಂ ।
ನಿಶೀಂದ್ರಚಾಪಮಂಡೂಕಂ ಶಿಖರೇ ಶ್ವೇತವಾಯ ಸಃ ॥ ೭೫೦ ॥

ದೃಶ್ಯಂತೇ ವಿಸ್ಫುಲಿಂಗಾಶ್ಚ ಗೋಗಜಾಶ್ವೋಷ್ಟ್ರಗಾತ್ರತಃ ।
ಜಂತವೋ ದ್ವಿತ್ರಿಶಿರಸೋ ಜಾಯಂತೇ ವಾಪಿ ಯೋನಿಷು ॥ ೭೫೧ ॥

ಗಾಮಿಗಳಾಗಿಯೇ ಇರುವರು. ಯಾರೂ ಒಂದೆಡೆ ಸ್ಥಿರವಾಗಿ ನಿಲ್ಲಲಾರರು. ಇದೇರೀತಿಯಾಗಿ ಫಲಗಳು ಆಯಾ ದೇಶಗಳಲ್ಲಿ ಪ್ರತಿತಿಂಗಳಲ್ಲಿಯೂ ಕಂಡು ಬರುವುವು. ಹಗಲಿನಲ್ಲಿ ನಕ್ಷತ್ರಗಳಲ್ಲಿ ಕಾಣುವುದೂ, ಕಾಷ್ಠ, ತೃಣ, ರಕ್ತ. ಇವು ಭೂಮಿಗೆ ಬೀಳುವುದೂ, ಉಲ್ಕಾಪಾತಗಳಾಗುವುದೂ ಉತ್ಪಾತಗಳೆನಿಸು ವುವು. ಹಗಲಿನಲ್ಲಿಯೇ ಸಪ್ತತ್ರಧೂಮವು ಹರಡುವುದೂ ರಾತ್ರಿಯಲ್ಲಿ ಭೂಕಂಪ ವಾಗುವುದೂ ಅಗ್ನಿಯಿಲ್ಲದೇ ಕೆಂಡಗಳು ಕಾಣುವುದೂ, ಸೌದೆಯಿಲ್ಲದೇ ಉರಿ ಯೇಳುವುದೂ, ರಾತ್ರಿಯಲ್ಲಿ ಕಾಮನಬಿಲ್ಲೇಳುವುದೂ, ಬಿಳಿಯಕಾಗೆಯುಮೇಲೆ ಕಪ್ಪೆಕೂತಿರುವಂತೆ ಕಾಣುವುದೂ ಇವೆಲ್ಲ ಉತ್ಪಾತಸೂಚಕಗಳು.

೭೫೧-೭೫೪. ಗೋವು, ಆನೆ, ಕುದುರೆ, ಒಂಟೆ ಇವುಗಳ ದೇಹದಲ್ಲಿ ಬೊಬ್ಬೆಗಳೇಳುವುದು, ಎರಡು, ಮತ್ತು ಮೂರು ತಲೆಗಳುಳ್ಳ ಪ್ರಾಣಿಗಳು ಜನಿಸುವುದೂ, ಪ್ರಾತಃಕಾಲದಲ್ಲಿ ಸೂರ್ಯಮಂಡಲವು ನಾಲ್ಕಾರು ಭಾಗಗಳಾಗಿ ಕಂಡುಬರುವುದೂ ನರಿಗಳು ಗ್ರಾಮದಲ್ಲಿ ಬಂದು ವಾಸಿಸುವುದೂ, ಧೂಮಕೇತು ಗಳು ಗೋಚರಿಸುವುದೂ ದೇಶಕ್ಕೆ ಹಾನಿಯನ್ನು ಸೂಚಿಸುವುವು. ರಾತ್ರಿಯಲ್ಲಿ ಕಾಗೆಗಳ ಗುಂಪೂ, ಹಗಲಿನಲ್ಲಿ ಪಾರಿವಾಳಗಳ ಗುಂಪೂ ಅಕಾಲದಲ್ಲಿ ಮರಗಳು

ಪ್ರಾತಃ ಸೂರ್ಯಾಕ್ಷತಸ್ಯೇಷು ಹ್ಯರ್ದಿತಾ ಯುಗಪದ್ರವೇಃ ।
ಜಂಬೂಕಗ್ರಾಮಸಂವಾಸಃ ಕೇತೂನಾಂ ಚ ಪ್ರದರ್ಶನಂ ॥ ೭೫೨ ॥

ಕಾಕಾನಾಮಾಕುಲಂ ರಾತ್ರೌ ಕಪೋತಾನಾಂ ದಿವಾ ಯದಿ ।
ಅಕಾಲೇ ಪುಷ್ಪಿತಾ ವೃಕ್ಷಾ ದೃಶ್ಯಂತೇ ಫಲಿತಾ ಯದಿ ॥ ೭೫೩ ॥

ಕಾರ್ಯಂ ತಚ್ಛೇದನಂ ತತ್ರ ತತಃ ಶಾಂತಿರ್ಮನೀಷಿಭಿಃ ।
ಏವಮಾದ್ಯಾ ಮಹೋತ್ಪಾತಾ ಬಹವಃ ಸ್ಥಾನನಾಶದಾಃ ॥ ೭೫೪ ॥

ಕೇಚಿನ್ಮೃತ್ಯುಪ್ರದಾಃ ಕೇಚಿಚ್ಛತ್ರುಭ್ಯಶ್ಚ ಭಯಪ್ರದಾಃ ।
ಮಧ್ವಾದ್ಭಯಂ ಯಶೋ ಮೃತ್ಯುಃ ಕ್ಷಯಃ ಕೀರ್ತಿಃ ಸುಖಾಸುಖಂ ॥ ೭೫೫ ॥

ಐಶ್ವರ್ಯಂ ಧನಹಾನಿಂ ಚ ಮಧುಚ್ಛನ್ನಂ ಚ ವಾಲ್ಮಿಕಂ ।
ಇತ್ಯಾದಿಷು ಚ ಸರ್ವೇಷೂತ್ಪಾತೇಷು ದ್ವಿಜಸತ್ತಮ ॥ ೭೫೬ ॥

---

ಹಣ್ಣುಕಾಯಿಗಳಿಂದ ತುಂಬಿರುವುದೂ ಇವೆಲ್ಲವೂ ಅನಿಷ್ಟಸೂಚಕಗಳೆಂದೇ ತಿಳಿಯಬೇಕು. ಇವುಗಳು ಸಂಭವಿಸಿದಮೇಲೆ ತಿಳಿದವರು ಅದರ ನಿವಾರಣೆಗಾಗಿ ಶಾಂತಿಕರ್ಮವನ್ನಾಚರಿಸಬೇಕು. ಇದೇರೀತಿ ಸಂಭವಿಸುವ ಕೆಲವು ಮಹೋತ್ಪಾತಗಳು ಅನೇಕ ಸ್ಥಾನಗಳನ್ನು ನಾಶಮಾಡಿಬಿಡುವುವು. ದೇಶಗಳೇ ಹಾಳಾಗುವುದೂ ಉಂಟು

೭೫೫. ಕೆಲವು ದುರ್ನಿಮಿತ್ತಗಳು ಜನರಿಗೆ ಮೃತ್ಯುಪ್ರದಗಳೆನಿಸಿರುವುವು. ಕೆಲವು ಶತ್ರುಗಳಿಗೆ ಮಾತ್ರ ಭಯಜನಕಗಳಾಗಿರುವುವು. ಮತ್ತೆ ಕೆಲವು ದುರ್ನಿಮಿತ್ತಗಳು, ಮತ್ತು ಉತ್ಪಾತಗಳಿಂದ ದೇಶಕ್ಕೆ ಭಯ, ಕೀರ್ತಿ, ಮೃತ್ಯು, ನಾಶ, ಸುಖ, ದುಃಖ, ಐಶ್ವರ್ಯ, ಧನಹಾನಿ, ಮಧುವಿನ ವೃದ್ಧಿ, ಹಾವುಗಳ ಭಯ ಮುಂತಾದ ಅನೇಕ ಫಲಗಳು ಗೋಚರಕ್ಕೆ ಬರುವುವು. ಇಂತಹ ಉತ್ಪಾತ ಸಮಯಗಳಲ್ಲಿ ವಿದ್ವಾಂಸರು ವಿಧಿವತ್ತಾಗಿ ಶಾಂತಿಕರ್ಮಗಳನ್ನು ಆಚರಿಸಬೇಕು. ಕಲ್ಪೋಕ್ತವಾದ ಶಾಂತ್ಯಾದಿಗಳಿಂದ ದೇಶಕ್ಕೆ ಸಕಲ ಸನ್ಮಂಗಳಗಳೂ ಉಂಟಾಗು

**ಶಾಂತಿಂ ಕುರ್ಯಾತ್ಪ್ರಯತ್ನೇನ ಕಲ್ಪೋಕ್ತವಿಧಿನಾ ಸುಧಾಂ ।**
**ಇತ್ಯೇತತ್ಕಥಿತಂ ವಿಪ್ರ ಜ್ಯೌತಿಷಂ ತೇ ಸಮಾಸತಃ ॥ ೭೫೭ ॥**

**ಅತಃ ಪರಂ ಪ್ರವಕ್ಷ್ಯಾಮಿ ಛಂದಃಶಾಸ್ತ್ರಮನುತ್ತಮಂ ॥ ೭೫೮ ॥**

**ಇತಿ ಶ್ರೀ ನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ**
**ದ್ವಿತೀಯಪಾದೇ ಷಟ್ಪಂಚಾಶತ್ತಮೋಽಧ್ಯಾಯಃ**

ವುವು ಎಂಬುದರಲ್ಲಿ ಸಂದೇಹವೇ ಇಲ್ಲವೆಂದು ಸನಂದನಮಹರ್ಷಿಗಳು ನಾರದನಿಗೆ ಜೌತಿಷಭಾಗವನ್ನು ಸಂಕ್ಷೇಪವಾಗಿ ನಿರೂಪಿಸಿ ಇನ್ನುಮುಂದೆ ಉತ್ತಮವಾದ ಛಂದಃಶಾಸ್ತ್ರವನ್ನು ಹೇಳುವೆನು ಎಂದರು.

ಇಂತು ಶ್ರೀನಾರದೀಯಪುರಾಣ ಪೂರ್ವಭಾಗದಲ್ಲಿ ಬೃಹದುಪಾಖ್ಯಾನವೆಂಬ
ದ್ವಿತೀಯಪಾದದಲ್ಲಿ ಐವತ್ತಾರನೆಯ ಅಧ್ಯಾಯವು ಮುಗಿದುದು.

# ಸಪ್ತಪಂಚಾಶತ್ತಮೋಽಧ್ಯಾಯಃ



**ಸನಂದನ ಉವಾಚ**

**ವೈದಿಕಂ ಲೌಕಿಕಂ ಚಾಪಿ ಛಂದೋ ದ್ವಿವಿಧಮುಚ್ಯತೇ ।**
**ಮಾತ್ರಾವರ್ಣವಿಭೇದೇನ ತಚ್ಚಾಪಿ ದ್ವಿವಿಧಂ ಪುನಃ ॥ ೧ ॥**

**ಮಯೌ ರಸೌ ತಜೌ ಭನೌ ಗುರುರ್ಲಘುರಪಿ ದ್ವಿಜ ।**
**ಕಾರಣಂ ಛಂದಸಿ ಪ್ರೋಕ್ತಾಶ್ಛಂದಃಶಾಸ್ತ್ರವಿಶಾರದೈಃ ॥ ೨ ॥**

**ಸರ್ವಗೋ ಮಗಣಃ ಪ್ರೋಕ್ತೋ ಮುಖಲೋ ಯಗಣಃ ಸ್ಮೃತಃ ।**
**ಮಧ್ಯಲೋ ರಗಣಶ್ಚೈವ ಪ್ರಾಂತ್ಯಗಃ ಸಗಣೋ ಮತಃ ॥ ೩ ॥**

## ಐವತ್ತೇಳನೆಯ ಅಧ್ಯಾಯವು

೧. ಸನಂದನನು ಹೇಳಿದನು—ಛಂದಸ್ಸು ವೈದಿಕ ಮತ್ತು ಲೌಕಿಕ ವೆಂಬುದಾಗಿ ಎರಡುವಿಧವೆಂದು ಹೇಳಲ್ಪಟ್ಟಿದೆ. ಆ ಎರಡುವಿಧ ಛಂದಸ್ಸು ಮಾತ್ರಾಛಂದಸ್ಸು, ವರ್ಣಛಂದಸ್ಸು ಎಂಬುದಾಗಿ ಪುನಃ ಎರಡು ಪ್ರಭೇದವುಳ್ಳು ದಾಗಿದೆ.

೨. ಬ್ರಾಹ್ಮಣನಾದ ನಾರದನೇ! ಮಗಣ, ಯಗಣ, ರಗಣ, ಸಗಣ ತಗಣ, ಜಗಣ, ಭಗಣ, ನಗಣ, ಗುರು, ಲಘು ಇವುಗಳೇ ಛಂದಸ್ಸಿಗೆ ಕಾರಣ ಗಳೆಂದು ಛಂದಶ್ಶಾಸ್ತ್ರ ತತ್ತ್ವವನ್ನರಿತವರು ಹೇಳಿರುವರು.

೩. ನಾರದನೇ! ವರ್ಣಛಂದಸ್ಸಿನಲ್ಲಿ ಮೂರು ಅಕ್ಷರಗಳಿಗೆ ಒಂದು ಗಣವೆಂದು ಹೆಸರು. ಅಕ್ಷರವು ಗುರು, ಲಘು ಎಂಬುದಾಗಿ ಎರಡು ವಿಧವು. ಮೂರು ಗುರ್ವಕ್ಷರವುಳ್ಳದ್ದು ಮಗಣವೆಂದೂ, ಮೊದಲನೆಯ ಅಕ್ಷರವು ಲಘು ವಾಗಿದ್ದರೆ ಯಗಣವೆಂದೂ ಮಧ್ಯದಲ್ಲಿ ಲಘುವರ್ಣವಿದ್ದರೆ ರಗಣವೆಂಬುದಾ ಗಿಯೂ ಅಂತ್ಯದಲ್ಲಿ ಗುರುವಿದ್ದರೆ ಸಗಣವೆಂದೂ ಹೇಳಲ್ಪಡುತ್ತದೆ.

ತಗಣೋಂತಲಘು ಖ್ಯಾತೋ ಮಧ್ಯಗೋ ಜೋ ಭ ಆದಿಗಃ ।
ತ್ರಿಲಘುರ್ನಗಣಃ ಪ್ರೋಕ್ತಸ್ತ್ರಿಕಾವರ್ಣ ಗಣಾ ಮುನೇ ॥ ೪ ॥

ಚತುರ್ಲಾಸ್ತು ಗಣಾ ಪಂಚ ಪ್ರೋಕ್ತಾ ಆರ್ಯಾದಿ ಸಮ್ಮತಾಃ ।
ಸಂಯೋಗಶ್ಚ ವಿಸರ್ಗಶ್ಚಾನುಸ್ವಾರೋ ಲಘುತಃ ಪರಃ ॥ ೫ ॥

ಲಘೋರ್ಗುರುತ್ವಮಾಯಾತಿ ದೀರ್ಘೋಽನ್ಯಶ್ಚ ಲಘುರ್ಮತಃ ।
ಪಾದಶ್ಚತುರ್ಥಭಾಗಸ್ಸ್ಯಾದ್ವಿಚ್ಛೇದೋ ಯತಿರುಚ್ಯತೇ ॥ ೬ ॥

ಸಮಮರ್ಧಸಮಂ ವೃತ್ತಂ ವಿಷಮಂ ಚಾಪಿ ನಾರದ ।
ತುಲ್ಯಲಕ್ಷಣತಃ ಪಾದಚತುಷ್ಕೇ ಸಮಮುಚ್ಯತೇ ॥ ೭ ॥

೪. ಕೊನೆಯಲ್ಲಿ ಲಘುವರ್ಣವಿದ್ದರೆ ಅದು ತಗಣವೆಂದು ಪ್ರಸಿದ್ಧವಾಗಿದೆ. ಮಧ್ಯದಲ್ಲಿ ಗುರುವಿರುವುದು ಜಗಣವು. ಭಗಣವು ಆದಿ ಗುರುವಾಗಿರುವುದು. ಮೂರೂ ಲಘುವಾಗಿರುವುದು ನಗಣವೆನಿಸುವುದು. ಈರೀತಿ ಆಯಾಯಾ ವರ್ಣಾನುಸಾರವಾಗಿ ಗಣಗಳನ್ನು ನಿರ್ಧರಿಸಬೇಕು.

೫-೬. ಆರ್ಯಾದಿವೃತ್ತಗಳಲ್ಲಿ ಐದು ಗಣಗಳು ಉಕ್ತವಾಗಿವೆ. ಇವುಗಳು ನಾಲ್ಕುನಾಲ್ಕು ಲಘುಗಳಿಂದ ಆಗುತ್ತವೆ. ಇವುಗಳಲ್ಲಿ ಎರಡು ಗುರ್ವಕ್ಷರವಿರುವುದು ಮೊದಲನೆಯದು. ಎರಡು ಲಘುವಿದ್ದು ಕೊನೆಯಲ್ಲಿ ಒಂದು ಗುರುವಿದ್ದರೆ ಎರಡನೆಯದು. ಆದಿಯಲ್ಲಿ ಲಘು ಕೊನೆಯಲ್ಲಿ ಲಘು ಮಧ್ಯದಲ್ಲಿ ಗುರು ಬಂದರೆ ಮೂರನೆಯದಾಗುವುದು. ಆದಿಯಲ್ಲಿ ಒಂದು ಗುರುವು ಕೊನೆಯಲ್ಲಿ ಎರಡು ಲಘುಗಳು ಬಂದರೆ ನಾಲ್ಕನೆಯ ಗಣವಾಗುವುದು. ನಾಲ್ಕು ಲಘುಗಳಿರುವುದು ಐದನೆಯಗಣವು. ಸಂಯುಕ್ತಾಕ್ಷರ, ವಿಸರ್ಗ, ಅನುಸ್ವಾರ ಇವುಗಳ ಹಿಂದಿನ ಅಕ್ಷರವೂ ದೀರ್ಘಾಕ್ಷರವೂ ಸಹ ಗುರುವೆನಿಸುವುದು. ಉಳಿದ ವರ್ಣಗಳು ಲಘುವೆನಿಸುವುವು. ಪದ್ಯದ ನಾಲ್ಕನೆಯ ಒಂದುಭಾಗವು ಪಾದವೆನಿಸುತ್ತದೆ. ಪದ್ಯವಲ್ಲಿ ವಿರಾಮಸ್ಥಾನವು ಯತಿ ಎಂದು ಉಕ್ತವಾಗಿದೆ.

೭. ನಾರದಮುನಿಯೇ! ಪದ್ಯವು ಸಮವೃತ್ತ, ಅರ್ಧಸಮವೃತ್ತ ವಿಷಮವೃತ್ತ ಎಂಬುದಾಗಿ ಮೂರುವಿಧವು. ಪದ್ಯದ ನಾಲ್ಕುಪಾದಗಳಲ್ಲಿಯೂ ಸಮವಾಗಿ ವರ್ಣಗಣನಿಯಮವಿದ್ದರೆ ಅದು ಸಮವೃತ್ತವೆನಿಸುವುದು.

ಆದಿತ್ರಿಕೇ ದ್ವಿಚತುರ್ಥೇ ಸಮಮರ್ಧಸಮಂ ಮತಂ ।
ಲಕ್ಷ್ಮ ಬಿನ್ನಂ ಯಸ್ಯ ಪಾದಚತುಷ್ಕೇ ವಿಷಮಂ ಹಿ ತತ್ ॥ ೮ ॥

ಏಕಾಕ್ಷರಾತ್ಸಮಾರಭ್ಯ ವರ್ಣೈಕೈಕಸ್ಯ ವೃದ್ಧಿತಃ ।
ಷಡ್ವಿಂಶತ್ಯಕ್ಷರಂ ಯಾವತ್ಪಾದಸ್ತಾವತ್ಪೃಥಕ್ಪೃಥಕ್ ॥ ೯ ॥

ತತ್ಪರಂ ಚಂಡವೃಷ್ಟ್ಯಾದಿ ದಂಡಕಾಃ ಪರಿಕೀರ್ತಿತಾಃ ।
ತ್ರಿಭಿಃ ಷಡ್ಭಿಃ ಪದೈರ್ಗಾಥಾಃ ಶೃಣು ಸಂಜ್ಞಾಂ ಯಥೋತ್ತರಂ ॥ ೧೦ ॥

ಉಕ್ತಾತ್ಯುಕ್ತಾ ತಥಾ ಮಧ್ಯಾ ಪ್ರತಿಷ್ಠಾನ್ಯಾಸು ಪೂರ್ವಿಕಾ ।
ಗಾಯತ್ರ್ಯುಷ್ಣಿಗನುಷ್ಟುಪ್ಚ ಬೃಹತೀ ಪಂಕ್ತಿರೇವ ಚ ॥ ೧೧ ॥

ತ್ರಿಷ್ಟುಪ್ಚ ಜಗತೀ ಚೈವ ತಥಾತಿಜಗತೀ ಮತಾ ।
ಶಕ್ವರೀ ಸಾತಿಪೂರ್ವಾ ಚ ಅಷ್ಟ್ಯತ್ಯಷ್ಟೀ ತತಃ ಸ್ಮೃತೇ ॥ ೧೨ ॥

೮. ಒಂದು, ಮೂರನೆಯ ಪಾದಗಳಲ್ಲಿ ಸಮವಾಗಿಯೂ, ಎರಡು, ನಾಲ್ಕನೆಯ ಪಾದಗಳಲ್ಲಿ ಸಮವಾಗಿಯೂ ಗಣನಿಯಮವಿದ್ದರೆ ಅದು ಅರ್ಧಸಮವೃತ್ತವೆನಿಸುವುದು. ನಾಲ್ಕು ಪಾದಗಳಲ್ಲಿಯೂ ಬೇರೆಬೇರೆ ಲಕ್ಷಣವಿದ್ದಲ್ಲಿ ಅದಕ್ಕೆ ವಿಷಮವೃತ್ತವೆಂದು ಹೆಸರು.

೯. ಒಂದು ಅಕ್ಷರವುಳ್ಳ ಪಾದದಿಂದ ಆರಂಭಿಸಿ ಒಂದೊಂದೇ ಅಕ್ಷರವನ್ನು ಹೆಚ್ಚಿಸುತ್ತಾ ಇಪ್ಪತ್ತಾರು ಅಕ್ಷರದವರೆಗೂ ಆಗುವ ಪಾದಗಳಲ್ಲಿ ಬೇರೆ ಬೇರೆ ಛಂದಸ್ಸಾಗುವುದು.

೧೦. ಪಾದದಲ್ಲಿ ಇಪ್ಪತ್ತಾರು ಅಕ್ಷರಗಳಿಗಿಂತ ಹೆಚ್ಚಾದ ಅಕ್ಷರಗಳಿದ್ದರೆ ಅದನ್ನು ಚಂಡವೃಷ್ಟಿ ಮುಂತಾದ ದಂಡಕಗಳೆಂದು ಹೇಳುತ್ತಾರೆ. ಮೂರು ಅಥವಾ ಆರು ಪಾದಗಳಿಂದ ಕೂಡಿರುವುದು ಗಾಥಾ ಎನಿಸುವುದು. ಕ್ರಮವಾಗಿ ಇವುಗಳ ಹೆಸರನ್ನು ಹೇಳುವೆನು ಕೇಳು.

೧೧-೧೫. ಉಕ್ತಾ, ಅತ್ಯುಕ್ತಾ, ಮಧ್ಯಾ, ಪ್ರತಿಷ್ಠಾ, ಸುಪ್ರತಿಷ್ಠಾ ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಅತಿಜಗತೀ, ಶಕ್ವರೀ, ಅತಿಶಕ್ವರೀ, ಅಷ್ಟೀ, ಅತ್ಯಷ್ಟೀ, ಧೃತಿ, ವಿಧೃತಿ, ಕೃತಿ

**ಧೃತಿಶ್ಚ ವಿಧೃತಿಶ್ಚೈವ ಕೃತಿಃ ಪ್ರಕೃತಿರಾಕೃತಿಃ ।**
**ವಿಕೃತಿಃ ಸಂಕೃತಿಶ್ಚೈವ ತಥಾತಿಕೃತಿ ರುತ್ಕೃತಿಃ ॥ ೧೩ ॥**

**ಇತ್ಯೇತಾಶ್ಛಂದಸಾಂ ಸಂಜ್ಞಾಃ ಪ್ರಸ್ತಾರಾದ್ಭೇದಭಾಗಿಕಾಃ ।**
**ಪಾದೇ ಸರ್ವಗುರೌ ಪೂರ್ವಾಲ್ಲಘುಂ ನ್ಯಾಸ್ಯ ಗುರೋರಧಃ ॥ ೧೪ ॥**

ಪ್ರಕೃತಿ, ಆಕೃತಿ, ವಿಕೃತಿ, ಸಂಕೃತಿ, ಅತಿಕೃತಿ ಮತ್ತು ಉತ್ಕೃತಿ ಎಂಬುದಾಗಿ ಏಕಾಕ್ಷರಾದಿ ಛಂದಸ್ಸುಗಳ ನಾಮಧೇಯಗಳು. ಇವುಗಳ ಭೇದವು ಪ್ರಸಾರವನ್ನುಲ್ಲೇಖಿಸಿ ನೋಡಿದರೆ ಸ್ಫುಟವಾಗುವುದು. ಪ್ರಸ್ತಾರವನ್ನು ಬಯಸುವ ಪುರುಷನು ಎಷ್ಟು ಅಕ್ಷರದ ವೃತ್ತವೋ ಅಷ್ಟನ್ನೂ ಗುರುವಾಗಿ ಎಣಿಸಿ ಮೊದಲು ಅವುಗಳನ್ನು ಸಾಲಾಗಿ ಬರೆಯಬೇಕು. ಆಮೇಲೆ ಕೆಳಗಿನ ಸಾಲಿನಲ್ಲಿ ಮೊದಲನೆಯ ಗುರ್ವಕ್ಷರದ ಕೆಳಗೆ ಒಂದು ಲಘುವನ್ನೂ, ಆಮೇಲೆ ಗುರುವನ್ನೂ ಬರೆಯಬೇಕು. ಮೂರು ಅಕ್ಷರದ ಪಾದವೆಂದೆಣಿಸಿದರೆ ಒಂದನೆಯದು ಲಘು ಉಳಿದ ಎರಡು ಗುರುಗಳಾಗುವುವು. ಇದೇರೀತಿ ಮೂರು ಲಘು ಅಕ್ಷರ ಬರುವವರೆಗೂ ರೇಖಾವಿನ್ಯಾಸಮಾಡಬೇಕು. ಈರೀತಿ ವಿನ್ಯಾಸಮಾಡುವುದೇ ಪ್ರಸ್ತಾರವೆನಿಸುತ್ತದೆ. ಗುರುವನ್ನು ∩ ಯಾ ∪ ಚಿಹ್ನೆಯಿಂದಲೂ ಲಘುವನ್ನು—ಎಂಬ ಚಿಹ್ನೆಯಿಂದಲೂ ಛಂದಃಶಾಸ್ತ್ರಜ್ಞರು ತೋರಿಸಿರುತ್ತಾರೆ.

ಉದಾಹರಣೆಗಾಗಿ ಮೂರು ಅಕ್ಷರದ ಪಾದವುಳ್ಳ ಮಧ್ಯಾಛಂದಸ್ಸಿನ ಪ್ರಭೇದವನ್ನು ತಿಳಿಸುವುದಕ್ಕೋಸ್ಕರ ಪ್ರಸ್ತಾರವನ್ನು ಬರೆಯುವ ಕ್ರಮ:—

| | | |
|---|---|---|
| ಪ್ರಥಮಭೇದ | ∪ ∪ ∪ | ಮಗಣ |
| ದ್ವಿತೀಯಭೇದ | — ∪ ∪ | ಯಗಣ |
| ಮೂರನೇಭೇದ | ∪ — ∪ | ರಗಣ |
| ನಾಲ್ಕನೇಭೇದ | — — ∪ | ಸಗಣ |
| ಐದನೇಭೇದ | ∪ ∪ — | ತಗಣ |
| ಆರನೇಭೇದ | — ∪ — | ಜಗಣ |
| ಏಳನೇಭೇದ | ∪ — — | ಭಗಣ |
| ಎಂಟನೇಭೇದ | — — — | ನಗಣ |

ಯಥೋಪರಿ ತಥಾಶೇಷಮಗ್ರೇ ಪ್ರಾಗ್ವನ್ನ್ಯಸೇದಪಿ ।
ಏಷಃಪ್ರಸ್ತಾರ ಉದಿತೋ ಯಾವತ್ಸರ್ವಲಘುರ್ಭವೇತ್ ॥ ೧೫ ॥

ನಷ್ಟಾಂಕಾರ್ಧೇ ಸಮೇ ಲಃಸ್ಯಾದ್ವಿಷಮೇ ಸೈವ ಸೋಽರ್ದ್ಧಗಃ ।
ಉದ್ದಿಷ್ಟೇ ದ್ವಿಗುಣಾನಾದ್ಯಾದಂಕಾನ್ಸಂಮಿಲ್ಯ ಲಸ್ಥಿತಾನ್ ॥ ೧೬ ॥

ಹೀಗೆ ಪ್ರತಿಯೊಂದು ವೃತ್ತದಲ್ಲಿಯೂ ಪ್ರಸ್ತಾರವನ್ನು ಹಾಕಿದರೆ ೨೬ ಛಂದಸ್ಸಿನವರೆಗೂ ಅವುಗಳ ಪ್ರಭೇದವನ್ನು ಸುಲಭವಾಗಿ ತಿಳಿಯಲು ಸಾಧ್ಯವಾಗುವುದು.—

೧೬-೨೧. ಇಲ್ಲಿ ನಷ್ಟವನ್ನು ಹೇಳುತ್ತದೆ. ನಷ್ಟವೆಂದರೆ ನಷ್ಟವಾದ ವೃತ್ತವನ್ನು ತಿಳಿಯುವ ಸಾಧನವೆಂದು ಹೆಸರು. ಯಾವ ಛಂದಸ್ಸಿದಲ್ಲಿ ವೃತ್ತಜ್ಞಾನವಾಗುವುದಿಲ್ಲವೋ ಅದೇ ನಷ್ಟವೆನಿಸುತ್ತದೆ. ಅದನ್ನೂ ಒಂದು ವಿಧವಾದ ಪ್ರಸ್ತಾರದಿಂದ ತಿಳಿಯಲು ಶಕ್ಯವಾಗುವುದು. ನಷ್ಟವೃತ್ತದ ಸಂಖ್ಯೆಯು ಆವುದೋ ಅದನ್ನು ಸಮವಾಗಿ ಎರಡುಭಾಗಮಾಡಿದರೆ ಭಾಗಿಸಿಬಂದ ಅಂಕಿಯು ಸಮವಾಗಲೀ ವಿಷಮವಾಗಲೀ ಅದರಲ್ಲಿ ಒಂದು ಲಘುವೆಂದು ತಿಳಿಯಬೇಕು. ಉಳಿದುದನ್ನೂ ನಿಃಶೇಷವಾಗುವಂತೆ ಅಂದರೆ ಕೊನೆಯವರೆಗೂ ಅರ್ಧಅರ್ಧವಾಗಿ ಮಾಡಬೇಕು. ಆಗ ನಿಃಶೇಷವಾಗಿ ಭಾಗಿಸಲ್ಪಟ್ಟರೆ ಅದು ಲಘುವೆಂದೂ ಉಳಿದ ವಿಷಮಸಂಖ್ಯೆಯು ಅರ್ಧಮಾಡಲಾಗದಿದ್ದರೆ ಅದಕ್ಕೆ ಒಂದನ್ನು ಸೇರಿಸಿ ಭಾಗಿಸಬೇಕು. ಆಗ ಅದನ್ನು ಗುರುವೆಂದು ತಿಳಿಯಬೇಕು. ಉದಾಹರಣೆಗಾಗಿ ಮಧ್ಯಾಛಂದಸ್ಸಿನಲ್ಲಿ ನಷ್ಟ ವೃತ್ತಸಂಖ್ಯೆ ಆರನೆಯದು ಎಂದು ಊಹಿಸುವ. ಆಗ ಅದನ್ನು ತಿಳಿಯುವ ಕ್ರಮ—ಆರನ್ನು ಅರ್ಧಮಾಡಲು ಬರುವುದರಿಂದ ಉಳಿದುದು ಮೂರಾಗುವುದರಿಂದ ಮೊದಲನೆಯದು ಲಘುವೆಂದು ತಿಳಿಯಬೇಕು. ಮೂರನ್ನು ಅರ್ಧಮಾಡಲು ಬಾರದಿರುವುದರಿಂದ ಒಂದನ್ನು ಸೇರಿಸಿಕೊಂಡು ಭಾಗಿಸಬೇಕು. ಆದುದರಿಂದ ಎರಡನೆಯದು ಗುರುವೆಂದು ಭಾವಿಸಬೇಕು. ಆಮೇಲೆ ಉಳಿದ ಎರಡು ಸಂಖ್ಯೆಯು ನಿಃಶೇಷವಾಗಿ ಅರ್ಧಿಸುವುದರಿಂದ ಮೂರನೆಯದು ಲಘುವರ್ಣವು. ಆದುದರಿಂದ —।— ಈ ರೀತಿಯಾದ ವಿನ್ಯಾಸಬರುವುದರಿಂದ ಇದು ಜಗಣಾತ್ಮಕವೆಂದು ತಿಳಿಯಬೇಕು.

**ಕೃತ್ವಾ ಸ್ವೈಕಾನ್ನದೇತ್ಸಂಖ್ಯಾಮಿತಿ ಪ್ರಾಹುಃ ಪುರಾವಿದಃ ।**
**ವರ್ಣಾನ್ಸೈಕಾನ್ಸೃತ್ತಭಾವಾನುತ್ತರಾಧರತಃ ಸ್ಥಿತಾನ್ ॥ ೧೭ ॥**

**ಏಕಾದಿಕ್ರಮತಶ್ಚೈತಾನುಪರ್ಯುಪರಿ ವಿನ್ಯಸೇತ್ ।**
**ಉಪಾಂತ್ಯತೋ ನಿವರ್ತೇತ ತ್ಯಜನ್ನೈಕೈಕಮೂರ್ಧ್ವತಃ ॥ ೧೮ ॥**

ಆಮೇಲೆ ಉದ್ದಿಷ್ಟವನ್ನು ಹೇಳಿದೆ. ಉದ್ದಿಷ್ಟವೆಂದರೆ ಈ ಛಂದಸ್ಸಿನಲ್ಲಿ ಈ ವೃತ್ತವು ಎಷ್ಟನೆಯದು ಎಂದು ಯಾವುದನ್ನುದ್ದೇಶಿಸಿ ಕೇಳಲ್ಪಡುವುದೋ ಅದು ಎಂದು ಭಾವ. ಅದರ ಪ್ರಸ್ತಾರಕ್ರಮ–ಯಾವ ವೃತ್ತವನ್ನು ಹೇಳುವನೋ ಅವುಗಳ ಗುರು ಲಘುಗಳನ್ನು ಸಾಲಾಗಿ ಬರೆದುಕೊಳ್ಳಬೇಕು. ಆಮೇಲೆ ಆದಿಯಿಂದ ಗುರುವಿನ ಮೇಲಾಗಲೀ ಲಘುವಿನ ಮೇಲಾಗಲೀ ಒಂದನ್ನು ಬರೆದು ಆಮೇಲೆ ಎರಡನೇವರ್ಣದಮೇಲೆ ದ್ವಿಗುಣಿತವಾಗಿ ಬರೆಯಬೇಕು. ಹೀಗೆ ದ್ವಿಗುಣಿತವಾಗಿ ಬರೆಯುತ್ತಾ ಹೋಗಬೇಕು. ಆಮೇಲೆ ಲಘುವಿನ ಮೇಲಿರುವ ಸಂಖ್ಯೆಗಳನ್ನೆಲ್ಲಾ ಕೂಡಿಸಿ ಬಂದಮೊತ್ತಕ್ಕೆ ಒಂದನ್ನು ಕೂಡಿಸಿದರೆ ಅದು ಉದ್ದಿಷ್ಟವಾಗುವುದು. ಉದಾಹರಣೆ:–ಮಧ್ಯಾಛಂದಸ್ಸಿನಲ್ಲಿ ಜಗಣವು ಎಷ್ಟನೆಯ ವೃತ್ತವೆಂದರೆ ಆಗ ಅದನ್ನು ವಿನ್ಯಾಸಮಾಡಿಕೊಳ್ಳಬೇಕು. 1 — 2 ‿ 4 — ॥ ಇಲ್ಲಿ ಲಘುವಿನ ಮೇಲಿರುವ ಸಂಖ್ಯೆಯ ಮೊತ್ತವು ಐದು. ಇದಕ್ಕೆ ಒಂದನ್ನು ಕೂಡಿಸಿದರೆ (೬) ಆರು ಆಗುವುದು. ಆಗ ಆರನೆಯ ವೃತ್ತವೆಂದು ತಿಳಿಯಬೇಕು.

ಈಗ ಲಗಕ್ರಿಯೆಯನ್ನು ವಿವರಿಸಿದೆ:—ಲಗಕ್ರಿಯೆಯೆಂದರೆ ಆಯಾಯಾ ಛಂದಸ್ಸಿನ ಪ್ರಭೇದಗಳಲ್ಲಿ ಒಂದೊಂದು ಲಘು ಗುರುಗಳುಳ್ಳ ವೃತ್ತಗಳು ಎಷ್ಟು? ಎರಡು ಲಘುಗಳು, ಗುರುಗಳು ಇರುವ ವೃತ್ತಗಳೆಷ್ಟು? ಎಂದು ತಿಳಿಯುವ ಕ್ರಮ. ಅದು ಹೇಗೆಂದರೆ—ಉದ್ದಿಷ್ಟವಾದ ಛಂದಸ್ಸು ಎಷ್ಟು ಅಕ್ಷರವುಳ್ಳದು ಎಂದು ಮೊದಲು ನಿಶ್ಚೈಸಿಕೊಂಡಿರಬೇಕು. ಆಮೇಲೆ ಅವುಗಳ ಜ್ಞಾಪಕಕ್ಕಾಗಿ ಅವುಗಳಿಗೆ ಒಂದು, ಎರಡು, ಮೂರು ಎಂದು ಕ್ರಮವಾಗಿ ಸಂಖ್ಯೆಯನ್ನಿಡಬೇಕು. ಹೀಗೆ ಸಂಖ್ಯೆಯನ್ನು ನಿಯಮಿಸಿದಮೇಲೆ ಒಂದೊಂದು ಸಂಖ್ಯೆ

**ಉಪರ್ಯಾದ್ಯಾದ್ಯುರೋ ರೇವಮೇಕದ್ವ್ಯಾದಿಲಗಕ್ರಿಯಾ ।**
**ಲಗಕ್ರಿಯಾಂಕಸಂದೋಹೇ ಭವೇತ್ಸಂಖ್ಯಾವಿಮಿಶ್ರಿತೇ ॥ ೧೯ ॥**

ಯನ್ನೇ ಮೇಲೆಮೇಲೆ ಬರೆಯಬೇಕು. ಅಡ್ಡವಾಗಿ ಬರೆಯಬಾರದು. ಹೀಗೆ ಸಂಪೂರ್ಣ ಸಂಖ್ಯೆಯನ್ನು ಮೇಲೆಮೇಲೆ ಬರೆದಮೇಲೆ ಅವುಗಳ ಮೇಲೆ ಒಂದು ಸಂಖ್ಯೆಯನ್ನುಹೆಚ್ಚಾಗಿ ಬರೆಯಬೇಕು. ಆಮೇಲೆ ಅತ್ಯಂತವಾಗಿ ಕೆಳಗೆ ಬರೆದ ಮೊದಲನೆಯ ಒಂದು ಸಂಖ್ಯೆಯನ್ನು ಮೇಲಿರುವ ಎರಡನೆಯ ಸಂಖ್ಯೆಯೊಡನೆ ಕೂಡಿಸಿ ಎರಡನೆಯ ಸಂಖ್ಯೆಯಪಕ್ಕಕ್ಕೆ ದಕ್ಷಿಣದಲ್ಲಿ ಬರೆಯಬೇಕು. ಆಮೇಲೆ ಮೊತ್ತವಾದ ಬಲಗಡೆ ಬರೆದ ಮೂರನೆಯ ಸಂಖ್ಯೆಗೆ ಕೆಳಗಿನ ಒಂದನ್ನು ಕೂಡಿಸಿ ಬಂದ ನಾಲ್ಕನ್ನು ಮೂರರ ಪಕ್ಕದಲ್ಲಿ ಬಲಕ್ಕೆ ಬರೆಯಬೇಕು. ಎಷ್ಟು ಸಂಖ್ಯೆಯುಳ್ಳ ವೃತ್ತವೋ ಅಷ್ಟು ಬರುವವರೆಗೂ ಒಂದನ್ನು ಕೂಡಿಸುತ್ತಾ ಬರೆಯಬೇಕು. ಆಗ ಎರಡು ಬರೆದ ಪಂಕ್ತಿಯಲ್ಲಿ ಆರು ಅಕ್ಷರದ ಪಾದಛಂದಸ್ಸಿನಲ್ಲಿ ಎರಡು, ಮೂರು ನಾಲ್ಕು ಐದು ಆರು ಆಗುತ್ತದೆ. ಆಮೇಲೆ ಕ್ರಮವಾಗಿ ಮೇಲೆಮೇಲೆ ಬರೆದ ಮೂರನೇ ಅಂಕಿಗೆ ಕೆಳಗೆ ಎರಡನೇ ಸಂಖ್ಯೆಯ ಬಲಗಡೆ ಬರೆದ ಮೂರನ್ನು ಕೂಡಿಸಿ ಮೂರರ ಪಕ್ಕಕ್ಕೆ ಬರೆಯಬೇಕು, ಹೀಗೆ ಕೊನೆಯ ಆರನ್ನು ಮಾತ್ರ ಬಿಟ್ಟು ಕೋಣವನ್ನುಹೊಂದಿರುವ ಸಂಖ್ಯೆಯನ್ನೇ ಕೂಡಿಸಬೇಕು. ಆಗ ಮೂರ ನೆಯಸಾಲಿನಲ್ಲಿ ಮೂರು ಆರು ಹತ್ತು, ಹದಿನೈದು ಆಗುತ್ತದೆ. ಆಮೇಲೆ ಮೇಲಿನ ನಾಲ್ಕನೆಯ ಸಂಖ್ಯೆಗೆ ಮೂರನೇ ಸಾಲಿನ ಕೋಣದಲ್ಲಿರುವ ಆರನ್ನು ಕೂಡಿಸ ಬೇಕು ಬಂದ ಹತ್ತು ಸಂಖ್ಯೆಯನ್ನು ಅದರ ಬಲಕ್ಕೆ ಬರೆಯಬೇಕು. ಆಮೇಲೆ ಅದಕ್ಕೆ ಕೆಳಗೆ ಕೋಣದಲ್ಲಿರುವ ಹತ್ತನ್ನು ಕೂಡಿಸಿದರೆ ಇಪ್ಪತ್ತು ಆಗುತ್ತದೆ. ಅದನ್ನು ಬಲದಲ್ಲಿ ಬರೆಯಬೇಕು. ಮುಂದಿನ ಹದಿನೈದು ಉಪಾಂತ್ಯವಾದುದರಿಂದ ಅದನ್ನು ಇಲ್ಲವೆಂದು ಭಾವಿಸಬೇಕು. ಎಲ್ಲಾ ವೃತ್ತ ದಲ್ಲಿಯೂ ಉಪಾಂತ್ಯವನ್ನು ತ್ಯಜಿಸಿ ಕೋಣದಲ್ಲಿರುವ ಕೆಳಗಿನ ಸಂಖ್ಯೆಗಳನ್ನು ಕೂಡಿಸಿ ಬಲಗಡೆ ಬರೆಯಬೇಕು. ಪ್ರಕೃತ ಐದನೆಯ ಸಂಖ್ಯೆಗೆ ಕೋಣದಲ್ಲಿರುವ ಹತ್ತರೊಡನೆ ಸೇರಿಸುವುದರಿಂದ ಹದಿನೈದು ಸಂಖ್ಯೆಯಾಗುತ್ತದೆ ಇದನ್ನು ಅದರ ದಕ್ಷಿಣಪಾರ್ಶ್ವದಲ್ಲಿ ಬರೆಯಬೇಕು. ಇಪ್ಪತ್ತು ಕೆಳಗಿನ ಕೋಣದಲ್ಲಿ

**ಉದ್ದಿಷ್ಟಾಂಕಸಮಾಹಾರಃ ಸೈಕೋ ವಾ ಜನಯೇದಿಮಾಂ ।**
**ಸಂಖ್ಯೈವ ದ್ವಿಗುಣೈಕೋನಾಸದ್ಭಿರಧ್ವಾ ಪ್ರಕೀರ್ತಿತಃ ॥ ೨೦ ॥**

ದ್ದರೂ ಉಪಾಂತ್ಯವಾಗುವುದರಿಂದ ತ್ಯಜಿಸಬೇಕು. ಮೇಲಿನ ಆರನೆಯ ಸ್ಥಾನಕ್ಕೆ ಕೆಳಗಿನ ಕೋಣದಲ್ಲಿ ಹದಿನೈದು ಸಂಖ್ಯೆ ಇದ್ದರೂ ಅದು ಉಪಾಂತ್ಯವಾದುದರಿಂದ ಇಲ್ಲವೆಂದು ಭಾವ. ಹೀಗೆ ಬಂದ ಕೊನೆಯ ಸಂಖ್ಯೆಯನ್ನು ನೋಡಿ ಗುರು ಲಘುಗಳನ್ನು ನಿಶ್ಚಯಿಸಬೇಕು. ಕೆಳಗಿನ ಒಂದು ಸಂಖ್ಯೆಯನ್ನು ಸರ್ವಲಘುಸಂಖ್ಯೆಯುಳ್ಳುದನ್ನೂ ಮೇಲಿನ ಸೇರಿಸಕೊಂಡ ಒಂದು ಸಂಖ್ಯೆಯನ್ನೂ ಸರ್ವಗುರುವುಳ್ಳ ಒಂದು ವೃತ್ತವೆಂದೂ ಊಹಿಸಬೇಕು. ಎರಡನೆಯ ಸಾಲಿನಲ್ಲಿ ಬಂದು ಸಂಖ್ಯೆಯನ್ನು ಒಂದು ಗುರುವುಳ್ಳ ೬ ಆರು ವೃತ್ತಗಳೆಂದೂ ಮೂರನೆಯ ಸಾಲಿನಲ್ಲಿ ಬಂದ ಸಂಖ್ಯೆಯನ್ನು ಎರಡು ಗುರುವುಳ್ಳವುಗಳನ್ನಾಗಿಯೂ ಊಹಿಸಬೇಕು. ಹೀಗೆಯೇ ಒಂದೊಂದನ್ನು ಹೆಚ್ಚಿಸಬೇಕು. ಉದಾಹರಣೆಗಾಗಿ ಗಾಯತ್ರೀಛಂದದ್ದು ಸ್ವೀಕರಿಸಲ್ಪಟ್ಟಿದೆ.

| | | | | | |
|---|---|---|---|---|---|
| 1 | | | | | ಆರು ಗುರುವಿರುವುದು ಒಂದು |
| 6 | | | | | ಐದು ಗುರುವಿರುವುದು ಆರು |
| 5 | 15 | | | | ನಾಲ್ಕು ಗುರುವಿರುವುದು ಹದಿನೈದು |
| 4 | 10 | 20 | | | ಮೂರು ಗುರುವಿರುವುದು ಇಪ್ಪತ್ತು |
| 3 | 6 | 10 | 15 | | ಎರಡು ಗುರುವಿರುವುದು ಹದಿನೈದು |
| 2 | 3 | 4 | 5 | 6 | ಒಂದು ಗುರುವಿರುವುದು ಆರುವೃತ್ತ |
| 1 | | | | | ಸರ್ವ ಲಘುವುಳ್ಳುದು ಒಂದುವೃತ್ತ |

**ಇತ್ಯೇತತ್ಕಿಂಚಿದಾಖ್ಯಾತಂ ಲಕ್ಷಣಂ ಛಂದಸಾಂ ಮುನೇ ।**
**ಪ್ರಸ್ತಾರೋಕ್ತಪ್ರಭೇದಾನಾಂ ನಾಮಾನಂತ್ಯಂ ಪ್ರಗಾಹತೇ ॥ ೨೧ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ದ್ವಿತೀಯಪಾದೇ ಸಂಕ್ಷಿಪ್ತಛಂದೋವರ್ಣನಂ ನಾಮ ಸಪ್ತಪಂಚಾಶತ್ತಮೋಽಧ್ಯಾಯಃ**

ಮುನಿಶ್ರೇಷ್ಠನೇ ! ಈರೀತಿಯಾಗಿ ಸುಲಭೋಪಾಯಗಳು ಸ್ವಲ್ಪವೇ ನಿರ್ದಿಷ್ಟಗಳಾಗಿವೆ. ಛಂದಸ್ಸಿನ ಲಕ್ಷಣಗಳೂ ಕಡಿಮೆಯಾಗಿ ನಿರ್ದಿಷ್ಟವಾಗಿವೆ. ಹಿಂದೆ ಹೇಳಿದ ಪ್ರಸ್ತಾರವನ್ನನುಸರಿಸಿ ಹೇಳುವುದಾದರೆ ಇವುಗಳಿಗೆ ಪಾರವೇ ಇಲ್ಲ.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗ ಬೃಹದುಪಾಖ್ಯಾನವೆಂಬ ದ್ವಿತೀಯಪಾದದಲ್ಲಿ ಸಂಕ್ಷಿಪ್ತಛಂದೋವರ್ಣನವೆಂಬ ಐವತ್ತೇಳನೆಯ ಅಧ್ಯಾಯವು ಮುಗಿದುದು.



## ಅಷ್ಟಪಂಚಾಶತ್ತಮೋಽಧ್ಯಾಯಃ

॥ ನಾರದ ಉವಾಚ ॥

**ಅನೂಚಾನಪ್ರಸಂಗೇನ ವೇದಾಂಗಾನ್ಯಖಿಲಾನಿ ಚ ।**
**ಶ್ರುತಾನಿ ತ್ವನ್ಮುಖಾಂಭೋಜಾತ್ಸಮಾಸವ್ಯಾಸಯೋಗತಃ ॥ ೧ ॥**

**ಶುಕೋತ್ಪತ್ತಿಂ ಸಮಾಚಕ್ಷ್ವ ವಿಸ್ತರೇಣ ಮಹಾಮತೇ ।**

॥ ಸನಂದನ ಉವಾಚ ॥

**ಮೇರುಶೃಂಗೇ ಕಿಲ ಪುರಾ ಕರ್ಣಿಕಾರವನಾಯುತೇ ॥ ೨ ॥**

**ವಿಜಹಾರ ಮಹಾದೇವೋ ಭೌಮ್ಯೈರ್ಭೂತಗಣೈರ್ವೃತಃ ।**
**ಶೈಲರಾಜಸುತಾ ಚೈವ ದೇವೀ ತತ್ರಾಭವತ್ಪುರಾ ॥ ೩ ॥**

### ಐವತ್ತೆಂಟನೆಯ ಅಧ್ಯಾಯವು

೧-೨. ನಾರದನು ಹೇಳಿದನು:—ಮಹಾಜ್ಞಾನಿಯಾದ ಸನಂದನನೇ! ಪ್ರಾಚೀನಸಂಪ್ರದಾಯವನ್ನು ಹೇಳುವ ಪ್ರಸಂಗದಲ್ಲಿ ಸಕಲ ವೇದಾಂಗಗಳೂ ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ನಿನ್ನ ಮುಖಕಮಲದಿಂದ ಶ್ರುತವಾದುವು. ಈಗ ಶುಕಾಚಾರ್ಯರ ಜನನ ವೃತ್ತಾಂತವನ್ನು ವಿಸ್ತಾರವಾಗಿ ಹೇಳು ಎಂದು ನಾರದನು ಪ್ರಾರ್ಥಿಸಿದನು.

೨-೩. ಸನಂದನನು ಹೇಳಿದನು.—ಪೂರ್ವದಲ್ಲಿ ಕರ್ಣಿಕಾರ (ಬೆಟ್ಟತಾವರೆಗಿಡ) ವನದಂತಿದ್ದ ಮೇರುಪರ್ವತದ ಶಿಖರದಲ್ಲಿ ಭೂಲೋಕದ ಭೂತಗಣಗಳೊಡನೆ ಮಹಾದೇವನು ಕ್ರೀಡಿಸುತ್ತಿದ್ದನು. ಪರ್ವತರಾಜನ ಪುತ್ರಿಯಾದ ಪಾರ್ವತೀದೇವಿಯೂ ಸಹ ಅಲ್ಲಿಯೇ ಇದ್ದಳು.

ತತ್ರ ದಿವ್ಯಂ ತಪಸ್ತೇಪೇ ಕೃಷ್ಣದ್ವೈಪಾಯನಃ ಪ್ರಭುಃ ।
ಯೋಗೇನಾತ್ಮಾನಮಾವಿಶ್ಯ ಯೋಗಧರ್ಮಪರಾಯಣಃ ॥ ೪ ॥

ಧಾರಯನ್ ಸ ತಪಸ್ತೇಪೇ ಪುತ್ರಾರ್ಥಂ ಮುನಿಸತ್ತಮಃ ।
ಅಗ್ನೇರ್ಭೂಮೇಸ್ತಥಾ ವಾಯೋರಂತರಿಕ್ಷಸ್ಯ ಚಾಭಿತಃ ॥ ೫ ॥

ವೀರ್ಯೇಣ ಸಂಮತಃ ಪುತ್ರೋ ಮಮ ಭೂಯಾದಿತಿ ಸ್ಮ ಹ ।
ಸಂಕಲ್ಪೇನಾಥ ಸೋಽನೇನ ದುಷ್ಪ್ರಾಪಮಕೃತಾತ್ಮಭಿಃ ॥ ೬ ॥

ವರಯಾಮಾಸ ದೇವೇಶಮಾಸ್ಥಿತಸ್ತಪ ಉತ್ತಮಂ ।
ಅತಿಷ್ಠನ್ಮಾರುತಾಹಾರಃ ಶತಂ ಕಿಲ ಸಮಾಃ ಪ್ರಭುಃ ॥ ೭ ॥

ಆರಾಧಯನ್ ಮಹಾದೇವಂ ಬಹುರೂಪಮುಮಾಪತಿಂ ।
ತತ್ರ ಬ್ರಹ್ಮರ್ಷಯಶ್ಚೈವ ಸರ್ವೇ ದೇವರ್ಷಯಸ್ತಥಾ ॥ ೮ ॥

---

೪. ಅಲ್ಲಿ ಯೋಗಧರ್ಮನಿರತನಾದ ಕೃಷ್ಣದ್ವೈಪಾಯನಸ್ವಾಮಿಯು ಯೋಗದಿಂದ ಆತ್ಮಸಂಯಮವನ್ನು ಮಾಡಿಕೊಂಡು ದಿವ್ಯವಾದ ತಪಸ್ಸನ್ನು ಮಾಡುತ್ತಿದ್ದನು.

೫-೬. ಮುನಿವರ್ಯನಾದ ಕೃಷ್ಣದ್ವೈಪಾಯನನು ಅಗ್ನಿ, ಭೂಮಿ, ವಾಯು ಮತ್ತು ಅಂತರಿಕ್ಷ ಇವುಗಳಲ್ಲೆಲ್ಲಾ ವ್ಯಾಪಿಸುವಂತಹ ಪರಾಕ್ರಮಶಾಲಿಯಾದ ಮಗನನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಇಂದ್ರಿಯಸಂಯಮನಪೂರ್ವಕವಾಗಿ ಪುತ್ರಾರ್ಥವಾದ ತಪಸ್ಸನ್ನು ಮಾಡಿದನು.

೭-೮. ತರುವಾಯ ಅವನು ಈ ಸಂಕಲ್ಪದಿಂದ ದೇವೇಶನನ್ನು ಕುರಿತು ಉತ್ತಮವಾದ ತಪಸ್ಸನ್ನು ಮಾಡಿದವನಾಗಿ ಪುಣ್ಯವಂತರಲ್ಲದವರಿಂದ ಹೊಂದಲಶಕ್ಯವಾದ ವರವನ್ನು ಕೇಳಿದನು. ಕೃಷ್ಣದ್ವೈಪಾಯನಸ್ವಾಮಿಯು ನೂರು ವರ್ಷಗಳು ಆಹಾರವಿಲ್ಲದೇ ಗಾಳಿಯನ್ನು ಮಾತ್ರ ಸೇವಿಸುತ್ತಾ ಬಹುರೂಪಿಯೂ ಪಾರ್ವತೀಪತಿಯೂ ಆದ ಮಹಾದೇವನನ್ನು ಆರಾಧಿಸಿದನು.

**ಲೋಕಪಾಲಾಶ್ಚ ಸಾಧ್ಯಾಶ್ಚ ವಸುಭಿಶ್ಚಾಷ್ಟಭಿಸ್ಸಹ ।**
**ಆದಿತ್ಯಾಶ್ಚೈವ ರುದ್ರಾಶ್ಚ ದಿವಾಕರನಿಶಾಕರೌ ॥ ೯ ॥**

**ವಿಶ್ವಾವಸುಶ್ಚ ಗಂಧರ್ವಃ ಸಿದ್ಧಾಶ್ಚಾಪ್ಸರಸಾಂ ಗಣಾಃ ।**
**ತತ್ರ ರುದ್ರೋ ಮಹಾದೇವಃ ಕರ್ಣಿಕಾರಮಯೀಂ ಶುಭಾಂ ॥ ೧೦ ॥**

**ಧಾರಯಾನಃ ಸ್ರಜಂ ಭಾತಿ ಶರದೀವ ನಿಶಾಕರಃ ।**
**ತಸ್ಮಿನ್ ದಿವ್ಯೇ ವನೇ ರಮ್ಯೇ ದೇವದೇವರ್ಷಿಸಂಕುಲೇ ॥ ೧೧ ॥**

**ಆಸ್ಥಿತಃ ಪರಮಂ ಯೋಗಂ ವ್ಯಾಸಃ ಪುತ್ರಾರ್ಥಮುದ್ಯತಃ ।**
**ನ ಚಾಸ್ಯ ಹೀಯತೇ ವರ್ಣೋ ನ ಗ್ಲಾನಿರುಪಜಾಯತೇ ॥ ೧೨ ॥**

**ತ್ರಯಾಣಾಮಪಿ ಲೋಕಾನಾಂ ತದದ್ಭುತಮಿವಾಭವತ್ ।**
**ಜಟಾಶ್ಚ ತೇಜಸಾ ತಸ್ಯ ವೈಶ್ವಾನರ ಶಿಖೋಪಮಾಃ ॥ ೧೩ ॥**

೮-೧೨. ಬ್ರಹ್ಮರ್ಷಿಗಳು, ಸಕಲದೇವರ್ಷಿಗಳು, ಲೋಕಪಾಲಕರು ಸಾಧ್ಯರು, ಅಷ್ಟವಸುಗಳು, ಆದಿತ್ಯರು, ರುದ್ರರು, ಸೂರ್ಯಚಂದ್ರರು, ವಿಶ್ವಾವಸು ಗಂಧರ್ವನು, ಸಿದ್ಧರು ಮತ್ತು ಅಪ್ಸರಸ್ತ್ರೀಸಮೂಹ ಇವರುಗಳಿರುವೆಡೆಯಲ್ಲಿ ರುದ್ರಮಹಾದೇವನು ಬೆಟ್ಟದ ತಾವರೇ ಪುಷ್ಪಮಯವಾದ ಮನೋಹರವಾದ ಮಾಲಿಕೆಯನ್ನು ಧರಿಸಿಕೊಂಡವನಾಗಿ ಶರತ್ಕಾಲದ ಚಂದ್ರನಂತೆ ಪ್ರಕಾಶಿಸುತ್ತಿರುವನು. ದೇವತೆ ಮತ್ತು ದೇವರ್ಷಿಗಳಿಂದ ಪೂರ್ಣವಾಗಿ ಮನೋಹರವಾದ ಆ ದಿವ್ಯವನದಲ್ಲಿ ಪುತ್ರಾರ್ಥಿಯಾಗಿ ಉದ್ಯುಕ್ತನಾದ ವ್ಯಾಸನು ಶ್ರೇಷ್ಠವಾದ ಧ್ಯಾನಯೋಗವನ್ನು ಮಾಡತೊಡಗಿದನು. ಆಗ ಧ್ಯಾನಯೋಗನಿಷ್ಠನಾದ ವ್ಯಾಸನ ಬಣ್ಣವು ಕಪ್ಪಾಗಲಿಲ್ಲ. ಶರೀರದಲ್ಲಿ ಬಳಲಿಕೆಯುಂಟಾಗಲಿಲ್ಲ.

೧೩-೧೬. ಆತನ ಧ್ಯಾನಯೋಗವು ಮೂರು ಲೋಕಗಳಿಗೂ ಆಶ್ಚರ್ಯಕರವಾಗುವಂತಿದ್ದಿತು. ಅಪರಿಮಿತ ತೇಜಸ್ಸುಳ್ಳ ಆ ವ್ಯಾಸರ ಜಟೆಗಳು ಬೆಂಕಿಯ ಜ್ವಾಲೆಗಳಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಮಾನವಾಗಿ ಕಾಣುತ್ತಿದ್ದುವು. ನಾರದನೇ! ಈರೀತಿಯಾದ ಆತನ ತಪಸ್ಸು ಮತ್ತು ಭಕ್ತಿಗಳಿಂದ ಪ್ರಸನ್ನನಾದ ಮಹೇಶ್ವರನು ಆತನ ಇಷ್ಟಾರ್ಥವನ್ನು ನೆರವೇರಿಸ

ಪ್ರಜ್ವಲಂತ್ಯಃ ಸ್ಮ ದೃಶ್ಯಂತೇ ಯುಕ್ತಸ್ಯಾಮಿತತೇಜಸಃ ।
ಏವಂ ವಿಧೇನ ತಪಸಾ ತಸ್ಯ ಭಕ್ತ್ಯಾ ಚ ನಾರದ ॥ ೧೪ ॥

ಮಹೇಶ್ವರಃ ಪ್ರಸನ್ನಾತ್ಮಾ ಚಕಾರ ಮನಸಾ ಮತಿಂ ।
ಉವಾಚ ಚೈನಂ ಭಗವಾಂಸ್ತ್ರ್ಯಂಬಕಃ ಪ್ರಹಸನ್ನಿವ ॥ ೧೫ ॥

ಯಥಾಹ್ಯಗ್ನಿರ್ಯಥಾವಾಯುರ್ಯಥಾಭೂಮಿರ್ಯಥಾ ಜಲಂ ।
ಯಥಾ ಖಂ ಚ ತಥಾ ಶುದ್ಧೋ ಭವಿಷ್ಯತಿ ಸುತಸ್ತವ ॥ ೧೬ ॥

ತದ್ಭಾವಭಾಗೀ ತದ್ಬುದ್ಧಿಸ್ತದಾತ್ಮಾ ತದುಪಾಶ್ರಯಃ ।
ತೇಜಸಾ ತಸ್ಯ ಲೋಕಾಂಸ್ತ್ರೀನ್ಯಶಃ ಪ್ರಾಪ್ಸ್ಯತಿ ಕೇವಲಂ ॥ ೧೭ ॥

ಏವಂ ಲಬ್ಧ್ವಾ ವರಂ ದೇವೋ ವ್ಯಾಸಃ ಸತ್ಯವತೀಸುತಃ ।
ಅರಣಿಂ ತ್ವಥ ಸಂಗೃಹ್ಯ ಮಮಂಥಾಗ್ನಿಚಿಕೀರ್ಷಯಾ ॥ ೧೮ ॥

---

ಬೇಕೆಂದು ಮನಸ್ಸುಮಾಡಿದನು- ಪೂಜ್ಯನಾದ ಮಹೇಶ್ವರನು ನಗುತ್ತಾ ವ್ಯಾಸ ಮುನಿಯೇ! ನಿನಗೆ ಬೆಂಕಿ, ವಾಯು, ಭೂಮಿ, ಜಲ ಮತ್ತು ಆಕಾಶ ಇವುಗಳಂತೆ ಪರಿಶುದ್ಧನಾದ ಮಗನು ಹುಟ್ಟುವನು' ಎಂಬುದಾಗಿ ಹೇಳಿದನು.

೧೭. ನಿನಗೆ ಜನಿಸುವ ಮಗನು ಅಗ್ನ್ಯಾದಿಭಾವವನ್ನು ಹೊಂದಿ ಅವುಗಳಂತೆ ಬುದ್ಧಿಯುಳ್ಳವನು, ಅಗ್ನ್ಯಾದ್ಯಾತ್ಮಕನು, ಅವನ್ನೇ ಆಶ್ರಯಿಸಿರುವವನೂ ಆಗಿ ತನ್ನ ತೇಜಸ್ಸಿನಿಂದ ಮೂರು ಲೋಕಗಳಲ್ಲಿಯೂ ಉತ್ತಮವಾದ ಯಶಸ್ಸನ್ನು ಪಡೆಯುವನು.

೧೮. ಈರೀತಿಯಾದ ವರವನ್ನು ಪಡೆದು ಅನಂತರ ಸತ್ಯವತೀದೇವಿಯ ಕುಮಾರನಾದ ವ್ಯಾಸನು ಅರಣಿಯನ್ನು ತೆಗೆದುಕೊಂಡು ಅಗ್ನಿಯನ್ನುತ್ಪತ್ತಿ ಮಾಡಬೇಕೆಂಬ ಅಪೇಕ್ಷೆಯಿಂದ ಕಡೆದನು.

ಅಥ ರೂಪಂ ಪರಂ ವಿಪ್ರ ಬಿಭ್ರತೀಂ ಸ್ವೇನ ತೇಜಸಾ ।
ಘೃತಾಚೀಂ ನಾಮಾಪ್ಸರಸಂ ದದರ್ಶ ಭಗವಾನೃಷಿಃ ॥ ೧೯ ॥

ಸ ತಾಮಪ್ಸರಸಂ ದೃಷ್ಟ್ವಾ ಸಹಸಾ ಕಾಮಮೋಹಿತಃ ।
ಅಭವದ್ಭಗವಾನ್ವ್ಯಾಸೋ ವನೇ ತಸ್ಮಿನ್ಮುನೀಶ್ವರ ॥ ೨೦ ॥

ಸಾ ತು ಕೃತ್ವಾ ತದಾ ವ್ಯಾಸಂ ಕಾಮಸಂವಿಗ್ನಮಾನಸಂ ।
ಶುಕೀಭೂಯ ಮಹಾರಮ್ಯಾ ಘೃತಾಚೀ ಸಮುಪಾಗಮತ್ ॥ ೨೧ ॥

ಸ ತಾಮಪ್ಸರಸಂ ದೃಷ್ಟ್ವಾ ರೂಪೇಣಾನ್ಯೇನ ಸಂವೃತಾಂ ।
ಸ್ಮರರಾಜೇನಾನುಗತಃ ಸರ್ವಗಾತ್ರಾತಿಗೇನ ಹ ॥ ೨೨ ॥

ಸ ತು ಧೈರ್ಯೇಣ ಮಹತಾ ನಿಗೃಹ್ಣನ್ ಹೃಚ್ಛಯಂ ಮುನಿಃ ।
ನ ಶಶಾಕ ನಿಯಂತುಂ ತಂ ವ್ಯಾಸಃ ಪ್ರವಿಸೃತಂ ಮನಃ ॥ ೨೩ ॥

---

೧೯. ತರುವಾಯ ಪೂಜ್ಯನಾದ ವ್ಯಾಸಮುನಿಯು ತನ್ನ ತೇಜಸ್ಸಿನಿಂದ ಉತ್ತಮರೂಪವನ್ನು ತಾಳಿದ ಘೃತಾಚಿಯೆಂಬ ಅಪ್ಸರಸ್ತ್ರೀಯನ್ನು ನೋಡಿದನು.

೨೦. ಮುನಿವರ್ಯನೇ! ವ್ಯಾಸನು ಆ ವನದಲ್ಲಿ ಅಂತಹ ಅಪ್ಸರಸ್ತ್ರೀಯನ್ನು ನೋಡಿದಕೂಡಲೇ ಕಾಮೋದ್ರೇಕವುಂಟಾಗಿ ಮೋಹಗೊಂಡನು.

೨೧. ಆಗ ಘೃತಾಚಿಯು ವ್ಯಾಸನನ್ನು ಕಾಮೋದ್ರೇಕದಿಂದ ವ್ಯಗ್ರಚಿತ್ತನಾಗುವಂತೆ ಮಾಡಿ ಅತ್ಯಂತ ಮನೋಹರವಾದ ಗಿಳಿಯಾಗಿ ಬಂದಳು.

೨೨. ವ್ಯಾಸನು ಬೇರೆ ರೂಪವನ್ನು ಧರಿಸಿದ ಆ ಅಪ್ಸರಸ್ತ್ರೀಯನ್ನು ನೋಡಿ ಶರೀರದ ಸಕಲಾವಯವಗಳಲ್ಲಿಯೂ ಕಾಮದಿಂದ ವ್ಯಾಪಿಸಲ್ಪಟ್ಟನು.

೨೩. ಆ ವ್ಯಾಸಮುನಿಯೂ ಸಹ ತನ್ನ ಮನೋವಿಕಾರವನ್ನು ಮಹಾಧೈರ್ಯದಿಂದ ನಿಗ್ರಹಿಸುವವನಾದಾಗ್ಯೂ ಅದನ್ನು ತಡೆಯಲು ಸಮರ್ಥನಾಗಲಿಲ್ಲ. ಅವನ ಮನಸ್ಸು ಚಲಿಸಿತು.

**ಭಾವಿತ್ವಾಚ್ಚೈವ ಭಾವ್ಯಸ್ಯ ಘೃತಾಚ್ಯಾ ವಪುಷಾ ಹೃತಂ ।**
**ಯತ್ನಾನ್ನಿಯಚ್ಛತಶ್ಚಾಪಿ ಮುನೇ ಏತಜ್ಜಿಹೀರ್ಷಯಾ ॥ ೨೪ ॥**

**ಅರಣ್ಯಾಮೇವ ಸಹಸಾ ತಸ್ಯ ಶುಕ್ರಮವಾಪತತ್ ।**
**ಶುಕ್ರೇ ನಿರ್ಮಥ್ಯಮಾನೇಽಸ್ಯಾಂ ಶುಕೋ ಜಜ್ಞೇ ಮಹಾತಪಾಃ ॥ ೨೫ ॥**

**ಪರಮರ್ಷಿರ್ಮಹಾಯೋಗೀ ಅರಣೀಗರ್ಭಸಂಭವಃ ।**
**ಯಥೈವ ಹಿ ಸಮಿದ್ಧೋಽಗ್ನಿರ್ಭಾತಿ ಹವ್ಯಮುಪಾತ್ತವಾನ್ ॥ ೨೬ ॥**

**ತಥಾರೂಪಃ ಶುಕೋ ಜಜ್ಞೇ ಪ್ರಜ್ವಲನ್ನಿವ ತೇಜಸಾ ।**
**ಬಿಭ್ರಚ್ಚಿತ್ರಂ ಚ ವಿಪ್ರೇಂದ್ರ ರೂಪವರ್ಣಮನುತ್ತಮಂ ॥ ೨೭ ॥**

---

೨೪. ನಾರದಮುನಿಯೇ! ಕರ್ಮಾನುಸಾರವಾಗಿ ಆಗಬೇಕಾದ ಫಲವನ್ನು ಅನುಭವಿಸಲೇಬೇಕಾಗಿರುವುದರಿಂದ ಇದನ್ನು ತಪ್ಪಿಸಿಕೊಳ್ಳಬೇಕೆಂಬ ಅಪೇಕ್ಷೆಯಿಂದ ಪ್ರಯತ್ನಪೂರ್ವಕವಾಗಿ ತಡೆದುಕೊಂಡಾಗ್ಯೂ ಸಹ ಆ ವ್ಯಾಸಮುನಿಯ ಮನಸ್ಸು ಘೃತಾಚಿಯ ಸುಂದರವಾದ ಶರೀರದಿಂದ ಅಪಹರಿಸಲ್ಪಟ್ಟಿತು.

೨೫. ತಕ್ಷಣವೇ ಆ ವ್ಯಾಸಮುನಿಯ ವೀರ್ಯವು ಅರಣಿಯಲ್ಲಿಯೇ ಬಿದ್ದಿತು. ಆ ವೀರ್ಯವನ್ನೇ ಮಥನ (ಕಡೆಯುವುದು) ಮಾಡುತ್ತಿರಲು ಆ ಅರಣಿಯಲ್ಲಿಯೇ ಮಹಾತಪಸ್ವಿಯಾದ ಶುಕನು ಹುಟ್ಟಿದನು.

೨೬-೨೭. ಉತ್ತಮಜ್ಞಾನಿಯು, ದೊಡ್ಡ ಯೋಗೀಶ್ವರನು, ಅರಣೀಗರ್ಭಸಂಭೂತನೂ ಆದ ಶುಕನು ಉತ್ಕೃಷ್ಟವಾದ ಬ್ರಾಹ್ಮಣವರ್ಣನ ಆಕಾರ ವರ್ಣಗಳನ್ನು ತಾಳಿ, ಹವಿಸ್ಸನ್ನು ಸ್ವೀಕರಿಸಿ ಪ್ರಕಾಶಮಾನವಾದ ಅಗ್ನಿಯಂತೆ ವಿರಾಜಿಸುವ ರೂಪವುಳ್ಳವನಾಗಿ ಆತ್ಮತೇಜಸ್ಸಿನಿಂದ ಪ್ರಜ್ವಲಿಸುವನೋ ಎಂಬಂತೆ ಹುಟ್ಟಿದನು. ಇದು ಆಶ್ಚರ್ಯಕರವು!

ತಂ ಗಂಗಾ ಸರಿತಾ ಶ್ರೇಷ್ಠಾ ಮೇರುಪೃಷ್ಠೇ ಸ್ವರೂಪಿಣೀ ।
ಅಭ್ಯೇತ್ಯ ಸ್ನಾಪಯಾಮಾಸ ವಾರಿಣಾ ಸ್ವೇನ ನಾರದ ॥ ೨೮ ॥

ಕೃಷ್ಣಾಜಿನಂ ಚಾಂತರಿಕ್ಷಾಚ್ಛುಕಾರ್ಥೇ ಭುವ್ಯವಾಪತತ್ ।
ಜೇಗೀಯಂತೇ ಚ ಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥ ೨೯ ॥

ದೇವದುಂದುಭಯಶ್ಚೈವ ಪ್ರಾವಾದ್ಯಂತ ಮಹಾಸ್ವನಾಃ ।
ವಿಶ್ವಾವಸುಶ್ಚ ಗಂಧರ್ವಸ್ತಥಾ ತುಂಬುರುನಾರದೌ ॥ ೩೦ ॥

ಹಾಹಾ ಹೂಹೂಶ್ಚ ಗಂಧರ್ವೌ ತುಷ್ಟುವುಃ ಶುಕಸಂಭವಂ ।
ತತ್ರ ಶಕ್ರಪುರೋಗಾಶ್ಚ ಲೋಕಪಾಲಾಸ್ಸಮಾಗತಾಃ ॥ ೩೧ ॥

ದೇವಾದೇವರ್ಷಯಶ್ಚೈವ ತಥಾ ಬ್ರಹ್ಮರ್ಷಯೋಽಪಿ ಚ ।
ದಿವ್ಯಾನಿ ಸರ್ವಪುಷ್ಪಾಣಿ ಪ್ರವವರ್ಷ ಚ ಮಾರುತಃ ॥ ೩೨ ॥

೨೮. ನಾರದನೇ! ಕೇಳು ಮೇರುಪರ್ವತದ ಪೃಷ್ಠಭಾಗದಲ್ಲಿ ಸ್ವರೂಪವನ್ನು ಹೊಂದಿರುವ ಸರ್ವೋತ್ತಮ ನದಿಯಾದ ಗಂಗೆಯು ಆ ಶುಕನನ್ನು ಕುರಿತು ಬಂದು ತನ್ನ ಉದಕದಿಂದ ಅವನಿಗೆ ಸ್ನಾನಮಾಡಿಸಿದಳು.

೨೯. ಅಂತರಿಕ್ಷದಿಂದ ಶುಕನಿಗಾಗಿ ಕೃಷ್ಣಾಜಿನ (ಜಿಂಕೆಯಚರ್ಮ) ವು ಭೂಮಿಯಲ್ಲಿ ಬಿದ್ದಿತು. ಆಗ ಗಂಧರ್ವರು ಗಾನಮಾಡಿದರು. ಅಪ್ಸರಸ್ತ್ರೀಯರ ಸಮೂಹಗಳು ನರ್ತನಮಾಡಿದುವು.

೩೦.೩೧. ದೇವಯೋಗ್ಯವಾದ ನಗಾರಿಗಳು ಬಾರಿಸಲ್ಪಟ್ಟುವು. ತರುವಾಯ ಉತ್ಸವಗಳು ಜರುಗಿದುವು. ವಿಶ್ವಾವಸು, ಹಾಹಾ, ಹೂಹೂ ಎಂಬ ಗಂಧರ್ವರು ಮತ್ತು ತುಂಬುರು ನಾರದರೂ ಸಹ ಶುಕೋತ್ಪತ್ತಿಯನ್ನು ಸ್ತೋತ್ರಮಾಡಿದರು.

೩೧-೩೨. ಅಲ್ಲಿಗೆ ಇಂದ್ರ ಮುಂತಾದ ಲೋಕಪಾಲಕರು, ದೇವತೆಗಳು, ದೇವರ್ಷಿಗಳು ಮತ್ತು ಬ್ರಹ್ಮರ್ಷಿಗಳೂ ಸಹ ಬಂದರು. ವಾಯುವು ದೇವಯೋಗ್ಯವಾದ ಸಕಲ ಪುಷ್ಪಗಳನ್ನು ಮಳೆಯಂತೆ ಸುರಿಸಿದನು.

ಜಂಗಮಂ ಸ್ಥಾವರಂ ಚೈವ ಪ್ರಹೃಷ್ಟಮಭವಜ್ಜಗತ್ ।
ತಂ ಮಹಾತ್ಮಾ ಸ್ವಯಂ ಪ್ರೀತ್ಯಾ ದೇವ್ಯಾ ಸಹ ಮಹಾದ್ಯುತಿಃ ॥ ೩೩ ॥

ಜಾತಮಾತ್ರಂ ಮುನೇಃ ಪುತ್ರಂ ವಿಧಿನೋಪಾನಯತ್ತದಾ ।
ತಸ್ಯ ದೇವೇಶ್ವರಃ ಶಕ್ರೋ ದಿವ್ಯಮದ್ಭುತದರ್ಶನಂ ॥ ೩೪ ॥

ದದೌ ಕಮಂಡಲುಂ ಪ್ರೀತ್ಯಾ ದೇವವಾಸಾಂಸಿ ಚಾಭಿತಃ ।
ಹಂಸಾಶ್ಚ ಶತಪತ್ರಾಶ್ಚ ಸಾರಸಾಶ್ಚ ಸಹಸ್ರಶಃ ॥ ೩೫ ॥

ಪ್ರದಕ್ಷಿಣಮವರ್ತಂತ ಶುಕಾಶ್ಚಾಷಾಶ್ಚ ನಾರದ ।
ಆರಣೇಯಸ್ತದಾ ದಿವ್ಯಂ ಪ್ರಾಪ್ಯ ಜನ್ಮ ಮಹಾಮುನಿಃ ॥ ೩೬ ॥

ತತ್ರೈವೋವಾಸ ಮೇಧಾವೀ ವ್ರತಚಾರೀ ಸಮಾಹಿತಃ ।
ಉತ್ಪನ್ನಮಾತ್ರಂ ತಂ ವೇದಾಃ ಸರಹಸ್ಯಾಃ ಸಸಂಗ್ರಹಾಃ ॥ ೩೭ ॥

೩೩-೩೪. ಚರಾಚರಾತ್ಮಕವಾದ ಪ್ರಪಂಚವು ಸಂತೋಷಪಟ್ಟಿತು. ಮಹಾಕಾಂತಿಮಂತನೂ, ಮಹಾತ್ಮನೂ ಆದ ದೇವನು ದೇವಿಯೊಡನೆ ವಿಶ್ವಾಸಪೂರ್ವಕವಾಗಿ ಆ ಮುನಿಪುತ್ರನಿಗೆ ಸ್ವತಃ ವಿಧಾನೋಕ್ತಪ್ರಕಾರವಾಗಿ ಉಪನಯನಮಾಡಿದನು.

೩೪-೩೬. ಅವನಿಗೆ ದೇವೇಂದ್ರನು ಅದ್ಭುತವಾದ ದಿವ್ಯದರ್ಶನವನ್ನು ಕೊಟ್ಟು ಕಮಂಡಲುವನ್ನು ಕೊಟ್ಟನು. ದೇವತೆಗಳು ಪ್ರೀತಿಪೂರ್ವಕವಾಗಿ ವಸ್ತ್ರಗಳನ್ನು ಕೊಟ್ಟರು. ಸಾವಿರಾರು ಹಂಸಪಕ್ಷಿಗಳು, ಕುಕ್ಕುಟಹಕ್ಕಿ, ದೊಡ್ಡ ಕೊಕ್ಕರೆ, ಗಿಳಿ, ಶಕುನದಹಕ್ಕಿ ಇವುಗಳು ಪ್ರದಕ್ಷಿಣೆಯಾಗಿ ಸುತ್ತುತ್ತಿದ್ದುವು.

೩೬-೩೭. ಬುದ್ಧಿವಂತನು, ಅರಣಿಪುತ್ರನೂ ಆದ ಶುಕಮಹಾಮುನಿಯು ಆಗ ಬ್ರಹ್ಮಚರ್ಯವ್ರತಧಾರಿಯಾಗಿ ಸಮಾಧಾನಚಿತ್ತದಿಂದ ಅಲ್ಲಿಯೇ ವಾಸಮಾಡಿದನು.

ಉಪೇತಸ್ತು ಮುರ್ನಿಶ್ರೇಷ್ಠಂ ಯಥಾಽಸ್ಯ ಪಿತರಂ ತಥಾ ।
ಬೃಹಸ್ಪತಿಂ ಸವವ್ರೇ ಚ ವೇದವೇದಾಂಗಭಾಷ್ಯವಿತ್ ॥ ೩೮ ॥

ಉಪಾಧ್ಯಾಯಂ ದ್ವಿಜಶ್ರೇಷ್ಠಂ ಧರ್ಮಮೇವಾನುಚಿಂತಯನ್ ।
ಸೋಽಧೀತ್ಯ ವೇದಾನಖಿಲಾನ್ ಸರಹಸ್ಯಾನ್ಸಸಂಗ್ರಹಾನ್ ॥ ೩೯ ॥

ಇತಿಹಾಸಂ ಚ ಕಾರ್ತ್ಸ್ನ್ಯೇನ ವೇದಶಾಸ್ತ್ರಾಣಿ ಚಾಭಿತಃ ।
ಗುರವೇ ದಕ್ಷಿಣಾಂ ದತ್ವಾ ಸಮಾವೃತ್ತೋ ಮಹಾಮುನಿಃ ॥ ೪೦ ॥

ಉಗ್ರಂ ತಪಃ ಸಮಾರೇಭೇ ಬ್ರಹ್ಮಚಾರೀ ಸಮಾಹಿತಃ ।
ದೇವತಾನಾಂ ಋಷೀಣಾಂ ಚ ಬಾಲ್ಯೇಽಪಿ ಸುಮಹಾತಪಾಃ ॥ ೪೧ ॥

ಸಮಂತ್ರಣೀಯೋ ಮಾನ್ಯಶ್ಚ ಜ್ಞಾನೇನ ತಪಸಾ ತಥಾ
ನ ತ್ವಸ್ಯ ರಮತೇ ಬುದ್ಧಿರಾಶ್ರಮೇಷು ಮುನೀಶ್ವರ ॥ ೪೨ ॥

೩೭-೪೦. ತನ್ನ ತಂದೆಯಂತೆ ಆ ಶುಕಮುನಿವರ್ಯನಿಗೂ ಸಹ ಹುಟ್ಟಿದಕೂಡಲೇ ರಹಸ್ಯಸಹಿತವಾಗಿ ಸಾಂಗವೇದಗಳು ಉಪಸ್ಥಿತವಾದುವು. ವೇದವೇದಾಂಗ ಭಾಷ್ಯಜ್ಞಾನಿಯಾದ ಆ ಶುಕನು ಧರ್ಮವಿಚಾರಪರನಾಗಿ ದ್ವಿಜೋತ್ತಮನಾದ ಬೃಹಸ್ಪತಿಯನ್ನು ಉಪಾಧ್ಯಾಯನನ್ನಾಗಿ ಮಾಡಿಕೊಂಡನು. ಆ ಮಹಾಮುನಿಯು ರಹಸ್ಯಸಹಿತವಾಗಿ ಸಾಂಗವೇದಗಳು ಭಾರತಾದಿ ಇತಿಹಾಸ, ವೇದಶಾಸ್ತ್ರ ಇವುಗಳನ್ನೆಲ್ಲಾ ಸಮಗ್ರವಾಗಿ ಓದಿ ಗುರುಗಳಿಗೆ ದಕ್ಷಿಣೆಯನ್ನು ಕೊಟ್ಟು ಸಮಾವರ್ತನವನ್ನು ಮಾಡಿಕೊಂಡನು.

೪೧-೪೨. ತತ್ವಜ್ಞಾನಿಯಾದ ಶುಕನು ಬ್ರಹ್ಮಚಾರಿಯಾಗಿಯೇ ಕಠಿಣವಾದ ತಪಸ್ಸನ್ನು ಮಾಡತೊಡಗಿದನು. ಬಾಲ್ಯದಲ್ಲಿಯೇ ಮಹಾತಪಸ್ವಿಯಾದ ಆ ಶುಕನು ಜ್ಞಾನತಪಸ್ಸುಗಳಿಂದ ದೇವತೆ ಋಷಿಗಳು ಇವರುಗಳಿಗೂ ಸಹ ಮಾನ್ಯನಾದನು. ಮುನಿವರ್ಯನಾದ ನಾರದನೇ! ಮೋಕ್ಷಧರ್ಮವನ್ನೇ ಅನುಸರಿಸಬೇಕೆಂದಿರುವ ಈ ಶುಕನಿಗೆ ಗೃಹಸ್ಥಾಶ್ರಮಮೂಲಕವಾದ ಮೂರು ಆಶ್ರಮಗಳಲ್ಲಿಯೂ ಬುದ್ಧಿಯು ಹೋಗಲಿಲ್ಲ. ಆ ಶುಕನು ಮೋಕ್ಷವಿಚಾರವನ್ನೇ ಮಾಡುತ್ತಾ ತಂದೆಯಬಳಿಗೆ ಹೋದನು.

ತ್ರಿಷು ಗಾರ್ಹಸ್ಥ್ಯಮೂಲೇಷು ಮೋಕ್ಷಧರ್ಮಾನುದರ್ಶಿನಃ ।
ಸ ಮೋಕ್ಷಮನುಚಿಂತ್ಯೈವ ಶುಕಃ ಪಿತರಮಭ್ಯಗಾತ್ ॥ ೪೩ ॥

ಪ್ರಾಹಾಭಿವಾದ್ಯ ಚ ತದಾ ಶ್ರೇಯೋಽರ್ಥೀ ವಿನಯಾನ್ವಿತಃ ।
ಮೋಕ್ಷಧರ್ಮೇಷು ಕುಶಲೋ ಭಗವಾನ್ಪ್ರಬ್ರವೀತು ಮೇ ॥ ೪೪ ॥

ಯಥೈವ ಮನಸಃ ಶಾಂತಿಃ ಪರಮಾ ಸಂಭವೇನ್ಮುನೇ ।
ಶ್ರುತ್ವಾ ಪುತ್ರಸ್ಯ ವಚನಂ ಪರಮರ್ಷಿರುವಾಚ ತಂ ॥ ೪೫ ॥

ಅಧೀಷ್ವ ಮೋಕ್ಷಶಾಸ್ತ್ರಂ ವೈ ಧರ್ಮಾಂಶ್ಚ ವಿವಿಧಾನಪಿ ।
ಪಿತುರ್ನಿದೇಶಾಜ್ಜಗ್ರಾಹ ಶುಕೋ ಬ್ರಹ್ಮವಿದಾಂ ವರಃ ॥ ೪೬ ॥

ಯೋಗಶಾಸ್ತ್ರಂ ಚ ನಿಖಿಲಂ ಕಾಪಿಲಂ ಚೈವ ನಾರದ ।
ಸ ತಂ ಬ್ರಾಹ್ಮ್ಯಾ ಶ್ರಿಯಾ ಯುಕ್ತಂ ಬ್ರಹ್ಮತುಲ್ಯಪರಾಕ್ರಮಂ ॥ ೪೭ ॥

---

೪೪-೪೫. ಆಗ ಶ್ರೇಯಸ್ಸನ್ನು ಬಯಸುವ ವಿನೀತನಾದ ಶುಕನು ತಂದೆಗೆ ನಮಸ್ಕಾರಮಾಡಿ "ಮೋಕ್ಷಧರ್ಮಾಭಿಜ್ಞನಾದ ಪೂಜ್ಯ ತಂದೆಯೇ! ನೀವು ಮನಸ್ಸಿಗೆ ಉತ್ತಮವಾಗಿ ಶಾಂತಿಯುಂಟಾಗುವ ಬಗೆಯನ್ನು ನನಗೆ ಉಪದೇಶಿಸಬೇಕು" ಎಂದು ಕೇಳಿದನು.

೪೫-೪೬. ಮಗನ ಮಾತನ್ನು ಕೇಳಿ ಋಷಿವರನು ನಾನಾವಿಧ ಧರ್ಮ, ಮೋಕ್ಷಶಾಸ್ತ್ರ ಇವುಗಳನ್ನು ಅಧ್ಯಯನಮಾಡು ಎಂದು ಮಗನಿಗೆ ಹೇಳಿದನು.

೪೬-೪೯. ತಂದೆಯ ಅಪ್ಪಣೆಯಪ್ರಕಾರ ಬ್ರಹ್ಮಜ್ಞಾನಿಶ್ರೇಷ್ಠನಾದ ಶುಕನು ಕಪಿಲನಿಂದ ವಿರಚಿತವಾದ ಸಾಂಖ್ಯಯೋಗಶಾಸ್ತ್ರವನ್ನು ಸಂಪೂರ್ಣವಾಗಿ ತಿಳಿದನು. ಆಗ ವ್ಯಾಸನು ಮಗನಾದ ಶುಕನನ್ನು ಕುರಿತು ಬ್ರಹ್ಮತೇಜಸ್ಸಿನಿಂದ ಕೂಡಿದವನು ಮತ್ತು ಬ್ರಹ್ಮನಿಗೆ ಸಮಾನವಾದ ಪರಾಕ್ರಮ ಉಳ್ಳವನೂ ಆಗಿರುವನೆಂದೂ ತಿಳಿದು ಮಿಥಿಲಾದೇಶಕ್ಕೆ ರಾಜನಾದ ಮೋಕ್ಷಶಾಸ್ತ್ರವಿಶಾರದನಾಗಿರುವ

ಮುನೇ ಪುತ್ರಂ ಯಥಾವ್ಯಾಸೋ ಮೋಕ್ಷಶಾಸ್ತ್ರವಿಶಾರದಂ ।
ಉವಾಚ ಗಚ್ಛೇತಿ ತದಾ ಜನಕಂ ಮಿಥಿಲೇಶ್ವರಂ ॥ ೪೮ ॥

ಸ ತೇ ವಕ್ಷ್ಯತಿ ಮೋಕ್ಷಾರ್ಥಂ ನಿಖಿಲೇನ ನರಾಧಿಪಃ ।
ಪಿತುರ್ನಿಯೋಗಾದಗಮಜ್ಜನಕಂ ಮೈಥಿಲಂ ನೃಪಂ ॥ ೪೯ ॥

ಪ್ರಷ್ಟುಂ ಧರ್ಮಸ್ಯ ನಿಷ್ಠಾಂ ವೈ ಮೋಕ್ಷಸ್ಯ ಚ ಪರಾಯಣಂ ।
ಉಕ್ತಶ್ಚ ಮಾನುಷೇಣ ತ್ವಂ ಪಥಾ ಗಚ್ಛೇತ್ಯವಿಸ್ಮಿತಃ ॥ ೫೦ ॥

ನ ಪ್ರಭಾವೇಣ ಗಂತವ್ಯಮಂತರಿಕ್ಷಚರೇಣ ವೈ ।
ಆರ್ಜವೇನೈವ ಗಂತವ್ಯಂ ನ ಸುಖಾಯ ಕ್ಷಣಾತ್ತ್ವಯಾ ॥ ೫೧ ॥

ನ ದ್ರಷ್ಟವ್ಯಾ ವಿಶೇಷಾ ಹಿ ವಿಶೇಷಾ ಹಿ ಪ್ರಸಂಗಿನಃ ।
ಅಹಂಕಾರೋ ನ ಕರ್ತವ್ಯೋ ಯಾಜ್ಯೇ ತಸ್ಮಿನ್ನರಾಧಿಪೇ ॥ ೫೨ ॥

ಜನಕರಾಜನ ಬಳಿಗೆ ಹೋಗು; ಆ ದೊರೆಯು ಮೋಕ್ಷಮಾರ್ಗವನ್ನು ಸಂಪೂರ್ಣವಾಗಿ ನಿನಗೆ ಹೇಳುವನು' ಎಂದು ಮಗನಿಗೆ ಹೇಳಿದನು.

೪೯–೫೦. ತಂದೆಯ ಅಪ್ಪಣೆಯ ಪ್ರಕಾರ ಮೋಕ್ಷಕ್ಕೆ ಮುಖ್ಯಸಾಧನವಾದ ಧರ್ಮನಿಷ್ಠೆಯನ್ನು ತಿಳಿಯಲು ಮಿಥಿಲಾಧಿಪತಿಯಾದ ಜನಕನ ಬಳಿಗೆ ಹೊರಟನು.

೫೦–೫೧. ಹೊರಡುವಾಗ ವ್ಯಾಸನು ಶುಕನನ್ನು ಕುರಿತು ನೀನು ಆಶ್ಚರ್ಯಗೊಳ್ಳದೇ ಮನುಷ್ಯಮಾರ್ಗದಿಂದಲೇ ಮಿಥಿಲಾಪಟ್ಟಣಕ್ಕೆ ಹೋಗಬೇಕು. ಸಾಮರ್ಥ್ಯವಿಶೇಷದಿಂದ ಅಂತರಿಕ್ಷಮಾರ್ಗವಾಗಿ ಹೋಗಕೂಡದು. ಋಜುಮಾರ್ಗದಲ್ಲಿಯೇ ಹೋಗಬೇಕು. ಸುಖಕ್ಕೋಸ್ಕರ ವಕ್ರಮಾರ್ಗದಿಂದ ಕ್ಷಣಮಾತ್ರದಲ್ಲಿ ಹೋಗಬಾರದು.

೫೨. ವಿಷಯಗಳು ಸಂಗವನ್ನುಂಟುಮಾಡುತ್ತವೆಯಾದಕಾರಣ ಅಂತಹವುಗಳನ್ನು ನೋಡಬಾರದು. ಆ ದೊರೆಯು ನಮ್ಮಿಂದ ಯಜನಮಾಡಿಸಿಕೊಳ್ಳುವವನಾದರೂ ಅಹಂಕಾರ ತೋರಿಸಬಾರದು.

ಸ್ಥಾತವ್ಯಂ ವಸಥೇ ತಸ್ಯ ಸ ತೇ ಛೇತ್ಸ್ಯತಿ ಸಂಶಯಂ ।
ಸ ಧರ್ಮಕುಶಲೋ ರಾಜಾ ಮೋಕ್ಷಶಾಸ್ತ್ರವಿಶಾರದಃ ॥ ೫೩ ॥

ಯಥಾ ಯಥಾ ಚ ತೇ ಬ್ರೂಯಾತ್ತತ್ಕಾರ್ಯಮವಿಶಂಕಯಾ ।
ಏವಮುಕ್ತಸ್ಸ ಧರ್ಮಾತ್ಮಾ ಜಗಾಮ ಮಿಥಿಲಾಂ ಮುನಿಃ ॥ ೫೪ ॥

ಪದ್ಭ್ಯಾಂ ಶಕ್ತೋಽಂತರಿಕ್ಷೇಣ ಕ್ರಾಂತುಂ ಭೂಮಿಂ ಸಸಾಗರಾಂ ।
ಸಗಿರೀಂಶ್ಚಾಪ್ಯತಿಕ್ರಮ್ಯ ಭಾರತಂ ವರ್ಷಮಾಸದತ್ ॥ ೫೫ ॥

ಸದೇಶಾನ್ವಿವಿಧಾನ್ ಪಶ್ಯನ್ನತಿಕ್ರಮ್ಯ ಮಹಾಮುನಿಃ ।
ವಿದೇಹಾನ್ವೈ ಸಮಾಸಾದ್ಯ ಜನಕೇನ ಸಮಾಗಮತ್ ॥ ೫೬ ॥

ರಾಜದ್ವಾರಂ ಸಮಾಸಾದ್ಯ ದ್ವಾರಪಾಲೈರ್ನಿವಾರಿತಃ ।
ತಸ್ಥೌ ತತ್ರ ಮಹಾಯೋಗೀ ಕ್ಷುತ್ಪಿಪಾಸಾದಿವರ್ಜಿತಃ ॥ ೫೭ ॥

೫೩-೫೪. ಆ ರಾಜನ ಮನೆಯಲ್ಲಿಯೇ ವಾಸವಾಗಬೇಕು. ಅವನು ನಿನ್ನ ಸಂಶಯವನ್ನು ಪರಿಹರಿಸುವನು. ಮೋಕ್ಷಶಾಸ್ತ್ರವಿಶಾರದನೂ, ಧರ್ಮ ವಿವೇಚಕನೂ ಆದ ಆ ರಾಜನು ಹೇಳಿದುದನ್ನೆಲ್ಲಾ ನಿಶ್ಶಂಕೆಯಿಂದ ಮಾಡ ಬೇಕು ಎಂಬುದಾಗಿ ಹೇಳಿದನು. ಅದನ್ನು ಕೇಳಿ ಧರ್ಮಾತ್ಮನಾದ ಶುಕ ಮುನಿಯು ಮಿಥಿಲಾಪಟ್ಟಣಕ್ಕೆ ಹೊರಟನು.

೫೫. ಅಂತರಿಕ್ಷದಲ್ಲಿ ಹಾರಿ ಸಾಗರ ಮತ್ತು ಪರ್ವತಗಳಿಂದ ಸಹಿತ ವಾದ ಭೂಮಿಯನ್ನು ದಾಟಲು ಸಮರ್ಥನಾದಾಗ್ಯೂ ಆ ಶುಕನು ಕಾಲುನಡಿಗೆ ಯಿಂದಲೇ ಮಾರ್ಗವನ್ನು ದಾಟಿ ಭರತಖಂಡಕ್ಕೆ ಬಂದನು.

೫೬. ಅವನು ಮಧ್ಯದಲ್ಲಿ ಅನೇಕ ದೇಶಗಳನ್ನು ದಾಟಿಕೊಂಡು ವಿದೇ ಹದೇಶಕ್ಕೆ ಬಂದು ಜನಕರಾಜನ ಸಮೀಪಕ್ಕೆ ಬಂದನು.

೫೭-೫೮. ಮಹಾಯೋಗೀಶ್ವರನಾದ ಶುಕನು ಅರಮನೆಯ ಬಾಗಿಲಿಗೆ ಬಂದು ದ್ವಾರಪಾಲಕರಿಂದ ತಡೆಯಲ್ಪಟ್ಟು ಹಸಿವು ನೀರಡಿಕೆಗಳಿಲ್ಲದವನಾಗಿ

ಆತಪೇ ಗ್ಲಾನಿರಹಿತೋ ಧ್ಯಾನಯುಕ್ತಶ್ಚ ನಾರದ ।
ತೇಷಾಂ ತು ದ್ವಾರಪಾಲಾನಾಮೇಕಸ್ತತ್ರ ವ್ಯವಸ್ಥಿತಃ ॥ ೫೮ ॥

ಮಧ್ಯಂ ಗತಮಿವಾದಿತ್ಯಂ ದೃಷ್ಟ್ವಾ ಶುಕಮವಸ್ಥಿತಂ ।
ಪೂಜಯಿತ್ವಾ ಯಥಾನ್ಯಾಯಮಭಿವಾದ್ಯ ಕೃತಾಂಜಲಿಃ ॥ ೫೯ ॥

ಪ್ರಾವೇಶಯತ್ತತಃ ಕಕ್ಷ್ಯಾಂ ದ್ವಿತೀಯಾಂ ರಾಜವೇಶ್ಮನಃ ।
ತತ್ರಾಂತಃಪುರಸಂಬದ್ಧಂ ಮಹಚ್ಚೈತ್ರರಥೋಪಮಂ ॥ ೬೦ ॥

ಸುವಿಭಕ್ತಜಲಾಕ್ರೀಡಂ ರಮ್ಯಂ ಪುಷ್ಪಿತಪಾದಪಂ ।
ದರ್ಶಯಿತ್ವಾಽಽಸನೇ ಸ್ಥಾಪ್ಯ ರಾಜಾನಂ ಚ ವ್ಯಜಿಜ್ಞಪತ್ ॥ ೬೧ ॥

ಶ್ರುತ್ವಾ ರಾಜಾ ಶುಕಂ ಪ್ರಾಪ್ತಂ ವಾರಸ್ತ್ರೀಃ ಸ ನ್ಯಯುಂಕ್ತ ಚ ।
ಸೇವಾರ್ಥೈ ತಸ್ಯ ಭಾವಸ್ಯ ಜ್ಞಾನಾಯ ಮುನಿಸತ್ತಮ ॥ ೬೨ ॥

---

ಬಿಸಿಲಿನಲ್ಲಿದ್ದಾಗ್ಯೂ ಬಳಲಿಕೆಯಿಲ್ಲದೆ ಭಗವಧ್ಯಾನಪರನಾಗಿ ಅಲ್ಲಿಯೇ ನಿಂತಿದ್ದನು.

೫೮-೬೦. ಅಲ್ಲಿದ್ದ ದ್ವಾರಪಾಲಕರಲ್ಲೊಬ್ಬನು ಮಧ್ಯಾಹ್ನದ ಸೂರ್ಯನೋಪಾದಿಯಲ್ಲಿ ಹೊಳೆಯುತ್ತಿದ್ದ ಶುಕನನ್ನು ನೋಡಿ ಕೈಮುಗಿದು ನಮಸ್ಕರಿಸಿ ಯೋಗ್ಯತಾನುಗುಣವಾದ ಸತ್ಕಾರವನ್ನು ಮಾಡಿ, ಅರಮನೆಯ ಎರಡನೆಯ ಕಕ್ಷ್ಯೆಗೆ (ಒಳಗಿನ ಪ್ರಾಕಾರಕ್ಕೆ) ಪ್ರವೇಶಮಾಡಿಸಿದನು.

೬೦-೬೧. ಅಲ್ಲಿ ಅಂತಃಪುರಸಂಬಂಧಿಯಾದ ಚೈತ್ರರಥವೆಂಬ ದೇವಲೋಕದ ಉದ್ಯಾನವನಕ್ಕೆ ಸದೃಶವಾದ ಉದ್ಯಾನವನವನ್ನೂ ಅದರಲ್ಲಿ ರಚಿತವಾಗಿರುವ ಜಲಕ್ರೀಡೆಯಸ್ಥಾನ, ಮನೋಹರವಾದ ಪುಷ್ಪಯುಕ್ತವಾದ ವೃಕ್ಷ ಇವುಗಳನ್ನು ತೋರಿಸಿ ಯೋಗ್ಯಾಸನದಲ್ಲಿ ಅವನನ್ನು ಕುಳ್ಳಿರಿಸಿ ದೊರೆಯ ಸನ್ನಿಧಿಯಲ್ಲಿ ಆ ವೃತ್ತಾಂತವನ್ನು ವಿಜ್ಞಾಪಿಸಿದನು.

೬೨. ಮುನಿವರ್ಯನಾದ ನಾರದನೇ? ಶುಕನು ಬಂದಿರುವುದನ್ನು ಕೇಳಿ ದೊರೆಯು ಅವನ ಮನೋಭಾವವನ್ನು ತಿಳಿಯುವುದಕ್ಕಾಗಿ ಅವನ ಸೇವೆಗೆ ವೇಶ್ಯಾಸ್ತ್ರೀಯರನ್ನು ಆಜ್ಞಾಪಿಸಿ ಕಳುಹಿಸಿದನು.

ತಂ ಚಾರುಕೇಶ್ಯಃ ಶುಶ್ರೋಣ್ಯಸ್ತರುಣ್ಯಃ ಪ್ರಿಯದರ್ಶನಾಃ ।
ಸೂಕ್ಷ್ಮರಕ್ತಾಂಬರಧರಾಸ್ತಪ್ತಕಾಂಚನಭೂಷಣಾಃ ॥ ೬೩ ॥

ಸಂಲಾಪಾಲಾಪಕುಶಲಾ ಭಾವಜ್ಞಾಃ ಸರ್ವಕೋವಿದಾಃ ।
ಪರಂ ಪಂಚಾಶತಸ್ತಸ್ಯ ಪಾದ್ಯಾದೀನಿ ವ್ಯಕಲ್ಪಯನ್ ॥ ೬೪ ॥

ದೇಶಕಾಲೋಪಪನ್ನೇನ ಸ್ವಾದ್ವನ್ನೇನಾಸ್ಯ ತರ್ಪಯನ್ ।
ತಸ್ಯ ಭುಕ್ತವತಸ್ತಾತ ತಾಸ್ತತಃ ಪುರಕಾನನಂ ॥ ೬೫ ॥

ಸುರಮ್ಯಂ ದರ್ಶಯಾಮಾಸುರೇಕೈಕಶ್ಯೇನ ನಾರದ ।
ಕ್ರೀಡಂತ್ಯಶ್ಚ ಹಸಂತ್ಯಶ್ಚ ಗಾಯಂತ್ಯಶ್ಚೈವ ತಾಃ ಶುಕಂ ॥ ೬೬ ॥

ಉದಾರಸತ್ವಂ ಸತ್ವಜ್ಞಾಸ್ಸರ್ವಾಃ ಪರ್ಯಚರಂಸ್ತದಾ ।
ಆರಣೇಯಸ್ತು ಶುದ್ಧಾತ್ಮಾ ಜಿತಕ್ರೋಧೋ ಜಿತೇಂದ್ರಿಯಃ ॥ ೬೭ ॥

---

೬೩-೬೪. ಮನೋಹರವಾದ ಕೇಶ, ಸಮೀಚೀನವಾದ ಕಟಿಭಾಗ ಇವುಗಳುಳ್ಳ, ಸಂತೋಷದಾಯಕವಾದ ದರ್ಶನವುಳ್ಳ, ಸೂಕ್ಷ್ಮವಾದ ಕೆಂಪು ಬಟ್ಟೆಯನ್ನುಟ್ಟಿರುವ, ಕಾಯಿಸಿದ ಬಂಗಾರದಂತೆ ಹೊಳೆಯುತ್ತಿರುವ ಆಭರಣಗಳನ್ನು ಧರಿಸಿರುವ, ಸರಸಸಲ್ಲಾಪಗಳಲ್ಲಿ ಕುಶಲರಾದ, ಮನೋಭಾವವನ್ನು ಗ್ರಹಿಸುವ ಸಾಮರ್ಥ್ಯವುಳ್ಳ, ಸಕಲ ವಿಷಯಗಳನ್ನೂ ತಿಳಿದುಕೊಂಡಿರುವ ಐವತ್ತಕ್ಕಿಂತ ಹೆಚ್ಚಾದ ಯುವತಿಯರು ಆ ಶುಕಮುನಿಗೆ ಪಾದ್ಯ, ಅರ್ಘ್ಯ ಮುಂತಾದುವುಗಳನ್ನರ್ಪಿಸಿದರು.

೬೫-೬೭. ಮತ್ತು ದೇಶಕಾಲೋಚಿತವಾದ ಸಮೀಚೀನವಾದ ಅನ್ನದಿಂದ ಅವನನ್ನು ತೃಪ್ತಿಪಡಿಸಿದರು. ನಾರದನೇ! ಭೋಜನವಾದಮೇಲೆ ಅವನಿಗೆ ಮನೋಹರವಾದ ಪಟ್ಟಣದಲ್ಲಿನ ಉದ್ಯಾನಗಳನ್ನು ಒಂದೊಂದಾಗಿ ತೋರಿಸಿದರು. ಸತ್ವಜ್ಞರಾದ ಆ ಸಕಲವಾರಸ್ತ್ರೀಯರು ಆಟವಾಡುತ್ತಾ ನಗುತ್ತಾ ಸಂಗೀತವನ್ನು ಹಾಡುತ್ತಾ ಉದಾರಭಾವವುಳ್ಳ ಶುಕನನ್ನು ಸೇವಿಸುತ್ತಿದ್ದರು.

೬೭–೬೯. ಪರಿಶುದ್ಧ ದೇಹವುಳ್ಳ, ಕೋಪವನ್ನು ಜಯಿಸಿರುವ, ಜಿತೇಂದ್ರಿಯನೂ, ಅರಣಿಕುಮಾರನೂ ಆದ ಶುಕನಾದರೋ ಸರ್ವಕಾಲದಲ್ಲಿಯೂ ಧ್ಯಾನಯೋಗದಲ್ಲಿಯೇ ಆಸಕ್ತನಾಗಿ ಗಾನನರ್ತನಾದಿಗಳಿಂದ ಸಂತೋಷಿಸಲಿಲ್ಲ.

ಧ್ಯಾನಸ್ಥ ಏವ ಸತತಂ ನ ಹೃಷ್ಯತಿ ನ ಕುಪ್ಯತಿ ।
ಪಾದಶೌಚಂ ತು ಕೃತ್ವಾ ಸ್ವೈ ಶುಕಃ ಸಂಧ್ಯಾಮುಪಾಸ್ಯ ಚ ॥ ೬೮ ॥

ನಿಷಸಾದಾಸನೇ ಪುಣ್ಯೇ ತಮೇವಾರ್ಥಂ ವ್ಯಚಿಂತಯತ್ ।
ಪೂರ್ವರಾತ್ರೇ ತು ತತ್ರಾಸೌ ಭೂತ್ವಾ ಧ್ಯಾನಪರಾಯಣಃ ॥ ೬೯ ॥

ಮಧ್ಯರಾತ್ರೇ ಯಥಾನ್ಯಾಯ್ಯಂ ನಿದ್ರಾಮಾಹಾರಯತ್ಪ್ರಭುಃ ।
ತತಃ ಪ್ರಾತಃ ಸಮುತ್ಥಾಯ ಕೃತ್ವಾ ಶೌಚಮನಂತರಂ । ॥ ೭೦ ॥

ಸ್ತ್ರೀಭಿಃ ಪರಿವೃತೋ ಧೀಮಾನ್ಧ್ಯಾನಮೇವಾನ್ವಪದ್ಯತ ।
ಅನೇನ ವಿಧಿನಾ ತತ್ರ ತದಹಃಶೇಷಮುಪ್ಯತ ॥ ೭೧ ॥
ತಾಂ ಚ ರಾತ್ರಿಂ ನೃಪಕುಲೇ ವರ್ತಯಾಮಾಸ ನಾರದ ॥ ೭೨ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ದ್ವಿತೀಯಪಾದೇ ಶುಕಪ್ರಲೋಭನಂ ನಾಮಾಷ್ಟ-
ಪಂಚಾಶತ್ತಮೋಽಧ್ಯಾಯಃ

ಕೋಪಗೊಳ್ಳುತ್ತಲೂ ಇರಲಿಲ್ಲ. ಅವನು ಯುಕ್ತಕಾಲದಲ್ಲಿ ಕೈಕಾಲುಗಳನ್ನು ತೊಳೆದುಕೊಂಡು ಸಂಧ್ಯಾವಂದನೆಯನ್ನು ಮಾಡಿ ಪವಿತ್ರವಾದ ಆಸನದಲ್ಲಿ ಕುಳಿತು ಅದೇ ಅರ್ಥವನ್ನೇ ಚಿಂತಿಸುತ್ತಿದ್ದನು.

೬೯-೭೨. ನಾರದನೇ! ಸಮರ್ಥನಾದ ಈ ಶುಕನು ಮಧ್ಯರಾತ್ರಿಯ ವರೆಗೆ ಧ್ಯಾನದಲ್ಲಿಯೇ ನಿರತನಾಗಿದ್ದು ಆಮೇಲೆ ಅಲ್ಲಿಯೇ ನಿದ್ರೆಯನ್ನು ಮಾಡಿದನು. ತರುವಾಯ ಪ್ರಾತಃಕಾಲದಲ್ಲಿ ಎದ್ದು ಶೌಚವನ್ನು ಪೂರೈಸಿದಮೇಲೆ ಸ್ತ್ರೀಪರಿವಾರದಿಂದ ಯುಕ್ತನಾಗಿದ್ದರೂ ಜ್ಞಾನಿಯಾದ ಶುಕನು ಧ್ಯಾನಕಾರ್ಯದಲ್ಲಿಯೇ ತೊಡಗಿದನು. ಇದೇ ವಿಧಾನದಿಂದ ಆ ರಾಜಗೃಹದಲ್ಲಿ ಉಳಿದ ಹಗಲು ಮತ್ತು ಆ ರಾತ್ರಿಯನ್ನೂ ಸಹ ಕಳೆದನು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ
ದ್ವಿತೀಯಭಾಗದಲ್ಲಿ ಶುಕಪ್ರಲೋಭನಪ್ರಕಾರಕಥನವೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು.

---

## ಕಥಾಸಂಗ್ರಹ

ಶುಕೋತ್ಪತ್ತಿಪ್ರಕಾರವನ್ನು ಪದೇಶಿಸಬೇಕೆಂಬ ನಾರದರ ಪ್ರಶ್ನೆಗೆ ಸನಂದನನು ಉತ್ತರವನ್ನು ಈ ಅಧ್ಯಾಯದಲ್ಲಿ ಹೇಳಿರುವನು. ವೇದವ್ಯಾಸನು ಮೇರು ಪರ್ವತದ ಶಿಖರದಲ್ಲಿ ತಪಸ್ಸುಮಾಡಿ ಮಹಾಜ್ಞಾನಿಯೂ, ತಪಸ್ವಿಯೂ ಆದ ಪುತ್ರನಾಗುವನೆಂದು ವರ ಪಡೆದು ಅರಣಿಯಲ್ಲಿ ಮಥನಮಾಡುತ್ತಿರುವಾಗ ಅತ್ಯಂತ ಸುಂದರಿಯಾದ ಘೃತಾಚೀ ಎಂಬ ಅಪ್ಸರಸ್ತ್ರೀಯಳನ್ನು ನೋಡಿ ಕಾಮೋದ್ರೇಕವುಂಟಾದುದರಿಂದ ಅವನ ವೀರ್ಯವು ಅರಣಿಯಲ್ಲಿ ಬಿದ್ದಿತು. ಅದರ ಮಥನದಿಂದ ಶುಕನು ಹುಟ್ಟಿದನು. ಅವನಿಗೆ ಉಪನಯನಾದಿ ಸಂಸ್ಕಾರಗಳನ್ನು ದೇವತೆಗಳೇ ಮಾಡಿದರು. ಅನಂತರ ಅವನು ಮೋಕ್ಷಧರ್ಮವನ್ನು ಪದೇಶಿಸಬೇಕೆಂದು ವ್ಯಾಸರನ್ನು ಪ್ರಾರ್ಥಿಸಲು ಅವರು ಜ್ಞಾನಿಯಾದ ಜನಕರಾಜನ ಬಳಿಗೆ ಅವನನ್ನು ಕಳುಹಿಸಿದರು. ಅಲ್ಲಿ ಅವನ ಭಾವವನ್ನು ತಿಳಿಯಲು ವೇಶ್ಯಾಸ್ತ್ರೀಯರ ಮೂಲಕವಾಗಿ ರಾಜನು ಅವನನ್ನು ಎಷ್ಟು ವಂಚಿಸಿದಾಗ್ಯೂ ಅವನು ತನ್ನ ವೈರಾಗ್ಯದಿಂದ ಚಲಿಸದೆ ಕೇವಲ ಭಗವದ್ಧ್ಯಾನಕಾರ್ಯದಲ್ಲಿಯೇ ಆಸಕ್ತನಾಗಿದ್ದನು.



# ಏಕೋನಷಷ್ಟಿತಮೋಽಧ್ಯಾಯಃ

---

ಸನಂದನ ಉವಾಚ

ತತಸ್ಸ ರಾಜಾ ಸಹಿತೋ ಮಂತ್ರಿಭಿರ್ದ್ವಿಜಸತ್ತಮ ।
ಪುರಃ ಪುರೋಹಿತಂ ಕೃತ್ವಾ ಸರ್ವಾಣ್ಯಂತಃಪುರಾಣಿ ಚ ॥ ೧ ॥

ಶಿರಸಾ ಚಾರ್ಘ್ಯಮಾದಾಯ ಗುರುಪುತ್ರಂ ಸಮಭ್ಯಗಾತ್ ।
ಮಹದಾಸನಮಾದಾಯ ಸರ್ವರತ್ನವಿಭೂಷಿತಂ ॥ ೨ ॥

ಪ್ರದದೌ ಗುರುಪುತ್ರಾಯ ಶುಕಾಯ ಪರಮೋಚಿತಂ ।
ತತ್ರೋಪವಿಷ್ಟಂ ತಂ ಕಾರ್ಷ್ಣಿಂ ಶಾಸ್ತ್ರದೃಷ್ಟೇನ ಕರ್ಮಣಾ ॥ ೩ ॥

ಪಾದ್ಯಂ ನಿವೇದ್ಯ ಪ್ರಥಮಂ ಸಾರ್ಘ್ಯಂ ಗಾಂ ಚ ನ್ಯವೇದಯತ್ ।
ಸ ಚ ತಾಂ ಮಂತ್ರತಃ ಪೂಜಾಂ ಪ್ರತಿಗೃಹ್ಯ ದ್ವಿಜೋತ್ತಮಃ ॥ ೪ ॥

---

## ಐವತ್ತೊಂಭತ್ತನೆಯ ಅಧ್ಯಾಯವು

೧-೨. ಸನಂದನನು ಹೇಳಿದನು:—ದ್ವಿಜಶ್ರೇಷ್ಠನಾದ ನಾರದನೇ! ತರುವಾಯ ಆ ಜನಕರಾಜನು ಮಂತ್ರಿಗಳಿಂದ ಸಹಿತನಾಗಿ ಸಕಲ ಅಂತಃಪುರ ಸ್ತ್ರೀಯರು ಮತ್ತು ಪುರೋಹಿತರು ಇವರುಗಳನ್ನು ಮುಂದೆ ಕರೆದುಕೊಂಡು ಅರ್ಘ್ಯಗಾಗಿ ಜಲಕುಂಭವನ್ನು ತಲೆಯಮೇಲೆ ಧರಿಸಿ ಗುರುಪುತ್ರರಾದ ಶುಕಾಚಾರ್ಯರ ಸಮೀಪಕ್ಕೆ ಬಂದನು.

೨-೪. ಆಗ ರಾಜನು ಸಕಲರತ್ನಗಳಿಂದ ಅಲಂಕೃತವೂ, ಯೋಗ್ಯತಮವೂ ಆದ ದೊಡ್ಡ ಆಸನವನ್ನು ತಂದು ಗುರುಪುತ್ರನಾದ ಶುಕನಿಗೆ ಸಮರ್ಪಿಸಿದನು. ಅದನ್ನಲಂಕರಿಸಿದ ಕೃಷ್ಣದ್ವೈಪಾಯನನ ಪುತ್ರನಾದ ಶುಕನಿಗೆ ಶಾಸ್ತ್ರೋಕ್ತವಿಧಾನಾನುಸಾರವಾಗಿ ಮೊದಲು ಪಾದ್ಯವನ್ನರ್ಪಿಸಿ ಅರ್ಘ್ಯಸಹಿತವಾಗಿ ಗೋವನ್ನು ಸಮರ್ಪಿಸಿದನು.

ಪರ್ಯಪೃಚ್ಛನ್ಮಹಾತೇಜಾ ರಾಜ್ಞಃ ಕುಶಲಮವ್ಯಯಂ ।
ಉದಾರಸತ್ವಾಭಿಜನೋ ರಾಜಾಽಪಿ ಗುರುಸೂನವೇ ॥ ೫ ॥

ಆವೇದ್ಯ ಕುಶಲಂ ಭೂಮೌ ನಿಷಸಾದ ತದಾಜ್ಞಯಾ ।
ಸೋಽಪಿ ವೈಯಾಸಕಿಂ ಭೂಯಃ ಪೃಷ್ಟ್ವಾ ಕುಶಲಮವ್ಯಯಂ ॥ ೬ ॥

ಕಿಮಾಗಮನಮಿತ್ಯೇವ ಪರ್ಯಪೃಚ್ಛದ್ವಿಧಾನವಿತ್ ।

ಶುಕ ಉವಾಚ

ಪಿತ್ರಾಽಹಮುಕ್ತೋ ಭದ್ರಂ ತೇ ಮೋಕ್ಷಧರ್ಮಾರ್ಥಕೋವಿದಃ ॥ ೭ ॥

ವಿದೇಹರಾಜೋ ಯಾಜ್ಯೋ ಮೇ ಜನಕೋ ನಾಮ ವಿಶ್ರುತಃ ।
ತಂ ಪ್ರಗಚ್ಛಸ್ವ ತೂರ್ಣಂ ವೈ ಸ ತೇ ಹೃದಯಸಂಶಯಂ ॥ ೮ ॥

ಪ್ರವೃತ್ತೌ ಚ ನಿವೃತ್ತೌ ಚ ಸರ್ವಂ ಛೇತ್ಸ್ಯತ್ಯಸಂಶಯಂ ।
ಸೋಽಹಂ ಪಿತುರ್ನಿಯೋಗಾತ್ತ್ವಾಮುಪಪ್ರಷ್ಟುಮಿಹಾಗತಃ ॥ ೯ ॥

೪-೭. ಆ ಮಹಾತೇಜಸ್ವಿಯಾದ ದ್ವಿಜವರ್ಯನು ಮಂತ್ರಪೂರ್ವಕವಾಗಿ ಆ ಸತ್ಕಾರವನ್ನು ಸ್ವೀಕರಿಸಿ ರಾಜನನ್ನು ಕುಶಲಪ್ರಶ್ನೆ ಮಾಡಿದನು ಉದಾರ ಗುಣವಂತರ ವಂಶಸಂಭೂತನಾದ ರಾಜನೂ ಸಹ ತನ್ನ ಕುಶಲವೃತ್ತಾಂತವನ್ನು ಗುರು ಪುತ್ರನಿಗೆ ಹೇಳಿ ಅವನ ಅಪ್ಪಣೆಯನ್ನು ಪಡೆದು ಕೆಳಗೆ ಕುಳಿತನು. ವಿಧಾನಜ್ಞಾನಿಯಾದ ಆ ರಾಜನು ಶುಕನನ್ನು ಪುನಃ ಕುಶಲಪ್ರಶ್ನೆ ಮಾಡಿ ತನ್ನಲ್ಲಿಗೆ ಬಂದ ಕಾರಣವನ್ನು ಕೇಳಿದನು.

೭-೯. ಶುಕನು ಹೇಳಿದನು:—ರಾಜನೇ! ನಿನಗೆ ಮಂಗಳವಾಗಲಿ ನನ್ನ ತಂದೆಯು “ಜನಕನೆಂದು ವಿಖ್ಯಾತನಾದ ವಿದೇಹಾಧಿಪತಿಯು ಮೋಕ್ಷಧರ್ಮ ರಹಸ್ಯವನ್ನು ತಿಳಿದಿರುವವರಲ್ಲಿ ಅಗ್ರಗಣ್ಯನು, ನೀನು ಶೀಘ್ರವಾಗಿ ಅವನ ಬಳಿಗೆ ಹೋಗು. ಆತನು ಪ್ರವೃತ್ತಿ ಮತ್ತು ನಿವೃತ್ತಿಧರ್ಮಗಳ ವಿಷಯದಲ್ಲಿ ನಿನ್ನ ಮನಸ್ಸಿನಲ್ಲಿ ಸಂಭವಿಸಿರುವ ಸಕಲ ಸಂಶಯವನ್ನೂ ಪರಿಹರಿಸುವನು.” ಎಂಬುದಾಗಿ ಹೇಳಿರುತ್ತಾನೆ. ಈರೀತಿ ಉಪದಿಷ್ಟನಾದ ನಾನು ತಂದೆಯ ಅಪ್ಪಣೆಯ ಪ್ರಕಾರ ಮೋಕ್ಷಧರ್ಮವನ್ನು ನಿನ್ನಿಂದ ತಿಳಿಯಲು ಇಲ್ಲಿಗೆ ಬಂದಿರುವೆನು.

ತನ್ಮೇ ಧರ್ಮಭೃತಾಂ ಶ್ರೇಷ್ಠ ಯಥಾವದ್ವಕ್ತುಮರ್ಹಸಿ ।
ಕಿಂ ಕಾರ್ಯಂ ಬ್ರಾಹ್ಮಣೇನೇಹ ಮೋಕ್ಷಾರ್ಥಶ್ಚ ಕಿಮಾತ್ಮಕಃ ॥ ೧೦ ॥

ಕಥಂ ಚ ಮೋಕ್ಷಃ ಕರ್ತವ್ಯೋ ಜ್ಞಾನೇನ ತಪಸಾऽಪಿ ವಾ ।
ಜನಕ ಉವಾಚ
ಯತ್ಕಾರ್ಯಂ ಬ್ರಾಹ್ಮಣೇನೇಹ ಜನ್ಮಪ್ರಭೃತಿ ತಚ್ಛೃಣು ॥ ೧೧ ॥

ಕೃತೋಪನಯನಸ್ತಾತ ಭವೇದ್ವೇದಪರಾಯಣಃ ।
ತಪಸಾ ಗುರುವೃತ್ತ್ಯಾ ಚ ಬ್ರಹ್ಮಚರ್ಯೇಣ ಚಾನ್ವಿತಃ ॥ ೧೨ ॥

ದೇವತಾನಾಂ ಪಿತೄಣಾಂ ಚ ಹ್ಯನೃಣಸ್ತ್ವನಸೂಯಕಃ ।
ವೇದಾನಧೀತ್ಯ ನಿಯತೋ ದಕ್ಷಿಣಾಮುಪವರ್ತ್ಯ ಚ ॥ ೧೩ ॥

ಅಭ್ಯನುಜ್ಞಾಮನುಪ್ರಾಪ್ಯ ಸಮಾವರ್ತೇತ ವೈ ದ್ವಿಜಃ ।
ಸಮಾವೃತ್ತಸ್ತು ಗಾರ್ಹಸ್ಥ್ಯೇ ಸದಾರೋ ನಿಯತೋ ವಸೇತ್ ॥ ೧೪ ॥

೧೦-೧೧. ಧಾರ್ಮಿಕಾಗ್ರೇಸರನಾದ ನೀನು ಧರ್ಮರಹಸ್ಯವನ್ನು ನನಗೆ ಯಥಾವತ್ತಾಗಿ ಉಪದೇಶಿಸಬೇಕು. ಈ ಲೋಕದಲ್ಲಿ ಬ್ರಾಹ್ಮಣನ ಕರ್ತವ್ಯ ವೇನು? ಮೋಕ್ಷವೆಂಬ ಪುರುಷಾರ್ಥವು ಎಂತಹುದು? ಜ್ಞಾನದಿಂದ ಅಥವಾ ತಪಸ್ಸಿನಿಂದಲಾದರೂ ಮೋಕ್ಷವನ್ನು ಸಂಪಾದಿಸುವ ಬಗೆ ಹೇಗೆ? ಎಲ್ಲವನ್ನೂ ವಿಸ್ತಾರವಾಗಿ ತಿಳಿಸಬೇಕೆಂದು ಕೇಳಿದನು.

೧೧-೧೩. ಜನಕನು ಹೇಳಿದನು.—ಹುಟ್ಟಿದ್ದು ಮೊದಲುಗೊಂಡು ಬ್ರಾಹ್ಮಣನು ಈ ಲೋಕದಲ್ಲಿ ಏನು ಮಾಡಬೇಕೆಂಬುದನ್ನು ಹೇಳುವೆನು ಕೇಳು. ಶುಕನೇ! ಬ್ರಾಹ್ಮಣನು ಉಪನಯನವಾದಮೇಲೆ ತಪಸ್ಸು, ಗುರುಶುಶ್ರೂಷೆ, ಬ್ರಹ್ಮಚರ್ಯ ಇವುಗಳನ್ನನುಷ್ಠಾನಮಾಡುತ್ತಾ ವಿಷಯಾಶೆ ಮತ್ತು ಅಸೂಯೆ ಯನ್ನು ಬಿಟ್ಟು ದೇವತೆ ಮತ್ತು ಪಿತೃಗಳಿಂದ ಅಜ್ಞಪ್ತನಾಗಿ ಗುರುಕುಲದಲ್ಲಿ ವೇದಾಭ್ಯಾಸನಿರತನಾಗಿರಬೇಕು.

೧೩-೧೪. ವೇದಾಧ್ಯಯನವಾದನಂತರ ಗುರುದಕ್ಷಿಣೆಯನ್ನು ಸಮ ರ್ಪಿಸಿ ಅವರ ಅಪ್ಪಣೆಯನ್ನು ಪಡೆದು ಸಮಾವರ್ತನವನ್ನು ಮಾಡಿಕೊಳ್ಳಬೇಕು. ಸಮಾವರ್ತನವಾದಮೇಲೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿ (ಮದುವೆಮಾಡಿ ಕೊಂಡು) ನಿಯತವಾಗಿ ಪತ್ನಿಯೊಡನೆ ವಾಸಮಾಡಬೇಕು.

ಅನಸೂಯುರ್ಯಥಾನ್ಯಾಯಮಾಹಿತಾಗ್ನಿ ರನಾವೃತೇ ।
ಉತ್ಪಾದ್ಯ ಪುತ್ರಪೌತ್ರಾಂಶ್ಚ ವನ್ಯಾಶ್ರಮುಪದೇ ವಸೇತ್ ॥ ೧೫ ॥

ತಾನೇವಾಗ್ನೀನ್ಯಥಾನ್ಯಾಯಂ ಪೂಜಯನ್ನತಿಥಿಪ್ರಿಯಃ ।
ಸರ್ವಾನಗ್ನೀನ್ಯಥಾನ್ಯಾಯಮಾತ್ಮನ್ಯಾರೋಪ್ಯ ಧರ್ಮವಿತ್ ॥ ೧೬ ॥

ನಿರ್ದ್ವಂದ್ವೋ ವೀತರಾಗಾತ್ಮಾ ಬ್ರಹ್ಮಾಶ್ರಮುಪದೇ ವಸೇತ್ ।

ಶುಕ ಉವಾಚ

ಉತ್ಪನ್ನೇ ಜ್ಞಾನವಿಜ್ಞಾನೇ ಪ್ರತ್ಯಕ್ಷೇ ಹೃದಿ ಶಾಶ್ವತೇ ॥ ೧೭ ॥

ನ ವಿನಾ ಗುರುಸಂವಾಸಾದ್ಜ್ಞಾನಸ್ಯಾಧಿಗಮಃ ಸ್ಮೃತಃ ।
ಕಿಮವಶ್ಯಂ ತು ವಸ್ತವ್ಯಮಾಶ್ರಮೇಷು ನ ವಾ ನೃಪ ॥ ೧೮ ॥

ಏತದ್ಭವಂತಂ ಪೃಚ್ಛಾಮಿ ತದ್ಭವಾನ್ವಕ್ತುಮರ್ಹತಿ ।

ಜನಕ ಉವಾಚ

ನ ವಿನಾ ಜ್ಞಾನವಿಜ್ಞಾನೇ ಮೋಕ್ಷಸ್ಯಾಧಿಗಮೋ ಭವೇತ್ ॥ ೧೯ ॥

---

೧೫. ಅಸೂಯೆಯಿಲ್ಲದೆ ವಿಧಾನೋಕ್ತಪ್ರಕಾರ ಅಗ್ನಿಹೋತ್ರವನ್ನು ಮಾಡುತ್ತಾ ಪುತ್ರಪೌತ್ರಾದಿಸಂಪತ್ತನ್ನು ಪಡೆದು ವಾನಪ್ರಸ್ಥಧರ್ಮವನ್ನು ಅವಲಂಬಿಸಬೇಕು.

೧೬-೧೭. ಅದೇ ಅಗ್ನಿಯನ್ನು ವಿಧಿವತ್ತಾಗಿ ಪೂಜಿಸುತ್ತಾ ಅತಿಥಿಪ್ರಿಯನಾಗಿ ಸಕಲ ಅಗ್ನಿಗಳನ್ನೂ ಶಾಸ್ತ್ರೋಕ್ತಪ್ರಕಾರ ಆತ್ಮನಲ್ಲಿ ಸಮಾರೋಪಣೆ ಮಾಡಿ ಧರ್ಮಜ್ಞನೂ, ದ್ವಂದ್ವಸಹಿಷ್ಣುವೂ, ರಾಗದ್ವೇಷರಹಿತನೂ ಆಗಿ ಸಂನ್ಯಾಸಧರ್ಮವನ್ನಾಶ್ರಯಿಸಬೇಕು.

೧೭-೧೯. ಶುಕನು ಹೇಳಿದನು.—ಗುರುಕುಲವಾಸಮಾಡಿದಹೊರತು ಜ್ಞಾನಪ್ರಾಪ್ತಿಯಾಗುವುದಿಲ್ಲವೆಂದು ವಿಹಿತವಾಗಿದೆ. ಪ್ರತ್ಯಕ್ಷವಾಗಿ ಜ್ಞಾನವಿಜ್ಞಾನಗಳುಂಟಾಗಿ ಹೃದಯದಲ್ಲಿ ಶಾಶ್ವತವಾಗಿದ್ದಾಗ್ಯೂ ಆಶ್ರಮಗಳನ್ನು ಸ್ವೀಕರಿಸುವುದು ಆವಶ್ಯಕವೇ? ಅಲ್ಲವೇ? ದೊರೆಯೇ! ಈ ವಿಷಯವನ್ನು ನಿನ್ನಿಂದ ತಿಳಿಯಲಪೇಕ್ಷಿಸುವೆನು ಅದನ್ನು ನೀನು ವಿವರಿಸಿ ಹೇಳಬೇಕು.

ನ ವಿನಾ ಗುರುಸಂಬಂಧಾದ್ಜ್ಞಾನಸ್ಯಾಧಿಗಮಸ್ತಥಾ ।
ಆಚಾರ್ಯಃ ಪ್ಲಾವಿತಾ ತಸ್ಯ ಜ್ಞಾನಂ ಪ್ಲವ ಇಹೋಚ್ಯತೇ ॥ ೨೦ ॥

ವಿಜ್ಞಾಯ ಕೃತಕೃತ್ಯಸ್ತು ತೀರ್ಣಸ್ತತ್ರೋಭಯಂ ತ್ಯಜೇತ್ ।
ಅನುಚ್ಛೇದಾಯ ಲೋಕಾನಾಮನುಚ್ಛೇದಾಯ ಕರ್ಮಣಾಂ ॥ ೨೧ ॥

ಕೃತ್ವಾ ಶುಭಾಶುಭಂ ಕರ್ಮ ಮೋಕ್ಷೋ ನಾಮೇಹ ಲಭ್ಯತೇ ।
ಭಾವಿತೈಃ ಕಾರಣೈಶ್ಚಾಯಂ ಬಹುಸಂಸಾರಯೋನಿಷು ॥ ೨೨ ॥

ಆಸಾದಯತಿ ಶುದ್ಧಾತ್ಮಾ ಮೋಕ್ಷಂ ಹಿ ಪ್ರಥಮಾಶ್ರಮೇ ।
ತಮಾಸಾದ್ಯ ತು ಮುಕ್ತಸ್ಯ ದೃಷ್ಟಾರ್ಥಸ್ಯ ವಿಪಶ್ಚಿತಃ ॥ ೨೩ ॥

ವಿದ್ಯಾಶ್ರಮೇಷು ಕೋಽನ್ಯರ್ಥೋ ಭವೇತ್ಪರಮಮೀಕ್ಷತಃ ।
ರಾಜಸಾಂಸ್ತಾಮಸಾಂಶ್ಚೈವ ನಿತ್ಯಂ ದೋಷಾನ್ವಿಸರ್ಜಯೇತ್ ॥ ೨೪ ॥

೧೯-೨೦. ಜನಕನು ಹೇಳಿದನು.—ಜ್ಞಾನವಿಜ್ಞಾನಗಳುಂಟಾದ ಹೊರತು ಮೋಕ್ಷವಾಗುವುದಿಲ್ಲ ಮತ್ತು ಗುರುಕುಲವಾಸವಾಡಿದ ಹೊರತು ಜ್ಞಾನವುಂಟಾಗುವುದಿಲ್ಲ. ಮನುಷ್ಯನಿಗೆ ಗುರುವೇ ಸಂಸಾರಾಬ್ಧಿಯನ್ನು ದಾಟಿ ಸುವವನು. ಜ್ಞಾನವೇ ದಾಟುವುದಕ್ಕೆ ಸಾಧನವಾದ ದೋಣಿಯು ಎಂದು ಉಕ್ತವಾಗಿದೆ.

೨೧-೨೨. ಜ್ಞಾನವನ್ನು ಪಡೆದು ಕೃತಕೃತ್ಯನಾದವನು ಸಂಸಾರಸಾಗರ ವನ್ನು ದಾಟುವನು. ಅಲ್ಲಿ ಎರಡನ್ನೂ ಬಿಡಬಹುದು. ಲೋಕಕರ್ಮಗಳ ಪರಂಪರೆಯು ಅವಿಚ್ಛಿನ್ನವಾಗಲು ಸಾಧಕವಾದ ಶುಭಾಶುಭಕರ್ಮಗಳನ್ನು ಮಾಡಿ ಇಲ್ಲಿ ನಾನಾಜನ್ಮಗಳನ್ನು ತಾಳಿ ಪುಣ್ಯಪಾಪಗಳು ಪಕ್ವವಾದಮೇಲೆ ಮೋಕ್ಷವೆಂಬುದು ಲಭಿಸುತ್ತದೆ.

೨೩-೨೪. ಪರಿಶುದ್ಧಾತ್ಮನು ಮೊದಲನೆಯ ಆಶ್ರಮ (ಬ್ರಹ್ಮಚರ್ಯ) ದಲ್ಲಿಯೇ ಮೋಕ್ಷವನ್ನು ಪಡೆಯುವನು. ಪರಮಾತ್ಮನನ್ನು ಹೊಂದಿ ದೃಷ್ಟಾ ರ್ಥನು, ಜ್ಞಾನಿಯು, ಪರಮಾತ್ಮನನ್ನು ನೋಡುತ್ತಿರುವವನೂ ಆದ ಮುಕ್ತನಿಗೆ ಆಶ್ರಮಗಳನ್ನವಲಂಬಿಸುವುದರಲ್ಲಿ ಫಲವೇನು? ಯಾವಾಗಲೂ ರಾಜಸತಾಮಸ ದೋಷಗಳನ್ನು ಬಿಡಬೇಕು.

ಸಾತ್ವಿಕಂ ಮಾರ್ಗಮಾಸ್ಥಾಯ ಪಶ್ಯೇದಾತ್ಮಾನಮಾತ್ಮನಾ ।
ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ॥ ೨೫ ॥

ಸಂಪಶ್ಯನ್ನೈವ ಲಿಪ್ಯೇತ ಜಲೇವಾರಿಚರೋ ಯಥಾ ।
ಪಕ್ಷೀವತ್ಪವನಾದೂರ್ಧ್ವಮಮುತ್ರಾನಂತ್ಯಮಶ್ನುತೇ ॥ ೨೬ ॥

ವಿಹಾಯ ದೇಹಂ ನಿರ್ಮುಕ್ತೋ ನಿರ್ದ್ವಂದ್ವಃ ಶುಭಸಂಗತಃ ।
ಅತ್ರ ಗಾಥಾಃ ಪುರಾ ಗೀತಾಃ ಶೃಣು ರಾಜ್ಞಾ ಯಯಾತಿನಾ ॥ ೨೭ ॥

ಧಾರ್ಯತೇ ಯಾ ದ್ವಿಜೈಸ್ತಾತ ಮೋಕ್ಷಶಾಸ್ತ್ರವಿಶಾರದೈಃ ।
ಜ್ಯೋತಿಶ್ಚಾತ್ಮನಿ ನಾನ್ಯತ್ರ ರತ್ನಂ ತತ್ರೈವ ಚೈವ ತತ್ ॥ ೨೮ ॥

೨೫-೨೬. ಸಾತ್ವಿಕಮಾರ್ಗವನ್ನವಲಂಬಿಸಿ ಪರಮಾತ್ಮನ ಅನುಗ್ರಹದಿಂದ ಅವನನ್ನು ಸಾಕ್ಷಾತ್ತಾಗಿ ನೋಡಬೇಕು. ಸಕಲಪ್ರಾಣಿಗಳಲ್ಲಿಯೂ ಪರಮಾತ್ಮನು ಅಂತರ್ಗತನು. ಸಕಲ ಪ್ರಾಣಿಗಳೂ ಅವನನ್ನೇ ಆಶ್ರಯಿಸಿರುವುವು ಎಂಬುದಾಗಿ ತಿಳಿಯುವವನು ಮೀನು ಮುಂತಾದ ಜಲಚರಪ್ರಾಣಿಗಳು ನೀರಿನಲ್ಲಿರುವಂತೆ ಸಂಸಾರಿಯಾದಾಗ್ಯೂ ಕರ್ಮಲೇಪನವನ್ನು ಹೊಂದುವುದಿಲ್ಲ. ಗಾಳಿಯಿಂದ ಪಕ್ಷಿಯು ಮೇಲಕ್ಕೆ ಹೋಗುವಂತೆ ಜ್ಞಾನಿಯು ಪರಲೋಕದಲ್ಲಿ ಶಾಶ್ವತಪದವಿ ಎಂದರೆ ಮುಕ್ತಿಯನ್ನು ಪಡೆಯುವನು.

೨೭. ಶರೀರವನ್ನು ಬಿಟ್ಟು ಮುಕ್ತನಾಗಿ ದ್ವಂದ್ವಸಹಿಷ್ಣುವೂ ಶ್ರೇಯೋಭಾಗಿಯೂ ಆಗುವನು. ಈ ವಿಷಯದಲ್ಲಿ ಇತಿಹಾಸಗಳು (ಗಾದೆಗಳು) ಪೂರ್ವದಲ್ಲಿ ಯಯಾತಿರಾಜನಿಂದ ಉಕ್ತವಾಗಿವೆ. ಅವನ್ನು ಹೇಳುವೆನು ಕೇಳು.

೨೮. ಅಪ್ಪಾ! ಮೋಕ್ಷಶಾಸ್ತ್ರಾಭಿಜ್ಞರಾದ ದ್ವಿಜರಿಂದ ಯಾವ ಜ್ಯೋತಿಯು (ಪ್ರಕಾಶಸ್ವರೂಪನಾದ ಬ್ರಹ್ಮನು) ಧರಿಸಲ್ಪಟ್ಟಿರುವುದೋ ಆ ರತ್ನವು ಆತ್ಮನಲ್ಲಿಯೇ ಇದೆ. ಬೇರೆ ಸ್ಥಳದಲ್ಲಿ ಹುಡುಕಬೇಕಾಗಿಲ್ಲ.

ಸ್ವಯಂ ಚ ಶಕ್ಯಂ ತದ್ರಷ್ಟುಂ ಸುಸಮಾಹಿತಚೇತಸಾ ।
ನ ಬಿಭೇತಿ ಪರೋ ಯಸ್ಮಾನ್ನ ಬಿಭೇತಿ ಪರಾಚ್ಚ ಯಃ ॥ ೨೯ ॥

ಯಶ್ಚ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ಸ ತು ।
ಯದಾ ಭಾವಂ ನ ಕುರುತೇ ಸರ್ವಭೂತೇಷು ಪಾಪಕಂ ॥ ೩೦ ॥

ಪೂರ್ವೈರಾಚರಿತೋ ಧರ್ಮಶ್ಚತುರಾಶ್ರಮಸಂಜ್ಞಕಃ ।
ಅನೇನ ಕ್ರಮಯೋಗೇನ ಬಹುಜಾತಿಸುಕರ್ಮಣಾಂ ॥ ೩೧ ॥

ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ।
ಸಂಯೋಜ್ಯ ತಪಸಾತ್ಮಾನಮೀರ್ಷ್ಯಾಮುತ್ಸೃಜ್ಯ ಮೋಹಿನೀಂ ॥ ೩೨ ॥

ತ್ಯಕ್ತ್ವಾ ಕಾಮಂ ಚ ಲೋಭಂ ಚ ತತೋ ಬ್ರಹ್ಮ ಸಮಶ್ನುತೇ
ಯದಾ ಶ್ರಾವ್ಯೇ ಚ ದೃಶ್ಯೇ ಚ ಸರ್ವಭೂತೇಷು ಚಾವ್ಯಯಂ ॥ ೩೩ ॥

---

೨೯–೩೦. ಚೆನ್ನಾಗಿ ಸಮಾಧಾನಮನಸ್ಕನಾದವನಿಗೆ ಸ್ವತಃ ಅದನ್ನು ನೋಡಲು ಸಾಧ್ಯವಾಗುವುದು. ಯಾರ ದೆಸೆಯಿಂದ ಇತರರು ಭಯಪಡುವುದಿಲ್ಲವೋ, ಯಾವನು ಇತರರಿಂದ ಭಯಪಡುವುದಿಲ್ಲವೋ, ಯಾವನು ರಾಗ ದ್ವೇಷಗಳನ್ನು ಬಿಟ್ಟು ಸಕಲ ಪ್ರಾಣಿಗಳಲ್ಲಿಯೂ ಪಾಪಕರವಾದ ಕುತ್ಸಿತಭಾವನೆಯನ್ನಿಡುವುದಿಲ್ಲವೋ ಅಂತಹವನು ಬ್ರಹ್ಮನನ್ನು ಹೊಂದುತ್ತಾನೆ.

೩೧-೩೨. ನಾಲ್ಕು ಆಶ್ರಮಗಳ ಧರ್ಮವು ಪ್ರಾಚೀನರಿಂದ ಆಚರಿಸಲ್ಪಟ್ಟಿದೆ. ಈ ಕ್ರಮವಾದ ಧರ್ಮಾಭ್ಯಾಸದಿಂದ ಬಹುಜನ್ಮಗಳಲ್ಲಿ ಸತ್ಕರ್ಮ ಮಾಡಿದವರಿಗೆ ಕರ್ಮ, ಮನಸ್ಸು ಮತ್ತು ವಾಕ್ಕು, ಇವುಗಳಿಂದ ಆಗಲೇ ಬ್ರಹ್ಮಪ್ರಾಪ್ತಿಯಾಗುತ್ತದೆ.

೩೨-೩೩. ಆತ್ಮನನ್ನು ತಪಸ್ಸಿನಲ್ಲಿ ಸಂಯೋಜನೆಮಾಡಿ ಮೋಹಕವಾದ ಈರ್ಷ್ಯೆಯನ್ನು ಬಿಟ್ಟು ಕಾಮಲೋಭಗಳನ್ನೂ ಸಹ ಪರಿತ್ಯಜಿಸಿದವನು ಬ್ರಹ್ಮನನ್ನು ಹೊಂದುವನು.

ಸಮೋ ಭವತಿ ನಿರ್ದ್ವಂದ್ವೋ ಬ್ರಹ್ಮ ಸಂಪದ್ಯತೇ ತದಾ ।
ಯದಾ ಸ್ತುತಿಂ ಚ ನಿಂದಾಂ ಚ ಸಮತ್ವೇನ ಚ ಪಶ್ಯತಿ ॥ ೩೪ ॥

ಕಾಂಚನಂ ಚಾಯಸಂ ಚೈವ ಸುಖದುಃಖೇ ತಥೈವ ಚ ।
ಶೀತಮುಷ್ಣಂ ತಥೈವಾರ್ಥಮನರ್ಥಂ ಪ್ರಿಯಮಪ್ರಿಯಂ ॥ ೩೫ ॥

ಜೀವಿತಂ ಮರಣಂ ಚೈವ ಬ್ರಹ್ಮ ಸಂಪದ್ಯತೇ ತದಾ ।
ಪ್ರಸಾರ್ಯೇಹ ಯಥಾಂಗಾನಿ ಕೂರ್ಮಃ ಸಂಹರತೇ ಪುನಃ ॥ ೩೬ ॥

ತಥೇಂದ್ರಿಯಾಣಿ ಮನಸಾ ಸಂಯಂತವ್ಯಾನಿ ಭಿಕ್ಷುಣಾ ।
ತಮಃ ಪರಿವೃತಂ ವೇಶ್ಮ ಯಥಾ ದೀಪೇನ ದೃಶ್ಯತೇ ॥ ೩೭ ॥

ತಥಾ ಬುದ್ಧಿಪ್ರದೀಪೇನ ಶಕ್ಯ ಆತ್ಮಾ ನಿರೀಕ್ಷಿತುಂ ।
ಏತತ್ಸರ್ವಂ ಪ್ರಪಶ್ಯಾಮಿ ತ್ವಯಿ ಬುದ್ಧಿಮತಾಂ ವರ ॥ ೩೮ ॥

---

೩೩-೩೪. ಶ್ರಾವ್ಯದೃಶ್ಯಗಳು, ಸಕಲಪ್ರಾಣಿಗಳು ಇವುಗಳಲ್ಲೆಲ್ಲಾ ಸಮಬುದ್ಧಿಯುಳ್ಳವನಾಗಿ ದ್ವಂದ್ವಸಹಿಷ್ಣುವಾದಾಗ ಬ್ರಹ್ಮಪ್ರಾಪ್ತಿಯಾಗುತ್ತದೆ.

೩೪-೩೬. ಸ್ತೋತ್ರ|ನಿಂದೆ, ಬಂಗಾರ ಮತ್ತು ಕಬ್ಬಿಣ, ಸುಖ ದುಃಖ ಶೀತ ಉಷ್ಣ, ಅರ್ಥ ಅನರ್ಥಗಳು, ಪ್ರಿಯಾಪ್ರಿಯಗಳು, ಬದುಕು ಸಾವು ಎಂಬೀ ದ್ವಂದ್ವಗಳನ್ನು ಸಮವಾಗಿ ತಿಳಿದಾಗ ಬ್ರಹ್ಮಪ್ರಾಪ್ತಿಯಾಗುತ್ತದೆ.

೩೬-೩೮. ಆಮೆಯು ತನ್ನ ಅವಯವಗಳನ್ನು ಹೊರಕ್ಕೆ ಹರಡಿ ಪುನಃ ಒಳಕ್ಕೆ ಸೆಳೆದುಕೊಳ್ಳುವಂತೆ ಸಂನ್ಯಾಸಿಯು ಇಂದ್ರಿಯಗಳನ್ನು ಮನಸ್ಸಿನಿಂದ ನಿಯಮನಮಾಡಬೇಕು. ಕತ್ತಲಿನಿಂದ ಆವರಿಸಲ್ಪಟ್ಟಿರುವ ಮನೆಯು ದೀಪದಿಂದ ದೃಷ್ಟವಾಗುವಂತೆ ಬುದ್ಧಿಯೆಂಬ ಮಹಾದೀಪದಿಂದ ಆತ್ಮನನ್ನು ಸಾಕ್ಷಾತ್ಕರಿಸಲು ಸಾಧ್ಯವಾಗುತ್ತದೆ. ಜ್ಞಾನಿವರನೇ ! ಈ ಗುಣಗಳೆಲ್ಲವನ್ನೂ ನಿನ್ನಲ್ಲಿಲ್ಲಿಯೇ ನೋಡುತ್ತಿರುವೆನು.

ಯಜ್ಜಾನ್ಯದಪಿ ವೇತ್ತವ್ಯಂ ತತ್ವತೋ ವೇತ್ತಿ ತದ್ಭವಾನ್ ।
ಬ್ರಹ್ಮರ್ಷೇ ವಿದಿತಶ್ಚಾಸಿ ವಿಷಯಾಂತಮುಪಾಗತಃ ॥ ೩೯ ॥

ಗುರೋಶ್ಚೈವ ಪ್ರಸಾದೇನ ತವ ಚೈವೋಪಶಿಕ್ಷಯಾ ।
ತಸ್ಯ ಚೈವ ಪ್ರಸಾದೇನ ಪ್ರಾದುರ್ಭೂತಂ ಮಹಾಮುನೇಃ ॥ ೪೦ ॥

ಜ್ಞಾನಂ ದಿವ್ಯಂ ಸಮಾದೀಪ್ತಂ ತೇನಾಸಿ ವಿದಿತೋ ಮಮ ।
ಅಧಿಕಂ ತವ ವಿಜ್ಞಾನಮಧಿಕಾವಗತಿಸ್ತವ ॥ ೪೧ ॥

ಅಧಿಕಂ ಚ ತವೈಶ್ವರ್ಯಂ ತಚ್ಚ ತ್ವಂ ನಾವಬುಧ್ಯಸೇ ।
ಬಾಲ್ಯಾದ್ವಾ ಸಂಶಯಾದ್ವಾಪಿ ಭಯಾದ್ವಾಪಿ ವಿಮೋಹಜಾತ್ ॥ ೪೨ ॥

ಉತ್ಪನ್ನೇ ಚಾಪಿ ವಿಜ್ಞಾನೇ ನಾಧಿಗಚ್ಛಂತಿ ತಾಂ ಗತಿಂ ।
ವ್ಯವಸಾಯೇನ ಶುದ್ಧೇನ ಮದ್ವಿಧೈಶ್ಛಿನ್ನಸಂಶಯಾಃ ॥ ೪೩ ॥

---

೩೯-೪೦. ಇನ್ನೂ ತಿಳಿಯಬೇಕಾದ ವಿಷಯಗಳೆಲ್ಲವನ್ನೂ ನೀನು ಯಥಾವತ್ತಾಗಿ ತಿಳಿದಿರುವೆ. ಬ್ರಹ್ಮರ್ಷಿಯೇ! ಗುರುಗಳ ಅನುಗ್ರಹದಿಂದಲೂ ನಿಮ್ಮ ಅಭ್ಯಾಸಬಲದಿಂದಲೂ ವಿಷಯದ ಕೊನೆಯ ಹಂತವನ್ನು ಹೊಂದಿರುವ ನೀನು ಜ್ಞಾತಸ್ವರೂಪನಾಗಿರುವೆ.

೪೧. ಆ ಮಹಾಮುನಿಯ ಅನುಗ್ರಹದಿಂದಲೇ ಆವಿರ್ಭವಿಸಿದ ದಿವ್ಯ ಜ್ಞಾನಪ್ರಕಾಶದಿಂದ ನಿನ್ನ ಮಹಿಮೆಯು ತಿಳಿಯಿತು. ನಿನ್ನ ವಿಜ್ಞಾನವು ಹೆಚ್ಚಾದುದು. ನಿನ್ನ ಅವಗತಿಯೂ ಅಧಿಕವಾದುದು.

೪೨-೪೩. ನಿನ್ನ ಐಶ್ವರ್ಯವೂ ದೊಡ್ಡದು. ಅದನ್ನು ನೀನು ತಿಳಿದಿಲ್ಲ. ಹೀಗೆ ವಿಜ್ಞಾನಿಯಾದಾಗ್ಯೂ ಬಾಲ್ಯ ಅಥವಾ ಸಂಶಯ ಅಥವಾ ಮೋಹದಿಂ ಮುಂಟಾದ ಭಯ ಇವುಗಳಿಂದ ಆ ಗತಿಯನ್ನು ಹೊಂದಿರುವುದಿಲ್ಲ.

ವಿಮುಚ್ಯ ಹೃದಯಗ್ರಂಥೀನಾರ್ತಿಮಾಸಾದಯಂತಿ ತಾಂ ।
ಭವಾಂಶ್ಚೋತ್ಪನ್ನವಿಜ್ಞಾನಃ ಸ್ಥಿರಬುದ್ಧಿರಲೋಲುಪಃ ॥ ೪೪ ॥

ವ್ಯವಸಾಯಾದೃತೇ ಬ್ರಹ್ಮನ್ನಾಸಾದಯತಿ ತತ್ಪದಂ ।
ನಾಸ್ತಿ ತೇ ಸುಖದುಃಖೇಷು ವಿಶೇಷೋ ನಾಸ್ತಿ ವಸ್ತುಷು ॥ ೪೫ ॥

ನೋತ್ಸುಕ್ಯಂ ನೃತ್ತಗೀತೇಷು ನ ರಾಗ ಉಪಜಾಯತೇ ।
ನ ಬಂಧುಷು ನಿಬಂಧಸ್ತೇ ನ ಭಯೇಷ್ವಸ್ತಿ ತೇ ಭಯಂ ॥ ೪೬ ॥

ಪಶ್ಯಾಮಿ ತ್ವಾಂ ಮಹಾಭಾಗ ತುಲ್ಯನಿಂದಾತ್ಮಸಂಸ್ತುತಿಂ ।
ಅಹಂ ಚ ತ್ವಾಮನುಪಶ್ಯಾಮಿ ಯೇ ಚಾನ್ಯೇಽಪಿ ಮನೀಷಿಣಃ ॥ ೪೭ ॥

ಆಸ್ಥಿತಂ ಪರಮಂ ಮಾರ್ಗಂ ಅಕ್ಷಯಂ ಚಾಪ್ಯನಾಮಯಂ ।
ಯತ್ಫಲಂ ಬ್ರಾಹ್ಮಣಸ್ಯೇಹ ಮೋಕ್ಷಾರ್ಥಶ್ಚ ಯದಾತ್ಮಕಃ ॥ ೪೮ ॥

---

೪೩-೪೪. ಪರಿಶುದ್ಧಚಿತ್ತರಾಗಿ ಪ್ರಯತ್ನಮಾಡಿ ನಮ್ಮಂತಹವರಿಂದ ಸಂಶಯವನ್ನು ಪರಿಹರಿಸಿಕೊಂಡವರು ಹೃದಯಗ್ರಂಥಿವಿಮೋಚನಪೂರ್ವಕ ವಾಗಿ ಆ ದುಃಖವನ್ನು ನಾಶಪಡಿಸಿಕೊಳ್ಳುತ್ತಾರೆ.

೪೪-೪೫. ನೀನಾದರೋ ಜ್ಞಾನಿಯಾಗಿಯೇ ಹುಟ್ಟಿರುವವನು, ಸ್ಥಿರ ಬುದ್ಧಿಯುಳ್ಳವನು ಮತ್ತು ವಿಷಯಾಶೆಯಿಲ್ಲದವನು. ಆದುದರಿಂದ ಬ್ರಾಹ್ಮಣನೇ! ವ್ಯವಸಾಯವಿಲ್ಲದೆಯೇ ಆ ಸ್ಥಾನವನ್ನು ಪಡೆಯುವೆ. ನಿನಗೆ ಸುಖದುಃಖಗಳ ಲ್ಲಿಯೂ, ಲೋಷ್ಟಾಶ್ಮಕಾಂಚನಾದಿವಸ್ತುಗಳಲ್ಲಿಯೂ ಯಾವ ವಿಶೇಷವೂ ಕಂಡು ಬರುವುದಿಲ್ಲ.

೪೬. ನಿನಗೆ ನರ್ತನಗಾನಗಳಲ್ಲಿ ಉತ್ಸಾಹವಿಲ್ಲ. ಯಾವ ವಿಷಯ ದಲ್ಲಿಯೂ ಇಚ್ಛೆಯಿಲ್ಲ. ನಂಟರಲ್ಲಿ ಅಭಿಮಾನವಿಲ್ಲ. ಭಯಜನಕಗಳೆಂದು ಪ್ರಸಿದ್ಧವಾದುವುಗಳಿಂದ ಭಯವಿಲ್ಲ.

೪೭-೪೯. ಮಹಾಶಯನೇ! ನೀನು ಪ್ರಶಂಸೆಯಿಂದ ಹಿಗ್ಗುವವನಲ್ಲ. ನಿಂದೆಯಿಂದ ಕುಗ್ಗುವವನಲ್ಲವೆಂದು ತಿಳಿದಿರುವೆನು. ನಾನು ಇತರ ಜ್ಞಾನಿಗಳೂ

ತಸ್ಮಿನ್ ವೈ ವರ್ತಸೇ ವಿಪ್ರ ಕಿಮನ್ಯತ್ಪರಿಪೃಚ್ಛಸಿ ।
ಸನಂದನ ಉವಾಚ
ಇತಿಶ್ರುತ್ವಾ ತು ವಚನಂ ಕೃತಾತ್ಮಾ ಕೃತನಿಶ್ಚಯಃ ॥ ೪೯ ॥

ಆತ್ಮನಾತ್ಮಾನಮಾಸ್ಥಾಯ ದೃಷ್ಟ್ವಾ ಚಾತ್ಮಾನಮಾತ್ಮನಾ ।
ಕೃತಕಾರ್ಯಸ್ಸುಖೀ ಶಾಂತಸ್ತೂಷ್ಣೀಂ ಪ್ರಾಯಾದುದಙ್ಮುಖಃ ॥ ೫೦ ॥

ಶೈಶಿರಂ ಗಿರಿಮಾಸಾದ್ಯ ಪಾರಾಶರ್ಯಂ ದದರ್ಶ ಚ ।
ಶಿಷ್ಯಾನಧ್ಯಾಪಯಂ ತಂ ಚ ಪೈಲಾದೀನ್ವೇದಸಂಹಿತಾಃ ॥ ೫೧ ॥

ಆರಣೇಯೋ ವಿಶುದ್ಧಾತ್ಮಾ ದಿವಾಕರಸಮಪ್ರಭಃ ।
ಪಿತುರ್ಜಗ್ರಾಹ ಪಾದೌ ಚ ಸಾದರಂ ಹೃಷ್ಟಮಾನಸಃ ॥ ೫೨ ॥

ಸಹ ನಿನ್ನನ್ನು ನಾಶರಹಿತವೂ, ತೊಡಕಿಲ್ಲದುದೂ ಆಗಿರುವ ಉತ್ತಮಮಾರ್ಗ ದಲ್ಲಿರುವವನೆಂದು ತಿಳಿದಿರುವೆವು. ಬ್ರಾಹ್ಮಣನೇ! ನೀನು ಬ್ರಹ್ಮಜ್ಞಾನಿಗೆ ಆಗಬೇಕಾದ ಮೋಕ್ಷಫಲಸಾಧಕವಾದ ಮಾರ್ಗದಲ್ಲಿಯೇ ವರ್ತಿಸಿರುವೆ. ಇನ್ನೇ ನನ್ನು ಕೇಳುವೆ.

೪೯-೫೦. ಸನಂದನನು ಹೇಳಿದನು.—ಜನಕರಾಜನ ಈ ಮಾತನ್ನು ಕೇಳಿ ಶುಕನು ಕೃತಾರ್ಥನಾಗಿ ಕರ್ತವ್ಯವನ್ನು ನಿಶ್ಚೈಸಿ ಪರಮಾತ್ಮನನ್ನು ಧ್ಯಾನಿಸಿ ಅವನ ಅನುಗ್ರಹದಿಂದ ಆತ್ಮಾಪರೋಕ್ಷವನ್ನು ಪಡೆದು ಬಂದ ಕಾರ್ಯ ವನ್ನು ಮಾಡಿಕೊಂಡು ಸುಖಶಾಂತಿಗಳನ್ನು ಹೊಂದಿ ಸುಮ್ಮನೆ ಉತ್ತರಾಭಿಮುಖ ವಾಗಿ ಪ್ರಯಾಣಮಾಡಿದನು.

೫೧. ಅಲ್ಲಿಂದ ಹೊರಟು ಶುಕನು ಹಿಮವತ್ಪರ್ವತಕ್ಕೆ ಬಂದು ಅಲ್ಲಿ ವೇದಸಂಹಿತೆಗಳನ್ನು ಪೈಲ ಮುಂತಾದ ಶಿಷ್ಯರುಗಳಿಗೆ ಅಧ್ಯಯನಮಾಡಿಸುತ್ತಿದ್ದ ಪರಾಶರಪುತ್ರರಾದ ವೇದವ್ಯಾಸರನ್ನು ನೋಡಿದನು.

೫೨. ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಪರಿಶುದ್ಧಾತ್ಮನಾದ ಶುಕನು ಸಂತೋಷಚಿತ್ತನಾಗಿ ಭಕ್ತಿಯಿಂದ ತಂದೆಯ ಪಾದಕ್ಕೆರಗಿದನು.

ತತೋ ನಿವೇದಯಾಮಾಸ ಪಿತುಸ್ಸರ್ವಮುದಾರಧೀಃ ।
ಶುಕೋ ಜನಕರಾಜೇನ ಸಂವಾದಂ ಮೋಕ್ಷಸಾಧನಂ ॥ ೫೩ ॥

ತಚ್ಛ್ರುತ್ವಾ ವೇದಕರ್ತಾಸೌ ಪ್ರಹೃಷ್ಟೇನಾಂತರಾತ್ಮನಾ ।
ಸಮಾಲಿಂಗ್ಯ ಸುತಂ ವ್ಯಾಸಃ ಸ್ವಪಾರ್ಶ್ವಸ್ಥಂ ಚಕಾರ ಚ ॥ ೫೪ ॥

ತತಃ ಪೈಲಾದಯೋ ವಿಪ್ರಾ ವೇದಾನ್ವ್ಯಾಸಾದಧೀತ್ಯ ಚ ।
ಶೈಲಶೃಂಗಾದ್ಭುವಂ ಪ್ರಾಪ್ತಾ ಯಾಜನಾಧ್ಯಾಪನೇ ರತಾಃ ॥ ೫೫ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ದ್ವಿತೀಯಪಾದೇ ಏಕೋನಷಷ್ಟಿತಮೋಽಧ್ಯಾಯಃ

೫೩. ತರುವಾಯ ಉದಾರಬುದ್ಧಿಯುಳ್ಳ ಶುಕನು ಮೋಕ್ಷಸಾಧಕವಾದ ಜನಕರಾಜನೊಡನೆ ಮಾಡಿದ ಸಂಭಾಷಣೆಯನ್ನೆಲ್ಲಾ ತಂದೆಗೆ ವಿಜ್ಞಾಪಿಸಿದನು.

೫೪. ಅದನ್ನು ಕೇಳಿ ವೇದೋದ್ಧಾರಕರಾದ ವ್ಯಾಸರು ಮನಃಪೂರ್ವಕವಾದ ಸಂತೋಷದಿಂದ ಮಗನನ್ನು ಆಲಿಂಗನೆಮಾಡಿಕೊಂಡು ಪಕ್ಕದಲ್ಲಿ ಕೂಡಿಸಿಕೊಂಡರು.

೫೫. ಅನಂತರ ಪೈಲ ಮುಂತಾದ ಬ್ರಾಹ್ಮಣರು ವ್ಯಾಸರ ಸನ್ನಿಧಿಯಲ್ಲಿ ವೇದಗಳನ್ನು ಅಧ್ಯಯನಮಾಡಿ ಪರ್ವತ ಶಿಖರದಿಂದ ಭೂಮಿಗೆ ಬಂದು ಅಧ್ಯಾಪನಗಳಲ್ಲಿ ಆಸಕ್ತರಾದರು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗ ಬೃಹದುಪಾಖ್ಯಾನವೆಂಬ
ಎರಡನೆಯ ಪಾದದಲ್ಲಿ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



## ಕಥಾಸಂಗ್ರಹ

ಜನಕರಾಜನು ತನ್ನ ಅರಮನೆಯ ಒಳಾಂಗಣಕ್ಕೆ ಬಂದಿದ್ದ ಶುಕಾಚಾರ್ಯರನ್ನು ಸಪರಿವಾರನಾಗಿ ಇದಿರುಗೊಂಡು ಕರೆತಂದು ಉಚಿತಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಷೋಡಶೋಪಚಾರಮಾಡಿ ಬಂಧ ಕಾರಣವೇನೆಂದು ಅವರನ್ನು ಕೇಳಿದನು. ಅವರು ತಂದೆಯ ಅಪ್ಪಣೆಯ ಮೇರೆಗೆ ನಿನ್ನಿಂದ ಮೋಕ್ಷಧರ್ಮವನ್ನು ತಿಳಿಯಲು ಬಂದಿರುವೆನೆಂದು ಹೇಳಲು ರಾಜನು ಪ್ರವೃತ್ತಿಧರ್ಮ ಮತ್ತು ನಿವೃತ್ತಿಧರ್ಮಗಳನ್ನು ಸವಿಸ್ತಾರವಾಗಿ ನಿರೂಪಿಸಿ ನೀನು ಜ್ಞಾನಿಯಾಗಿಯೇ ಹುಟ್ಟಿ ಮೋಕ್ಷಮಾರ್ಗದಲ್ಲಿಯೇ ಇರುವುದರಿಂದಲೂ ನಿನ್ನ ಜ್ಞಾನಾದಿಗಳು ಹೆಚ್ಚಾದುದರಿಂದಲೂ ಇನ್ನೇನೂ ತಿಳಿಯಬೇಕಾದ ಅಂಶವಿಲ್ಲ ಮುಂತಾಗಿ ಹೇಳಿದನು. ತರುವಾಯ ಶುಕನು ಉತ್ತರದಿಕ್ಕಿಗೆ ಹೊರಟು ಹಿಮಾಚಲದಲ್ಲಿ ತಂದೆಯ ಬಳಿಗೆ ಬಂದು ನಡೆದ ವೃತ್ತಾಂತವನ್ನು ನಮಸ್ಕಾರಪೂರ್ವಕವಾಗಿ ಅರಿಕೆಮಾಡಿದನು. ಇದನ್ನು ಕೇಳಿ ವ್ಯಾಸರು ಸಂತೋಷಪಟ್ಟರು.



# ಷಷ್ಟಿತಮೋಽಧ್ಯಾಯಃ

---

### ಸನಂದನ ಉವಾಚ

ಅವತೀರ್ಣೇಷು ವಿಪ್ರೇಷು ವ್ಯಾಸಃ ಪುತ್ರಸಹಾಯವಾನ್ ।
ತೂಷ್ಣೀಂ ಧ್ಯಾನಪರೋ ಧೀಮಾನೇಕಾಂತೇ ಸಮುಪಾವಿಶತ್ ॥ ೧ ॥

ತಮುವಾಚಾಶರೀರವಾಕ್ ವ್ಯಾಸಂ ಪುತ್ರಸಮನ್ವಿತಂ ।
ಭೋ ಭೋ ಮಹರ್ಷೇ ವಾಸಿಷ್ಠ ಬ್ರಹ್ಮಘೋಷೋ ನ ವರ್ತತೇ ॥ ೨ ॥

ಏಕೋ ಧ್ಯಾನಪರಸ್ತೂಷ್ಣೀಂ ಕಿಮಾಸ್ತೇ ಚಿಂತಯನ್ನಿವ ।
ಬ್ರಹ್ಮಘೋಷೈರ್ವಿರಹಿತಃ ಪರ್ವತೋಽಯಂ ನ ಶೋಭತೇ ॥ ೩ ॥

ತಸ್ಮಾದಧೀಷ್ವ ಭಗವನ್ ಸಾರ್ಧಂ ಪುತ್ರೇಣ ಧೀಮತಾ ।
ವೇದಾನ್ವೇದವಿದಾ ಚೈವ ಸುಪ್ರಸನ್ನಮನಾಃ ಸದಾ ॥ ೪ ॥

---

### ಅರವತ್ತನೆಯ ಅಧ್ಯಾಯವು

೧. ಸನಂದನನು ಹೇಳಿದನು.—ಪೈಲ ಮುಂತಾದ ಬ್ರಾಹ್ಮಣರು ಮೇರು ಶಿಖರದಿಂದ ಭೂಮಿಗೆ ಹೊರಟುಹೋದಮೇಲೆ ಸರ್ವಜ್ಞನಾದ ವ್ಯಾಸನು ಶುಕಕುಮಾರನೊಡನೆ ರಹಸ್ಯಸ್ಥಾನದಲ್ಲಿ ಧ್ಯಾನದಲ್ಲಿಯೇ ಆಸಕ್ತನಾಗಿ ಕುಳಿತಿದ್ದನು.

೨-೪. ಆಗ ಅಶರೀರವಾಣಿಯು ಪುತ್ರಸಹಿತನಾದ ಆ ವ್ಯಾಸನನ್ನು ಕುರಿತು ವಸಿಷ್ಠಕುಲೋತ್ಪನ್ನನಾದ ಪೂಜ್ಯ ಮಹರ್ಷಿಯೇ! ವೇದಘೋಷವಿಲ್ಲ; ಒಬ್ಬನೇ ಧ್ಯಾನಪರನಾಗಿ ಏನೋ ಚಿಂತಿಸುವವನಂತೆ ಸುಮ್ಮನೆ ಕುಳಿತಿರುವೆ. ವೇದಘೋಷವಿಲ್ಲದಿರುವ ಈ ಪರ್ವತವು ಶೋಭಾಯಮಾನವಾಗಿಲ್ಲವಾದಕಾರಣ ಸಂತುಷ್ಟಚಿತ್ತನಾಗಿ ವೇದಜ್ಞಾನಿಯೂ, ಬುದ್ಧಿವಂತನೂ ಆದ ಮಗನೊಡನೆ ಸರ್ವದಾ ವೇದಾಧ್ಯಯನಮಾಡು' ಎಂಬುದಾಗಿ ನುಡಿಯಿತು.

ತಚ್ಛ್ರುತ್ವಾ ವಚನಂ ವ್ಯಾಸೋ ನಭೋ ವಾಣೀಸಮೀರಿತಂ ।
ಶುಕೇನ ಸಹ ಪುತ್ರೇಣ ವೇದಾಭ್ಯಾಸ ಮಥಾಕರೋತ್ ॥ ೫ ॥

ತಯೋರಭ್ಯಸತೋರೇವಂ ಬಹುಕಾಲಂ ದ್ವಿಜೋತ್ತಮ ।
ವಾತೋಽತಿಮಾತ್ರಂ ಪ್ರವವೌ ಸಮುದ್ರಾನಿಲವೀಜಿತಃ ॥ ೬ ॥

ತತೋಽನಧ್ಯಾಯ ಇತಿ ತಂ ವ್ಯಾಸಃ ಪುತ್ರಮವಾರಯತ್ ।
ಶುಕೋವಾರಿತಮಾತ್ರಸ್ತು ಕೌತೂಹಲಸಮನ್ವಿತಃ ॥ ೭ ॥

ಅಪೃಚ್ಛತ್ಪಿತರಂ ತತ್ರ ಕುತೋ ವಾಯುರಭೂದಯಂ ।
ಆಖ್ಯಾತುಮರ್ಹತಿ ಭವಾನ್ಸರ್ವಂ ವಾಯೋರ್ವಿಚೇಷ್ಟಿತಂ ॥ ೮ ॥

ಶುಕಸ್ಯೈತದ್ವಚಃ ಶ್ರುತ್ವಾ ವ್ಯಾಸಃ ಪರಮವಿಸ್ಮಿತಃ ।
ಅನಧ್ಯಾಯನಿಮಿತ್ತೇಽಸ್ಮಿನ್ನಿದಂ ವಚನ ಮಬ್ರವೀತ್ ॥ ೯ ॥

೫. ವ್ಯಾಸನು ಅಶರೀರವಾಣಿಯನ್ನು ಕೇಳಿ ಶುಕಕುಮಾರನೊಡನೆ ವೇದಾಧ್ಯಯನ ಮಾಡಿದನು

೬. ಬ್ರಾಹ್ಮಣವರ್ಯನಾದ ನಾರದನೇ! ಈ ಪ್ರಕಾರ ಬಹುಕಾಲದ ವರೆಗೆ ವೇದಾಭ್ಯಾಸಮಾಡುತ್ತಿದ್ದ ಅವರಿಬ್ಬರಮೇಲೆ ಸಮುದ್ರಗಾಳಿಯಿಂದ ಉದ್ರೇಕಗೊಳಿಸಲ್ಪಟ್ಟ ಬಿರುಗಾಳಿಯು ಬಹಳವಾಗಿ ಬೀಸಿತು.

೭-೮. ಅನಂತರ ವ್ಯಾಸನು ಈ ಸಮಯವು ಅನಧ್ಯಾಯವೆಂದು ಹೇಳಿ ಮಗನನ್ನು ತಡೆದನು. ತನ್ನ ವೇದಾಧ್ಯಯನಕ್ಕೆ ತಡೆಮಾಡಿದಮೇಲೆ ಶುಕನು ಕುತೂಹಲದಿಂದ ತಂದೆಯನ್ನು ಕುರಿತು "ಅಪ್ಪಾ! ಈ ಗಾಳಿಯು ಎಲ್ಲಿಂದ ಏತಕ್ಕೆ ಉಂಟಾಯಿತು? ಮುಂತಾದ ವಾಯುವಿನ ವ್ಯಾಪಾರವನ್ನೆಲ್ಲಾ ನೀವು ಹೇಳಬೇಕು" ಎಂಬುದಾಗಿ ಪ್ರಶ್ನೆಮಾಡಿದನು.

೯. ಶುಕನ ಈ ಮಾತನ್ನುಕೇಳಿ ವ್ಯಾಸನು ಬಹಳವಾಗಿ ಆಶ್ಚರ್ಯಪಟ್ಟು ಅನಧ್ಯಾಯನಿಮಿತ್ತವಾಗಿ ಪ್ರಾಪ್ತವಾದ ವಾಯುವಿನ ವಿಷಯದಲ್ಲಿ ಈ ಮಾತನ್ನು ಹೇಳಿದನು.

ದಿವ್ಯಂ ತೇ ಚಕ್ಷುರುತ್ಪನ್ನಂ ಸ್ವಸ್ಥಂ ತೇ ನಿಶ್ಚಲಂ ಮನಃ ।
ತಮಸಾ ರಜಸಾ ಚಾಪಿ ತ್ಯಕ್ತಃ ಸತ್ತ್ವೇ ವ್ಯವಸ್ಥಿತಃ ॥ ೧೦॥

ತಸ್ಮಾತ್ಮನಿ ಸ್ವಯಂ ವೇದಾನ್ಬುಧ್ವಾ ಸಮನುಚಿಂತಯ ।
ದೇವಯಾನಪಥೋ ವಿಷ್ಣುಃ ಪಿತೃಯಾನಶ್ಚ ತಾಮಸಃ ॥ ೧೧ ॥

ದ್ವಾವೇತೌ ಪ್ರೇತ್ಯ ಪಂಥಾನೌ ದಿವಂ ಚಾಧಶ್ಚ ಗಚ್ಛತಃ ।
ಪೃಥಿವ್ಯಾಮಂತರಿಕ್ಷೇ ಚ ಯತ್ರ ಸಂವಾಂತಿ ವಾಯವಃ ॥ ೧೨ ॥

ಸಪ್ತೈತೇ ವಾಯುಮಾರ್ಗಾ ವೈ ತಾನ್ನಿಬೋಧಾನುಪೂರ್ವಶಃ ।
ತತ್ರ ದೇವಗಣಾಃ ಸಾಧ್ಯಾಸ್ಸಮಭೂವನ್ಮಹಾಬಲಾಃ ॥ ೧೩ ॥

ತೇಷಾಮಪ್ಯಭವತ್ಪುತ್ರಃ ಸಮಾನೋ ನಾಮ ದುರ್ಜಯಃ ।
ಉದಾನಸ್ತಸ್ಯ ಪುತ್ರೋಽಭೂದ್ವ್ಯಾನಸ್ತಸ್ಯಾಭವತ್ಸುತಃ ॥ ೧೪ ॥

೧೦-೧೧. ಕುಮಾರಾ! ನಿನಗೆ ದಿವ್ಯ ಚಕ್ಷುಸ್ಸು ಹುಟ್ಟಿತು. ನಿನ್ನ ಮನಸ್ಸು ನಿಶ್ಚಲವಾಗಿ ನಿಂತಿತು. ತಮೋಗುಣ ರಜೋಗುಣ ಬಿಟ್ಟು ಸತ್ವಗುಣವನ್ನೇ ಅವಲಂಬಿಸಿ, ವೇದಗಳನ್ನು ಸ್ವತಃ ಪರಮಾತ್ಮಸ್ವರೂಪವಿಷಯವೆಂದು ತಿಳಿದು ಚೆನ್ನಾಗಿ ಆಲೋಚಿಸು. ಕೇಳು—ವಿಷ್ಣುಪಥವನ್ನು ದೇವಯಾನವೆನ್ನುವರು. ತಮಃಪಥವನ್ನು ಪಿತೃಯಾನವೆನ್ನುವರು.

೧೨-೧೩. ಇವೆರಡೂ ಮರಣಾನಂತರ ಹೋಗುವ ಮಾರ್ಗಗಳು. ಇವುಗಳಲ್ಲಿ ದೇವಯಾನವು ಸ್ವರ್ಗದ ಹಾದಿಯು. ಪಿತೃಯಾನವು ನರಕಕ್ಕೆಹೋಗುವ ಮಾರ್ಗವು. ಪೃಥಿವಿ, ಅಂತರಿಕ್ಷಗಳ ಮಧ್ಯದಲ್ಲಿ ಬೀಸುವ ವಾಯುಗಳು ಏಳು ಮಾರ್ಗಗಳಾಗಿವೆ. ಅವುಗಳನ್ನು ಕ್ರಮವಾಗಿ ತಿಳಿಸುವೆನು ಕೇಳು. ಅಲ್ಲಿ ಮಹಾಬಲಿಷ್ಠರಾದ ಸಾಧ್ಯರೆಂಬ ದೇವಗಣಗಳುಂಟಾದುವು.

೧೪. ಅವರಿಗೆ ಸಮಾನನೆಂಬ ಜಯಿಸಲಶಕ್ಯನಾದ ಮಗನು ಹುಟ್ಟಿದನು. ಆ ಸಮಾನವಾಯುವಿನ ಮಗನು ಉದಾನನು. ಅವನಿಗೆ ವ್ಯಾನನೆಂಬುವನು ಮಗನಾದನು.

ಅಪಾನಶ್ಚರತೋ ಜಜ್ಞೇ ಪ್ರಾಣಶ್ಚಾಪಿ ತತಃ ಪರಂ ।
ಅನಪತ್ಯೋ ಭವತ್ಪ್ರಾಣೋ ದುರ್ಧರ್ಷಃ ಶತ್ರುಮರ್ದನಃ ॥ ೧೫ ॥

ಪೃಥಕ್ಕರ್ಮಾಣಿ ತೇಷಾಂ ತು ಪ್ರವಕ್ಷ್ಯಾಮಿ ಯಥಾ ತಥಾ ।
ಪ್ರಾಣಿನಾಂ ಸರ್ವತೋ ವಾಯುಚೇಷ್ಟಾಂ ವರ್ತಯತೇ ಪೃಥಕ್ ॥ ೧೬ ॥

ಪ್ರಾಣನಾಚ್ಚೈವ ಸರ್ವೇಷಾಂ ಪ್ರಾಣ ಇತ್ಯಭಿಧೀಯತೇ ।
ಪ್ರೇಷಯತ್ಯಭ್ರಸಂಘಾತಾನ್ಧೂಮಜಾಂಶ್ಚೋಷ್ಮಜಾಂಸ್ತಥಾ ॥ ೧೭ ॥

ಪ್ರಥಮಃ ಪ್ರಥಮೇ ಮಾರ್ಗೇ ಆವಹೋ ನಾಮ ಸೋಽನಿಲಃ ।
ಅಂಬರೇ ಸ್ನೇಹಮಾತ್ರೇಭ್ಯಸ್ತಡಿದ್ಭ್ಯಶ್ಚೋತ್ತಮದ್ಯುತಿಃ ॥ ೧೮ ॥

ಪ್ರವಹೋ ನಾಮ ಸಂವಾತಿ ದ್ವಿತೀಯಶ್ಶ್ವಸತೋಯದಃ ।
ಉದಯಂ ಜ್ಯೋತಿಷಾಂ ಶಶ್ವತ್ಸೋಮಾದೀನಾಂ ಕರೋತಿ ಯಃ ॥ ೧೯ ॥

೧೫. ಅವನಿಂದ ಅಪಾನನು, ಅವನಿಂದ ಪ್ರಾಣನೂ ಸಹ ಹುಟ್ಟಿದರು. ಶತ್ರುನಾಶಕನು, ಧರಿಸಲಶಕ್ಯನೂ ಆದ ಪ್ರಾಣನಿಗೆ ಮಕ್ಕಳಾಗಲಿಲ್ಲ.

೧೬. ಆ ಸಮಾನಾದಿ ವಾಯುಗಳ ವ್ಯಾಪಾರವನ್ನು ಬೇರೆಬೇರೆಯಾಗಿ ಯಥಾವತ್ತಾಗಿ ಹೇಳುವೆನು.—ವಾಯುವು ಪ್ರಾಣಿಗಳ ಸಕಲಾವಯವಗಳಿಂದ ಭಿನ್ನಭಿನ್ನ ವ್ಯಾಪಾರಗಳನ್ನು ಮಾಡಿಸುವನು.

೧೭–೧೮. ಸರ್ವರಿಗೂ ಪ್ರಾಣದಾತನಾದುದರಿಂದ ವಾಯುವು ಪ್ರಾಣನೆನಿಸುವನು. ಹೊಗೆ, ಆವಿ ಇವುಗಳಿಂದುತ್ಪನ್ನವಾದ ಮೇಘ ಸಮೂಹಗಳನ್ನು ಮೊದಲನೆಯ ಮಾರ್ಗದಲ್ಲಿ ನಡೆಯಿಸುವವನೇ ಆವಹನೆಂಬ ಮೊದಲನೆಯ ವಾಯುವು.

೧೮–೧೯. ಕೇವಲ ಜಲಮಯವಾದ ಮಿಂಚುಗಳ ದೆಸೆಯಿಂದ ಆಕಾಶದಲ್ಲಿ ಉತ್ಕೃಷ್ಟಕಾಂತಿಯನ್ನುಂಟುಮಾಡುವ, ಮೇಘಸಹಿತವಾದ ವಾಯುವೇ ಎರಡನೇಯದು. ಅದಕ್ಕೆ ಪ್ರವಹವೆಂದು ಹೆಸರು.

ಅಂತರ್ದೇಹೇಷು ಚೋದಾನಂ ಯಂ ವದಂತಿ ಮನೀಷಿಣಃ ।
ಯಶ್ಚತುರ್ಭ್ಯಸ್ಸಮುದ್ರೇಭ್ಯೋ ವಾಯುರ್ಧಾರಯತೇ ಜಲಂ ॥ ೨೦ ॥

ಉದ್ಧೃತ್ಯ ದದತೇ ಚಾಪೋ ಜೀಮೂತೇಭ್ಯೋಽಂಬರೇಽನಿಲಃ ।
ಯೋಽದ್ಭಿಃ ಸಂಯೋಜ್ಯ ಜೀಮೂತಾನ್ಪರ್ಜನ್ಯಾಯ ಪ್ರಯಚ್ಛತಿ ॥ ೨೧ ॥

ಉದ್ವಹೋ ನಾಮ ವರ್ಷಿಷ್ಠಸ್ತೃತೀಯಃ ಸ ಸದಾಗತಿಃ ।
ಸ ನೀಯಮಾನಾ ಬಹುಧಾ ಯೇನ ನೀಲಾ ಮಹಾಘನಾಃ ॥ ೨೨ ॥

ವರ್ಷಮೋಕ್ಷಕೃತಾರಂಭಾಸ್ತೇ ಭವಂತಿ ಘನಾಘನಾಃ ।
ಯೋಽಸೌ ವಹತಿ ದೇವಾನಾಂ ವಿಮಾನಾನಿ ವಿಹಾಯಸಾ ॥ ೨೩ ॥

ಚತುರ್ಥಃ ಸಂವಹೋ ನಾಮ ವಾಯುಃ ಸ ಗಿರಿಮರ್ದನಃ ।
ಯೇನ ವೇಗವತಾರುಗ್ಣಾಃ ಕ್ರಿಯಂತೇ ತರುಜಾ ರಸಾಃ ॥ ೨೪ ॥

---

೧೯-೨೨. ಯಾವ ವಾಯುವು ಚಂದ್ರಾದಿತೇಜಸ್ಸನ್ನು ಹುಟ್ಟಿಸುವುದೋ, ಶರೀರದ ಒಳಭಾಗದಲ್ಲಿರುವಾಗ ಯಾವ ವಾಯುವನ್ನು ಜ್ಞಾನಿಗಳು ಉದಾನವೆಂದು ಹೇಳುವರೋ, ಯಾವ ವಾಯುವು ನಾಲ್ಕುಸಮುದ್ರಗಳಿಂದಲೂ ನೀರನ್ನು ಒಯಿದು ಅದನ್ನು ಆಕಾಶದಲ್ಲಿರುವ ಮೇಘಗಳಿಗೆ ಒದಗಿಸಿ ಅವುಗಳನ್ನು ಪರ್ಜನ್ಯದೇವತೆಗೆ ಕೊಡುತ್ತದೆಯೋ ಅಂತಹ ಮಳೆಗರಿಯುವವಾಯುವೇ ಮೂರನೆಯದು. ಆದಕ್ಕೆ ಉದ್ವಹವೆಂದು ಹೆಸರು.

೨೩-೨೪. ಕಪ್ಪಾದ ಮತ್ತು ಘನೀಭೂತವಾದ ಮಹಾಮೇಘಗಳು ಯಾವ ವಾಯುವಿನಿಂದ ನಾನಾವಿಧವಾಗಿ ಒಯ್ಯಲ್ಪಟ್ಟು ಮಳೆ ಕರೆಯಲಾರಂಭಿಸಿ ಕರಗುವುವೋ, ಯಾವ ವಾಯುವು ದೇವತೆಗಳ ವಿಮಾನಗಳನ್ನು ಆಕಾಶದಲ್ಲಿ ಧರಿಸುವುದೋ, ಬೆಟ್ಟಗಳನ್ನುರುಳಿಸುವ ಆ ವಾಯುವೇ ನಾಲ್ಕನೆಯದಾದ ಸಂವಹವೆಂಬುದು.

ಪಂಚಮಃ ಸಮಹಾವೇಗೋ ವಿವಹೋ ನಾಮ ಮಾರುತಃ ।
ಯಸ್ಮಿನ್ ಪರಿಪ್ಲವೇ ದಿವ್ಯಾ ವಹಂತ್ಯಾಪೋ ವಿಹಾಯಸಾ ॥ ೨೫ ॥

ಪುಣ್ಯಂ ಚಾಕಾಶಗಂಗಾಯಾಸ್ತೋಯಂ ವಿಷ್ಟಭ್ಯ ತಿಷ್ಠತಿ ।
ದೂರಾತ್ಪ್ರತಿಹತೋ ಯಸ್ಮಿನ್ನೇಕರಶ್ಮಿರ್ದಿವಾಕರಃ ॥ ೨೬ ॥

ಯೋ ನಿರಂಶುಃ ಸಹಸ್ರಸ್ಯ ಯೇನ ಭಾತಿ ವಸುಂಧರಾ ।
ಯಸ್ಮಾದಾಪ್ಯಾಯತೇ ಸೋಮೋ ನಿಧಿರ್ದಿವ್ಯೋಽಮೃತಸ್ಯ ಚ ॥ ೨೭ ॥

ಷಷ್ಠಃ ಪರಿವಹೋ ನಾಮ ಸವಾಯುರ್ಜಯತಾಂ ವರಃ ।
ಸರ್ವಪ್ರಾಣಭೃತಾಂ ಪ್ರಾಣಾನ್ಯೋಽಂತಕಾಲೇ ನಿರಸ್ಯತಿ ॥ ೨೮ ॥

ಯಸ್ಯ ಧರ್ಮೋಽನುವರ್ತೇತೇ ಮೃತ್ಯುವೈವಸ್ವತಾವುಭೌ
ಸಮ್ಯಗನ್ವೀಕ್ಷತಾಂ ಬುದ್ಧ್ಯಾ ಶಾಂತಯಾಧ್ಯಾತ್ಮಚಿಂತಕಾಃ ॥ ೨೯ ॥

---

೨೪-೨೫. ಶೀಘ್ರಗಾಮಿಯಾದ ಯಾವ ವಾಯುವಿನಿಂದ ವೃಕ್ಷರಸಗಳು ರೋಗಕಾರಿಗಳಾಗುವುವೋ ಅಂತಹ ಮಹಾವೇಗವುಳ್ಳ ವಿವಹವೆಂಬ ವಾಯುವು ಐದನೆಯದು.

೨೫-೨೮. ಯಾವ ವಾಯುವು ಬೀಸಿದರೆ ಅಂತರಿಕ್ಷಸಂಬಂಧಿಯಾದ ನೀರು ಆಕಾಶದಲ್ಲಿಯೇ ನಿಲ್ಲುವುದೋ, ಆಕಾಶಗಂಗೆಯಲ್ಲಿ ಪುಣ್ಯಕರವಾದ ನೀರು ವೃದ್ಧಿಯಾಗುವುದೋ, ಸೂರ್ಯನು ಏಕರಶ್ಮಿಯಾಗಿ ದೂರದಲ್ಲಿಯೇ ಪ್ರತಿಹತನಾಗುವನೋ, ಯಾವ ವಾಯುವಿನಿಂದ ಸೂರ್ಯನು ಭೂಮಿಯಲ್ಲಿ ವ್ಯಾಪಿಸುವನೋ, ಯಾವ ವಾಯುವಿನಿಂದ ಚಂದ್ರನು ತೃಪ್ತನಾಗುವನೋ, ಅಮೃತಕ್ಕೆ ದಿವ್ಯನಿಧಿಯಾದ ಅಂತಹ ಪರಿವಹವೆಂಬ ಬಲಿಷ್ಠವಾಯುವು ಆರನೆಯದು.

೨೮-೩೨. ಮರಣಕಾಲದಲ್ಲಿ ಸಕಲ ಪ್ರಾಣಿಗಳ ಪ್ರಾಣಗಳನ್ನು ಯಾವ ವಾಯುವು ಅಪಹರಿಸುತ್ತದೆಯೋ, ಮೃತ್ಯು ಯಮಧರ್ಮರಿಬ್ಬರೂ ಯಾವ ವಾಯುವಿನ ನೀತಿಯನ್ನೇ ಅನುಸರಿಸಿರುವರೋ ನಿಯತವಾಗಿ ಅಧ್ಯಾತ್ಮತತ್ತ್ವವನ್ನು ಚೆನ್ನಾಗಿ ಸಾಕ್ಷಾತ್ಕರಿಸುವಂತಹ ಶಾಂತ ಬುದ್ಧಿಯಿಂದ ಮಾಡಿದ ಧ್ಯಾನಾಭ್ಯಾಸದಿಂದ ಸಂತುಷ್ಟರಾದವರನ್ನು ಯಾವ ವಾಯುವು ಮುಕ್ತಿಭಾಗಿಗಳನ್ನಾಗಿ ಮಾಡುವುದೋ, ದಕ್ಷಪ್ರಜಾಪತಿಯ ಹತ್ತುಸಾವಿರ ಮಕ್ಕಳು ಯಾವ ವಾಯುವನ್ನು

ಧ್ಯಾನಾಭ್ಯಾಸಾಭಿರಾಮಾಣಾಂ ಯೋಽಮೃತತ್ವಾಯ ಕಲ್ಪತೇ ।
ಯಂ ಸಮಾಸಾದ್ಯ ವೇಗೇನ ದಿಶಾಮಂತಂ ಪ್ರಪೇದಿರೇ ॥ ೩೦ ॥

ದಕ್ಷಸ್ಯ ದಶಪುತ್ರಾಣಾಂ ಸಹಸ್ರಾಣಿ ಪ್ರಜಾಪತೇಃ ।
ಯೇನ ಸೃಷ್ಟಃ ಪರಾಭೂತೋ ಯಾತ್ಯೇವ ನ ನಿವರ್ತತೇ ॥ ೩೧ ॥

ಪರಾವಹೋ ನಾಮ ವರೋ ವಾಯುಃ ಸ ದುರತಿಕ್ರಮಃ ।
ಏವಮೇತೇ ದಿತೇಃ ಪುತ್ರಾಃ ಮರುತಃ ಪರಮಾದ್ಭುತಾಃ ॥ ೩೨ ॥

ಅನಾರಮಂತಃ ಸರ್ವಾಂತಃ ಸರ್ವಗಾಃ ಸರ್ವಚಾರಿಣಃ ।
ಏತತ್ತು ಮಹದಾಶ್ಚರ್ಯಂ ಯದಯಂ ಪರ್ವತೋತ್ತಮಃ ॥ ೩೩ ॥

ಕಂಪಿತಃ ಸಹಸಾ ತೇನ ಪವಮಾನೇನ ವಾಯುನಾ ।
ವಿಷ್ಣೋರ್ನಿಃಶ್ವಾಸವಾತೋಽಯಂ ಯದಾ ವೇಗ ಸಮೀರಿತಃ ॥ ೩೪ ॥

ಸಹಸೋದೀರ್ಯತೇ ತಾತ ಜಗತ್ಪ್ರವ್ಯಥತೇ ತದಾ ।
ತಸ್ಮಾದ್ಬ್ರಹ್ಮವಿದೋ ಬ್ರಹ್ಮ ನ ಪಠಂತ್ಯತಿ ವಾಯುತಃ ॥ ೩೫ ॥

ಆಶ್ರಯಿಸಿ ವೇಗವಾಗಿ ಹೊರಟು ದಿಗಂತವನ್ನು ಮುಟ್ಟಿದರೋ, ಯಾವ ವಾಯು ಏನಿಂದ ಸೃಷ್ಟವಾದುದು ಪರಾಭೂತವಾಗಿ ಹಿಂದಿರುಗುವುದಿಲ್ಲವೋ, ಅಂತಹ ಉತ್ತಮವಾದ ವಾಯುವೇ ಪರಾವಹನಾಮಕವಾದ ಏಳನೆಯ ವಾಯುವು. ಅದು ಉಲ್ಲಂಘಿಸಲಶಕ್ಯವು.

೩೨-೩೫. ಈ ಪ್ರಕಾರ ಸರ್ವಪದಾರ್ಥಗಳ ಒಳಗೂ ಹೊರಗೂ ಇರುವ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಿರುವ ದಿತಿ ಕುಮಾರರಾದ ಈ ವಾಯುಗಳು ಅತ್ಯಾಶ್ಚರ್ಯಕರರಾಗಿರುವರು. ಅಂತಹ ಪವಮಾನ ವಾಯುವಿನಿಂದ ಶ್ರೇಷ್ಠವಾದ ಈ ಪರ್ವತವು ಈ ರೀತಿ ವೇಘವಾಗಿ ಅಲ್ಲಾಡಿಸಲ್ಪಟ್ಟಿದೆಂಬುದು ಅತ್ಯಾಶ್ಚರ್ಯಕರವು. ಇಂತಹ ವಿಷ್ಣುವಿನ ನಿಶ್ವಾಸವಾಯುವು ವೇಗವಾಗಿ ಇದ್ದಕ್ಕಿದ್ದ ಹಾಗೆಯೇ ಬೀಸಿದಾಗ ಜಗತ್ತು ದುಃಖಪಡುತ್ತದೆ. ಆದಕಾರಣ ಬ್ರಹ್ಮಜ್ಞಾನಿಗಳು ಅತ್ಯಂತವಾಗಿ ಗಾಳಿ ಬೀಸಿದಾಗ ವೇದಾಧ್ಯಯನ ಮಾಡುವುದಿಲ್ಲ.

ವಾಯೋರ್ವಾಯುಭಯಂ ಹ್ಯುಕ್ತಂ ಬ್ರಹ್ಮ ತತ್ಪೀಡಿತಂ ಭವೇತ್ ।
ಏತಾವದುಕ್ತ್ವಾ ವಚನಂ ಪರಾಶರಸುತಃ ಪ್ರಭುಃ ॥ ೩೬ ॥

ಉಕ್ತ್ವಾ ಪುತ್ರಮಧೀಷ್ವೇತಿ ವ್ಯೋಮಗಂಗಾಮಗಾತ್ತದಾ ।
ತತೋ ವ್ಯಾಸೇ ಗತೇ ಸ್ನಾತುಂ ಶುಕೋ ಬ್ರಹ್ಮವಿದಾಂ ವರಃ ॥ ೩೭ ॥

ಸ್ವಾಧ್ಯಾಯಮಕರೋದ್ವ್ರಹ್ಮನ್ವೇದವೇದಾಂಗ ಪಾರಗಃ ।
ತತ್ರ ಸ್ವಾಧ್ಯಾಯಸಂಯುಕ್ತಂ ಶುಕಂ ವ್ಯಾಸಸುತಂ ಮುನೇ ॥ ೩೮ ॥

ಸನತ್ಕುಮಾರೋ ಭಗವಾನೇಕಾಂತೇ ಸಮುಪಾಗತಃ ।
ಉತ್ಥಾಯ ಸತ್ಕೃತಸ್ತೇನ ಬ್ರಹ್ಮಪುತ್ರೋ ಹಿ ಕಾರ್ಷ್ಣಿನಾ ॥ ೩೯ ॥

ತತಃ ಪ್ರೋವಾಚ ವಿಪ್ರೇಂದ್ರ ಶುಕಂ ವೇದವಿದಾಂವರಃ ।
ಕಿಂ ಕರೋಷಿ ಮಹಾಭಾಗ ವ್ಯಾಸಪುತ್ರ ಮಹಾದ್ಯುತೇ ॥ ೪೦ ॥

೩೬-೩೮. ಬಿರುಗಾಳಿಯು ಬೀಸುವಕಾಲದಲ್ಲಿ ಹೇಳಿದವೇದವು ವಾಯುವಿನ ದೆಸೆಯಿಂದ ಭಯಪಟ್ಟು ಅದರಿಂದ ಬಾಧಿತವಾಗುವುದು ಎಂದು ಹೇಳಿ ಪರಾಶರ ಪುತ್ರನಾದ ವ್ಯಾಸಸ್ವಾಮಿಯು "ಕುಮಾರ! ಈ ವಾಯುವಿನವೇಗವು ನಿಂತೊಡನೆ ನೀನು ಅಧ್ಯಯನಮಾಡು" ಎಂದು ಆಜ್ಞಾಪಿಸಿ ಸ್ನಾನಕ್ಕಾಗಿ ಆಕಾಶ ಗಂಗೆಗೆ ಹೊರಟನು. ಅನಂತರ ವ್ಯಾಸನು ಸ್ನಾನಕ್ಕೆ ಹೋಗಲು ಬ್ರಹ್ಮಜ್ಞಾನಿವರೇಣ್ಯನೂ ವೇದವೇದಾಂಗಗಳಲ್ಲಿ ಪಾರಂಗತನೂ ಆದ ಶುಕನು ವೇದಾಧ್ಯಯನಾಸಕ್ತನಾಗಿ ಅಧ್ಯಯನವನ್ನು ಮಾಡುತ್ತಿದ್ದನು.

೩೯. ನಾರದಮುನಿಯೇ! ಏಕಾಂತಸ್ಥಳದಲ್ಲಿ ವೇದಾಧ್ಯಯನನಿರತನಾಗಿದ್ದ ವ್ಯಾಸಪುತ್ರನಾದ ಶುಕನನ್ನು ಕುರಿತು ಪೂಜ್ಯನಾದ ಸನತ್ಕುಮಾರನು ಬಂದನು. ಆ ಕೃಷ್ಣದ್ವೈಪಾಯನ ಪುತ್ರನಾದ ಶುಕಮುನಿಯಿಂದ ಬ್ರಹ್ಮಕುಮಾರನಾದ ಸನತ್ಕುಮಾರನು ಪ್ರತ್ಯುತ್ಥಾನಪೂರ್ವಕವಾಗಿ ಸತ್ಕರಿಸಲ್ಪಟ್ಟನು.

೪೦. ಬ್ರಾಹ್ಮಣವರ್ಯನೇ! ತರುವಾಯ ವೇದವೇತ್ತೃಗಳಲ್ಲಿ ಉತ್ತಮನಾದ ಸನತ್ಕುಮಾರಮುನಿಯು ಶುಕನನ್ನು ಕುರಿತು ವ್ಯಾಸಪುತ್ರನೂ ಮಹಾಕಾಂತಿಮಂತನೂ ಆದ ಶುಕನೇ! ಏನುಮಾಡುತ್ತಿರುವೆ ? ಎಂದು ಕೇಳಿದನು.

ಶುಕ ಉವಾಚ

ಸ್ವಾಧ್ಯಾಯೇ ಸಂಪ್ರವೃತ್ತೋಽಹಂ ಬ್ರಹ್ಮಪುತ್ರಾಧುನಾ ಸ್ಥಿತಃ ।
ತ್ವದ್ದರ್ಶನಮನುಪ್ರಾಪ್ತಃ ಕೇನಾಪಿ ಸುಕೃತೇನ ಚ ॥ ೪೧ ॥

ಕಿಂಚಿತ್ತ್ವಾಂ ಪ್ರಷ್ಟುಮಿಚ್ಛಾಮಿ ತತ್ತ್ವಂ ಮೋಕ್ಷಾರ್ಥಸಾಧನಂ ।
ತದ್ವದಸ್ವ ಮಹಾಭಾಗ ಯಥಾ ತಜ್ಜ್ಞಾನಮಾಪ್ನುಯಾಂ ॥ ೪೨ ॥

ಸನತ್ಕುಮಾರ ಉವಾಚ

ನಾಸ್ತಿವಿದ್ಯಾಸಮಂ ಚಕ್ಷುಃ ನಾಸ್ತಿವಿದ್ಯಾಸಮಂ ತಪಃ ।
ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಃ ಸುಖಂ ॥ ೪೩ ॥

ನಿವೃತ್ತಿಃ ಕರ್ಮಣಃ ಪಾಪಾತ್ಸತತಂ ಪುಣ್ಯಶೀಲತಾ ।
ಸದ್ವೃತ್ತಿಃ ಸಮುದಾಚಾರಃ ಶ್ರೇಯ ಏತದನುತ್ತಮಂ ॥ ೪೪ ॥

೪೧. ಶುಕನು ಹೇಳಿದನು.—ಬ್ರಹ್ಮಪುತ್ರನಾದ ಸನತ್ಕುಮಾರನೇ! ನಾನು ಈಗ ವೇದಾಧ್ಯಯನದಲ್ಲಿ ತೊಡಗಿರುವೆನು. ಯಾವುದೋ ಒಂದು ಪುಣ್ಯವಿಶೇಷದಿಂದ ನಿಮ್ಮ ದರ್ಶನವು ಲಭಿಸಿತು.

೪೨. ಮಹಾಶಯನೇ! ಮೋಕ್ಷವೆಂಬ ಪುರುಷಾರ್ಥಕ್ಕೆ ಸಾಧಕವಾದ ತತ್ತ್ವವನ್ನು ಸ್ವಲ್ಪ ಕೇಳಬಯಸುವೆನು. ನನಗೆ ತತ್ತ್ವಜ್ಞಾನವುಂಟಾಗುವಂತೆ ಅದನ್ನು ಹೇಳು.

೪೩. ಸನತ್ಕುಮಾರನು ಹೇಳಿದನು.—ವಿದ್ಯೆಗೆ ಸಮಾನವಾದ ಕಣ್ಣಿಲ್ಲ. ವೇದಶಾಸ್ತ್ರಾಧ್ಯಯನಕ್ಕೆ ಸಮಾನವಾದ ತಪಸ್ಸಿಲ್ಲ. ರಾಗ (ಕಾಮನಾ) ಕ್ಕೆ ಸಮಾನವಾದ ದುಃಖವಿಲ್ಲ. ತ್ಯಾಗಕ್ಕೆ ಸದೃಶವಾದ ಸುಖವಿಲ್ಲ.

೪೪. ಪಾಪಕರ್ಮವನ್ನು ಬಿಡುವುದು, ಯಾವಾಗಲೂ ಪುಣ್ಯಕರ್ಮವನ್ನು ಸ್ವತಃ ಮಾಡುತ್ತಿರುವುದು ಮತ್ತು ಸದಾಚಾರಿಯಾಗಿ ಸಮೀಚೀನ ಮಾರ್ಗದಲ್ಲಿರುವುದು ಇವು ಸರ್ವೋತ್ತಮವಾದ ಶ್ರೇಯೋಮಾರ್ಗವು.

ಮಾನುಷ್ಯಮಸುಖಂ ಪ್ರಾಪ್ಯ ಯಃ ಸಜ್ಜತಿ ಸ ಮುಹ್ಯತಿ ।
ನಾಲಂ ಸ ದುಃಖಮೋಕ್ಷಾಯ ಸಂಗೋ ವೈ ದುಃಖಲಕ್ಷಣಃ ॥ ೪೫ ॥

ಸಕ್ತಸ್ಯ ಬುದ್ಧಿರ್ಭವತಿ ಮೋಹಜಾಲವಿವರ್ಧಿನೀ ।
ಮೋಹಜಾಲಾವೃತೋ ದುಃಖಮಿಹಾಮುತ್ರ ತಥಾಶ್ನುತೇ ॥ ೪೬ ॥

ಸರ್ವೋಪಾಯೇನ ಕಾಮಸ್ಯ ಕ್ರೋಧಸ್ಯ ಚ ವಿನಿಗ್ರಹಃ ।
ಕಾರ್ಯಃ ಶ್ರೇಯೋರ್ಥಿನಾಂ ತೌ ಹಿ ಶ್ರೇಯೋಘಾತಾರ್ಥಮುದ್ಯತೌ ॥ ೪೭ ॥

ನಿತ್ಯಂ ಕ್ರೋಧಾತ್ತಪೋ ರಕ್ಷೇಚ್ಛ್ರಿಯಂ ರಕ್ಷೇಚ್ಚ ಮತ್ಸರಾತ್ ।
ವಿದ್ಯಾಂ ಮಾನಾವಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ॥ ೪೮ ॥

೪೫. ಸುಖಪ್ರದವಲ್ಲದ ಮನುಷ್ಯಜನ್ಮವನ್ನು ಹೊಂದಿ ವಿಷಯಾಸಕ್ತನಾಗುವವನು ಮೋಹಿತನಾಗುವನು. ಸಂಗವೇ ದುಃಖಕಾರಕವು ಆದುದರಿಂದ ಸಂಗಿಯಾದವನು ದುಃಖವನ್ನು ಪರಿಹರಿಸಿಕೊಳ್ಳಲಾರನು.

೪೬. ವಿಷಯಾಸಕ್ತನಾದವನಿಗೆ ಮೋಹವೆಂಬ ಬಲೆಯನ್ನು ಅಭಿವೃದ್ಧಿಗೊಳಿಸುವ ಬುದ್ಧಿಯುಂಟಾಗುವುದು. ಮೋಹವೆಂಬ ಬಲೆಯಿಂದ ಕಟ್ಟಲ್ಪಟ್ಟವನು ಈಲೋಕ ಪರಲೋಕಗಳಲ್ಲಿ ದುಃಖವನ್ನು ಹೊಂದುವನು.

೪೭. ಕಾಮಕ್ರೋಧಗಳು ಶ್ರೇಯಸ್ಸನ್ನು ನಾಶಮಾಡುತ್ತವೆಯಾದ ಕಾರಣ ಶ್ರೇಯಸ್ಸನ್ನು ಬಯಸುವವನು ಸರ್ವಪ್ರಯತ್ನದಿಂದಲೂ ಕಾಮಕ್ರೋಧಗಳನ್ನು ನಿಗ್ರಹಿಸಬೇಕು.

೪೮. ಯಾವಾಗಲೂ ಕ್ರೋಧವನ್ನು ಬಿಟ್ಟು ತಪಸ್ಸನ್ನು ರಕ್ಷಿಸಿಕೊಳ್ಳಬೇಕು. ಹಾಗೆಯೇ ಮಾತ್ಸರ್ಯವನ್ನು ಬಿಟ್ಟು ಸಂಪತ್ತನ್ನೂ, ಮಾನಾವಮಾನಗಳನ್ನು ಬಿಟ್ಟು (ಗಣಿಸದೇ) ವಿದ್ಯೆಯನ್ನೂ, ಆಲಸ್ಯವನ್ನು ತ್ಯಜಿಸಿ ಆತ್ಮನನ್ನೂ ರಕ್ಷಿಸಿಕೊಳ್ಳಬೇಕು.

ಆನೃಶಂಸ್ಯಂ ಪರೋಧರ್ಮಃ ಕ್ಷಮಾ ಚ ಪರಮಂ ಬಲಂ ।
ಆತ್ಮಜ್ಞಾನಂ ಪರಂ ಜ್ಞಾನಂ ಸತ್ಯಂ ಹಿ ಪರಮಂ ಹಿತಂ ॥ ೪೯ ॥

ಯೇನ ಸರ್ವಂ ಪರಿತ್ಯಕ್ತಂ ಸವಿದ್ವಾನ್ಸ ಚ ಪಂಡಿತಃ ।
ಇಂದ್ರಿಯೈರಿಂದ್ರಿಯಾರ್ಥಾನ್ಯಶ್ಚರನ್ನಾತ್ಮಾವಶೈರಿಹ ॥ ೫೦ ॥

ಅಸಜ್ಜಮಾನಶಾಂತಾತ್ಮಾ ನಿರ್ವಿಕಾರಸ್ಸಮಾಹಿತಃ ।
ಆತ್ಮಭೂತೈರತದ್ಭೂತೈಃ ಸಹ ಚೈವ ವಿನೈವ ಚ ॥ ೫೧ ॥

ಸ ವಿಮುಕ್ತಃ ಪರಂ ಶ್ರೇಯಃ ನ ಚಿರೇಣಾಧಿಗಚ್ಛತಿ ।
ಅದರ್ಶನಮಸಂಸ್ಪರ್ಶಸ್ತಥೈವಾಭಾಷಣಂ ಸದಾ ॥ ೫೨ ॥

ಯಸ್ಯ ಭೂತೈಃ ಸಹ ಮುನೇ ಸ ಶ್ರೇಯೋ ವಿಂದತೇಮಹತ್ ।
ನ ಹಿಂಸ್ಯಾತ್ಸರ್ವಭೂತಾನಿ ಭೂತೈರ್ಮೈತ್ರಾಯಣಶ್ಚರೇತ್ ॥ ೫೩ ॥

೪೯. ಪರರಿಗೆ ದ್ರೋಹಮಾಡದಿರುವುದು ಉತ್ತಮಧರ್ಮವು. ಸಹನೆಯೇ ಉತ್ಕೃಷ್ಟಬಲವು. ಆತ್ಮತತ್ವಜ್ಞಾನವೇ ಉತ್ತಮಜ್ಞಾನವು. ಸತ್ಯವಚನವೇ ಉತ್ತಮಹಿತವು.

೫೦-೫೨. ವಿಷಯಾಸಕ್ತಿಯಿಲ್ಲದವನೇ ವಿದ್ವಾಂಸನು. ಅವನೇ ಅಪರೋಕ್ಷಜ್ಞಾನಿಯು. ಸ್ವಾಧೀನವಾದ ಇಂದ್ರಿಯಗಳಿಂದ ವಿಷಯುಗಳನ್ನು ಇಲ್ಲಿ ಅನುಭವಿಸುವವನಾದಾಗ್ಯೂ ಅವುಗಳ ಫಲವನ್ನು ಅಪೇಕ್ಷಿಸದೇ ಶಾಂತಸ್ವಭಾವದಿಂದ ಸೀಚೋಚ್ಛತ್ವಾದಿವಿಕಾರರಹಿತನಾಗಿ ಭಗವದ್ಧ್ಯಾನಪರನಾಗಿರುವನು. ಸ್ವರೂಪಭೂತವಲ್ಲದ ಎಂದರೆ ಪ್ರಾಕೃತವಾದ ವಿಷಯಗಳನ್ನು ಬಿಟ್ಟು ನೈಜವಾದವುಗಳನ್ನು ಅನುಭವಿಸುತ್ತಾ ಸಂಸಾರಬಂಧದಿಂದ ಮುಕ್ತನಾಗಿ ಉತ್ತಮಶ್ರೇಯಸ್ಸನ್ನು ಶೀಘ್ರವಾಗಿ ಪಡೆಯುವನು.

೫೨-೫೩. ನಾರದಮುನಿಯೇ! ನಿಷಿದ್ಧವಿಷಯಗಳ ದರ್ಶನ, ಸ್ಪರ್ಶನ ಮತ್ತು ಪ್ರಾಣಿಗಳೊಡನೆ ಮಾತನಾಡುವುದು ಇವುಗಳನ್ನು ಯಾವಾಗಲೂ ಬಿಟ್ಟಿರುವವನು ಉತ್ತಮ ಶ್ರೇಯಸ್ಸನ್ನು ಹೊಂದುವನು. ಯಾವ ಪ್ರಾಣಿಗಳನ್ನೂ ಹಿಂಸಿಸಬಾರದು. ಪ್ರಾಣಿಗಳೊಡನೆ ಸ್ನೇಹದಿಂದ ವರ್ತಿಸಬೇಕು.

ನೇದಂ ಜನ್ಮ ಸಮಾಸಾದ್ಯ ವೈರಂ ಕುರ್ವೀತ ಕೇನಚಿತ್ ।
ಆಕಿಂಚನ್ಯಂ ಸುಸಂತೋಷೋ ನಿರಾಶಿತ್ವಮಚಾಪಲಂ ॥ ೫೪ ॥

ಏತದಾಹುಃ ಪರಂ ಶ್ರೇಯ ಆತ್ಮಜ್ಞಸ್ಯ ಜಿತಾತ್ಮನಃ ।
ಪರಿಗ್ರಹಂ ಪರಿತ್ಯಜ್ಯ ಭವಾಂಸ್ತು ವಿಜಿತೇಂದ್ರಿಯಃ ॥ ೫೫ ॥

ಅಶೋಕಂ ಸ್ಥಾನಮಾತಿಷ್ಠ ಇಹಚಾಮುತ್ರ ಚಾಭಯಂ ।
ನಿರಾಶಿಷೋ ನ ಶೋಚಂತಿ ತ್ಯಜೇದಾಶಿಷಮಾತ್ಮನಃ ॥ ೫೬ ॥

ಪರಿತ್ಯಜ್ಯಾಶಿಷಂ ಸೌಮ್ಯ ದುಃಖಬಂಧಾದ್ವಿಮೋಕ್ಷ್ಯಸೇ ।
ತಪೋನಿಷ್ಠೇನ ದಾಂತೇನ ಮುನಿನಾ ಸಂಯುತಾತ್ಮನಾ ॥ ೫೭ ॥

ಅಜಿತಂ ಜೇತುಕಾಮೇನ ಭಾವ್ಯಂ ಸಂಗೇಷ್ವಸಂಗಿನಾ ।
ಗುಣಸಂಗೇಷ್ವನಾಸಕ್ತ ಏಕಚರ್ಯಾರತಃ ಸದಾ ॥ ೫೮ ॥

೫೪. ಈ ಮನುಷ್ಯಜನ್ಮದಲ್ಲಿ ಯಾರೊಡನೆಯೂ ದ್ವೇಷಮಾಡಬಾರದು. ನಿಗೃಹೀತೇಂದ್ರಿಯನಾದ ಆತ್ಮಜ್ಞಾನಿಗೆ ದಾರಿದ್ರ್ಯ, ಸಂತೋಷ, ಆಶೆಯಿಲ್ಲದಿರುವಿಕೆ ಮತ್ತು ಚಾಪಲ್ಯವಿಲ್ಲದಿರುವುದೂ ಸಹ ಅತ್ಯಂತ ಶ್ರೇಯಸ್ಕರಗಳು.

೫೫-೫೬. ನೀನಾದರೋ ಇಂದ್ರಿಯಗಳನ್ನು ನಿಗ್ರಹಿಸಿ ಪರಿಗ್ರಹವನು ಬಿಟ್ಟು ಈಲೋಕ ಪರಲೋಕಗಳಲ್ಲಿ ಭಯರಹಿತವಾದ, ಶೋಕವಿಲ್ಲದ ಸ್ಥಾನವನ್ನು ಸಂಪಾದಿಸು. ಆಶೆಯಿಲ್ಲದವರಿಗೆ ದುಃಖವಾಗುವುದಿಲ್ಲ. ಆದುದರಿಂದ ಮನಸ್ಸಿನ ಆಶೆಗಳನ್ನು ತ್ಯಜಿಸಬೇಕು.

೫೭-೫೯. ಶಾಂತನೇ! ಆಶೆಯನ್ನು ಬಿಟ್ಟರೆ ದುಃಖವೆಂಬ ಬಂಧನದಿಂದ ಮುಕ್ತನಾಗುವೆ. ಅಜೇಯವಾದ ಕಾಮಾದಿಗಳನ್ನು ಜಯಿಸಬೇಕೆಂದಪೇಕ್ಷಿಸುವವನು ತಪಸ್ಸಿನಲ್ಲಿಯೇ ಆಸಕ್ತನು, ದಮಶಾಲಿಯು, ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವನು, ವಿಷಯಸಂಗವರ್ಜಿತನೂ ಆದ

ಬ್ರಾಹ್ಮಣೋ ನಚಿರಾದೇವ ಸುಖಮಾಯಾತ್ಯನುತ್ತಮಂ ।
ದ್ವಂದ್ವಾರಾಮೇಷು ಭೂತೇಷು ಪರಾಕೋ ರಮತೇಮುನಿಃ ॥ ೫೯ ॥

ಕಿಂಚಿತ್ಪ್ರಾಪ್ಯ ನ ತತ್ಪ್ರಾಪ್ಯ ಜ್ಞಾನತೃಪ್ತೋ ನ ಶೋಚತಿ ।
ಶುಭೈರ್ಲಭೇತ ದೇವತ್ವಂ ವ್ಯಾಮಿಶ್ರೈರ್ಜನ್ಮಮಾನುಷಂ ॥ ೬೦ ॥

ಅಶುಭೈಶ್ಚಾಪ್ಯಧೋಜನ್ಮಕರ್ಮಭಿರ್ಲಭತೇವಶಃ ।
ತತ್ರ ಮೃತ್ಯುಜರಾದುಃಖೈಃ ಸತತಂ ಸಮಭಿದ್ರುತಂ ॥ ೬೧ ॥

ಸಂಸಾರಂ ಪಶ್ಯತೇ ಜಂತುಸ್ತತ್ಕಥಂ ನಾವಬುಧ್ಯಸೇ ।
ಅಹಿತೇ ಹಿತ ಸಂಜ್ಞಸ್ತ್ವ ಮಧ್ರುವೇ ಧ್ರುವಸಂಜ್ಞಕಃ ॥ ೬೨ ॥

ಅನರ್ಥೇವಾರ್ಥ ಸಂಜ್ಞಸ್ತ್ವಂ ಕಿಮರ್ಥಂ ನಾವಬುಧ್ಯಸೇ ।
ಸಂವೇಷ್ಟ್ಯಮಾನಂ ಬಹುಭಿರ್ಮೋಹತಂತುಭಿರಾತ್ಮಜೈಃ ॥ ೬೩ ॥

---

ಮುನಿಯಾಗಬೇಕು. ಕರ್ಮಫಲಗಳನ್ನಾಶಿಸದೇ ಯಾವಾಗಲೂ ಭಗವತ್ಪ್ರೀತ್ಯುದ್ದೇಶದಿಂದ ಕರ್ಮಮಾತ್ರವನ್ನು ಮಾಡುವ ಬ್ರಾಹ್ಮಣನು (ಬ್ರಹ್ಮಜ್ಞಾನಿಯು) ಶೀಘ್ರವಾಗಿ ಶ್ರೇಷ್ಠಸುಖವನ್ನು ಹೊಂದುವನು.

೫೯-೬೦. ಬಹಿರ್ಮುಖನಾದವನು ಸುಖದುಃಖಾದಿದ್ವಂದ್ವಗಳಿಗಾಶ್ರಯವಾದ ಭೌತಿಕ ವಸ್ತುಗಳಿಂದಲೇ ಸಂತೋಷಪಡುವನು. ಪ್ರಾಜ್ಞನಾದ ಮುನಿಯು ಅಂತಹ ಸ್ವಲ್ಪ ಸಂತೋಷವನ್ನು ಹೊಂದುವುದಿಲ್ಲ. ಜ್ಞಾನದಿಂದಲೇ ತೃಪ್ತನಾಗುವನು. ಅವನಿಗೆ ದುಃಖ ಬರುವುದಿಲ್ಲ.

೬೦-೬೧. ಶುಭಕರ್ಮದಿಂದ ದೇವತ್ವವನ್ನೂ, ಶುಭಾಶುಭಮಿಶ್ರಕರ್ಮಗಳಿಂದ ಮನುಷ್ಯಜನ್ಮವನ್ನೂ, ಅಶುಭಕರ್ಮಗಳಿಂದ ನೀಚಜನ್ಮವನ್ನೂ ಪರಾಧೀನವಾಗಿಯೇ ಹೊಂದುವನು.

೬೧-೬೨. ಮನುಷ್ಯಾದಿಜನ್ಮಗಳಲ್ಲಿ ಜೀವನು ಯಾವಾಗಲೂ ಮರಣ, ಮುದಿತನ ಮುಂತಾದವುಗಳ ದುಃಖಗಳಿಂದ ಕೂಡಿದ ಸಂಸಾರವನ್ನನುಭವಿಸುವನು. ಅದನ್ನು ನೀನು ಹೇಗೂ ತಿಳಿಯಲಾರಿ.

೬೨-೬೩. ಅಹಿತವನ್ನು ಹಿತವೆಂದೂ, ಅಸ್ಥಿರವನ್ನು ಸ್ಥಿರವೆಂದೂ, ಅನರ್ಥವನ್ನು ಅರ್ಥವೆಂದೂ ತಿಳಿದಿರುವ ನೀನು ಯಾವ ಶಾಸ್ತ್ರಾರ್ಥವನ್ನೂ ತಿಳಿಯಲಾರಿ.

ಕೋಶಕಾರವದಾತ್ಮಾನಂ ವೇತ್ಸಿ ಕೋ ನಾವಬುಧ್ಯಸೇ ।
ಅಲಂ ಪರಿಗ್ರಹೇಣೇಹ ದೋಷವಾನ್ ಹಿ ಪರಿಗ್ರಹಃ ॥ ೬೪ ॥

ಕೃಮಿರ್ಹಿ ಕೋಶಕಾರಸ್ತು ಬುಧ್ಯತೇ ಸ್ವಪರಿಗ್ರಹಾತ್ ।
ಪುತ್ರದಾರಕುಟುಂಬೇಷು ಸಕ್ತಾಸ್ಸೀದಂತಿ ಜಂತವಃ ॥ ೬೫ ॥

ಸರಃ ಪಂಕಾರ್ಣವೇ ಮಗ್ನಾ ಜೀರ್ಣಾವನಗಜಾ ಇವ ।
ಮೋಹಜಾಲಸಮಾಕೃಷ್ಟಾನ್ಪಶ್ಯ ಜಂತೂನ್ಸುದುಃಖಿತಾನ್ ॥ ೬೬ ॥

ಕುಟುಂಬಂ ಪುತ್ರದಾರಾಂಶ್ಚ ಶರೀರಂ ದ್ರವ್ಯಸಂಚಯಂ ।
ಪಾರಕ್ಯಮಧ್ರುವಂ ಸರ್ವಂ ಕಿಂ ಸ್ವಂ ಸುಕೃತದುಷ್ಕೃತಂ ॥ ೬೭ ॥

ಯದಾ ಸರ್ವಂ ಪರಿತ್ಯಜ್ಯ ಗಂತವ್ಯಮವಶೇನ ವೈ ।
ಅನರ್ಥೇ ಕಿಂ ಪ್ರಸಕ್ತಸ್ತ್ವಂ ಸ್ವಮರ್ಥಂ ನಾನುತಿಷ್ಠಸಿ ॥ ೬೮ ॥

೬೩-೬೪. ಬುದ್ಧಿಕೃತವಾದ ಮೋಹವೆಂಬ ಬಹುತಂತುಗಳಿಂದ ಸುತ್ತ ಕಟ್ಟಲ್ಪಟ್ಟಿರುವ ಆತ್ಮನನ್ನು ಬಂಧಿತವಾದ ಕೋಶಕಾರ ಹುಳ (ಜೇಡರಹುಳ) ದಂತೆ ನೀನು ತಿಳಿದಿಲ್ಲ. ಪರಿಗ್ರಹವು ದೋಷಸಂಪಾದಕವಾದ ಕಾರಣ ಅದು ಇಲ್ಲಿಗೆ ಸಾಕು.

೬೫. ಕೋಶಕಾರ ಕ್ರಿಮಿಯು ತಾನು ಮಾಡಿಕೊಂಡ ಬಲೆಯಿಂದಲೇ ತಾನು ಬಂಧಿಸಲ್ಪಡುವಂತೆ ಮಕ್ಕಳು, ಹೆಂಡತಿ ಮುಂತಾದ ಬಂಧುಗಳಲ್ಲಿ ಅಭಿಮಾನವುಳ್ಳ ಜಂತುಗಳು ಅದರಿಂದಲೇ ನಾಶವಾಗುತ್ತವೆ.

೬೬. ಸರೋವರದ ಕೆಸರಿನಲ್ಲಿ ಸಿಲುಕಿ ಸಂಕಟಪಡುವ ಕಾಡಾನೆಗಳಂತೆ ಮೋಹವೆಂಬ ಬಲೆಯಿಂದ ಸೆಳೆಯಲ್ಪಟ್ಟು ಅತ್ಯಂತ ದುಃಖವನ್ನನುಭವಿಸುತ್ತಿರುವ ಪ್ರಾಣಿಗಳನ್ನು ನೋಡು.

೬೭. ನಂಟರು, ಮಕ್ಕಳು, ಹೆಂಡತಿ, ಶರೀರ, ಸಂಪಾದಿಸಲ್ಪಟ್ಟ ದ್ರವ್ಯ ಇವೆಲ್ಲವೂ ಬಾಹ್ಯಗಳು ಮತ್ತು ಅಶಾಶ್ವತಗಳಲ್ಲವೇ? ಪುಣ್ಯಪಾಪಗಳು ಮಾತ್ರ ತನ್ನನ್ನು ಹಿಂಬಾಲಿಸುವುವು.

೬೮. ನೀನು ಸರ್ವಸ್ವವನ್ನೂ ತೊರೆದು ಅಪಶನಾಗಿ ಲೋಕಾಂತರಕ್ಕೆ ಹೋಗಲೇಬೇಕು- ಹೀಗಿರುವಾಗ ನಿರರ್ಥಕಗಳಾದ ಅವುಗಳಲ್ಲಿ ಆಶೆಯನ್ನೇ ಕಟ್ಟಿರುವೆ? ನಿನ್ನನ್ನು ಉದ್ಧಾರಮಾಡುವಂತಹ ಸುಕೃತವನ್ನು ಏಕೆ ಮಾಡದಿರುವೆ?

ಅವಿಶ್ರಾಂತಮನಾಲಂಬಮಪಾಥೇಯಮದೈಶಿಕಂ ।
ತಮಃ ಕಾಂತಾರಮಧ್ವಾನಂ ಕಥಮೇಕೋ ಗಮಿಷ್ಯಸಿ ॥ ೬೯ ॥

ನ ಹಿ ತ್ವಾ ಪ್ರಸ್ಥಿತಂ ಕಶ್ಚಿತ್ಪೃಷ್ಠತೋಽನು ಗಮಿಷ್ಯತಿ ।
ಸುಕೃತಂ ದುಷ್ಕೃತಂ ಚ ತ್ವಾಂ ಗಚ್ಛಂತಮನುಯಾಸ್ಯತಃ ॥ ೭೦ ॥

ವಿದ್ಯಾ ಕರ್ಮ ಚ ಶೌರ್ಯಂ ಚ ಜ್ಞಾನಂ ಚ ಬಹುವಿಸ್ತರಂ ।
ಅರ್ಥಾರ್ಥಮನುಶೀರ್ಯಂತೇ ಸಿದ್ಧಾರ್ಥಸ್ತು ವಿಮುಚ್ಯತೇ ॥ ೭೧ ॥

ನಿಬಂಧಿನೀ ರಜ್ಜುರೇಷಾ ಯಾ ಗ್ರಾಮಮೇವ ಸತೋ ರತಿಃ ।
ಛಿತ್ವೈನಾಂ ಸುಕೃತಾಯಾಂತಿ ನೈನಾಂ ಛಿಂದಂತಿ ದುಷ್ಕೃತಃ ॥ ೭೨ ॥

೬೯. ವಿಶ್ರಾಂತಿಸ್ಥಾನವಿಲ್ಲದುದು, ಆಶ್ರಯರಹಿತವೂ, ಪಾಥೇಯ (ಮಧ್ಯದಾರಿಯಲ್ಲಿ ಉಪಯೋಗಿಸುವ ಆಹಾರಪದಾರ್ಥ) ವಿಲ್ಲದುದೂ, ತಮಃ ಪೂರ್ಣವೂ ಆದ (ಕಗ್ಗತ್ತಲೆಯಾದ) ದಾರಿಯಲ್ಲಿ ಮಾರ್ಗದರ್ಶಕರಿಲ್ಲದೆ ಏಕಾಕಿಯಾಗಿ ನೀನು ಹೇಗೆ ಸಂಚರಿಸುವೆ?

೭೦. ನೀನು ಮೃತನಾಗಿ ಲೋಕಾಂತರಕ್ಕೆ ಹೋಗುವಾಗ ನಿನ್ನ ಹಿಂದೆ ಯಾವ ಐಹಿಕಸಂಪತ್ತೂ ಬರುವುದಿಲ್ಲ. ಮಾಡಿದ ಪುಣ್ಯಪಾಪಗಳು ಮಾತ್ರ ನಿನ್ನನ್ನನುಸರಿಸಿ ಬರುವುವು.

೭೧. ವಿದ್ಯೆ, ಕರ್ಮ, ಶೌರ್ಯ ಮತ್ತು ಬಹು ವಿಸ್ತೃತವಾದ ಜ್ಞಾನ ಇವು ಪುರುಷಾರ್ಥಕ್ಕೋಸ್ಕರ ಸಂಪಾದಿಸಲ್ಪಡುವುವು. ಸಿದ್ಧಾರ್ಥನು ಮುಕ್ತನಾಗುವನು.

೭೨. ಊರಿನಲ್ಲಿ ವಾಸಮಾಡುವವನ ಕಾಮವೇ ಈ ಸಂಸಾರಬಂಧಕವಾದ ಪಾಶವು. (ಹಗ್ಗ) ಇಂತಹ ಪಾಶವನ್ನು ಪುಣ್ಯವಂತರು ಕತ್ತರಿಸಿಕೊಂಡು ಮುಕ್ತಿಪದಕ್ಕೆ ಹೋಗುತ್ತಾರೆ. ಪಾಪಿಗಳು ಈ ಸಂಸಾರವೆಂಬ ಪಾಶದಿಂದ ಬಿಡಿಸಿಕೊಳ್ಳಲಾರರು.

ತುಲ್ಯಜಾತಿವಯೋ ರೂಪಾನ್ಹೃತಾನ್ಪಶ್ಯಂತಿ ಮೃತ್ಯುನಾ ।
ನ ಚ ನಾಮಾಸ್ತಿ ನಿರ್ವೇದೋ ಲೋಹಂ ಹಿ ಹೃದಯಂ ತವ ॥ ೭೩ ॥

ರೂಪಕೂಲಾಂ ಮನಃ ಸ್ರೋತಾಂ ಸ್ಪರ್ಶದ್ವೀಪಾಂ ರಸಾವಹಾಂ ।
ಗಂಧಪಂಕಾಂ ಶಬ್ದಜಲಾಂ ಸ್ವರ್ಗಮಾರ್ಗದುರಾರುಹಾಂ ॥ ೭೪ ॥

ಕ್ಷಮಾರಿತ್ರಾಂ ಸತ್ಯಮಯೀಂ ಧರ್ಮಸ್ಥೈರ್ಯಕರಾಕರಾಂ
ತ್ಯಾಗವಾತಾಧ್ವಗಾಂ ಶೀಘ್ರಾಂ ಬುದ್ಧಿನಾವಂ ನದೀಂ ತರೇತ್ ॥ ೭೫ ॥

ತ್ಯಕ್ತ್ವಾ ಧರ್ಮಮಧರ್ಮಂ ಚ ಹ್ಯುಭೇಸತ್ಯಾನೃತೇ ತ್ಯಜ ।
ತ್ಯಜ ಧರ್ಮಮಸಂಕಲ್ಪಾದಧರ್ಮಂ ಚಾಪ್ಯಹಿಂಸಯಾ ॥ ೭೬ ॥

೭೩. ಸಮಾನವಾದ ಜಾತಿ, ವಯಸ್ಸು, ರೂಪ ಇವುಗಳುಳ್ಳವರನ್ನು ಮೃತ್ಯುವು ಅಪಹರಿಸುತ್ತಿರುವುದನ್ನು ನೋಡುತ್ತಿದ್ದಾಗ್ಯೂ ನಿನಗೆ ನಿರ್ವೇದ ಅಂದರೆ ವೈರಾಗ್ಯವೆಂಬುದೇ ಹುಟ್ಟಲಿಲ್ಲ. ನಿನ್ನ ಮನಸ್ಸು ಲೋಹದಂತೆ ಕಠಿಣವಾದುದು.

೭೪-೭೫. ರೂಪವೆಂಬ ದಡ, ಮನಸ್ಸೆಂಬ ಹರಿಯುವಿಕೆ, (ಸ್ರವಣ) ಸ್ಪರ್ಶವೆಂಬ ದ್ವೀಪ, ರಸವೆಂಬ ಮೀನು, ಗಂಧವೆಂಬ ಕೆಸರು, ಶಬ್ದವೆಂಬ ನೀರು ಸ್ವರ್ಗದ ದಾರಿಯೆಂಬ ದುರ್ಗವು, ಕ್ಷಮೆಯೆಂಬ ಹುಟ್ಟು (ದೋಣಿಯನ್ನು ನಡೆಸುವ ಕೋಲು) ಇವುಗಳುಳ್ಳ, ಸತ್ಯಮಯವು, ಸ್ಥಿರಧರ್ಮಸಂಪಾದನೆಗೆ ಆಶ್ರಯವು, ತ್ಯಾಗವೆಂಬ ವಾಯುಮಾರ್ಗವುಳ್ಳುದು, ವೇಗವುಳ್ಳದೂ ಆಗಿರುವ ಈ ಸಂಸಾರವೆಂಬ ನದಿಯನ್ನು ಬುದ್ಧಿಯೆಂಬ ದೋಣಿಯಿಂದ ದಾಟಬೇಕು.

೭೬. ಧರ್ಮ ಮತ್ತು ಅಧರ್ಮಗಳನ್ನು ಬಿಟ್ಟು ಸತ್ಯ ಮತ್ತು ಅನೃತ ಎರಡನ್ನೂ ಬಿಡು ಎಂದರೆ ಫಲವನ್ನವೇಕ್ಷಿಸದೆ ನಿಷ್ಕಾಮನಾಗಿ ಧರ್ಮಾನುಷ್ಠಾನ ಮಾಡುವುದೇ ಧರ್ಮತ್ಯಾಗವು. ಯಾರಿಗೂ ಹಿಂಸೆಯುಂಟಾಗುವ ಕರ್ಮವನ್ನು ಬಿಡುವುದೇ ಅಧರ್ಮತ್ಯಾಗವು.

ಉಭೇ ಸತ್ಯಾನೃತೇ ಬುಧ್ವಾ ಬುದ್ಧಿಂ ಪರಮನಿಶ್ಚಯಾತ್ ।
ಅಸ್ಥಿಸ್ಥೂಣಂ ಸ್ನಾಯುಯುತಂ ಮಾಂಸಶೋಣಿತಲೇಪನಂ ॥ ೭೭ ॥

ಧರ್ಮಾವನದ್ಧಂ ದುರ್ಗಂಧಿಂ ಪೂರ್ಣಂ ಮೂತ್ರಪುರೀಷಯೋಃ ।
ಜರಾಶೋಕಸಮಾವಿಷ್ಟಂ ರೋಗಾಯತನಮಸ್ಥಿರಂ ॥ ೭೮ ॥

ರಜಸ್ವಲಮನಿತ್ಯಂ ಚ ಭೂತಾವಾಸಂ ಸಮುತ್ಸೃಜ ।
ಇದಂ ವಿಶ್ವಂ ಜಗತ್ಸರ್ವಮಜಗಚ್ಚಾಪಿ ಯದ್ಭವೇತ್ ॥ ೭೯ ॥

ಮಹಾಭೂತಾತ್ಮಕಂ ಸರ್ವಮಸ್ಮಾದ್ಯತ್ಪರಮಾಣುವತ್ ।
ಇಂದ್ರಿಯಾಣಿ ಚ ಪಂಚೈವ ತಮಃ ಸತ್ವಂ ರಜಸ್ತಥಾ ॥ ೮೦ ॥

ಇತ್ಯೇಷ ಸಪ್ತದಶಕೋ ರಾಶಿರವ್ಯಕ್ತಸಂಜ್ಞಕಃ ।
ಸರ್ವೈರಿಹೇಂದ್ರಿಯಾರ್ಥೈಶ್ಚ ವ್ಯಕ್ತಾವ್ಯಕ್ತೈರ್ಹಿ ಸಂಹಿತಃ ॥ ೮೧ ॥

---

೭೭.೭೯. ಸತ್ಯಾನೃತಗಳೆರಡನ್ನೂ ತಿಳಿದು ಪರತತ್ವನಿರ್ಣಯರೂಪ ಬುದ್ಧಿಯನ್ನು ಹೊಂದಿ, ಮೂಳೆಯೆಂಬ ಕಂಭವುಳ್ಳ, ನರಗಳಿಂದ ಯುಕ್ತವಾದ, ಮಾಂಸ, ರಕ್ತ ಇವುಗಳು ತುಂಬಿರುವ, ಧರ್ಮದಿಂದ ತಡೆಯಲ್ಪಟ್ಟಿರುವ, ದುರ್ವಾಸನೆಯುಳ್ಳ, ಮೂತ್ರಮಲಗಳಿಂದ ಪೂರ್ಣವಾದ ಮುದಿತನದ ದುಃಖದಿಂದ ಕೂಡಿದ, ರೋಗಕ್ಕಾಶ್ರಯವಾದ, ಸ್ಥಿರವಲ್ಲದ, ರಜಸ್ವಲೆಯಾಗುವ, ವಿನಾಶಿಯಾದ ಭೌತಿಕಶರೀರಕ್ಕೆ ಮುಲಸ್ಥಾನವಾದ ಸ್ತ್ರೀ ಶರೀರದಲ್ಲಿ ಮೋಹವನ್ನು ಬಿಡು.

೭೯–೮೧. ಈ ಚರಾಚರ ಜಗತ್ತು ಮಹಾಭೂತಾತ್ಮಕ. ಇದಕ್ಕಿಂತಲೂ ಸೂಕ್ಷ್ಮವಾದ ಚಿತ್ತ, ಅಹಂಕಾರ, ಮನಸ್ಸು, ಬುದ್ಧಿ- ಐದು ಇಂದ್ರಿಯಗಳು. ತಮಸ್ಸು, ರಜಸ್ಸು, ಸತ್ವ ಈರೀತಿ ಹದಿನೇಳರ ಗಣವು ಅವ್ಯಕ್ತನಾಮಕವು.

೮೧–೮೩. ವ್ಯಕ್ತಾವ್ಯಕ್ತಗಳಾದ ಸಕಲ ವಿಷಯಗಳ ಸಹಿತವಾಗಿ ಈ ಇಪ್ಪತ್ತೈದು ತತ್ವಗಳು (ಪ್ರಕೃತಿ, ಮಹತ್ತತ್ವ, ಅಹಂಕಾರತತ್ವ, ಶಬ್ದ, ಸ್ಪರ್ಶ, ರೂಪ, ರಸ ಗಂಧ, ತನ್ಮಾತ್ರಗಳು–ಐದು, ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಪಂಚಭೂತಗಳು, ಘ್ರಾಣ, ರಸನ, ಚಕ್ಷುಸ್ಸು, ತ್ವಕ್ಕು, ಶ್ರೋತ್ರ, ವಾಕ್ಕು

ಪಂಚವಿಂಶಕ ಇತ್ಯೇಷ ವ್ಯಕ್ತಾವ್ಯಕ್ತಮಯೋಗಣಃ ।
ಏತೈಃ ಸರ್ವೈಃ ಸಮಾಯುಕ್ತಮನಿತ್ಯಮಭಿಧೀಯತೇ ॥ ೮೨ ॥

ತ್ರಿವರ್ಗೋಽತ್ರ ಸುಖಂ ದುಃಖಂ ಜೀವಿತಂ ಮರಣಂ ತಥಾ ।
ಯ ಇದಂ ವೇದ ತತ್ತ್ವೇನ ಸ ವೇದ ಪ್ರಭವಾಪ್ಯಯೌ ॥ ೮೩ ॥

ಇಂದ್ರಿಯೈರ್ಗೃಹ್ಯತೇ ಯದ್ಯತ್ತದ್ವ್ಯಕ್ತಮಭಿಧೀಯತೇ ।
ಅವ್ಯಕ್ತಮಥ ತದ್ಜ್ಞೇಯಂ ಲಿಂಗಗ್ರಾಹ್ಯಮತೀಂದ್ರಿಯಂ ॥ ೮೪ ॥

ಇಂದ್ರಿಯೈರ್ನಿಯತೈರ್ದೇಹೀ ಧಾರಾಭಿರಿವ ತರ್ಪ್ಯತೇ ।
ಲೋಕೇ ವಿಹಿತಮಾತ್ಮಾನಂ ಲೋಕಂ ಚಾತ್ಮನಿ ಪಶ್ಯತಿ ॥ ೮೫ ॥

ಪರಾವರದೃಶಃ ಶಕ್ತಿರ್ಜ್ಞಾನಮೂಲಾ ನ ನಶ್ಯತಿ ।
ಪಶ್ಯತಃ ಸರ್ವಭೂತಾನಿ ಸರ್ವಾವಸ್ಥಾಸು ಸರ್ವದಾ ॥ ೮೬ ॥

---

ಪಾಣಿ, ಪಾದ, ಪಾಯು, ಉಪಸ್ಥ ಮತ್ತು ಮನಸ್ಸು ಎಂಬ ಹನ್ನೊಂದು ಇಂದ್ರಿಯಗಳು. ಪುರುಷ, ಒಟ್ಟು ಇಪ್ಪತ್ತೈದು) ವ್ಯಕ್ತಾವ್ಯಕ್ತ ತತ್ತ್ವಗಳೇ ಗಣವು. ಈ ಸಕಲ ಪದಾರ್ಥಗಳಿಂದ ಸಹಿತವಾದುದು ಅನಿತ್ಯವೆನಿಸುವುದು.

೮೩. ಸುಖ, ದುಃಖ, ಜೀವನ (ಬಾಳು) ಮರಣ ಇವೇ ಇಲ್ಲಿ ತ್ರಿವರ್ಗವು. ಇದನ್ನು ಯಥಾವತ್ತಾಗಿ ತಿಳಿಯುವವನೇ ಸೃಷ್ಟಿ ಪ್ರಳಯವನ್ನು ತಿಳಿಯುವವನು.

೮೪. ಇಂದ್ರಿಯಗಳಿಂದ ಗ್ರಹಿಸಲ್ಪಡುವ ವಸ್ತುವಿಗೆ ವ್ಯಕ್ತವೆಂದು ಹೆಸರು. ಲಿಂಗಾದಿಗಳಿಂದ ಗ್ರಹಿಸಬಹುದಾದ ಅತೀಂದ್ರಿಯ ವಸ್ತುವು ಅವ್ಯಕ್ತವೆಂದು ತಿಳಿಯಬೇಕು.

೮೫. ಜೀವನು ಇಂದ್ರಿಯ ನಿಯಮನ ಪೂರ್ವಕವಾಗಿ ಮನಸ್ಸಿನಲ್ಲಿ ಭಗವಂತನನ್ನು ಧರಿಸುವುದರಿಂದ ತೃಪ್ತನಾಗುವನು. ಜ್ಞಾನಿಯು ಲೋಕ, ಆತ್ಮ ಇವುಗಳನ್ನು ಪರಮಾತ್ಮಾಶ್ರಿತಗಳನ್ನಾಗಿ ತಿಳಿಯುವನು.

೮೬. ಯಾವಾಗಲೂ ಸರ್ವಾವಸ್ಥೆಗಳಲ್ಲಿಯೂ ಸಕಲಭೂತಗಳನ್ನೂ ಸಾಕ್ಷಾತ್ತಾಗಿ ನೋಡುತ್ತಿರುವ ಪರಾಪರ ತತ್ತ್ವಜ್ಞಾನಿಯಾದ ಆತ್ಮನ ಜ್ಞಾನ ಮೂಲಕವಾದ ಶಕ್ತಿಯು ನಶಿಸುವುದಿಲ್ಲ.

ಬ್ರಹ್ಮಭೂತಸ್ಯ ಸಂಯೋಗೋ ನಾಶುಭೇನೋಪಪದ್ಯತೇ ।
ಜ್ಞಾನೇನ ವಿವಿಧಾನ್ ಕ್ಲೇಶಾನ್ನ ನತಿವೃತ್ತಶ್ಚ ಮೋಹಜಾನ್ ॥ ೮೭ ॥

ಲೋಕಬುದ್ಧಿ ಪ್ರಕಾಶೇನ ಲೋಕಮಾರ್ಗೋ ನರಿಷ್ಯತಿ ।
ಅನಾದಿನಿಧನಂ ಜಂತುಮಾತ್ಮನಿಸ್ಥಿತಮವ್ಯಯಂ ॥ ೮೮ ॥

ಅಕರ್ತಾರಮಮೂರ್ಧಂ ಚ ಭಗವಾನಾಹ ತೀರ್ಥವಿತ್ ।
ಯೋ ಜಂತುಃ ಸ್ವಕೃತೈಸ್ತೈಸ್ತೈಃ ಕರ್ಮಭಿಃ ನಿತ್ಯದುಃಖಿತಃ ॥ ೮೯ ॥

ಸ ದುಃಖಪ್ರತಿಘಾತಾರ್ಥಂ ಹಂತಿ ಜಂತುರನೇಕಧಾ ।
ತತಃ ಕರ್ಮ ಸಮಾದತ್ತೇ ಪುನರನ್ಯನ್ನವಂ ಬಹು ॥ ೯೦ ॥

ತಪ್ಯತೇಽಥ ಪುನಸ್ತೇನ ಭುಕ್ತ್ವಾಽಪಥ್ಯಮಿವಾತುರಃ ।
ಅಜಸ್ರಮೇವ ಮೋಹಾಂತೋ ದುಃಖೇಷು ಸುಖಸಂಜ್ಞಿತಃ ॥ ೯೧ ॥

೮೭. ಮುಕ್ತನಿಗೆ ಅಶುಭಕರ್ಮಸಂಪರ್ಕವಾಗುವುದಿಲ್ಲ. ಜ್ಞಾನಮಾತ್ರದಿಂದ ಮೋಹಜನಿತವಾದ ನಾನಾವಿಧ ಕ್ಲೇಶಗಳು ಹೋಗುವುವು.

೮೮-೮೯. ಜಗತತ್ತ್ವಜ್ಞಾನಪ್ರಕಾಶದಿಂದ ಪ್ರಾಪಂಚಿಕಮಾರ್ಗವು ಕ್ಷೀಣವಾಗುತ್ತದೆ. ದೇಹದಲ್ಲಿರುವ ಉತ್ಪತ್ತಿ ನಾಶಗಳಿಲ್ಲದ ಆತ್ಮನು ಮೋಹಿತನಾದರೆ ಕರ್ಮಲೇಪವನ್ನು ಕಳೆದುಕೊಳ್ಳುವನೆಂದು ನಾಶರಹಿತನು, ಸರ್ವಜ್ಞನೂ ಆದ ಭಗವಂತನು ಹೇಳಿರುವನು.

೮೯-೯೦. ತಾನು ಮಾಡಿದ ಆಯಾಯಾ ಕರ್ಮಗಳಿಂದ ಯಾವಾಗಲೂ ದುಃಖಪಡುತ್ತಿರುವ ಪ್ರಾಣಿಯು ದುಃಖವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಅನೇಕ ವಿಧವಾದ ಹಿಂಸಾಕೃತ್ಯಗಳನ್ನು ಮಾಡುವನು. ಅದರಿಂದ ಬಹುವಿಧವಾದ ನೂತನ ಕರ್ಮಗಳನ್ನು ಪುನಃಪುನಃ ಮಾಡುತ್ತಿರುವನು.

೯೧. ರೋಗಿಯು ಅಪಥ್ಯಪದಾರ್ಥವನ್ನು ತಿಂದು ದುಃಖಿಸುವಂತೆ ಜೀವನೂ ಸಹ ಹೊಸಹೊಸದಾಗಿ ಮಾಡಿದ ಕರ್ಮಗಳಿಂದ ದುಃಖಗಳನ್ನು ಸುಖವೆಂದು ಭಾವಿಸುತ್ತಾ ಸಂತತವಾಗಿ ಮೋಕ್ಷ ಹೋಗುವವರೆಗೂ ಪುನಃಪುನಃ ದುಃಖಿಸುತ್ತಿರುವನು.

ವಧ್ಯತೇ ತಪ್ಯತೇ ಚೈವ ಭಯವತ್ಕರ್ಮಭಿಃ ಸದಾ ।
ತತೋಽನಿವೃತ್ತೋ ಬಂಧಾತ್ಸ್ವಾತ್ಕರ್ಮಣಾಮುದಯಾದಿಹ ॥ ೯೨ ॥

ಪರಿಭ್ರಮತಿ ಸಂಸಾರೇ ಚಕ್ರವದ್ಬಾಹುವರ್ಜಿತಃ ।
ಸಂಯಮೇನ ಚ ಸಂಬಂಧಾನ್ನಿವೃತ್ಯಾ ತಪಸೋ ಬಲಾತ್ ॥ ೯೩ ॥

ಸಂಪ್ರಾಪ್ತಾ ಬಹವಃ ಸಿದ್ಧಿಮವ್ಯಾಬಾಧಾಂ ಸುಖೋದಯಾಂ ॥ ೯೪ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ದ್ವಿತೀಯಪಾದೇ ಷಷ್ಟಿತಮೋಽಧ್ಯಾಯಃ

೯೨-೯೪. ಭಯಂಕರ ಕರ್ಮಗಳಿಂದ ಯಾವಾಗಲೂ ಹಿಂಸಿಸಲ್ಪಡುತ್ತಾ ದುಃಖಪಡುತ್ತಿರುವನು. ಹೀಗೆ ಅನಂತವಾಗಿ ಕರ್ಮಗಳನ್ನು ಮಾಡುತ್ತಿರುವುದರಿಂದ ಸ್ವಕೀಯವಾದ ಬಂಧಗಳನ್ನು ಹೋಗಲಾಡಿಸಿಕೊಳ್ಳಲಾರದೇ ಈ ಸಂಸಾರದಲ್ಲಿಯೇ ಚಕ್ರದಂತೆ ಬಾಹುಗಳಿಲ್ಲದೇ ತಿರುಗುತ್ತಿರುವನು. ಯೋಗ್ಯರಾದ ಬಹು ಜನರು ಇಂದ್ರಿಯ ನಿಯಮನ ಸಹಿತವಾದ ಬಲಿಷ್ಠ ತಪಸ್ಸು ಮಾಡಿ ಬಂಧವನ್ನು ಪರಿಹರಿಸಿಕೊಂಡು ನಿರಾಬಾಧವೂ, ಸುಖೋದರ್ಕವೂ ಆದ ಸಿದ್ಧಿಯನ್ನು ಪಡೆದಿರುತ್ತಾರೆ.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ
ಎರಡನೆಯ ಪಾದದಲ್ಲಿ ಅರವತ್ತನೆಯ ಅಧ್ಯಾಯವು ಮುಗಿದುದು.



## ಕಥಾಸಂಗ್ರಹ

ಪೈಲ ಮುಂತಾದ ಬ್ರಾಹ್ಮಣರು ಮೇರುಶಿಖರದಿಂದ ಇಳಿದು ಭೂಲೋಕಕ್ಕೆ ಹೊರಟಮೇಲೆ ವ್ಯಾಸರು ಶುಕಕುಮಾರನೊಡನೆ ಸುಮ್ಮನೆ ಧ್ಯಾನಪರರಾಗಿ ಕುಳಿತರು. ಆಗ ಆಶರೀರವಾಣಿಯು ಈ ಪರ್ವತವು ವೇದಘೋಷವಿಲ್ಲದೇ ಶೋಭಿಸುವುದಿಲ್ಲವಾದ ಕಾರಣ ಮಗನಿಂದ ಸಹಿತವಾಗಿ ವೇದಘೋಷಮಾಡಬೇಕೆಂದು ನುಡಿಯಿತು. ಆದನ್ನು ಕೇಳಿ ವ್ಯಾಸನು ಶುಕನೊಡನೆ ಬಹುಕಾಲ ಪರ್ಯಂತವಾಗಿ ವೇದಘೋಷಮಾಡುತ್ತಿರಲು ಬಹು ದೊಡ್ಡದಾದ ಬಿರುಗಾಳಿಯು ಬೀಸಿತು. ಕೂಡಲೇ ವ್ಯಾಸರು ವೇದಘೋಷವನ್ನು ನಿಲ್ಲಿಸಿ ಅನಧ್ಯಾಯವಾದುದರಿಂದ ವೇದವನ್ನು ಅಧ್ಯಯನಮಾಡಬಾರದೆಂದು ಹೇಳಿ ಶುಕನನ್ನು ತಡೆದರು. ಆಗ ಶುಕನು ಕುತೂಹಲದಿಂದ ಇಂತಹ ಗಾಳಿಯು ಏತಕ್ಕಾಗಿ ಬಂದಿತು ? ಹೀಗಾದಾಗ ಅನಧ್ಯಾಯವನ್ನು ಏಕೆ ಅನುಷ್ಠಾನಮಾಡಬೇಕು ? ಎಂದು ತಂದೆಯನ್ನು ಕೇಳಿದನು. ವ್ಯಾಸನು ವಾಯುಮಾರ್ಗಪ್ರಭೇದ ಮುಂತಾದವುಗಳನ್ನು ವಿಸ್ತಾರವಾಗಿ ಉಪದೇಶಿಸಿ ಅನಧ್ಯಾಯನಿಮಿತ್ತವನ್ನು ವಿವರಿಸಿ ಹೇಳಿ ಇನ್ನು ಅಧ್ಯಯನಮಾಡೆಂದು ಆಜ್ಞಾಪಿಸಿ ಸ್ನಾನಕ್ಕಾಗಿ ಆಕಾಶಗಂಗೆಗೆ ಹೊರಟನು. ತಂದೆಯ ಅಪ್ಪಣೆಯ ಮೇರೆಗೆ ಶುಕನು ವೇದಾಧ್ಯಯನವನ್ನು ಮಾಡುತ್ತಿರಲು ಅಲ್ಲಿಗೆ ಬ್ರಹ್ಮಪುತ್ರನಾದ ಸನತ್ಕುಮಾರನು ಬಂದು ಏನು ಮಾಡುತ್ತೀ ಎಂದು ಶುಕನನ್ನು ಕೇಳಿದನು. ಶುಕನು ಎದ್ದು ಅವನನ್ನು ಸತ್ಕರಿಸಿ ವೇದಾಧ್ಯಯನ ಮಾಡುತ್ತಿರುವೆನು- ದೈವಿಕವಾಗಿ ನಿಮ್ಮಂತಹ ಜ್ಞಾನಿಗಳು ಬಂದಿರುವಿರಿ. ನೀವು ದಯೆಮಾಡಿ ಮೋಕ್ಷಸಾಧನವಾದ ಜ್ಞಾನ ಉಂಟಾಗುವ ಪ್ರಕಾರವನ್ನುಪದೇಶಿಸಬೇಕೆಂದು ಪ್ರಾರ್ಥಿಸಲು ಸನತ್ಕುಮಾರರು ಜ್ಞಾನಮಹಿಮೆಯನ್ನು ವರ್ಣಿಸಿ ಮನುಷ್ಯಜನ್ಮದಲ್ಲಿ ಮಾಡಬೇಕಾದ ಜ್ಞಾನಸಾಧನೆಯನ್ನು ವಿಸ್ತಾರವಾಗಿ ನಿರೂಪಿಸಿರುವರು.

## ಏಕಷಷ್ಟಿತಮೋಽಧ್ಯಾಯಃ



ಸನತ್ಕುಮಾರ ಉವಾಚ

ಅಶೋಕಂ ಶೋಕನಾಶಾರ್ಥಂ ಶಾಸ್ತ್ರಂ ಶಾಂತಿಕರಂ ಶಿವಂ ।
ನಿಶಮ್ಯ ಲಭತೇ ಬುದ್ಧಿಂ ಲಬ್ಧ್ವಾಯಾಂ ಸುಖಮೇಧತೇ ॥ ೧ ॥

ಹರ್ಷಸ್ಥಾನಸಹಸ್ರಾಣಿ ಶೋಕಸ್ಥಾನಶತಾನಿ ಚ ।
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಂ ॥ ೨ ॥

ಅನಿಷ್ಟಸಂಪ್ರಯೋಗಾಚ್ಚ ವಿಪ್ರಯೋಗಾತ್ಪ್ರಿಯಸ್ಯ ಚ ।
ಮನುಷ್ಯಾ ಮಾನಸೈರ್ದುಃಖೈರ್ಯುಜ್ಯಂತೇ ಯೇಽಲ್ಪಬುದ್ಧಯಃ ॥ ೩ ॥

## ಅರವತ್ತೊಂದನೆಯ ಅಧ್ಯಾಯವು

೧. ಸುನತ್ಕುಮಾರನು ಹೇಳಿದನು—ದುಃಖವನ್ನು ಪರಿಹರಿಸುವ, ಶಾಂತಿಯನ್ನು ಕೊಡುವ, ಮಂಗಳಪ್ರದವಾದ ಶಾಸ್ತ್ರವನ್ನು ದುಃಖಪರಿಹಾರಾರ್ಥವಾಗಿ ಶ್ರವಣ ಮಾಡಿದರೆ ಜ್ಞಾನವು ಲಭಿಸುತ್ತದೆ. ಅದರಿಂದ ಸುಖಉಂಟಾಗುವುದು.

೨. ಪ್ರತಿದಿವಸದಲ್ಲಿಯೂ ಸಾವಿರಾರು ಸಂತೋಷಕಾರಣಗಳು ಮತ್ತು ನೂರಾರು ದುಃಖಕಾರಣಗಳೂ ಸಹ ಅಜ್ಞನಿಗೆ ಸಂಭವಿಸುತ್ತವೆ. ಅವು ಜ್ಞಾನಿಯಾದವನಿಗೆ ಸಂತೋಷದುಃಖಗಳನ್ನುಂಟುಮಾಡಲಾರವು.

೩. ಅಲ್ಪಜ್ಞರಾದ ಮನುಷ್ಯರು, ಅನಿಷ್ಟಪ್ರಾಪ್ತಿ, ಇಷ್ಟವಿಯೋಗ ಇವುಗಳಿಂದ ಮಾನಸದುಃಖಗಳನ್ನು ಹೊಂದುವರು.

**ದ್ರವ್ಯೇಷು ಸಮತೀತೇಷು ಯೇ ಗುಣಾಂಸ್ತಾನ್ನ ಚಿಂತಯೇತ್ ।**
**ತಾನನಾದ್ರಿಯಮಾಣಶ್ಚ ಸ್ನೇಹಬಂಧಾದ್ವಿಮುಚ್ಯತೇ ॥ ೪ ॥**

**ದೋಷದರ್ಶೀ ಭವೇತ್ತತ್ರ ಯತ್ರರಾಗಃ ಪ್ರವರ್ತತೇ ।**
**ಅನಿಷ್ಟಬುದ್ಧಿತಾಂ ಯಚ್ಛೇತ್ತತಃ ಕ್ಷಿಪ್ರಂ ವಿರಾಜತೇ ॥ ೫ ॥**

**ನಾರ್ಥೋ ನ ಧರ್ಮೋ ನ ಯಶೋ ಯೋತೀತಮನುಶೋಚತಿ ।**
**ಅಸ್ಯ ಭಾವೇನ ಯುಜ್ಯೇತ ತಚ್ಚಾಸ್ಯ ತು ನಿವರ್ತತೇ ॥ ೬ ॥**

**ಗುಣೈರ್ಭೂತಾನಿ ಯುಜ್ಯಂತೇ ತಥೈವ ಚ ನ ಯುಜ್ಯತೇ ।**
**ಸರ್ವಾಣಿ ನೈತದೇಕಸ್ಯ ಶೋಕಸ್ಥಾನಂ ಹಿ ವಿದ್ಯತೇ ॥ ೭ ॥**

**ಮೃತಂ ವಾ ಯದಿ ವಾ ನಷ್ಟಂ ಯೋತೀತಮನುಶೋಚತಿ ।**
**ದುಃಖೇನ ಲಭತೇ ದುಃಖಂ ಮಹಾನರ್ಥೇ ಪ್ರಪದ್ಯತೇ ॥ ೮ ॥**

---

೪. ಕಳೆದುಹೋದ ಪದಾರ್ಥಗಳಲ್ಲಿದ್ದ ಗುಣಗಳನ್ನು ಚಿಂತಿಸದೇ ಅವುಗಳನ್ನು ಉದಾಸೀನ ಮಾಡುವವನು ಅಭಿಮಾನವೆಂಬ ಬಂಧದಿಂದ ಮುಕ್ತನಾಗುವನು.

೫. ಯಾವ ವಿಷಯದಲ್ಲಿ ಇಚ್ಛೆಯುಂಟಾಗುವುದೋ ಅದರಲ್ಲಿ ದೋಷವನ್ನು ಪರಿಶೀಲಿಸಿ ಅವುಗಳನ್ನು ಅನಿಷ್ಟವೆಂದು ತಿಳಿಯಬೇಕು. ಅದರಿಂದಲೇ ಬೇಗ ನೈಜಸ್ವರೂಪವು ಪ್ರಕಾಶಕ್ಕೆ ಬರುತ್ತದೆ.

೬. ಕಳೆದುಹೋದ ವಿಷಯಗಳನ್ನು ಕುರಿತು ದುಃಖಿಸುವವನಿಗೆ ಅರ್ಥವಿಲ್ಲ, ಧರ್ಮವಿಲ್ಲ, ಕೀರ್ತಿಯಿಲ್ಲ. ಆದರೆ ಇವನ ಮನೋಭಿಲಾಷೆಯು ಅತೀತ ವಸ್ತುವಿನ ಕಡೆಗೇ ಹೋಗುತ್ತದೆ. ಅದಾದರೋ ಇವನನ್ನು ದೂರಮಾಡುತ್ತದೆ.

೭. ಸಕಲ ಪ್ರಾಣಿಗಳೂ ಸಾಮಾನ್ಯವಾಗಿ ವಿಷಯಾಸಕ್ತವಾಗುವುವು. ಹಾಗೆ ಆಸಕ್ತನಾಗದೆಯೂ ಒಬ್ಬೊಬ್ಬನಿರುವನು. ಅವನಿಗೆ ದುಃಖವಾಗಲವಕಾಶವಿಲ್ಲ.

೮. ಮರಣದಿಂದ ಅಥವಾ ನಷ್ಟವಾಗುವುದರಿಂದ ಕಳೆದುಹೋದ ವಸ್ತುವಿಗಾಗಿ ದುಃಖಿಸುವವನು ಅದರಿಂದ ದುಃಖವನ್ನು ಹೆಚ್ಚಿಸಿಕೊಂಡು ಮಹತ್ತಾದ ವಿಪತ್ತಿಗೀಡಾಗುವನು.

ದುಃಖೋಪಘಾತೇ ಶಾರೀರೇ ಮಾನಸೇ ಚಾಪ್ಯುಪಸ್ಥಿತೇ ।
ಯಸ್ಮಿನ್ನ ಶಕ್ಯತೇ ಕರ್ತುಂ ಯತ್ನಸ್ತನ್ನಾನುಚಿಂತಯೇತ್ ॥ ೯ ॥

ಭೈಷಜ್ಯಮೇತದ್ದುಃಖಸ್ಯ ಯದೇತನ್ನಾನುಚಿಂತಯೇತ್ ।
ಚಿಂತ್ಯಮಾನಂ ಹಿ ನವ್ಯೇತಿ ಭೂಯಶ್ಚಾಭಿಪ್ರವರ್ಧತೇ ॥ ೧೦ ॥

ಪ್ರಜ್ಞಯಾ ಮಾನಸಂ ದುಃಖಂ ಹನ್ಯಾಚ್ಛಾರೀರಮೌಷಧೈಃ ।
ಏತದ್ವಿಜ್ಞಾಯ ಸಾಮರ್ಥ್ಯಂ ನವಾನ್ಯೈಃ ಸಮತಾಮಿಯಾತ್ ॥ ೧೧ ॥

ಅನಿತ್ಯಂ ಜೀವಿತಂ ರೂಪಂ ಯೌವನಂ ದ್ರವ್ಯಸಂಚಯಃ ।
ಆರೋಗ್ಯಂ ಪ್ರಿಯಸಂವಾಸಂ ನ ಗೃಧ್ಯೇತ್ಪಂಡಿತಃ ಕ್ವಚಿತ್ ॥ ೧೨ ॥

ನಾಜ್ಞಾನಪ್ರಭವಂ ದುಃಖಮೇಕಃ ಶೋಚಿತುಮರ್ಹತಿ ।
ಅಶೋಚನ್ಪ್ರತಿ ಕುರ್ವೀತ ಯದಿಪಶ್ಯೇದುಪಕ್ರಮಂ ॥ ೧೩ ॥

೯. ಕಾಯಕ ಅಥವಾ ಮಾನಸಿಕ ದುಃಖದ ಹೊಡೆತ ಬಂದಾಗ ಪ್ರಯತ್ನಮಾಡಿಯೂ ಯಾವುದನ್ನು ನಿವಾರಿಸಲು ಸಾಧ್ಯವಾಗುವುದಿಲ್ಲವೋ ಅಂತಹುದನ್ನು ಚಿಂತಿಸಬಾರದು.

೧೦. ಚಿಂತೆ ಪಡದಿರುವುದೇ ದುಃಖಕ್ಕೆ ಔಷಧ. ಯೋಚಿಸುತ್ತಾ ಹೋದರೆ ಹೊಸಹೊಸ ದುಃಖವು ಬಹುವಾಗಿ ಅಭಿವೃದ್ಧಿಯಾಗುವುದು.

೧೧. ಮಾನಸಿಕ ದುಃಖವನ್ನು ಸಮೀಚೀನ ಜ್ಞಾನದಿಂದಲೂ, ಶರೀರ ಸಂಬಂಧಿಯಾದ ದುಃಖಗಳನ್ನು ಔಷಧಿಗಳಿಂದಲೂ ಪರಿಹರಿಸಬೇಕು. ಇದೇ ವಿಜ್ಞಾನಶಕ್ತಿಯು. ಇದರ ವಿವೇಚನೆಯಿಂದ ವರ್ತಿಸಬೇಕು. ಅಂತಹವನಿಗೆ ಇತರರು ಸಮರಲ್ಲ.

೧೨. ಜೀವನ, ದ್ರವ್ಯಸಂಗ್ರಹ, ರೂಪ, ಯೌವನ, ಪ್ರಿಯಸಮಾಗಮ, ಆರೋಗ್ಯ ಇವೆಲ್ಲವೂ ಅನಿತ್ಯಗಳೇ ಸರಿ. ಜ್ಞಾನಿಯಾದವನು ಯಾವುದನ್ನೂ ಆಶಿಸಬಾರದು.

೧೩. ಅಜ್ಞಾನದಿಂದ ಬಹು ಜನರು ದುಃಖಪಡುವುದನ್ನು ನೋಡಿ ಒಬ್ಬನು ದುಃಖಿಸುವುದು ಸರಿಯಲ್ಲ. ಇವನು ದುಃಖಿಸದೆ ಅವಕ್ಕೆ ಪ್ರತಿಕ್ರಿಯೆಯನ್ನು ಮಾಡುವುದು ಒಳ್ಳೆಯದು.

ಸುಖಾತ್ಪ್ರಿಯತರಂ ದುಃಖಂ ಜೀವಿತೇ ನಾತ್ರ ಸಂಶಯಃ ।
ಜರಾಮರಣದುಃಖೇಭ್ಯಃ ಪ್ರಿಯಮಾತ್ಮಾನಮುದ್ಧರೇತ್ ॥ ೧೪ ॥

ಭಜಂತಿ ಹಿ ಶರೀರಾಣಿ ರೋಗಾಃ ಶಾರೀರಮಾನಸಾಃ ।
ಸಾಯಕಾ ಇವ ತೀಕ್ಷ್ಣಾಗ್ರಾಃ ಪ್ರಯುಕ್ತಾ ದೃಢಧನ್ವಿಭಿಃ ॥ ೧೫ ॥

ವ್ಯಾಧಿತಸ್ಯ ವಿಧಿತ್ಸಾಭಿಸ್ತ್ರಸ್ತಸ್ಯ ಜೀವಿತೈಷಿಣಃ ।
ಅವಶಸ್ಯ ವಿನಾಶಾಯ ಶರೀರಮಪಕೃಷ್ಯತೇ ॥ ೧೬ ॥

ಸ್ರವಂತಿ ನ ನಿವರ್ತಂತೇ ಸ್ರೋತಾಂಸಿ ಸರಿತಾಮಿವ ।
ಆಯುರಾದಾಯ ಮರ್ತ್ಯಾನಾಂ ರಾತ್ರ್ಯಹಾನಿ ಪುನಃ ಪುನಃ ॥ ೧೭ ॥

ಅಪಯಾತ್ಯಯಮತ್ಯಂತಂ ಪಕ್ಷಯೋಃ ಶುಕ್ಲಕೃಷ್ಣಯೋಃ ।
ಜಾತಂ ಮರ್ತ್ಯಂ ಜರಯತಿ ನಿಮಿಷಂ ನಾವತಿಷ್ಠತೇ ॥ ೧೮ ॥

---

೧೪. ಈ ಜೀವನದಲ್ಲಿ ಸುಖಕ್ಕಿಂತಲೂ ದುಃಖವೇ (ದುಃಖಸಾಧನವಾದುದೇ) ಹೆಚ್ಚು ಪ್ರಿಯವಾಗಿ ತೋರುವುದು. ಇದರಲ್ಲಿ ಸಂದೇಹವಿಲ್ಲ. ಪ್ರಿಯನಾದ ಆತ್ಮನಿಗೆ ಜರಾಮರಣದುಃಖಗಳು ಬಾರದಂತೆ ಯತ್ನಿಸಬೇಕು.

೧೫. ದೃಢವಾದ, ಧನುರ್ಧಾರಿಗಳಿಂದ ಪ್ರಯೋಗಿಸಲ್ಪಟ್ಟ, ತೀಕ್ಷ್ಣವಾದ ಮೊನೆಯುಳ್ಳ ಬಾಣಗಳಂತೆ ಶರೀರ ಮತ್ತು ಮನಃಸಂಬಂಧಿಯಾದ ರೋಗಗಳು ಶರೀರಗಳನ್ನು ಆಶ್ರಯಿಸಿವೆ.

೧೬. ಹಸಿವು, ನೋವು ಇವುಗಳ ಕಷ್ಟಕ್ಕೆ ಸಿಕ್ಕಿ ಯಾವಾಗಲೂ ಭಯಜನಕವಾದ ಈ ಬದುಕಿನಲ್ಲಿ ಅತ್ಯಾಶೆಯುಳ್ಳವನಿಗಾದರೂ ಶರೀರ ಹೋಗೇ ಹೋಗುವುದು; ನಿಲ್ಲುವುದಿಲ್ಲ.

೧೭. ರಾತ್ರಿಹಗಲುಗಳು ನದಿಗಳ ಪ್ರವಾಹಗಳಂತೆ ಮನುಷ್ಯರ ಆಯುಸ್ಸನ್ನು ತೆಗೆದುಕೊಂಡು ಮುಂದೆ ಸಾಗಿ ಹೋಗುತ್ತವೆಯೇ ಹೊರತು ಹಿಂತಿರುಗಿ ಬರುವುದಿಲ್ಲ.

೧೮. ಶುಕ್ಲ ಕೃಷ್ಣಪಕ್ಷಗಳ ಗತಿಯಿಂದ ಈ ಕಾಲವು ವೇಗವಾಗಿ ಓಡುತ್ತಿರುವುದು. ಹುಟ್ಟಿದ ಮನುಷ್ಯನನ್ನು ಮುದುಕನನ್ನಾಗಿ ಮಾಡುವುದು. ಒಂದು ನಿಮಿಷವೂ ನಿಲ್ಲುವುದಿಲ್ಲ.

ಸುಖದುಃಖಾಭಿಭೂತಾನಾಮಜರೋ ಜರಯತ್ಯಸೂನ್ ।
ಆದಿತ್ಯೋ ಹ್ಯಸ್ತಮಭ್ಯೇತಿ ಪುನಃ ಪುನರುದೇತಿ ಚ ॥ ೧೯ ॥

ಅದೃಷ್ಟಪೂರ್ವಾನಾದಾಯ ಭಾವನಾಪರಿಶಂಕಿತಾನ್ ।
ಇಷ್ಟಾನಿಷ್ಟಾನ್ಮನುಷ್ಯಾಣಾಮಸ್ತಂ ಗಚ್ಛಂತಿ ರಾತ್ರಯಃ ॥ ೨೦ ॥

ಯೋ ಯದಿಚ್ಛೇದ್ಯಥಾ ಕಾಮಂ ಕಾಮಾನಾಂ ತತ್ತದಾಪ್ನುಯಾತ್ ।
ಯದಿಸ್ಯಾನ್ನ ಪರಾಧೀನಂ ಪುರುಷಸ್ಯ ಕ್ರಿಯಾಫಲಂ ॥ ೨೧ ॥

ಸಂಯತಾಶ್ಚೈವ ದಕ್ಷಾಶ್ಚ ಮತಿಮಂತಶ್ಚ ಮಾನವಾಃ ।
ದೃಶ್ಯಂತೇ ನಿಷ್ಫಲಾಃ ಸಂತಃ ಪ್ರಹೀನಾಶ್ಚ ಸ್ವಕರ್ಮಭಿಃ ॥ ೨೨ ॥

ಅಪರೇ ನಿಷ್ಫಲಾಸ್ಸಂತೋ ನಿರ್ಗುಣಾಃ ಪುರುಷಾಧಮಾಃ ।
ಆಶಾಭಿರಪ್ಯಸಂಯುಕ್ತಾ ದೃಶ್ಯಂತೇ ಸರ್ವಕಾಮಿನಃ ॥ ೨೩ ॥

೧೯. ಜರೆಯಿಲ್ಲದ ಸೂರ್ಯನು ಪ್ರತಿದಿನವೂ ತನ್ನ ಉದಯಾಸ್ತಗಳಿಂದ ಪ್ರಾಣಿಗಳ ಸುಖದುಃಖಗಳನ್ನು ಪಚನಮಾಡುತ್ತಲೇ ಹೋಗುವನು.

೨೦. ಮನುಷ್ಯರು ಹಿಂದೆ ಅನುಭವಿಸದಿರುವ ಊಹೆಗೂ ವಿಷಯವಲ್ಲದ ಇಷ್ಟಾನಿಷ್ಟಗಳನ್ನು ಸಂಯೋಜನೆಮಾಡುತ್ತಾ ರಾತ್ರಿಗಳು ಓಡುತ್ತಲೇ ಇರುವುವು.

೨೧. ಪುರುಷನು ಪರಾಧೀನನಲ್ಲದಿದ್ದರೆ ಅವನು ಮಾಡುವ ಕರ್ಮಗಳು ಅವನವನ ಇಷ್ಟದಂತೆಯೇ ಆಯಾಯಾ ಫಲಗಳನ್ನೇ ಕೊಡಬೇಕಾದೀತು.

೨೨. ಲೋಕದಲ್ಲಿ ಹಾಗೆ ಅನುಭವವಿಲ್ಲ. ಏಕೆಂದರೆ:— ಪ್ರಯತ್ನಶೀಲರು ಸಮರ್ಥರು, ಬುದ್ಧಿವಂತರೂ ಆದ ಮನುಷ್ಯರು ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಕರ್ಮಗಳನ್ನು ಮಾಡಿದರೂ ಫಲ ಲಭಿಸದಿರುವುದನ್ನು ನೋಡುತ್ತಿದ್ದೇವೆ.

೨೩. ಸಕಲವನ್ನೂ ಅಪೇಕ್ಷಿಸುವ, ಸುಗುಣಗಳಿಲ್ಲದ ಇತರ ನೀಚ ಪುರುಷರು ತಮ್ಮ ಕೋರಿಕೆಗಳೀಡೇರದೆ ಆಶಾಭಂಗವನ್ನು ಹೊಂದಿ ದುಃಖಿಸುತ್ತಿರುವುದೂ ಕಂಡುಬರುತ್ತಿದೆ.

ಭೂತಾನಾಮಪರಃ ಕಶ್ಚಿದ್ಧಿಂಸಾಯಾಂ ಸತತೋತ್ಥಿತಃ ।
ವಂಚನಾಯಾಂ ಚ ಲೋಕಸ್ಯ ಸ ಸುಖೇಷ್ವೇವ ಜೀರ್ಯತೇ ॥ ೨೪ ॥

ಅಚೇಷ್ಟಮಾನಮಾಸೀನಂ ಶ್ರೀಃ ಕಂಚಿದುಪತಿಷ್ಠತೇ ।
ಕಶ್ಚಿತ್ಕರ್ಮಾಣಿ ಕುರುತೇ ನ ಪ್ರಾಪ್ಯಮಧಿಗಚ್ಛತಿ ॥ ೨೫ ॥

ಅಪರಾಧಾನ್ಸಮಾಚಷ್ಟುಃ ಪುರುಷಸ್ಯ ಸ್ವಭಾವತಃ ।
ಶುಕ್ರಮನ್ಯತ್ರ ಸಂಭೂತಂ ಪುನರನ್ಯತ್ರ ಗಚ್ಛತಿ ॥ ೨೬ ॥

ತಸ್ಯ ಯೋನೌ ಪ್ರಸಿಕ್ತಸ್ಯ ಗರ್ಭೋ ಭವತಿ ವಾ ನ ವಾ ।
ಆಮ್ರಪುಷ್ಪೋಪಮಾ ಯಸ್ಯ ನಿವೃತ್ತಿರುಪಲಭ್ಯತೇ ॥ ೨೭ ॥

ತೇಷಾಂ ಚಿತ್ಪುತ್ರಕಾಮಾನಾಮನುಸಂತಾನಮಿಚ್ಛತಾಂ ।
ಸಿದ್ಧಾ ಪ್ರಯತಮಾನಾನಾಂ ನೈವಾಂಡಮುಪಜಾಯತೇ ॥ ೨೮ ॥

೨೪. ಯಾವಾಗಲೂ ಪ್ರಾಣಿಹಿಂಸೆಯನ್ನೂ, ಲೋಕವಂಚನೆಯನ್ನೂ ಮಾಡುತ್ತಿರುವ ಇತರ ಮನುಷ್ಯರು ಸುಖವನ್ನೇ ಅನುಭವಿಸುತ್ತಿರುವುದೂ ದೃಷ್ಟವಾಗಿದೆ.

೨೫. ಕೆಲಸವಮಾಡದೇ ಸುಮ್ಮನೆ ಕುಳಿತಿರುವವರಿಗೂ ಸಹ ಕೆಲವುವೇಳೆ ಬೇಕಾದಷ್ಟು ಸಂಪತ್ತುಗಳು ಒದಗುವುವು. ಕೆಲಸಮಾಡುತ್ತಿರುವವನಿಗೆ ಲಭಿಸಬೇಕಾದ ಫಲವೂ ಸಿಕ್ಕುವದಿಲ್ಲ.

೨೬. ಸ್ವಾಭಾವಿಕವಾಗಿ ತಪ್ಪುಮಾಡುತ್ತಿರುವ ಪುರುಷನೂ ಸಹ ಸುಖಿಯಾಗಿರುವುದೂ ಕಂಡಿದೆ. ಸ್ಥಳಾಂತರದಲ್ಲಿ ಹುಟ್ಟಿದ ವೀರ್ಯವು ಬೇರೆ ಸ್ಥಳದಲ್ಲಿ ಫಲಿಸುವುದು.

೨೭. ಮಾವಿನ ಗಿಡದಲ್ಲಿ ಬಿಟ್ಟ ಹೂಗಳಲ್ಲಿ ಕೆಲವು ಮಾತ್ರ ಫಲಿಸುವುವು. ಅಂತೆಯೇ ಒಂದು ಯೋನಿಯಲ್ಲಿ ವಿಸರ್ಜಿಸಿದ ವೀರ್ಯವು ಫಲವಾಗುವುದೋ ಇಲ್ಲವೋ ನಿಶ್ಚಯಿಸಲಾಗುವುದಿಲ್ಲ.

೨೮. ಪುತ್ರಕಾಮರು, ಸಂತಾನಪರಂಪರೆಯನ್ನು ಬಯಸುವವರೂ ಆದ ಕೆಲವರು ತಮ್ಮ ಇಷ್ಟಾರ್ಥಸಿದ್ಧಿಗಾಗಿ ಪ್ರಯತ್ನಮಾಡುವವರಾದಾಗ್ಯೂ ಅವರಿಗೆ ಮಕ್ಕಳಾಗುವುದಿಲ್ಲ.

ಗರ್ಭಾದುದ್ವಿಜಮಾನಾನಾಂ ಕ್ರುದ್ಧಾದಾಶೀವಿಷಾದಿವ ।
ಆಯುಷ್ಮಾನ್ ಜಾಯತೇ ಪುತ್ರಃ ಕಥಂ ಪ್ರೇತಪಿತೇವ ಸಃ ॥ ೨೯ ॥

ದೇವಾನಿಷ್ಟ್ವಾ ತಪಸ್ತಪ್ತ್ವಾ ಕೃಪಣ್ಯೈಃ ಪುತ್ರಹೇತುಭಿಃ ।
ದಶಮಾಸಾನ್ಪರಿಧೃತಾ ಜಾಯಂತೇ ಕುಲಪಾಂಸನಾಃ ॥ ೩೦ ॥

ಅಪರೇ ಧನಧಾನ್ಯಾನಿ ಭೋಗಾಂಶ್ಚ ಪಿತೃಸಂಚಿತಾನ್ ।
ವಿಮಲಾನಭಿಜಾಯಂತೇ ಲಬ್ಧ್ವಾ ತೈರೇವ ಮಂಗಲೈಃ ॥ ೩೧ ॥

ಅನ್ಯೋನ್ಯಂ ಸಮಭಿಪ್ರೇತ್ಯ ಮೈಥುನಸ್ಯ ಸಮಾಗಮೇ ।
ಉಪದ್ರವ ಇವಾದೃಷ್ಟೋ ಯೋನೌ ಗರ್ಭಃ ಪ್ರಪದ್ಯತೇ ॥ ೩೨ ॥

ಸ್ನಿಗ್ಧತ್ವಾದಿಂದ್ರಿಯಾರ್ಥೇಷು ಮೋಹಾನ್ಮರಣಮಪ್ರಿಯಂ ।
ಪರಿತ್ಯಜತಿ ಯೋ ದುಃಖಂ ಸುಖಮಪ್ಯುಭಯಂ ನರಃ ॥ ೩೩ ॥

೨೯. ಕೋಪಗೊಂಡ ಸರ್ಪದ ದೆಸೆಯಿಂದ ಭಯಪಡುವಂತೆ ಗರ್ಭವಾದೀತೆಂದು ಭಯಪಡುತ್ತಿರುವವರೆಗೂ ಸಹಾ ಸತ್ತ ತಂದೆಯೇ ತಿರುಗಿ ಪುತ್ರನಾಗಿ ಬಂದಂತೆ ಆಯುಷ್ಮಂತನಾದ ಪುತ್ರನು ಹುಟ್ಟುವನು.

೩೦. ಪುತ್ರರನ್ನಾಶಿಸುವವರು ಮಕ್ಕಳಾಗುವುದಕ್ಕಾಗಿ ದೇವತೋದ್ದೇಶ್ಯಕವಾದ ಯಾಗ, ತಪಸ್ಸುಗಳನ್ನು ಮಾಡಿ ಅದರಿಂದ ಗರ್ಭಿಣಿಯಾಗಿ ಹತ್ತು ತಿಂಗಳು ಕಾಲ ಗರ್ಭದಲ್ಲಿ ಧರಿಸಲ್ಪಟ್ಟು ಹುಟ್ಟುವ ಮಕ್ಕಳು ಕುಲಗೇಡಿಗಳಾಗುವರು.

೩೧. ಇತರರು ತಂದೆಯಿಂದ ಸಂಪಾದಿತವಾದ ಧನ, ಧಾನ್ಯ. ಪರಿಶುದ್ಧವಾದ ಭೋಗಗಳು ಇವುಗಳನ್ನು ಪಡೆದು ಅದೇ ಶುಭಗಳೊಡನೆ ಹುಟ್ಟುವರು.

೩೨. ಮೈಥುನಕ್ಕಾಗಿ ಸೇರಿದ ಕಾಲದಲ್ಲಿ ದಂಪತಿಗಳು ಒಮ್ಮನಸ್ಸಿನಿಂದ ಕೂಡಿದಾಗ ಉಪದ್ರವದಂತೆ ಕಾಣದೇ ಯೋನಿಯಲ್ಲಿ ಗರ್ಭ ಸಂಭವಿಸುವುದು.

೩೩-೩೪. ವಿಷಯಗಳಲ್ಲಿ ಮೋಹದಿಂದ ಅಭಿಮಾನಾತಿಶಯವನ್ನು ಮಾಡುವುದರಿಂದ ಪ್ರಿಯವಲ್ಲದ ಮರಣ ಉಂಟಾಗುವುದು. ದುಃಖಸುಖಗಳೆರ

ಅತ್ಯೇತಿ ಬ್ರಹ್ಮಸೋಽತ್ಯಂತಂ ಸುಖಮುಪ್ಯಶ್ನುತೇ ಪರಂ ।
ದುಃಖಮರ್ಥಾ ಹಿ ತ್ಯಜ್ಯಂತೇ ಪಾಲನೇ ಚ ನ ತೇ ಸುಖಾಃ ॥ ೩೪ ॥

ದುಃಖೇನ ಚಾಧಿಗಮ್ಯಂತೇ ನಾಶಮೇಷಾಂ ನ ಚಿಂತಯೇತ್ ।
ಅನ್ಯಾಮನ್ಯಾಂ ಧನಾವಸ್ಥಾಂ ಪ್ರಾಪ್ಯ ವೈಶೇಷಿಕೀಂ ನರಾಃ ॥ ೩೫ ॥

ಅತೃಪ್ತಾ ಯಾಂತಿ ವಿಧ್ವಂಸಂ ಸಂತೋಷಂ ಯಾಂತಿ ಪಂಡಿತಾಃ ।
ಸರ್ವೇ ಕ್ಷಯಾಂತಾನಿಚಯಾಃ ಪತನಾಂತಾಃ ಸಮುಚ್ಛ್ರಯಾಃ ॥ ೩೬ ॥

ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಹಿ ಜೀವಿತಂ ।
ಅಂತೋ ನಾಸ್ತಿ ಪಿಪಾಸಾಯಾಸ್ತುಷ್ಟಿಸ್ತು ಪರಮಂ ಸುಖಂ ॥ ೩೭ ॥

ತಸ್ಮಾತ್ಸಂತೋಷಮೇವೇಹ ಧನಂ ಶಂಸಂತಿ ಪಂಡಿತಾಃ ।
ನಿಮೇಷಮಾತ್ರಮಪಿ ಹಿ ಯೋಽಧಿಗಚ್ಛನ್ನತಿಷ್ಠತಿ ॥ ೩೮ ॥

---

ಡನ್ನೂ ಬಿಡುವ ಮನುಷ್ಯನು ಬ್ರಹ್ಮನನ್ನು ಹೊಂದುವನು. ದುಃಖಸಂಸರ್ಗವಿಲ್ಲದ ಉತ್ತಮ ಸುಖವನ್ನೂ ಅನುಭವಿಸುವನು. ಅರ್ಥಗಳು ಪಾಲನೆಮಾಡುವಾಗ ಸುಖಕರವಲ್ಲವಾದ ಕಾರಣ ದುಃಖದಂತೆ ಅವುಗಳನ್ನೂ ತ್ಯಜಿಸಬೇಕು.

೩೫-೩೭. ಅರ್ಥಗಳ ಸಂಪಾದನೆಯೂ ದುಃಖಕರವು. ಆದಕಾರಣ ಅವು ಹೋಗುತ್ತದೆಂದು ಚಿಂತಿಸಬಾರದು. ಧನಪ್ರಾಪ್ತಿಯಿಂದ ವ್ಯತ್ಯಾಸವಾದ ಬೇರೆಬೇರೆ ಅವಸ್ಥೆಗಳನ್ನು ಹೊಂದಿ ಹಾಗೂ ತೃಪ್ತರಾಗದಿರುವ ಮನುಷ್ಯರು ನಾಶವಾಗುವರು. ಜ್ಞಾನಿಗಳು ತೃಪ್ತರಾಗಿ ಸಂತೋಷವನ್ನು ಹೊಂದುವರು. ಕೂಡಿಟ್ಟುದುದಕ್ಕೆ ನಾಶವೇ ಕೊನೆ. ಏರುವಿಕೆಗೆ ಪತನವೇ ಕೊನೆ. ಸಂಯೋಗಕ್ಕೆ ಅಗಲುವುದೇ ಕೊನೆ. ಜೀವಿತಕ್ಕೆ ಮರಣವೇ ಕೊನೆ. ತೃಷ್ಣೆಗೆ ಕೊನೆಯೇ ಇಲ್ಲ. ತೃಪ್ತಿಯೇ ಪರಮಸುಖ.

೩೮-೪೧. ಆದಕಾರಣ ಪಂಡಿತರು ಸಂತೋಷವನ್ನೇ ಧನವೆಂದು ಹೇಳುವರು. ನಿಮಿಷಮಾತ್ರವಾದರೂ ಅಂತಹ ಸಂತೋಷವನ್ನು ಹೊಂದದೇ ಇರುವವನು ಅಶಾಶ್ವತವಾದ' ಶರೀರಗಳಲ್ಲಿ ಯಾವ ನಿತ್ಯಸುಖವನ್ನು ಹೇಗೆ ಭಾವಿಸಿಯಾನು ? ಪ್ರಾಣಿಗಳಲ್ಲಿ ಅಂತರ್ಗತನಾಗಿರುವ ಪ್ರಕೃತಿಗಿಂತ ಉತ್ತಮ

ಸ ಶರೀರೇಷ್ವನಿತ್ಯೇಷು ನಿತ್ಯಂ ಕಿಮನುಚಿಂತಯೇತ್ ।
ಭೂತೇಷು ಭಾವಂ ಸಂಚಿತ್ಯ ಯೇ ಬುಧ್ವಾ ತಮಸಃ ಪರಂ ॥ ೩೯ ॥

ನ ಶೋಚಂತಿ ಗತಾಧ್ವಾನಃ ಪಶ್ಯಂತಿ ಪರಮಾಂ ಗತಿಂ ।
ಸಂಚಿಂತಯಂತಮೇವೈನಂ ಕುಕಾಮಾನಾವಿತೃಪ್ತಕಂ ॥ ೪೦ ॥

ವ್ಯಾಘ್ರಃ ಪಶುಮಿವಾಸಾದ್ಯ ಮೃತ್ಯುರಾದಾಯ ಗಚ್ಛತಿ ।
ಅಥಾಪ್ಯುಪಾಯಂ ಸಂಪಶ್ಯೇದ್ದುಃಖಸ್ಯಾಸ್ಯ ವಿಮೋಕ್ಷಣೇ ॥ ೪೧ ॥

ಅಶೋಚನ್ನಾರಭೇನ್ನೈವ ಯುಕ್ತಶ್ಚಾವ್ಯಸನೀ ಭವೇತ್ ।
ಶಬ್ದೇ ಸ್ಪರ್ಶೇ ರಸೇ ರೂಪೇ ಗಂಧೇ ಚ ಪರಮಂ ತಥಾ ॥ ೪೨ ॥

ನೋಪಭೋಗಾತ್ಪರಂ ಕಿಂಚಿದ್ಧನಿನೋ ವಾ ಧನಸ್ಯವಾ ।
ವಾಕ್ಯಪ್ರಯೋಗಾದ್ಭೂತಾನಾಂ ನಾಸ್ತಿ ದುಃಖಂ ಪರಾಯಣಂ ॥ ೪೩ ॥

---

ನಾದ ಆತ್ಮನನ್ನು ಧ್ಯಾನಿಸುತ್ತಾ ಕಾಲಕಳೆದವರು ದುಃಖಪಡುವುದಿಲ್ಲ; ಉತ್ತಮಗತಿಯನ್ನು ಹೊಂದುವರು. ಕುತ್ಸಿತವಾದ ಕಾಮಗಳನ್ನೇ ತೃಪ್ತಿಯಿಲ್ಲದೇ ಚಿಂತಿಸುತ್ತಿರುವ ಮನುಜನನ್ನು ಹುಲಿಯು ಪಶುವನ್ನು ತೆಗೆದುಕೊಂಡು ಹೋಗುವಂತೆ ಮೃತ್ಯುವು ತೆಗೆದುಕೊಂಡು ಹೋಗುವುದು. ಆದುದರಿಂದ ಈ ದುಃಖವನ್ನು ಪರಿಹರಿಸಿಕೊಳ್ಳುವುದಕ್ಕೆ ಉಪಾಯವನ್ನು ಪರಿಶೀಲಿಸಿ ತಿಳಿಯಬೇಕು.

೪೨. ದುಃಖಪಡದೇ ಸಾಧನವನ್ನು ಮಾಡಲು ಪ್ರಾರಂಭಿಸಬೇಕು. ಶಬ್ದ, ಸ್ಪರ್ಶ, ರಸ, ರೂಪ, ಗಂಧವೆಂಬ ವಿಷಯಗಳಲ್ಲಿ ಅತ್ಯಂತವಾಗಿ ಆಸಕ್ತನಾದವನು ವ್ಯಸನವನ್ನು ಹೊಂದದಿರಲಾರನು.

೪೩. ಹಣವಂತನಿಗೆ ತನ್ನ ಹಣವನ್ನು ಖರ್ಚುಮಾಡುವುದಕ್ಕಿಂತ ಹೆಚ್ಚಿನ ದುಃಖ ಯಾವುದೂ ಇಲ್ಲ. ಪ್ರಾಣಿಗಳಿಗೆ ಕ್ಲೇಶವನ್ನುಂಟುಮಾಡುವ ಮಾತುಗಳನ್ನಾಡುವುದಕ್ಕಿಂತ ಹೆಚ್ಚಿನ ದುಃಖಸಾಧನವಿಲ್ಲ.

ವಿಪ್ರಯೋಗಶ್ಚ ಸರ್ವಸ್ಯ ನ ವಾಚಾ ನ ಚ ವಿದ್ಯಯಾ ।
ಪ್ರಣಯಂ ಪರಿಸಂಹೃತ್ಯ ಸಂಸ್ತುತೇಷ್ವಿತರೇಷು ಚ ॥ ೪೪ ॥

ವಿಚರೇದಸಮುನ್ನದ್ಧಃ ಸ ಸುಖೀ ಸ ಚ ಪಂಡಿತಃ ।
ಅಧ್ಯಾತ್ಮಗತಮಾಸೀನೋ ನಿರಪೇಕ್ಷೋ ನಿರಾಮಿಷಃ ॥ ೪೫ ॥

ಆತ್ಮನೈವ ಸಹಾಯೇನ ಯಶ್ಚರೇತ್ಸ ಸುಖೀ ಭವೇತ್ ।
ಸುಖದುಃಖವಿಪರ್ಯಾಸೋ ಯದಾ ಸಮುಪಪದ್ಯತೇ ॥ ೪೬ ॥

ನೈನಂ ಪ್ರಜ್ಞಾ ಸುನಿಯತಂ ತ್ರಾಯತೇ ನಾಪಿ ಪೌರುಷಂ ।
ಸ್ವಭಾವಾದ್ಯತ್ನಮಾತಿಷ್ಠೇದ್ಯತ್ನವಾನ್ನಾವಸೀದತಿ ॥ ೪೭ ॥

ಉಪದ್ರವ ಇವಾವಿಷ್ಟೋ ಯೋನಿಂ ಗರ್ಭಃ ಪ್ರಪದ್ಯತೇ ।
ಶೀರ್ಣಂ ಪರಶರೀರಾಣಿ ಛಿನ್ನಬೀಜಂ ಶರೀರಿಣಂ ॥ ೪೮ ॥

---

೪೪-೪೫ ಬಿಟ್ಟಿದ್ದೇನೆ ಎಂಬ ಮಾತಿನಿಂದಾಗಲೀ, ಹಾಗೆ ತಿಳಿಯುವುದರಿಂದಾಗಲೀ ವಿಷಯಗಳನ್ನು ಬಿಟ್ಟಂತಾಗುವುದಿಲ್ಲ. ಪ್ರಾಪ್ತವಾದ ಮತ್ತು ಇತರ ವಿಷಯಗಳಲ್ಲಿಯೂ ಸಹ ಅಭಿಮಾನವನ್ನು ಬಿಟ್ಟು ವಿಕಾರವಿಲ್ಲದೇ ವರ್ತಿಸುತ್ತಿರುವವನೇ ವಿಷಯಪರಿತ್ಯಾಗಿಯು, ಸುಖಿಯು, ಅವನೇ ಜ್ಞಾನಿಯು.

೪೫-೪೬. ಆತ್ಮನಲ್ಲಿಯೇ ಮನಸ್ಸಿಟ್ಟಿರುವವನು, ಆಶೆ ಇಲ್ಲದವನು, ಭೋಗ್ಯವಸ್ತುರಹಿತನೂ ಆಗಿ ಆತ್ಮಪ್ರಸಾದದಿಂದಲೇ ವರ್ತಿಸುತ್ತಿರುವವನು ಸುಖಿಯಾಗುವನು. ಸುಖದುಃಖಗಳಿಗೆ ವ್ಯತ್ಯಾಸವನ್ನು ತಿಳಿದೂ ಸ್ವಾಭಾವಿಕವಾಗಿ ಅದನ್ನೇ ಆಶ್ರಯಿಸುವ ಮನುಷ್ಯನನ್ನು ಆ ಪ್ರಜ್ಞೆಯು ಅಥವಾ ಅವನ ಪುರುಷಾಕಾರವಾದರೂ ಖಂಡಿತವಾಗಿ ಕಾಪಾಡುವುದಿಲ್ಲ. ವಿಷಯಪರಿತ್ಯಾಗಪೂರ್ವಕವಾಗಿ ಸಾಧನಾನುಷ್ಠಾನದಲ್ಲಿ ಪ್ರವರ್ತಿಸುವವನು ದುಃಖಭಾಗಿಯಾಗುವುದಿಲ್ಲ.

೪೭–೪೮. ಸ್ತ್ರೀಯರ ಯೋನಿಯಲ್ಲಿ ಗರ್ಭ ಒಂದು ದೊಡ್ಡ ಉಪದ್ರವದಂತೆ ಬಂದು ಸೇರುವುದು. ದೇಹಿಗೆ ಪ್ರಾಣಗಳು ಬಿಟ್ಟು ಹೋದೊಡನೆ ಅವನಿಗೆ ಆ ಸ್ಥೂಲಶರೀರ ಬಿಟ್ಟುಹೋದರೂ ತಿರುಗಿ ಮಾಂಸಶ್ಲೇಷ್ಮಮಯವಾದ

ಪ್ರಾಣಿನಾಂ ಪ್ರಾಣಸಂರೋಧೇ ಮಾಂಸಶ್ಲೇಷ್ಮವಿಚೇಷ್ಟಿತಂ ।
ನಿರ್ದಗ್ಧಂ ಪರದೇಹೇಽಪಿ ಪರದೇಹಂ ಬಲಾಬಲಂ ॥ ೪೯ ॥

ವಿನಶ್ಯಂತಂ ವಿನಾಶಂತೇ ನಾವಿ ನಾವಮಿವಾಹಿತಂ ।
ಸಂಗತ್ಯಾ ಜಠರೇ ನ್ಯಸ್ತಂ ರೇತೋ ಬಿಂದುಮಚೇತನಂ ॥ ೫೦ ॥

ಕೇನ ಯತ್ನೇನ ಜೀವಂತಂ ಗರ್ಭಂ ತ್ವಮಿಹ ಪಶ್ಯಸಿ ।
ಅನ್ನಪಾನಾನಿ ಜೀರ್ಯಂತೇ ಯತ್ರ ಭಕ್ಷ್ಯಾಶ್ಚ ಭಕ್ಷಿತಾಃ ॥ ೫೧ ॥

ತಸ್ಮಿನ್ನೇವೋದರೇ ಗರ್ಭಃ ಕಿಂ ನಾನ್ನಮಿವ ಜೀರ್ಯತೇ ।
ಗರ್ಭೇ ಮೂತ್ರಪುರೀಷಾಣಾಂ ಸ್ವಭಾವ ನಿಯತಾ ಗತಿಃ ॥ ೫೨ ॥

ಧಾರಣೇ ವಾ ವಿಸರ್ಗೇ ವಾ ನ ಕರ್ತಾ ವಿದ್ಯತೇಽವಶಃ ।
ಸ್ರವಂತಿಹ್ಯುದರಾದ್ಗರ್ಭಾ ಜಾಯಮಾನಾಸ್ತಥಾಪರೇ ॥ ೫೩ ॥

---

ಬೇರೆ ಶರೀರದಲ್ಲಿ ತಾನು ಹಿಂದೆ ಮಾಡಿದ ಕರ್ಮಗಳಿಂದ ಹಿಂಬಾಲಿಸಲ್ಪಡುತ್ತಾ ಅದಕ್ಕನುಸಾರವಾದ ಶರೀರವನ್ನು ಪಡೆಯುವನು. ಆ ದೇಹ ನಶಿಸಿದಮೇಲೆ ಆದರಂತೆಯೇ ನಾಶಸ್ವಭಾವವುಳ್ಳ ಮತ್ತೊಂದು ದೇಹವನ್ನು ಪ್ರವೇಶಿಸುವನು.

೫೦. ಒಂದು ಹಡಗಿನಲ್ಲಿರತಕ್ಕವರನ್ನು ಮತ್ತೊಂದು ಹಡಗಿಗೆ ತಂದಿರಿಸುವಂತೆ ಈ ಶರೀರಿಗೆ ವಾಸಕ್ಕಾಗಿ ಹೊಸಹೊಸದೇಹಗಳು ಬರುತ್ತಲೇ ಇರುವುವು. ಸ್ತ್ರೀಪುರುಷರ ಸಂಯೋಗದಲ್ಲಿ ಪುರುಷಶರೀರದಿಂದ ಸ್ತ್ರೀಗರ್ಭದಲ್ಲಿ ಅಚೇತನದಂತೆ ತೋರುವ ಒಂದು ವೀರ್ಯಬಿಂದು ಇಡಲ್ಪಡುವುದು.

೫೧–೫೨. ಅದಕ್ಕೆ ಯಾರ ಪ್ರಯತ್ನದಿಂದ ಜೀವ ಬರುತ್ತದೆಂಬುದನ್ನು ನೀನು ಬಲ್ಲೆಯಾ? ದೇಹದಲ್ಲಿ ಅನ್ನಪಾನಗಳು ಜೀರ್ಣಿಸುವಕಡೆಯಲ್ಲಿಯೇ ಆಗರ್ಭವೂ ಸೇರುವುದು. ಆದರೂ ಅನ್ನಾದಿಗಳಂತೆ ಅದು ಜೀರ್ಣವಾಗತಕ್ಕುದಲ್ಲ. ಗರ್ಭದಲ್ಲಿ ಮಲಮೂತ್ರಗಳ ಮಧ್ಯದಲ್ಲಿಯೇ ಈ ಗರ್ಭಪಿಂಡವು ಅಲೆದಾಡುತ್ತಿರುವುದು. ಈ ಸ್ಥಿತಿಯು ಅದಕ್ಕೆ ಸಹಜ.

೫೩. ಅಲ್ಲಿರತಕ್ಕ ಪ್ರಾಣಿಯು ಅಲ್ಲಿಯೇ ನೆಲೆಸಿರುವುದಕ್ಕಾಗಲೀ ಅಲ್ಲಿಂದ ಹೊರಗೆ ಬರುವುದಕ್ಕಾಗಲೀ ಸ್ವತಂತ್ರವಲ್ಲ. ಕೆಲವು ಗರ್ಭಗಳು ಉದರದಲ್ಲಿ ಬೆಳೆಯುವುದಕ್ಕೆ ಮೊದಲೇ ಜಾರಿ ಬೀಳುವುವು. ಇನ್ನು ಕೆಲವು ಜೀವದಿಂದ ಹೊರಗೆ ಬೀಳುವುವು.

ಅಮುಯೇನ ತಥಾನ್ಯೇಷಾಂ ವಿನಾಶ ಉಪಪದ್ಯತೇ ।
ಏತಸ್ಮಾದ್ಯೋನಿ ಸಂಬಂಧಾದ್ಯೋ ಜೀವಸ್ಸರಿಮುಚ್ಯತೇ ॥ ೩೪ ॥

ಪ್ರಜಾಂ ಚ ಲಭತೇ ಕಾಂಚಿತ್ಪುನರ್ದ್ವಂದ್ವೇಷು ಮಜ್ಜತಿ ।
ಗರ್ಭಸ್ಯ ಸಹ ಜಾತಸ್ಯ ಸಪ್ತಮೀಮಾದ್ವಶೀಂ ದಶಾಂ ॥ ೩೫ ॥

ಪ್ರಾಪ್ನುವಂತಿ ತತಃ ಪಂಚ ನ ಭವಂತಿ ಶತಾಯುಷಃ ।
ನಾಭ್ಯುತ್ಥಾನೇ ಮನುಷ್ಯಾಣಾಂ ಯೋಗಾಃ ಸ್ಯುರ್ನಾತ್ರಸಂಶಯಃ ॥ ೩೬ ॥

ವ್ಯಾಧಿಭಿಶ್ಚ ವಿವಥ್ಯಂತೇ ವ್ಯಾಘ್ರೈಃ ಕ್ಷುದ್ರಮೃಗಾ ಇವ ।
ವ್ಯಾಧಿಭಿರ್ಭಕ್ಷ್ಯಮಾಣಾನಾಂ ತ್ಯಜತಾಂ ವಿಪುಲಂ ಧನಂ ॥ ೩೭ ॥

ವೇದಾನಾಂ ನಾಪಕರ್ಷಂತಿ ಯತಮಾನಾಶ್ಚಿಕಿತ್ಸಕಾಃ ॥ ೩೮ ॥

೩೪-೩೫. ಇನ್ನು ಕೆಲವು ರೋಗದಿಂದ ನಾಶವಾಗುವುವು. ಹೀಗೆ ಜೀವನು ಹುಟ್ಟಿದಮೇಲೆ ವಯಸ್ಸು ಬಂದಾಗ ಮಿಥುನ ಕರ್ಮದಲ್ಲಿ ಪ್ರಸಕ್ತನಾಗಿ ಮಕ್ಕಳನ್ನು ಪಡೆಯುವನು.

೩೫-೩೬. ಆಯುಸ್ಸು ಮುಗಿದಮೇಲೆ ಅದುವರೆಗೆ ಅವನಸಂಗಡಲೇ ಇದ್ದ ಪಂಚಭೂತಗಳು ಅವನ ದೇಹದೊಡನೆಯೇ ಏಳನೆಯ ದೆಶೆಯಾದ ಮುಪ್ಪನ್ನೂ ಒಂಭತ್ತನೆಯ ದೆಶೆಯಾದ ಪ್ರಾಣರೋಧವನ್ನೂ ಹೊಂದಿ ಅಗಲಿಹೋಗುವುವು.

೩೬. ಮನುಷ್ಯರಿಗೆ ನೂರು ವರ್ಷಗಳಿಗಿಂತ ಹೆಚ್ಚಾಗಿ ಆಯುಸ್ಸು ಅಭಿವೃದ್ಧಿಯಾಗುವ ಯೋಗಗಳಿರುವುದಿಲ್ಲ. ಈ ವಿಷಯದಲ್ಲಿ ಸಂದೇಹವಿಲ್ಲ.

೩೭-೩೮. ಹುಲಿಯು ಕ್ಷುದ್ರಮೃಗಗಳನ್ನು ಕೊಲ್ಲುವಂತೆ ರೋಗಗಳು ಮನುಷ್ಯರನ್ನು ಹಿಂಸಿಸುತ್ತವೆ. ರೋಗಗಳಿಂದ ಹಿಂಸೆ ಪಡುತ್ತಾ ಅದನ್ನು ಪರಿಹರಿಸಿಕೊಳ್ಳಲು ಅಧಿಕವಾಗಿ ಹಣವನ್ನು ಖರ್ಚುಮಾಡುವರು. ಇವರಿಂದ ಹಣವನ್ನು ತೆಗೆದುಕೊಂಡ ವೈದ್ಯರು ಆ ರೋಗವನ್ನು ಪರಿಹರಿಸುವುದಕ್ಕೆ ಎಷ್ಟು ಯತ್ನ ಮಾಡಿದರೂ ಅದನ್ನು ಪರಿಹರಿಸಲಾರರು.

ತೇ ಚಾಪಿ ವಿವಿಧಾ ವೈದ್ಯಾಃ ಕುಶಲಾಃ ಸಮ್ಯಗೌಷಧಾಃ ।
ವ್ಯಾಧಿಭಿಃ ಪರಿಕೃಷ್ಯಂತೇ ಮೃಗಾವ್ಯಾಘ್ರೈರಿವಾರ್ದಿತಾಃ ॥ ೫೯ ॥

ತೇ ಪಿಬಂತಿ ಕಷಾಯಾಂಶ್ಚ ಸರ್ಪೀಂಷಿ ವಿವಿಧಾನಿ ಚ ।
ದೃಶ್ಯಂತೇ ಜರಯಾ ಭಗ್ನಾ ನಗಾ ನಾಗೈರಿವೋತ್ತಮಾಃ ॥ ೬೦ ॥

ಕೈರ್ವಾ ಭುವಿ ಚಿಕಿತ್ಸ್ಯಂತೇ ರೋಗಾರ್ತಾ ಮೃಗಪಕ್ಷಿಣಃ ।
ಶ್ವಾಪದಾಶ್ಚ ದರಿದ್ರಾಶ್ಚ ಪ್ರಾಯೋನಾರ್ತಾ ಭವಂತಿ ತೇ ॥ ೬೧ ॥

ಘೋರಾನಪಿ ದುರಾಧರ್ಷಾನ್ನೃಪತೀನುಗ್ರತೇಜಸಃ ।
ಆಕ್ರಮ್ಯ ರೋಗ ಆದತ್ತೇ ಪಶೂನ್ಪಶುಪಚೋ ಯಥಾ ॥ ೬೨ ॥

ಇತಿ ಲೋಕಮನಾಕ್ರಂದಂ ಮೋಹ ಶೋಕ ಪರಿಪ್ಲುತಂ ।
ಸ್ರೋತಸಾ ಮಹತಾ ಕ್ಷಿಪ್ರಂ ಹ್ರೀಯಮಾಣಂ ಬಲೀಯಸಾ ॥ ೬೩ ॥

೫೯. ಕುಶಲರು, ಸಮ್ಯಕ್ತವಾದ ಔಷಧವುಳ್ಳವರೂ ಆಗಿರುವ ಆ ನಾನಾ ವಿಧವೈದ್ಯರೂ ಸಹ ಹುಲಿಗಳಿಂದ ಮೃಗಗಳು ಪೀಡಿಸಲ್ಪಡುವಂತೆ ರೋಗಗಳಿಂದ ಪೀಡಿತರಾಗಿರುವರು.

೬೦. ಆ ರೋಗಿಗಳು ಅನೇಕ ವಿಧವಾದ ಘೃತಕಷಾಯಗಳನ್ನು ಪಾನಮಾಡುವರು. ಆದಾಗ್ಯೂ ಆನೆಗಳಿಂದ ಭಗ್ನವಾದ ವೃಕ್ಷಗಳಂತೆ ಮುದಿತನದಿಂದ ಕುಗ್ಗಿಹೋಗುವರು.

೬೧. ರೋಗದಿಂದ ನರಳುತ್ತಿರುವ ಮೃಗಪಕ್ಷಿಗಳಿಗೆ ಯಾರು ಚಿಕಿತ್ಸೆ ಮಾಡುವರು ? ತಿನ್ನುವುದಕ್ಕಿಲ್ಲದ ಬಡವರಿಗೆ ಪ್ರಾಯಶಃ ರೋಗ ಬರುವುದಿಲ್ಲ.

೬೨. ಘೋರರು, ಸಹಿಸಲಶಕ್ತರು, ಭಯಂಕರ ತೇಜಸ್ಸುಳ್ಳವರೂ ಆಗಿರುವ ದೊರೆಗಳನ್ನೂ ಸಹ ರೋಗವು ಆಕ್ರಮಿಸಿ ಪಶುಗಳನ್ನು ತಿನ್ನುವವರು ಪಶುಗಳನ್ನು ಹಿಡಿಯುವಂತೆ ಹಿಂಸಿಸುವುದು.

೬೩-೬೪. ಈಪ್ರಕಾರ ಬಲಿಷ್ಠವಾದ ದುಷ್ಕರ್ಮಪರಂಪರೆಯಿಂದ ಜ್ಞಾನವು ಅಪಹರಿಸಲ್ಪಟ್ಟು ಮೋಹಶೋಕಗಳಲ್ಲಿ ಮುಳುಗಿರುವ ರಕ್ಷಕರಿಲ್ಲದ ಜನರನ್ನು

ನ ಧನೇನ ನ ರಾಜ್ಯೇನ ನೋಗ್ರೇಣ ತಪಸಾ ತಥಾ ।
ಸ್ವಭಾವಾತ್ಯತಿ ವರ್ತಂತೇ ಯೇ ನಿರ್ಮುಕ್ತಾಃ ಶರೀರಿಷು ॥ ೩೪ ॥

ಉಪರ್ಯುಪರಿ ಲೋಕಸ್ಯ ಸರ್ವೋ ಭವಿತುಮಿಚ್ಛತಿ ।
ಯತತೇ ಚ ಯಥಾಶಕ್ತಿ ನ ಚ ತದ್ವರ್ತತೇ ತಥಾ ॥ ೩೫ ॥

ನ ಮ್ರಿಯೇರನ್ನ ಜೀರ್ಯೇರನ್ ಸರ್ವೇ ಸ್ಯುಃ ಸಾರ್ವಕಾಮಿಕಾಃ ।
ನಾಪ್ರಿಯಂ ಪ್ರತಿಪದ್ಯೇರನ್ನುತ್ಥಾನಸ್ಯ ಫಲಂ ಪ್ರತಿ ॥ ೩೬ ॥

ಐಶ್ವರ್ಯಮದಮತ್ತಾಂಶ್ಚ ಮತ್ತಾನ್ಮದ್ಯಮದೇನ ಚ ।
ಅಪ್ರಮತ್ತಾಶ್ಚ ಶೂರಾಶ್ಚ ವಿಕ್ರಾಂತಾಃ ಪರ್ಯುಪಾಸತೇ ॥ ೩೭ ॥

ಶೋಕಾಃ ಪ್ರತಿನಿವರ್ತಂತೇ ಕೇಷಾಂಚಿದಸಮೀಕ್ಷತಾಂ ।
ಸ್ವಂ ಸ್ವಂ ಚ ಪುನರನ್ಯೇಷಾಂ ನಕಿಂಚಿದಧಿಗಚ್ಛತಿ ॥ ೩೮ ॥

---

ಧನ, ರಾಜ್ಯ ಮತ್ತು ಕಠಿಣವಾದ ತಪಸ್ಸು ಇವುಗಳು ಕಾಪಾಡಲಾರವು. ಮುಕ್ತರಾದವರು ಇಂತಹ ಅವಸ್ಥೆಯನ್ನು ಅತಿಕ್ರಮಿಸಿರುವರು.

೩೫. ಜಗತ್ತಿನಲ್ಲಿ ಎಲ್ಲರೂ ಮೇಲುಮೇಲಾಗಲಿಚ್ಛಿಸುವರು. ತಂತಮ್ಮ ಶಕ್ತ್ಯನುಸಾರ ಪ್ರಯತ್ನವನ್ನೂ ಮಾಡುವರು. ಆದಾಗ್ಯೂ ಅವರವರ ಇಚ್ಛಾನುಸಾರವಾಗಿ ಫಲವಾಗುವುದಿಲ್ಲ

೩೬. ಸಾಯಬಾರದು, ಮುದುಕರಾಗಬಾರದು, ಅನಿಷ್ಟವುಂಟಾಗಬಾರದು ಎಂಬುದಾಗಿ ಪ್ರತಿಯೊಬ್ಬನೂ ಅಭಿವೃದ್ಧಿಯನ್ನೇ ಬಯಸುವನು. ಆದರಂತೆ ಫಲಮಾತ್ರ ಹೊಂದಲಾರನು.

೩೭. ಐಶ್ವರ್ಯಮದ ಮತ್ತು ಮದ್ಯಪಾನಮದಗಳಿಂದ ಸೊಕ್ಕಿದ ಅಲ್ಪಜನರನ್ನೂ ಸಹ ಜಾಗರೂಕರು, ಶೂರರೂ, ಪರಾಕ್ರಮಿಗಳೂ ಆಗಿರುವವರೂ ಸಹ ಉಪಾಸನೆಮಾಡುವರು.

೩೮. ಸಮೀಚೀನಜ್ಞಾನಿಗಳಲ್ಲದ ಕೆಲವರಿಗೆ ದುಃಖಗಳೇ ಬರುತ್ತಿರುವುವು. ಇತರರಿಗಾದರೋ ಶೋಕಗಳು ಸ್ವಲ್ಪವೂ ಕಾಣುವುದಿಲ್ಲ.

ಮಹಚ್ಚ ಫಲವೈಷಮ್ಯಂ ದೃಶ್ಯತೇ ಕರ್ಮಸಿದ್ಧಿಷು ।
ವಹಂತಿ ಶಿಬಿಕಾಮನ್ಯೇ ಯಾಂತ್ಯನ್ಯೇ.ಶಿಬಿಕಾರುಹಾಃ ॥ ೬೯ ॥

ಸರ್ವೇಷಾಮೃದ್ಧಿಕಾಮಾನಃ ಮನೋರಥಪುರಸ್ಸರಾಃ ।
ಮನುಜಾಶ್ಚ ಗತಶ್ರೀಕಾಃ ಶತಶೋ ವಿವಿಧಾಃ ಸ್ತ್ರಿಯಃ ॥ ೭೦ ॥

ದ್ವಂದ್ವಾರಾಮೇಷು ಭೂತೇಷು ಗಚ್ಛಂತ್ಯೇಕೈಕಶೋ ನರಾಃ ।
ಇದಮನ್ಯತ್ಪರಂ ಪಶ್ಯ ನಾತ್ರಮೋಹಂ ಕರಿಷ್ಯಸಿ ॥ ೭೧ ॥

ಧರ್ಮಂ ಚಾಪಿ ತ್ಯಜಾಧರ್ಮಂ ತ್ಯಜ ಸತ್ಯಾನೃತೇ ಉಭೇ ।
ಸರ್ವಂ ತ್ಯಕ್ತ್ವಾ ಸ್ವರೂಪಸ್ಥಃ ಸುಖೀಭವ ನಿರಾಮಯಃ ॥ ೭೨ ॥

ಏತತ್ತೇ ಪರಮಂ ಗುಹ್ಯಮಾಖ್ಯಾತಮೃಷಿಸತ್ತಮ ।
ಯೇನ ದೇವಾಃ ಪರಿತ್ಯಜ್ಯ ಮರ್ತ್ಯಲೋಕಂ ದಿವಂ ಗತಾಃ ॥ ೭೩ ॥

೬೯. ಕೆಲವರು ಪಲ್ಲಕ್ಕಿಯನ್ನು ಹೊರುವರು. ಇತರರು ಪಲ್ಲಕಿಯಲ್ಲಿ ಕುಳಿತು ಹೋಗುವರು. ಹೀಗೆ ಕರ್ಮಫಲಗಳಲ್ಲಿ ಮಹಾವ್ಯತ್ಯಾಸವು ಕಂಡು ಬರುತ್ತದೆ.

೭೦. ಸಂಪತ್ತನ್ನು ಬಯಸುವರೆಲ್ಲರಿಗೂ ಮನೋಭಿಲಾಷೆಯೇ ಮುಂದೆ ನಿಲ್ಲುವುದು. ಪುರುಷರೂ ನಾನಾ ವಿಧವಾದ ನೂರಾರು ಸ್ತ್ರೀಯರೂ ಸಹ ಸಂಪತ್ತನ್ನು ಕಳೆದುಕೊಂಡಿರುವರು.

೭೧. ಪ್ರತಿಯೊಬ್ಬ ಮನುಷ್ಯನಿಗೂ ಸುಖದುಃಖಾದಿಗಳು ಬರುತ್ತಲೇ ಇರುವುವು. ಆದಕಾರಣ ಇನ್ನೊಂದು ಉತ್ತಮವಾದ ಧರ್ಮವನ್ನು ಸಾಕ್ಷಾತ್ಕರಿಸು. ಇಲ್ಲಿ ಮೋಹ ಪಡಬೇಡ.

೭೨. ಧರ್ಮಫಲ, ಅಧರ್ಮ, ಸತ್ಯಾನೃತಮಿಶ್ರವಾದ ಜ್ಞಾನ ಇವುಗಳನ್ನು ಬಿಡು. ಹೀಗೆ ಸರ್ವವನ್ನೂ ಬಿಟ್ಟು ದೋಷರಹಿತನಾಗಿ ಸ್ವರೂಪಾನುಭವವನ್ನು ಹೊಂದಿ ಸುಖವಾಗಿರು.

೭೩. ಋಷಿವರ್ಯನೇ ! ಯಾವ ಜ್ಞಾನದಿಂದ ದೇವತೆಗಳು ಭೂಲೋಕವನ್ನು ಬಿಟ್ಟು ಸ್ವರ್ಗಕ್ಕೆ ಹೋದರೋ ಅಂತಹ ಈ ತತ್ವರಹಸ್ಯವನ್ನು ನಿನಗೋಸ್ಕರ ಹೇಳಿರುವೆನು.

ಸನಂದನ ಉವಾಚ

ಇತ್ಯುಕ್ತ್ವಾ ವ್ಯಾಸತನಯಂ ಸಮಾಪೃಚ್ಛ್ಯ ಮಹಾಮುನಿಃ ।
ಸನತ್ಕುಮಾರಃ ಪ್ರಯಯೌ ಪೂಜಿತಸ್ತೇನ ಸಾದರಂ ॥ ೭೪ ॥

ಶುಕೋಽಪಿ ಯೋಗಿನಾಂ ಶ್ರೇಷ್ಠಃ ಸಮ್ಯಜ್ಜ್ಞಾತ್ವಾ ಹ್ಯವಸ್ಥಿತಿಂ ।
ಬ್ರಹ್ಮಣಃ ಪದಮನ್ವೇಷ್ಟುಮುತ್ಸುಕಃ ಪಿತರಂ ಯಯೌ ॥ ೭೫ ॥

ಪಿತುಃ ಸಮೀಪಮಾಗತ್ಯ ಪ್ರಣಮ್ಯ ಚ ಮಹಾಮುನಿಃ ।
ಶುಕಃ ಪ್ರದಕ್ಷಿಣೀಕೃತ್ಯ ಯಯೌ ಕೈಲಾಸಪರ್ವತಂ ॥ ೭೬ ॥

ವ್ಯಾಸಸ್ತದ್ವಿರಹಾದ್ದೀನಃ ಪುತ್ರಸ್ನೇಹಸಮಾವೃತಃ ।
ಕ್ಷಣೈಕಂ ಸ್ಥೀಯತಾಂ ಪುತ್ರ ಇತಿ ಚುಕ್ರೋಶ ದುರ್ಮನಾಃ ॥ ೭೭ ॥

೭೪. ಸನಂದನನು ಹೇಳಿದನು.—ಸನತ್ಕುಮಾರಮಹಾಮುನಿಯು ವ್ಯಾಸಪುತ್ರನಾದ ಶುಕನಿಗೆ ಈರೀತಿಯಾಗಿ ಹೇಳಿ ಅವನಿಂದ ಭಕ್ತಿಪೂರ್ವಕವಾಗಿ ಪೂಜಿಸಲ್ಪಟ್ಟು ಅಲ್ಲಿಂದ ಪ್ರಯಾಣ ಮಾಡಿದನು.

೭೫. ಯೋಗಿಪ್ರವರನಾದ ಶುಕನೂ ಸಹ ಸಂಸಾರದ ಸ್ಥಿತಿಯನ್ನು ಚೆನ್ನಾಗಿ ತಿಳಿದುಕೊಂಡು ಪರಬ್ರಹ್ಮಸ್ವರೂಪವನ್ನು ಅನ್ವೇಷಣಮಾಡಲು ಉತ್ಸಾಹಯುಕ್ತನಾಗಿ ತಂದೆಯಬಳಿಗೆ ಹೋದನು.

೭೬. ಶುಕಮಹಾಮುನಿಯು ತಂದೆಯ ಸಮೀಪಕ್ಕೆ ಬಂದು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಅಲ್ಲಿಂದ ಕೈಲಾಸಪರ್ವತಕ್ಕೆ ಹೊರಟನು.

೭೭. ಮಗನಲ್ಲಿ ಅಭಿಮಾನಯುಕ್ತನಾದ ವ್ಯಾಸನು ಮಗನ ವಿಯೋಗದಿಂದ ದುಃಖಿತನಾಗಿ ಮಗನೇ! ಒಂದು ಕ್ಷಣವಾದರೂ ನಿಲ್ಲು ಎಂಬುದಾಗಿ ಕೂಗಿದನು.

ನಿರಪೇಕ್ಷಃ ಶುಕೋ ಭೂತ್ವಾ ನಿಃಸ್ನೇಹೋಮುಕ್ತಬಂಧನಃ ।
ಮೋಕ್ಷಮೇವಾನುಸಂಚಿಂತ್ಯ ಗತಏವ ಪರಂ ಪದಂ ॥ ೭೮ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ದ್ವಿತೀಯಪಾದೇ ಏಕಷಷ್ಟಿತಮೋಽಧ್ಯಾಯಃ

೭೮. ಬಂಧದಿಂದ ಬಿಡುಗಡೆಯಾದ ಶುಕನು ನಿಸ್ಪೃಹನು, ಅಭಿಮಾನ ರಹಿತನೂ ಆಗಿ ಉತ್ತಮಪದವಾದ ಮೋಕ್ಷವನ್ನೇ ಚಿಂತಿಸುತ್ತಾ ಹೊರಟನು.

ಇಂತು ಶ್ರೀನಾರದೀಯ ಮಹಾಪುರಾಣದಲ್ಲಿ ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಎರಡನೆಯ ಪಾದದಲ್ಲಿ ಅರವತ್ತೊಂದನೆಯ ಅಧ್ಯಾಯವು
ಮುಗಿದುದು.

---

## ಕಥಾಸಂಗ್ರಹ

ಪ್ರಾಣಿಗಳಿಗೆ ಸಂಸಾರಕಾಲದಲ್ಲಿ ಸಂಭವಿಸುವ ಅನೇಕ ವಿಧವಾದ, ತತ್ಕಾಲದಲ್ಲಿ ಸುಖದಂತೆ ತೋರುವ, ದುಃಖಕರವಾದ ಅನುಭವಗಳನ್ನು ವಿಸ್ತಾರವಾಗಿ ನಿರೂಪಣೆಮಾಡಿ ಅದಕ್ಕೆಲ್ಲಾ ಕಾಮ್ಯಕರ್ಮವೇ ಮೂಲವೆಂದು ನಿರೂಪಿಸಿ ಅಭಿಮಾನ ತ್ಯಾಗ ಪೂರ್ವಕವಾಗಿ ಫಲಾಶೆಯಿಲ್ಲದೆ ಕೇವಲ ಭಗವಂತನಿಗೆ ಪ್ರೀತಿಯಾಗಲೆಂಬ ಸಂಕಲ್ಪದಿಂದ ಕರ್ಮವನ್ನು ಆಚರಿಸಬೇಕು. ಇದೇ ನಿವೃತ್ತ ಧರ್ಮವು. ಅದರಿಂದಲೇ ಮೋಕ್ಷಪರ್ಯಂತವಾದ ಶ್ರೇಯೋಲಾಭವಾಗುವುದು ಎಂಬುದಾಗಿ ನಿವೃತ್ತಧರ್ಮದ ಮಹಿಮೆಯನ್ನು ಸನತ್ಕುಮಾರರು ಶುಕನಿಗೆ ಅನೇಕ ದೃಷ್ಟಾಂತಗಳನ್ನು ತೋರಿಸಿ ವಿವರಿಸಿರುವರು.



# ದ್ವಿಷಷ್ಟಿತಮೋಽಧ್ಯಾಯಃ



**ಸೂತ ಉವಾಚ**

ಏತಚ್ಛ್ರುತ್ವಾ ತು ವಚನಂ ನಾರದೋ ಭಗವಾನೃಷಿಃ ।
ಪುನಃ ಪಪ್ರಚ್ಛ ತಂ ವಿಪ್ರಂ ಶುಕಾಭಿಪತನಂ ಪ್ರತಿ ॥ ೧ ॥

**ನಾರದ ಉವಾಚ**

ಭಗವನ್ಸರ್ವಮಾಖ್ಯಾತಂ ತ್ವಯ್ಯಾಽತಿಕರುಣಾತ್ಮನಾ ।
ಯಚ್ಛ್ರುತ್ವಾ ಮಾನಸಂ ಮೇಽದ್ಯ ಶಾಂತಿಮಗ್ರ್ಯಾಮುಪಾಗತಂ ॥ ೨ ॥

ಪುನಶ್ಚ ಮೋಕ್ಷಶಾಸ್ತ್ರಂ ಮೇ ತ್ವಮಾದಿಶ ಮಹಾಮುನೇ ।
ನ ಹಿ ಸಂಪೂರ್ಣತಾಮೇತಿ ತೃಷ್ಣಾ ಕೃಷ್ಣಗುಣಾರ್ಣವೇ ॥ ೩ ॥

---

## ಅರವತ್ತೆರಡನೆಯ ಅಧ್ಯಾಯವು

೧. ಸೂತನು ಹೇಳಿದನು :—ಪೂಜ್ಯನಾದ ನಾರದಮುನಿಯು ಈ ಮಾತನ್ನು ಕೇಳಿ ಶುಕನು ಹೊರಟ ವಿಷಯವನ್ನೇ ಪುನಃ ಬ್ರಾಹ್ಮಣನಾದ ಆ ಸನಂದನನನ್ನು ಕುರಿತು ಪ್ರಶ್ನೆಮಾಡಿದನು.

೨. ನಾರದನು ಹೇಳಿದನು :—ಕರುಣಾಮಯನಾದ ನೀನು ಸಕಲ ವಿಷಯಗಳನ್ನೂ ಹೇಳಿರುವೆ. ಅದನ್ನು ಕೇಳಿದಮೇಲೆ ನನ್ನ ಮನಸ್ಸು ಉತ್ಕೃಷ್ಟವಾದ ಶಾಂತಿಯನ್ನು ಹೊಂದಿತು.

೩. ಸಮುದ್ರದಂತೆ ಅಪಾರವಾಗಿರುವ ಶ್ರೀಕೃಷ್ಣನ ಗುಣಗಳನ್ನು ಕೇಳಬೇಕೆಂಬ ಆಶೆಯು ಪರಿಪೂರ್ಣವಾಗುವುದಿಲ್ಲವಾದ ಕಾರಣ ಮಹರ್ಷಿಯೇ! ನೀನು ಪುನಃ ನನಗೆ ಮೋಕ್ಷಶಾಸ್ತ್ರವನ್ನುಪದೇಶಿಸು.

ಯೇ ತು ಸಂಸಾರನಿರ್ಮುಕ್ತಾ ಮೋಕ್ಷಶಾಸ್ತ್ರಪರಾಯಣಾಃ ।
ಕುತ್ರ ತೇ ನಿವಸಂತೀಹ ಸಂಶಯೋ ಮೇ ಮಹಾನಯಂ ॥ ೪ ॥

ತಂ ಛಿಂಧಿ ಸುಮಹಾಭಾಗ ತ್ವತ್ತೋ ನಾನ್ಯೋ ವಿದಾಂ ವರಃ ।
ಸನಂದನ ಉವಾಚ
ಧಾರಯಾಮಾಸ ಚಾತ್ಮಾನಂ ಯಥಾಶಾಸ್ತ್ರಂ ಮಹಾಮುನಿಃ ॥ ೫ ॥

ಪದಾತ್ಪ್ರಭೃತಿ ಗಾತ್ರೇಷು ಕ್ರಮೇಣ ಕ್ರಮಯೋಗವಿತ್ ।
ತತಃ ಸ ಪ್ರಾಙ್ಮುಖೋ ವಿದ್ವಾನಾದಿತ್ಯೇನ ವಿರೋಚಿತೇ ॥ ೬ ॥

ಪಾಣಿಪಾದಂ ಸಮಾಧಾಯ ವಿನೀತವದುಪಾವಿಶತ್ ।
ನ ತತ್ರ ಪಕ್ಷಿಸಂಘಾತೋ ನ ಶಬ್ದೋ ನ ಚ ದರ್ಶನಂ ॥ ೭ ॥

ಯತ್ರ ವೈಯಾಸಕಿರ್ಧೀಮಾನ್ ಯೋಕ್ತುಂ ಸಮುಪಚಕ್ರಮೇ ।
ಸ ದದರ್ಶ ತದಾತ್ಮಾನಂ ಸರ್ವಸಂಗವಿನಿಃಸೃತಃ ॥ ೮ ॥

---

೪. ಸಂಸಾರವೆಂಬ ಬಂಧನದಿಂದ ಮುಕ್ತರಾದ ಮೋಕ್ಷಶಾಸ್ತ್ರ ಪಾರಂಗತರು ಎಲ್ಲಿ ವಾಸಿಸುವರೆಂಬೀವಿಷಯದಲ್ಲಿ ನನಗೆ ದೊಡ್ಡ ಸಂಶಯವಿದೆ.

೫-೬. ಸನಂದನನೇ! ನಿನಗಿಂತ ಬೇರೆ ಜ್ಞಾನಿವರೇಣ್ಯರಿಲ್ಲ. ಆದುದರಿಂದ ನೀನೇ ಈ ಸಂಶಯವನ್ನು ಪರಿಹರಿಸಬೇಕು ಎಂಬುದಾಗಿ ಪ್ರಾರ್ಥಿಸಿದನು. ಸನಂದನನು ಹೇಳಿದನು :—ಕ್ರಮಯೋಗ ಜ್ಞಾನಿಯಾದ ಶುಕಮಹರ್ಷಿಯು ಪಾದಾದಿಯಾದ ಶರೀರದ ಅವಯವಗಳಲ್ಲೆಲ್ಲಾ ಕ್ರಮವಾಗಿ ಶಾಸ್ತ್ರೋಕ್ತಪ್ರಕಾರ ಯೋಗಶಕ್ತಿಯನ್ನು ತುಂಬಿ ಧಾರಣೆಮಾಡಿಕೊಂಡನು.

೬-೮. ತರುವಾಯ ಜ್ಞಾನಿಯಾದ ಆ ಶುಕನು ಸೂರ್ಯಪ್ರಕಾಶವು ಹರಡುತ್ತಿರುವಾಗ ಪೂರ್ವಾಭಿಮುಖವಾಗಿ ಕೈಕಾಲುಗಳನ್ನುಡುಗಿಸಿ ಕುಳಿತನು. ವ್ಯಾಸಪುತ್ರನಾದ ಶುಕನು ಯೋಗಾಭ್ಯಾಸಮಾಡಲುಪಕ್ರಮಿಸಿದ ಸ್ಥಳದಲ್ಲಿ ಪಕ್ಷಿಗಳ ಸಂಚಾರ ಶಬ್ದ ಮತ್ತು ಇತರ ವಸ್ತುಗಳ ದರ್ಶನ ಇವುಗಳಾವುವೂ ಇರಲಿಲ್ಲ. ಅವನು ಸರ್ವಸಂಗಪರಿತ್ಯಾಗಮಾಡಿ ಆಗ ಆತ್ಮ ಸಾಕ್ಷಾತ್ಕಾರವನ್ನು ಪಡೆದನು.

ಪ್ರಜಹಾಸ ತತೋ ಹಾಸಂ ಶುಕಸ್ಸಂಪ್ರೇಕ್ಷ್ಯ ತತ್ಪರಂ ।
ಸ ಪುನರ್ಯೋಗಮಾಸ್ಥಾಯ ಮೋಕ್ಷಮಾರ್ಗೋಪಲಬ್ಧಯೇ ॥ ೯ ॥

ಮಹಾಯೋಗೀಶ್ವರೋ ಭೂತ್ವಾ ಸೋಽತ್ಯಕ್ರಾಮದ್ವಿಹಾಯಸಂ ।
ಅಂತರಿಕ್ಷಚರಃ ಶ್ರೀಮಾನ್ವ್ಯಾಸಪುತ್ರಃ ಸುನಿಶ್ಚಿತಃ ॥ ೧೦ ॥

ತಮುದ್ಯಂತಂ ದ್ವಿಜಶ್ರೇಷ್ಠಂ ವೈನತೇಯಸಮದ್ಯುತಿಂ ।
ದದೃಶುಃ ಸರ್ವಭೂತಾನಿ ಮನೋಮಾರುತರಂಹಸಂ ॥ ೧೧ ॥

ಯಥಾಶಕ್ತಿ ಯಥಾನ್ಯಾಯಂ ಪೂಜಯಾಂಚಕ್ರಿರೇ ತಥಾ ।
ಪುಷ್ಪವರ್ಷೈಶ್ಚ ದಿವ್ಯೈಸ್ತಮಲಂಚಕ್ರುರ್ದಿವೌಕಸಃ ॥ ೧೨ ॥

ತಂ ದೃಷ್ಟ್ವಾ ವಿಸ್ಮಿತಾಸ್ಸರ್ವೇ ಗಂಧರ್ವಾಪ್ಸರಸಾಂ ಗಣಾಃ ।
ಋಷಯಶ್ಚೈವ ಸಂಸಿದ್ಧಾಃ ಕೋಽಯಂ ಸಿದ್ಧಿಮುಪಾಗತಃ ॥ ೧೩ ॥

---

೯–೧೦. ಅನಂತರ ಶುಕನು ಅಂತರಂಗದಲ್ಲಿ ಪರವಸ್ತುವನ್ನು ನೋಡಿ ನಕ್ಕನು. ಪುನಃ ಆ ವ್ಯಾಸಕುಮಾರನು ನ್ನಿಶ್ಚಯಬುದ್ಧಿಯುಳ್ಳವನಾಗಿ ಮೋಕ್ಷ ಮಾರ್ಗವನ್ನು ನೋಡಲು ಯೋಗಾನುಷ್ಠಾನವನ್ನು ಮಾಡಿ, ಮಹಾಯೋಗೀಶ್ವರನಾಗಿ ಅಂತರಿಕ್ಷಕ್ಕೆ ಹಾರಿ ಹೋಗುತ್ತಾ ಆಕಾಶವನ್ನು ದಾಟಿದನು.

೧೧. ಮೇಲೆ ಹೋಗುತ್ತಿದ್ದ, ಗರುಡನಿಗೆ ಸಮಾನವಾದ ತೇಜಸ್ಸುಳ್ಳ, ಮನಸ್ಸು ವಾಯು ಇವುಗಳಂತೆ ಶೀಘ್ರಗಾಮಿಯಾದ ಆ ದ್ವಿಜೋತ್ತಮನನ್ನು ಸಕಲಪ್ರಾಣಿಗಳೂ ನೋಡಿದರು.

೧೨. ಅವರು ತಮ್ಮ ಶಕ್ತ್ಯನುಸಾರವಾಗಿ ಯುಕ್ತರೀತಿಯಿಂದ ಅವನನ್ನು ಪೂಜಿಸಿದರು. ದೇವತೆಗಳೂ ಸಹ ದಿವ್ಯವಾದ ಪುಷ್ಪವೃಷ್ಟಿಗಳಿಂದ ಅವನನ್ನು ಸತ್ಕರಿಸಿದರು

೧೩. ಅವನನ್ನು ನೋಡಿ ಸಮಸ್ತರಾದ ಗಂಧರ್ವರು, ಅಪ್ಸರಸ್ತ್ರೀ ತಂಡಗಳು, ಋಷಿಗಳು ಮತ್ತು ಸಿದ್ಧರೂ ಸಹ ಈ ಸಿದ್ಧಪುರುಷನಾರಿರಬಹು ದೆಂದು ವಿಸ್ಮಯಗೊಂಡರು.

ತತೋಽಸೌ ಸ್ವಾಹ್ವಯಂ ತೇಭ್ಯಃ ಕಥಯಾಮಾಸ ನಾರದ ।
ಉವಾಚ ಚ ಮಹಾತೇಜಾಸ್ತಾನೃಷೀನ್ಸಂಪ್ರಹರ್ಷಿತಃ ॥ ೧೪ ॥

ಪಿತಾಯದ್ಯನುಗಚ್ಛೇನ್ಮಾಂ ಕ್ರೋಶಮಾನಃ ಶುಕೇತಿ ವೈ ।
ತಸ್ಮೈ ಪ್ರತಿವಚೋ ದೇಯಂ ಭವದ್ಭಿಸ್ತು ಸಮಾಹಿತೈಃ ॥ ೧೫ ॥

ಬಾಢಮುಕ್ತಸ್ತತಸ್ತೈಸ್ತು ದೋಷಾನ್ಹಿತ್ವಾ ಚತುರ್ವಿಧಾನ್ ।
ತಮೋ ಹ್ಯಷ್ಟವಿಧಂ ತ್ಯಕ್ತ್ವಾ ಜಹೌ ಪಂಚವಿಧಂ ರಜಃ ॥ ೧೬ ॥

ತತಸ್ಸತ್ವಂ ಜಹೌ ಧೀಮಾಂಸ್ತದದ್ಭುತಮಿವಾಭವತ್ ।
ತತಸ್ತಸ್ಮಿನ್ ಪದೇ ನಿತ್ಯೇ ನಿರ್ಗುಣೇ ಲಿಂಗವರ್ಜಿತೇ ॥ ೧೭ ॥

ತತಃ ಸ ಶೃಂಗೇಽಪ್ರತಿಮೇ ಹಿಮವನ್ಮೇರುಸನ್ನಿಭೇ ।
ಸಂಶ್ಲಿಷ್ಟೇ ಶ್ವೇತಪೀತೇ ಚ ರುಕ್ಮರೂಪ್ಯಮಯೇ ಶುಭೇ ॥ ೧೮ ॥

---

೧೪. ನಾರದನೇ! ಕೇಳು; ಅನಂತರ ಮಹಾತೇಜಸ್ವಿಯಾದ ಶುಕನು ಆ ಋಷಿಗಳೇ ಮೊದಲಾದವರಿಗೆ ತನ್ನ ಹೆಸರನ್ನು ಹೇಳಿ ಅವರನ್ನು ಚೆನ್ನಾಗಿ ಸಂತೋಷಪಡಿಸಿದನು.

೧೫. ಋಷಿಗಳಿರಾ! ಸಮಾಧಿಸ್ಥರಾದ ನೀವು ನನ್ನ ತಂದೆಯು ಶುಕಾ! ಎಂಬುದಾಗಿ ನನ್ನನ್ನು ಕೂಗಿಕೊಂಡು ಇಲ್ಲಿಗೆ ಬಂದರೆ ಅವರಿಗೆ ಪ್ರತ್ಯುತ್ತರವನ್ನು ಹೇಳಬೇಕು ಎಂಬುದಾಗಿ ಹೇಳಿದನು.

೧೬-೧೭. ತರುವಾಯ "ಹಾಗೆಯೇ ಆಗಲಿ" ಎಂದು ಋಷಿಗಳು ಹೇಳಿದುದನ್ನು ಕೇಳಿ ಜ್ಞಾನಿಯಾದ ಶುಕನು ಈ ನಾಲ್ಕು ದೋಷಗಳನ್ನೂ, ಎಂಟುವಿಧವಾದ ತಮಸ್ಸನ್ನೂ ಬಿಟ್ಟು, ಐದುವಿಧವಾದ ರಜಸ್ಸು ಅನಂತರ ಸತ್ವಗುಣ ಇವುಗಳನ್ನೂ ಬಿಟ್ಟನು. ಅದು ಆಶ್ಚರ್ಯಕರವಾಗಿದ್ದಿತು.

೧೭-೧೮. ತರುವಾಯ ಲಿಂಗವರ್ಜಿತವು, ಪ್ರಾಕೃತವಾದ ಸತ್ವರಜಸ್ತಮೋ ಗುಣಗಳ ಸಂಪರ್ಕವಿಲ್ಲದುದು, ಶಾಶ್ವತವೂ ಆದ ಆ ಸ್ಥಾನದಲ್ಲಿ ಹಿಮವತ್ಪರ್ವತ ಮೇರುಪರ್ವತಗಳಿಗೆ ಸಮಾನವು, ಒಂದಕ್ಕೊಂದಂಟಿಕೊಂಡಿರುವುದು, ಬಿಳಿ ಹಳದಿ ಬಣ್ಣವುಳ್ಳದು, ಬಂಗಾರ ಬೆಳ್ಳಿಗಳಿಂದ ನಿರ್ಮಿತವು,

ಶತಯೋಜನವಿಸ್ತಾರೇ ತಿರ್ಯಗೂರ್ಧ್ವಂ ಚ ನಾರದ ।
ಸೋಽವಿಶಂಕೇನ ಮನಸಾ ತಥೈವಾಭ್ಯಪತಚ್ಛುಕಃ ॥ ೧೯ ॥

ತೇ ಶೃಂಗೇತ್ಯಂತಸಂಶ್ಲಿಷ್ಟೇ ಸಹಸೈವ ದ್ವಿಧಾ ಕೃತೇ ।
ಅದೃಶ್ಯೇತಾಂ ದ್ವಿಜಶ್ರೇಷ್ಠ ತದದ್ಭುತಮಿವಾಭವತ್ ॥ ೨೦ ॥

ತತಃ ಪರ್ವತಶೃಂಗಾಭ್ಯಾಂ ಸಹಸೈವ ವಿನಿಸ್ಸೃತಃ ।
ನ ಚ ಪ್ರತಿಜಘಾನಾಸ್ಯ ಸ ಗತಿಂ ಪರ್ವತೋತ್ತಮಃ ॥ ೨೧ ॥

ತತೋ ಮಂದಾಕಿನೀಂ ದಿವ್ಯಾಮುಪರಿಷ್ಟಾದಭಿವ್ರಜನ್ ।
ಶುಕೋ ದದರ್ಶ ಧರ್ಮಾತ್ಮಾ ಪುಷ್ಪಿತದ್ರುಮಕಾನನಂ ॥ ೨೨ ॥

ತಸ್ಯಾಂ ಕ್ರೀಡಾಸು ನಿರತಾಃ ಸ್ನಾಂತಿ ಚೈವಾಪ್ಸರೋಗಣಾಃ ।
ನಿರಾಕಾರಂ ತು ಸಾಕಾರಾ ದದೃಶುಸ್ತಂ ವಿವಾಸಸಃ ॥ ೨೩ ॥

---

ಮಂಗಳಕರವೂ, ಮೇಲೆ ಸುತ್ತಲೂ ಸಹ ನೂರುಗಾವುದ ವಿಸ್ತಾರವುಳ್ಳುದೂ ಆಗಿರುವ ಅಸದೃಶವಾದ ಎರಡುಶಿಖರಗಳು ಕಂಡು ಬಂದುವು. ಆ ಶುಕನು ರಮ್ಯವಾದ ಆ ಸನ್ನಿವೇಶಗಳನ್ನು ನೋಡಿಯೂ ಮನಸ್ಸು ಕಲಗದೆ ಮುಂದೆ ಸಾಗುತ್ತಿದ್ದನು.

೨೦. ಕೂಡಲೇ ನಿಬಿಡವಾಗಿ ಸೇರಿಕೊಂಡಿದ್ದ ಆ ಶಿಖರಗಳು ಎರಡು ಭಾಗವಾಗಿ ಮಾಡಲ್ಪಟ್ಟಿದಾಗಿ ಕಂಡುಬಂದಿತು. ದ್ವಿಜವರ್ಯನಾದ ನಾರದನೇ! ಅದು ಆಶ್ಚರ್ಯಕರವಾಗಿದ್ದಿತು.

೨೧. ದಾರಿಗೆ ಅಡ್ಡಲಾಗಿದ್ದ ಆ ಪರ್ವತಶ್ರೇಷ್ಠವು ಇವನ ಗಮನಕ್ಕೆ ತಡೆಮಾಡದೆ ನಡುವೆ ದಾರಿಯನ್ನು ಬಿಟ್ಟಿತು. ಆ ಎರಡುಶಿಖರಗಳ ನಡುವೆ ಇವನು ಪ್ರವೇಶಿಸಿ ಮುಂದೆ ಹೋದನು.

೨೨. ಇನ್ನೂ ಮುಂದಕ್ಕೆ ಹೋಗುತ್ತಾ ಧರ್ಮಾತ್ಮನಾದ ಶುಕನು ಪುಷ್ಪಗಳಿಂದ ತುಂಬಿದ ಗಿಡಗಳುಳ್ಳ ಉದ್ಯಾನಗಳಿಂದ ಸಹಿತವಾದ ದೇವಗಂಗೆಯನ್ನು ನೋಡಿದನು.

೨೩. ವಿವಾಹದಲ್ಲಿ ನಿರತರಾದ ಅಪ್ಸರಸ್ತ್ರೀಯರ ಸಮೂಹಗಳು ಆ ಆಕಾಶಗಂಗೆಯಲ್ಲಿ ಸ್ನಾನಮಾಡುತ್ತಿದ್ದುವು. ವಸ್ತ್ರರಹಿತರೂ, ವಿಕಾರ ಉಳ್ಳವರೂ ಆದ ಅಪ್ಸರಸ್ತ್ರೀಯರು ವಿಕಾರವಿಲ್ಲದ ಆ ಶುಕನನ್ನು ನೋಡಿದರು.

ತಂ ಪ್ರಕ್ರಮಂತಮಾಜ್ಞಾಯ ಪಿತಾ ಸ್ನೇಹಸಮನ್ವಿತಃ ।
ಉತ್ತಮಾಂ ಗತಿಮಾಸ್ಥಾಯ ಪೃಷ್ಠತೋಽನುಸಸಾರ ಹ ॥ ೨೪ ॥

ಶುಕಸ್ತು ಮಾರುತಾದೂರ್ಧ್ವಂ ಗತಿಂ ಕೃತ್ವಾಽಂತರಿಕ್ಷಗಾಂ ।
ದರ್ಶಯಿತ್ವಾ ಪ್ರಭಾವಂ ಸ್ವಂ ಸರ್ವಭೂತೋಽಭವತ್ತದಾ ॥ ೨೫ ॥

ಅಥ ಯೋಗಗತಿಂ ವ್ಯಾಸಸ್ಸಮಾಸ್ಥಾಯ ಮಹಾತಪಾಃ ।
ನಿಮೇಷಾಂತರಮಾತ್ರೇಣ ಶುಕಾಭಿಪತನಂ ಯಯೌ ॥ ೨೬ ॥

ಸ ದದರ್ಶ ದ್ವಿಧಾ ಕೃತ್ವಾ ಪರ್ವತಾಗ್ರಂ ಗತಂ ಶುಕಂ ।
ಶಶಂಸುರ್ಮುನಯಃ ಸಿದ್ಧಾ ಗತಿಂ ತಸ್ಮೈ ಸುತಸ್ಯ ತಾಂ ॥ ೨೭ ॥

ತತಃ ಶುಕೇತಿ ಶಬ್ದೇನ ದೀರ್ಘೇಣಾಕ್ರಂದಿತಂ ತದಾ ।
ಸ್ವಯಂ ಪಿತ್ರಾ ಸ್ವರೇಣೋಚ್ಚೈಸ್ತ್ರೀನ್ ಲೋಕಾನನುನಾದ್ಯ ವೈ ॥ ೨೮ ॥

೨೪. ಶುಕನು ಶೀಘ್ರವಾಗಿ ಹೋಗುತ್ತಿದ್ದುದನ್ನು ತಿಳಿದು ತಂದೆಯಾದ ವ್ಯಾಸನು ಪುತ್ರವಾತ್ಸಲ್ಯದಿಂದ ವೇಗವಾಗಿ ಹೊರಟು ಮಗನನ್ನು ಹಿಂಬಾಲಿಸಿದನು.

೨೫. ಶುಕನಾದರೋ ಅಂತರಿಕ್ಷದಲ್ಲಿ ವಾಯುಗಮನಕ್ಕಿಂತಲೂ ಹೆಚ್ಚು ವೇಗವಾಗಿ ಹೋಗುತ್ತಾ ತನ್ನ ಸಾಮರ್ಥ್ಯವನ್ನು ತೋರಿಸಿ, ಸರ್ವಭೂತಮಯನಾದ ಬ್ರಹ್ಮನನ್ನು ಸೇರಿದನು.

೨೬. ಅನಂತರ ಮಹಾ ತಪಸ್ವಿಯಾದ ವ್ಯಾಸನು ಯೋಗಮಾರ್ಗವನ್ನವಲಂಬಿಸಿ ರೆಪ್ಪೆಯಾಡುವಷ್ಟರಲ್ಲಿಯೇ ಶುಕನ ಮಾರ್ಗವನ್ನೇ ಹಿಂಬಾಲಿಸಿದನು.

೨೭. ಅವನು ಪರ್ವತಶಿಖರಗಳು ಎರಡುಭಾಗವಾಗಿದ್ದುದನ್ನೂ ಅವರ ನಡುವೆ ಶುಕನು ಪ್ರವೇಶಿಸಿ ಹೋದುದನ್ನೂ ಕಂಡನು. ಅಲ್ಲಿದ್ದ ಮುನಿಗಳು, ಸಿದ್ಧರೂ ಸಹ ವ್ಯಾಸನಿಗೆ ಮಗನ ಗಮನ ವೃತ್ತಾಂತವನ್ನು ಹೇಳಿದರು.

೨೮. ತರುವಾಯ ತಂದೆಯಾದ ವ್ಯಾಸನು ಮೂರುಲೋಕಗಳಿಗೂ ಕೇಳಿಸುವಂತೆ ಉಚ್ಚಧ್ವನಿಯಿಂದ "ಶುಕಾ!" ಎಂಬುದಾಗಿ ದೀರ್ಘವಾಗಿ ಕೂಗಿದನು.

ಶುಕಃ ಸರ್ವಗತಿರ್ಭೂತ್ವಾ ಸರ್ವಾತ್ಮಾ ಸರ್ವತೋಮುಖಃ ।
ಪ್ರತ್ಯಭಾಷತ ಧರ್ಮಾತ್ಮಾ ಭೋಃ ಶಬ್ದೇನಾನುನಾದಯನ್ ॥ ೨೯ ॥

ತತ ಏಕಾಕ್ಷರಂ ನಾದಂ ಭೋರಿತ್ಯೇವಮುದೀರಯನ್ ।
ಪ್ರತ್ಯಾಹರಜ್ಜಗತ್ಸರ್ವಮುಚ್ಚೈಃ ಸ್ಥಾವರಜಂಗಮಂ ॥ ೩೦ ॥

ತತಃ ಪ್ರಭೃತಿ ವಾದ್ಯಾಪಿ ಶಬ್ದಾನುಚ್ಚಾರಿತಾನ್ಪೃಥಕ್ ।
ಗಿರಿಗಹ್ವರ ಪೃಷ್ಠೇಷು ವ್ಯಾಹರಂತಿ ಶುಕಂ ಪ್ರತಿ ॥ ೩೧ ॥

ಅಂತರ್ಹಿತಪ್ರಭಾವಂ ತಂ ದರ್ಶಯಿತ್ವಾ ಶುಕಸ್ತದಾ ।
ಗುಣಾನ್ಸಂತ್ಯಜ್ಯ ಸತ್ವಾದೀನ್ಪದಮಧ್ಯಗಮತ್ಪರಂ ॥ ೩೨ ॥

ಮಹಿಮಾನಂ ತು ತಂ ದೃಷ್ಟ್ವಾ ಪುತ್ರಸ್ಯಾಮಿತತೇಜಸಃ ।
ನಿಷಸಾದ ಗಿರಿಪ್ರಸ್ಥೇ ಪುತ್ರಮೇವಾನುಚಿಂತಯನ್ ॥ ೩೩ ॥

---

೨೯. ಸರ್ವಾತ್ಮನು, ಸರ್ವತೋಮುಖನು, ಧಾರ್ಮಿಕನೂ ಆದ ಶುಕನು ಸರ್ವತ್ರಗಮನವುಳ್ಳವನಾಗಿ "ಭೋಃ!" ಎಂಬ ಶಬ್ದದಿಂದ ಕೂಗಿ ಪ್ರತಿಧ್ವನಿಯನ್ನು ಕೊಟ್ಟನು.

೩೦. "ಭೋಃ!" ಎಂಬ ಆ ಶಬ್ದವು ಎಲ್ಲಾ ಕಡೆಗೂ ಪ್ರತಿಧ್ವನಿಸಿ ಸ್ಥಾವರ ಜಂಗಮಗಳೆಲ್ಲಾ ಆ ಏಕಾಕ್ಷರ ಶಬ್ದವನ್ನೇ ನುಡಿಯುವಂತೆ ತೋರಿತು.

೩೧. ಆಗಿನಿಂದ ಈವರೆವಿಗೂ ಪರ್ವತಗುಹೆಗಳಲ್ಲಿಯಾಗಲಿ ಮಧ್ಯ ಪ್ರದೇಶಗಳಲ್ಲಿಯಾಗಲಿ ಏನಾದರೂ ಶಬ್ದ ಮಾಡಿದರೆ ಅವು ಹಿಂದೆ ಶುಕನು ಪ್ರತಿಧ್ವನಿ ಕೊಟ್ಟಂತೆ ಈಗಲೂ ಅದೇ ಶಬ್ದವನ್ನು ಪ್ರತಿಧ್ವನಿ ಕೊಡುವುವು.

೩೨. ಆಗ ಶುಕನು ಒಳಗೆ ಅಡಗಿದ್ದ ತನ್ನ ಸಾಮರ್ಥ್ಯವನ್ನು ತೋರಿಸಿ ಸತ್ವಮುಂತಾದ ಪ್ರಾಕೃತಗುಣಗಳನ್ನು ಬಿಟ್ಟು ಉತ್ತಮ ಸ್ಥಾನವನ್ನು ಹೊಂದಿದನು.

೩೩. ವ್ಯಾಸನು ಅಪರಿಮಿತ ತೇಜಸ್ಸುಳ್ಳ ಮಗನ ಆ ಮಹಿಮೆಯನ್ನು ನೋಡಿ ಅದನ್ನೇ ಮನಸ್ಸಿನಲ್ಲಿ ನೆನೆಯುತ್ತಾ ಆ ಮಂದಾಕಿನೀತೀರದಲ್ಲಿ ಕುಳಿತನು.

ಕಿಮು ತ್ವಂ ತಾಮ್ಯಸಿ ಮುನೇ ಪುತ್ರಂ ಪ್ರತಿ ಸಮಾಕುಲಃ ।
ಪಶ್ಯಸಿ ವಿಪ್ರ ನಾಯಾಂತಂ ಬ್ರಹ್ಮಭೂತಂ ನಿಜಾಂತಿಕೇ ॥ ೩೪ ॥

ಇತ್ಯೇವಮನುನೀತೋಽಸೌ ವ್ಯಾಸಃ ಪುನರುಪಾವ್ರಜತ್ ।
ಸ್ವಾಶ್ರಮಂ ಸ ಶುಕೋ ಬ್ರಹ್ಮಭೂತೋ ಲೋಕಾಂಶ್ಚಚಾರ ಹ ॥ ೩೫ ॥

ತತಃ ಕಾಲಾಂತರೇ ಬ್ರಹ್ಮನ್ವ್ಯಾಸಃ ಸತ್ಯವತೀಸುತಃ ।
ನರನಾರಾಯಣೌ ದ್ರಷ್ಟುಂ ಯಯೌ ಬದರಿಕಾಶ್ರಮಂ ॥ ೩೬ ॥

ತತ್ರ ದೃಷ್ಟ್ವಾ ತು ತೌ ದೇವೌ ತಪ್ಯಮಾನೌ ಮಹತ್ತಪಃ ।
ಸ್ವಯಂ ಚ ತತ್ರ ತಪಸಿ ಸ್ಥಿತಃ ಶುಕಮನುಸ್ಮರನ್ ॥ ೩೭ ॥

ಯಾವತ್ತತ್ರ ಸ್ಥಿತೋ ವ್ಯಾಸಃ ಶುಕಃ ಪರಮಯೋಗವಿತ್ ।
ಶ್ವೇತದ್ವೀಪಂ ಗತಸ್ತಾತ ಯತ್ರ ತ್ವಮಗಮಃ ಪುರಾ ॥ ೩೮ ॥

---

೩೪. ಆಗ ಮಹಾದೇವನು ಅಲ್ಲಿಗೆ ಬಂದು "ಬ್ರಹ್ಮಜ್ಞಾನಿಯಾದ ವ್ಯಾಸಮುನಿಯೇ! ನೀನು ಮಗನ ವಿಷಯದಲ್ಲಿ ವ್ಯಾಕುಲಚಿತ್ತನಾಗಿ ಏತಕ್ಕೆ ದುಃಖಪಡುತ್ತಿರುವೆ? ಶುಕನು ಬ್ರಹ್ಮಜ್ಞಾನಿಯಾಗಿ ಪರಮಗತಿಯನ್ನು ಹೊಂದಿರುವನು. ಅವನು ಪುನಃ ನಿನ್ನ ಬಳಿಗೆ ಬರುವುದನ್ನು ನೋಡಲಾರೆ" ಎಂಬುದಾಗಿ ವ್ಯಾಸಮುನಿಯನ್ನು ಸಂತೈಸಿದನು.

೩೫. ಹೀಗೆ ಸಮಾಧಾನಹೊಂದಿದ ವ್ಯಾಸಮುನಿಯು ಪುನಃ ತನ್ನ ಆಶ್ರಮಕ್ಕೆ ಹಿಂದಿರುಗಿದನು. ಆ ಶುಕನೂ ಜ್ಞಾನಿಯಾಗಿ ಲೋಕಗಳಲ್ಲಿ ಸಂಚರಿಸುತ್ತಿದ್ದನು.

೩೬. ಬ್ರಹ್ಮಜ್ಞಾನಿಯಾದ ನಾರದನೇ! ತರುವಾಯ ಇನ್ನೊಂದು ಸಮಯದಲ್ಲಿ ಸತ್ಯವತೀ ಪುತ್ರನಾದ ವ್ಯಾಸನು ನರನಾರಾಯಣರನ್ನು ನೋಡಲು ಬದರಿಕಾಶ್ರಮಕ್ಕೆ ಬಂದನು.

೩೭. ಅಲ್ಲಿ ಮಹಾತಪಸ್ಸು ಮಾಡುತ್ತಿದ್ದ ದೇವತೆಗಳನ್ನು ದರ್ಶನ ಮಾಡಿ ತಾನೂ ಸಹ ಶುಕನನ್ನು ಸ್ಮರಿಸುತ್ತಾ ಅಲ್ಲಿಯೇ ತಪಸ್ಸಿಗಾರಂಭಿಸಿದನು.

೩೮. ವ್ಯಾಸನು ಅಲ್ಲಿರುವಾಗಲೇ ಪರಮಯೋಗಜ್ಞಾನಿಯಾದ ಶುಕನು ಹಿಂದೆ ನೀನು (ನಾರದನು) ಹೋಗಿದ್ದ ಶ್ವೇತದ್ವೀಪಕ್ಕೆ ಹೊರಟನು.

ತತ್ರ ದೃಷ್ಟಪ್ರಭಾವಸ್ತು ಶ್ರೀಮನ್ನಾರಾಯಣಃ ಪ್ರಭುಃ ।
ದೃಷ್ಟಃ ಶ್ರುತಿವಿಮೃಗ್ಯೋ ಹಿ ದೇವದೇವೋ ಜನಾರ್ದನಃ ॥ ೩೯ ॥

ಸ್ತುತಶ್ಚ ಶುಕದೇವೇನ ಪ್ರಸನ್ನಃ ಪ್ರಾಹ ನಾರದ ।

ಶ್ರೀಭಗವಾನುವಾಚ

ತ್ವಯಾ ದೃಷ್ಟೋಽಸ್ಮಿ ಯೋಗೀಂದ್ರ ಸರ್ವದೇವರಹಃಸ್ಥಿತಃ ॥ ೪೦ ॥

ಸನತ್ಕುಮಾರಾದಿಷ್ಟೇನ ಸಿದ್ಧೋ ಯೋಗೇನ ವಾಽಥ ವಾ ।
ತ್ವಂ ಸದಾಗತಿಮಾರ್ಗಸ್ಥೋ ಲೋಕಾನ್ಪಶ್ಯ ಯಥೇಚ್ಛಯಾ ॥ ೪೧ ॥

ಇತ್ಯುಕ್ತೋ ವಾಸುದೇವೇನ ತಂ ನತ್ವಾಽರಣಿಸಂಭವಃ ।
ವೈಕುಂಠಂ ಪ್ರಯಯೌ ವಿಪ್ರ ಸರ್ವಲೋಕನಮಸ್ಕೃತಂ ॥ ೪೨ ॥

---

೩೯–೪೦. ಅಲ್ಲಿ ಮಹಾಸಾಮರ್ಥ್ಯೋಪೇತನಾಗಿ ಕಾಣುತ್ತಿದ್ದ ಶ್ರೀಮನ್ನಾರಾಯಣಸ್ವಾಮಿಯು ದೃಗ್ಗೋಚರನಾದನು. ದೇವೋತ್ತಮನಾದ, ಜನಾರ್ದನ ನಾಮಕನಾದ ನಾರಾಯಣನು ವೇದವಿಚಾರಪೂರ್ವಕವಾದ ಧ್ಯಾನದಿಂದಲೇ ತಿಳಿಯಲರ್ಹನು. ಅಂತಹ ಸ್ವಾಮಿಯನ್ನು ದರ್ಶನವಮಾಡಿ ಆನಂದದಿಂದ ಶುಕದೇವನು ಸ್ತೋತ್ರಮಾಡಲಾಗಿ ನಾರಾಯಣನು ಪ್ರಸನ್ನನಾಗಿ ಹೀಗೆ ಹೇಳಿದನು.

೪೦–೪೧. ಶ್ರೀ ಭಗವಂತನು ಹೇಳಿದನು :—ಬ್ರಾಹ್ಮಣನೂ, ಯೋಗೀಶ್ವರನೂ ಆಗಿರುವ ಶುಕನೇ ! ನೀನು ಸನತ್ಕುಮಾರನು ಉಪದೇಶಿಸಿದ ಯೋಗದಿಂದ ಸಿದ್ಧಿಯನ್ನು ಹೊಂದಿರುವೆಯಾದಕಾರಣ ಸಕಲದೇವತೆಗಳಿಗೂ ಗೋಪ್ಯನಾಗಿರುವ ನಾನು ನಿನಗೆ ಗೋಚರನಾದೆನು. ನೀನು ವಾಯುಮಾರ್ಗಗಾಮಿಯಾಗಿ ನಿನ್ನ ಇಚ್ಛಾನುಸಾರವಾಗಿ ಲೋಕಗಳನ್ನು ನೋಡು.

೪೨. ವಾಸುದೇವನು ಹೇಳಿದುದನ್ನು ಕೇಳಿ ಶುಕನು ಅವನನ್ನು ನಮಸ್ಕರಿಸಿ ಲೋಕಮಾನ್ಯವಾದ ವೈಕುಂಠಲೋಕವನ್ನು ಹೊಂದಿದನು.

ವೈಮಾನಿಕೈಃ ಸುರೈರ್ಜುಷ್ಟಂ ವಿರಜಾಪರಿವೇಷ್ಟಿತಂ ।
ಯಂ ಭಾಂತಮನುಭಾಂತ್ಯೇತೇ ಲೋಕಾಸ್ಸರ್ವೇಽಪಿ ನಾರದ ॥ ೪೩ ॥

ಯತ್ರ ವಿದ್ರುಮಸೋಪಾನಾಃ ಸ್ವರ್ಣರತ್ನವಿಚಿತ್ರಿತಾಃ ।
ವಾಪ್ಯ ಉತ್ಪಲಸಂಛನ್ನಾಃ ಸುರಸ್ತ್ರೀಕ್ರೀಡನಾಕುಲಾಃ ॥ ೪೪ ॥

ದಿವ್ಯೈರ್ಹಂಸಕುಲೈರ್ಘುಷ್ಟಾಃ ಸ್ವಚ್ಛಾಂಬುನಿಭೃತಾಃ ಸದಾ ।
ತತ್ರ ದ್ವಾಃಸ್ಥೈಶ್ಚತುರ್ಹಸ್ತೈಃ ನಾನಾಭರಣಭೂಷಿತೈಃ ॥ ೪೫ ॥

ವಿಷ್ವಕ್ಸೇನಾನುಗೈಸ್ಸಿದ್ಧೈಃ ಕುಮುದಾದ್ಯೈರವಾರಿತಃ ।
ಪ್ರವಿಶ್ಯಾಭ್ಯಂತರಂ ತತ್ರ ದೇವದೇವಂ ಚತುರ್ಭುಜಂ ॥ ೪೬ ॥

ಶಾಂತಂ ಪ್ರಸನ್ನವದನಂ ಪೀತಕೌಶೇಯವಾಸಸಂ ।
ಶಂಖಚಕ್ರಗದಾಪದ್ಮೈರ್ಮೂರ್ತಿಮದ್ಭಿರುಪಾಸಿತಂ ॥ ೪೭ ॥

---

೪೩. ನಾರದನೇ! ಆ ವೈಕುಂಠವು ವಿಮಾನಾರೂಢರಾದ ದೇವತೆಗಳಿಂದ ಸೇವಿಸಲ್ಪಡುತ್ತಾ ವಿರಜಾನದಿಯ ಮಧ್ಯದಲ್ಲಿದೆ. ಆ ಲೋಕದ ಪ್ರಕಾಶದಿಂದಲೇ ಸಕಲಲೋಕಗಳೂ ಪ್ರಕಾಶಿಸುವುವು.

೪೪-೪೫. ಆ ಲೋಕದಲ್ಲಿ ಸುವರ್ಣ, ರತ್ನ ಇವುಗಳಿಂದ ಚಿತ್ರಿಸಲ್ಪಟ್ಟ ಹವಳದ ಮೆಟ್ಟಲುಗಳುಳ್ಳ, ಕನ್ನೈದಿಲೆ ಹೂವಿನಿಂದ ಪರಿಮಳಯುಕ್ತವಾದ, ಪೂರ್ಣವಾದ ದೇವಸ್ತ್ರೀಯರ ಕ್ರೀಡೆಯಿಂದ ಕಲಕಲ್ಪಡುತ್ತಿರುವ ದಿವ್ಯವಾದ ಹಂಸಸಮೂಹಗಳಿಂದ ಘೋಷಿಸಲ್ಪಡುತ್ತಿರುವ, ಯಾವಾಗಲೂ ನಿರ್ಮಲವಾದ, ನೀರಿನಿಂದ ಪೂರ್ಣವಾದ ಸರೋವರಗಳಿವೆ.

೪೫-೪೬. ಅಲ್ಲಿ ಬಾಗಿಲಲ್ಲಿರುವ, ನಾಲ್ಕು ಹಸ್ತಗಳುಳ್ಳ, ನಾನಾವಿಧಾಭರಣಗಳಿಂದ ಅಲಂಕೃತರಾದ, ವಿಷ್ವಕ್ಸೇನಾನುಯಾಯಿಗಳಾದ, ಸಿದ್ಧಕುಮುದಾದಿಗಳಿಂದ ತಡೆಯಲ್ಪಡದೇ ಶುಕನು ಒಳಕ್ಕೆ ಪ್ರವೇಶಿಸಿದನು.

೪೬-೪೯. ಅಲ್ಲಿದ್ದ ಚತುರ್ಭುಜಯುಕ್ತನು, ಶಾಂತನು, ಪ್ರಸನ್ನಮುಖನು, ಹಳದೀಬಣ್ಣದ ಕೌಶೇಯವಸ್ತ್ರವನ್ನುಟ್ಟಿರುವವನು, ಶಂಖ, ಚಕ್ರ, ಗದೆ, ಪದ್ಮ ಇವುಗಳನ್ನು ಧರಿಸಿರುವ, ಮೂರ್ತಿಮತ್ತಾದ ದೇವತೆಗಳಿಂದ ಸೇವಿಸ

ವಕ್ಷಸ್ಥಲಸ್ಥಯಾ ಲಕ್ಷ್ಮ್ಯಾ ಕೌಸ್ತುಭೇನ ವಿರಾಜಿತಂ ।
ಕಟಿಸೂತ್ರಬ್ರಹ್ಮಸೂತ್ರ ಕಟಕಾಂಗದಭೂಷಿತಂ ॥ ೪೮ ॥

ಭ್ರಾಜತ್ಕಿರೀಟವಲಯಂ ಮಣಿನೂಪುರಶೋಭಿತಂ ।
ದದರ್ಶಸಿದ್ಧನಿಕರೈಃ ಸೇವ್ಯಮಾನಮಹರ್ನಿಶಂ ॥ ೪೯ ॥

ತಂ ದೃಷ್ಟ್ವಾ ಭಕ್ತಿಭಾವೇನ ತುಷ್ಟಾವ ಮಧುಸೂದನಂ ।
ಶುಕ ಉವಾಚ
ನಮಸ್ತೇ ವಾಸುದೇವಾಯ ಸರ್ವಲೋಕೈಕಸಾಕ್ಷಿಣೇ ॥ ೫೦ ॥

ಜಗದ್ಬೀಜಸ್ವರೂಪಾಯ ಪೂರ್ಣಾಯ ನಿಭೃತಾತ್ಮನೇ ।
ಹರಯೇ ವಾಸುಕಿಸ್ಥಾಯ ಶ್ವೇತದ್ವೀಪನಿವಾಸಿನೇ ॥ ೫೧ ॥

ಹಂಸಾಯ ಮತ್ಸ್ಯರೂಪಾಯ ವಾರಾಹತನುಧಾರಿಣೇ ।
ನೃಸಿಂಹಾಯ ಧ್ರುವೇಜ್ಯಾಯ ಸಾಂಖ್ಯಯೋಗೇಶ್ವರಾಯ ಚ ॥ ೫೨ ॥

---

ಲ್ಪಡುತ್ತಿರುವ, ವಕ್ಷಸ್ಥಲದಲ್ಲಿರುವ ಲಕ್ಷ್ಮೀದೇವಿಯಿಂದಲೂ, ಕೌಸ್ತುಭಮಣಿಯಿಂದಲೂ ಪ್ರಕಾಶಿಸುತ್ತಿರುವ, ಉಡಿದಾರ, ಯಜ್ಞೋಪವೀತ, ಕಡಗ, ಬಾಹ್ವಾಭರಣ ಇವುಗಳಿಂದಲಂಕೃತನಾದ, ಪ್ರಕಾಶಮಾನವಾದ ಕಿರೀಟ, ಹಸ್ತಾಭರಣ ಇವುಗಳುಳ್ಳ, ಮಣಿಯ ಪಾದಾಭರಣದಿಂದಲಂಕೃತನಾದ ಅಹೋರಾತ್ರಿಗಳಲ್ಲಿಯೂ ಸಿದ್ಧ ಸಮೂಹಗಳಿಂದ ಸೇವಿಸಲ್ಪಡುತ್ತಿರುವ, ದೇವೋತ್ತಮನಾದ ವೈಕುಂಠಪತಿಯನ್ನು ನೋಡಿದನು.

೫೦. ಶುಕನು ಆ ವೈಕುಂಠಪತಿಯನ್ನು ನೋಡಿ ಭಕ್ತಿಭಾವದಿಂದ ಮಧುಸೂದನನನ್ನು ಈ ರೀತಿಯಾಗಿ ಸ್ತೋತ್ರಮಾಡಿದನು.

೫೦-೫೬. ಶುಕನು ಹೇಳಿದನು :—ವಸುದೇವಪುತ್ರನು, ಸಕಲ ಲೋಕಕ್ಕೂ ಮುಖ್ಯಸಾಕ್ಷಿಯು, ಜಗತ್ಕಾರಣಸ್ವರೂಪನು, ಪರಿಪೂರ್ಣನು, ನಿಭೃತಾತ್ಮನು, ಹರಿಪದವಾಚ್ಯನು, ಸರ್ಪಶಯನನು, ಶ್ವೇತದ್ವೀಪನಿವಾಸಿಯು, ಹಂಸರೂಪನು, ಮತ್ಸ್ಯರೂಪನು, ಹಂದಿಯರೂಪವನ್ನು ಧರಿಸಿದವನು, ನರಸಿಂಹನು, ಧ್ರುವನಿಂದ ಸ್ತುತಿಮಾಡಿಸಿಕೊಳ್ಳಲ್ಪಟ್ಟವನು, ಸಾಂಖ್ಯಯೋಗ

ಚತುರ್ಭುಜಾಯ ಕೂರ್ಮಾಯ ಪೃಥವೇ ಸ್ವಸುಖಾತ್ಮನೇ ।
ನಾಭೇಯಾಯ ಜಗದ್ಧಾತ್ರೇ ವಿಧಾತ್ರೇಂತಕರಾಯ ಚ ॥ ೫೩ ॥

ಭಾರ್ಗವೇಂದ್ರಾಯ ರಾಮಾಯ ರಾಘವಾಯ ಪರಾಯ ಚ ।
ಕೃಷ್ಣಾಯ ವೇದಕರ್ತ್ರೇ ಚ ಬುದ್ಧಕಲ್ಕಿಸ್ವರೂಪಿಣೇ ॥ ೫೪ ॥

ಚತುರ್ವ್ಯೂಹಾಯ ವೇದ್ಯಾಯ ಧ್ಯೇಯಾಯ ಪರಮಾತ್ಮನೇ ।
ನರನಾರಾಯಣಾಖ್ಯಾಯ ಶಿಪಿವಿಷ್ಟಾಯ ವಿಷ್ಣವೇ ॥ ೫೫ ॥

ಋತಧಾಮ್ನೇ ವಿಧಾಮ್ನೇ ಚ ಸುಪರ್ಣಾಯ ಸ್ವರೋಚಿಷೇ ।
ಋಭವೇ ಸುವ್ರತಾಖ್ಯಾಯ ಸುಧಾಮ್ನೇಽಜಿತಾಯ ಚ ॥ ೫೬ ॥

ವಿಶ್ವರೂಪಾಯ ವಿಶ್ವಾಯ ಸೃಷ್ಟಿಸ್ಥಿತ್ಯಂತಕಾರಿಣೇ ।
ಪರಾಯ ಯಜ್ಞಭೋಕ್ತ್ರೇ ಚ ಸ್ಥವಿಷ್ಠಾಯಾಣವೇಽರ್ಥಿನೇ ॥ ೫೭ ॥

---

ಸ್ವಾಮಿಯು, ಚತುರ್ಭುಜನು, ಕೂರ್ಮರೂಪಿಯು, ಮಹತ್ತಾಗಿರುವವನು, ನಿರಪೇಕ್ಷಸುಖಸ್ವರೂಪನು, ನಾಭಿಯಲ್ಲಿ ಅವತರಿಸಿದವನು, ಜಗತ್ತಿನ ಸಾಮಾನ್ಯ ವಿಶೇಷ ಸೃಷ್ಟಿಕರ್ತನು, ಸಂಹಾರಕರ್ತೃವು, ಭೃಗುಕುಲ ಮಣಿಯಾದ ಪರಶುರಾಮರೂಪನು, ರಘುಕುಲದಲ್ಲಿ ಅವತರಿಸಿದ ರಾಮನು, ಉತ್ತಮನು, ಕೃಷ್ಣನು, ವೇದವನ್ನುಪದೇಶಿಸಿದವನು, ಬುದ್ಧ ಕಲ್ಕಿ ಎಂಬ ಅವತಾರಗಳನ್ನು ಮಾಡಿರುವವನು, ಚತುರ್ವ್ಯೂಹನು, ಮುಖ್ಯವೇದ್ಯನು, ಧ್ಯಾನಗಮ್ಯನು, ಪರಮಾತ್ಮನು, ನರನಾರಾಯಣಶಬ್ದವಾಚ್ಯನು, ರಶ್ಮಿಗಳಿಂದ ಎಲ್ಲಾಕಡೆಯೂ ವ್ಯಾಪಿಸಿರುವವನು, ವಿಷ್ಣುವು, ಸತ್ಯಧಾಮನು, ವಿಶೇಷ ತೇಜಸ್ಸುಳ್ಳವನು, ಜ್ಞಾನಪ್ರಕಾಶಸ್ವರೂಪನು, ಋಭುವು, ಸುವ್ರತನಾಮಕನು, ಸಮೀಚೀನತೇಜಸ್ಸುಳ್ಳವನು ಮತ್ತು ಯಾರಿಂದಲೂ ಜಯಿಸಲ್ಪಡದವನೂ ಆಗಿರುವ ಸ್ವಾಮಿಯೇ! ನಿನಗೆ ನಮಸ್ಕಾರವು.

೫೭-೬೫. ವಿಶ್ವರೂಪಧಾರಿಯು, ಜಗದಂತರ್ಯಾಮಿಯು, ಸೃಷ್ಟಿಸ್ಥಿತಿ ಸಂಹಾರಕರ್ತೃವು, ಶ್ರೇಷ್ಠನು, ಯಜ್ಞಫಲಸಾರಭೋಕ್ತೃವು, ಸ್ಥೂಲನು, ಸೂಕ್ಷ್ಮನು, ಅರ್ಥ್ಯನು, ಸೂರ್ಯಚಂದ್ರರೇ ಕಣ್ಣಾಗಿ ಉಳ್ಳವನು, ಪೂಜ್ಯನು,

ಆದಿತ್ಯಸೋಮನೇತ್ರಾಯ ಸಹಓಜೋಬಲಾಯ ಚ ।
ಇಜ್ಯಾಯ ಸಾಕ್ಷಿಣೇಽಜಾಯ ಬಹುಶೀರ್ಷಾಂಘ್ರಿಬಾಹವೇ ॥ ೫೮ ॥

ಶ್ರೀಶಾಯ ಶ್ರೀನಿವಾಸಾಯ ಭಕ್ತವಶ್ಯಾಯ ಶಾಂಙ್ಗಿಣೇ ।
ಅಷ್ಟಪ್ರಕೃತ್ಯಧೀಶಾಯ ಬ್ರಹ್ಮಣೇಽನಂತಶಕ್ತಯೇ ॥ ೫೯ ॥

ಬೃಹದಾರಣ್ಯವೇದ್ಯಾಯ ಹೃಷೀಕೇಶಾಯ ವೇಧಸೇ ।
ಪುಂಡರೀಕನಿಭಾಕ್ಷಾಯ ಕ್ಷೇತ್ರಜ್ಞಾಯ ವಿಭಾಸಿನೇ ॥ ೬೦ ॥

ಗೋವಿಂದಾಯ ಜಗತ್ಕರ್ತ್ರೇ ಜಗನ್ನಾಥಾಯ ಯೋಗಿನೇ ।
ಸತ್ಯಾಯ ಸತ್ಯಸಂಧಾಯ ವೈಕುಂಠಾಯಾಚ್ಯುತಾಯ ಚ ॥ ೬೧ ॥

ಅಧೋಕ್ಷಜಾಯ ಧರ್ಮಾಯ ವಾಮನಾಯ ತ್ರಿಧಾತವೇ ।
ಘೃತಾರ್ಚಿಷೇ ವಿಷ್ಣವೇ ತೇಽನಂತಾಯ ಕಪಿಲಾಯ ಚ ॥ ೬೨ ॥

---

ಸಾಕ್ಷಿಯೂ, ಉತ್ಪತ್ತಿ ಇಲ್ಲದವನು, ಬಹಳವಾದ ಶಿರಸ್ಸು, ಪಾದ, ಬಾಹುಗಳುಳ್ಳವನು, ಲಕ್ಷ್ಮೀಪತಿಯೂ, ಶ್ರೀನಿವಾಸನು, ಭಕ್ತಾಧೀನನು, ಶಾರ್ಙ್ಗಪಾಣಿಯು, ಎಂಟುಪ್ರಕೃತಿಗಳೊಡೆಯನು, ಗುಣಪರಿಪೂರ್ಣನು, ಅಪರಿಮಿತಶಕ್ತಿಯುಳ್ಳವನು, ಬೃಹದಾರಣ್ಯಕವೆಂಬ ವೇದಭಾಗಪ್ರತಿಪಾದ್ಯನು, ಇಂದ್ರಿಯನಿಯಾಮಕನು, ಸರ್ವಕರ್ತನು, ಕಮಲದಂತೆ ಕಣ್ಣುಳ್ಳವನು, ಕ್ಷೇತ್ರಜ್ಞನು, ಅತ್ಯಂತ ಪ್ರಕಾಶವುಳ್ಳವನು, ವೇದವೇದ್ಯನು, ಜಗತ್ಕರ್ತನು, ಜಗದೊಡೆಯನು, ಯೋಗಿಯು, ಸತ್ಯನು, ಸತ್ಯಪ್ರತಿಜ್ಞನು, ವೈಕುಂಠ, ಅಚ್ಯುತ, ಅಧೋಕ್ಷಜ, ಧರ್ಮ, ವಾಮನ, ಎಂಬ ನಾಮಗಳಿಂದ ಕರೆಯಿಸಿಕೊಳ್ಳುವವನು, ಧಾತುತ್ರಯದಲ್ಲಿದ್ದು ಅವುಗಳನ್ನು ನಿಯಮಿಸುವವನು, ಘೃತದಂತೆ ಜ್ವಲಿಸುವವನು, ವಿಷ್ಣು, ಅನಂತ, ಕಪಿಲ, ವಿರಿಂಚಿ, ತ್ರಿಕಕುತ್ ಎಂಬ ನಾಮಗಳಿಗೆ ಮುಖ್ಯವಾಚ್ಯನು, ಋಗ್ವೇದ, ಯಜುರ್ವೇದ, ಸಾಮವೇದ ಇವುಗಳಿಂದ ಪ್ರತಿಪಾದ್ಯನು, ಏಕಶೃಂಗನು, ಶುಚಿಶ್ರವಸ್ಸು, ಶಾಸ್ತ್ರದಿಂದಲೇ ಜ್ಞೇಯನು, ವೃಷಾಕಪಿ, ಋದ್ಧ, ಪ್ರಭು, ವಿಶ್ವಕರ್ಮ ಎಂಬ ಮುಖ್ಯನಾಮಧೇಯಗಳುಳ್ಳವನು, "ಭೂರ್ಭುವ

ವಿರಂಚಯೇ ತ್ರಿಕಳುದೇ ಋಗ್ಯಜುಸ್ಸಾಮರೂಪಿಣೇ ।
ಏಕಶೃಂಗಾಯ ಚ ಶುಚಿಶ್ರವಸೇ ಶಾಸ್ತ್ರಯೋನಯೇ ॥ ೬೩ ॥

ವೃಷಾಕಪಯ ಉದ್ಗಾಯ ಪ್ರಭವೇ ವಿಶ್ವಕರ್ಮಣೇ ।
ಭೂರ್ಭುವಸ್ಸ್ವಃಸ್ವರೂಪಾಯ ದೈತ್ಯಘ್ನೇ ನಿರ್ಗುಣಾಯ ಚ ॥ ೬೪ ॥

ನಿರಂಜನಾಯ ನಿತ್ಯಾಯ ಹ್ಯವ್ಯಯಾಯಾಕ್ಷರಾಯ ಚ ।
ನಮಸ್ತೇ ಪಾಹಿ ಮಾಮೀಶ ಶರಣಾಗತವತ್ಸಲ ॥ ೬೫ ॥

ಇತಿ ಸ್ತುತಸ್ಸ ಭಗವಾಂಚ್ಛಂಖಚಕ್ರಗದಾಧರಃ ।
ಆರಣೇಯಮುವಾಚೇದಂ ಭೃಶಂ ಪ್ರಣತವತ್ಸಲಃ ॥ ೬೬ ॥

ಶ್ರೀಭಗವಾನುವಾಚ

ವ್ಯಾಸಪುತ್ರ ಮಹಾಭಾಗ ಪ್ರೀತೋಽಸ್ಮಿ ತವ ಸುವ್ರತ ।
ವಿದ್ಯಾಮಾಪ್ನುಹಿ ಭಕ್ತಿಂ ಚ ಜ್ಞಾನೀ ತ್ವಂ ಮಮ ರೂಪಧೃಕ್ ॥ ೬೭ ॥

ವಃಸ್ವಃ " ಎಂಬ ವ್ಯಾಹೃತಿಮಂತ್ರವಾಚ್ಯನು, ದೈತ್ಯಸಂಹಾರಕನು, ಪ್ರಾಕೃತ ಗುಣರಹಿತನು, ನಿರ್ದೋಷನು, ನಿತ್ಯನು, ಅವ್ಯಯನು, ಅಕ್ಷರನು ಮತ್ತು ಶರಣಾಗತ ವತ್ಸಲನೂ ಆಗಿರುವ ಸ್ವಾಮಿಯೇ! ನಿನಗೆ ನಮಸ್ಕಾರ, ನನ್ನನ್ನು ಸಂರಕ್ಷಿಸು.

೬೬. ಈರೀತಿ ಸ್ತುತಿಮಾಡಿಸಿಕೊಳ್ಳಲ್ಪಟ್ಟ ಶಂಖಚಕ್ರಗದಾಪಾಣಿಯಾದ, ನಮಸ್ಕರಿಸಿ ಶರಣುಹೊಂದಿದ ಭಕ್ತರಲ್ಲಿ ಅತ್ಯಂತವಾತ್ಸಲ್ಯವುಳ್ಳ ಆ ಭಗವಂತನು ಶುಕನಿಗೆ ಈ ರೀತಿ ಹೇಳಿದನು.

೬೭. ಶ್ರೀ ಭಗವಂತನು ಹೇಳಿದನು ;—ಸಮೀಚೀನವ್ರತವನ್ನು ಮಾಡಿದ, ವ್ಯಾಸಕುಮಾರನಾದ ಶುಕಮಹಾಶಯನೇ! ನಿನ್ನ ವಿಷಯದಲ್ಲಿ ಸಂತುಷ್ಟನಾಗಿರುವೆನು. ಜ್ಞಾನಿಯಾದ ನೀನು ನನ್ನ ರೂಪವನ್ನು ಮನಸ್ಸಿನಲ್ಲಿ ಧರಿಸುವವನಾಗು. ನೀನು ಜ್ಞಾನಭಕ್ತಿಗಳನ್ನು ಹೊಂದುವೆ.

ಯದ್ರೂಪಂ ಮಮ ದೃಷ್ಟಂ ಪ್ರಾಕ್ ಶ್ವೇತದ್ವೀಪೇ ತ್ವಯಾ ದ್ವಿಜ ।
ಸೋಽಹಮೇವಾವತಾರಾರ್ಥಂ ಸ್ಥಿತೋ ವಿಶ್ವಂಭರಾತ್ಮಕಃ ॥ ೬೮ ॥

ಸಿದ್ಧೋಽಸಿ ತ್ವಂ ಮಹಾಭಾಗ ಮೋಕ್ಷಧರ್ಮಾನುಚಿಂತಯಾ ।
ವ್ರಜ ಲೋಕಾನ್ಯಥಾ ವಾಯುರ್ಯಥಾ ಖಂ ಸವಿತಾ ತಥಾ ॥ ೬೯ ॥

ನಿತ್ಯಮುಕ್ತಸ್ವರೂಪಸ್ತ್ವಂ ಪೂಜ್ಯಮಾನಸ್ಸುರೈರ್ನರೈಃ ।
ಭಕ್ತಿರ್ಹಿ ದುರ್ಲಭಾ ಲೋಕೇ ಮಯಿ ಸರ್ವಪರಾಯಣೇ ॥ ೭೦ ॥

ತಾಂ ಲಬ್ಧ್ವಾ ನಾಪರಂ ಕಿಂಚಿಲ್ಲಬ್ಧವ್ಯಮವಶಿಷ್ಯತೇ ।
ಆಕಲ್ಪಾಂತಃ ತಪಸ್ಸಂಸ್ಥೌ ನರನಾರಾಯಣಾವೃಷೀ ॥ ೭೧ ॥

ತಯೋರ್ನಿದೇಶತೋ ವ್ಯಾಸೋ ಜನಕಸ್ತವ ಸುವ್ರತಃ ।
ಕರ್ತಾ ಭಾಗವತಂ ಶಾಸ್ತ್ರಂ ತದಧೀಷ್ವ ಭುವಂ ವ್ರಜ ॥ ೭೨ ॥

---

೬೮. ದ್ವಿಜನೇ! ಹಿಂದೆ ಶ್ವೇತದ್ವೀಪದಲ್ಲಿ ನೀನು ನನ್ನ ಯಾವ ರೂಪವನ್ನು ನೋಡಿದೆಯೋ, ಅಂತಹ ನಾನೇ ಅವತಾರಮಾಡುವುದಕ್ಕಾಗಿ ವಿಶ್ವಂಭರ ರೂಪಿಯಾಗಿರುವೆನು.

೬೯. ಮಹಾಶಯನೇ! ನೀನು ಮೋಕ್ಷಧರ್ಮವನ್ನು ಕ್ರಮವಾಗಿ ಚಿಂತಿಸಿ ಸಿದ್ಧನಾಗಿರುವೆ. ನೀನು ವಾಯುವಿನಂತೆ ಲೋಕದಲ್ಲಿ ಸಂಚರಿಸು. ಸೂರ್ಯನಂತೆ ಆಕಾಶದಲ್ಲಿ ಪ್ರಕಾಶಪ್ರದನಾಗಿ ಸಂಚರಿಸು.

೭೦-೭೧. ನೀನು ದೇವತೆಗಳು, ಮನುಷ್ಯರು, ಇವರುಗಳಿಂದ ಪೂಜಿಸಲ್ಪಡುವವನಾಗಿ ಸರ್ವದಾ ಜ್ಞಾನಾನಂದಸ್ವರೂಪವನ್ನನುಭವಿಸುವೆ. ಸಮಸ್ತ ಲೋಕಕ್ಕೂ ಮುಖ್ಯಾಶ್ರಯನಾದ ನನ್ನಲ್ಲಿ ಭಕ್ತಿಯು ಈ ಲೋಕದಲ್ಲಿ ದುರ್ಲಭವು. ಅದನ್ನು ಹೊಂದಿದಮೇಲೆ ಲಭಿಸಬೇಕಾದುದು ಸ್ವಲ್ಪವೂ ಉಳಿದಿಲ್ಲ.

೭೧-೭೨. ನರನಾರಾಯಣಮುನಿಗಳು ಕಲ್ಪಾವಸಾನದವರೆಗೂ ತಪೋನಿಷ್ಠರಾಗಿರುವರು. ಅವರ ಅಪ್ಪಣೆಯ ಪ್ರಕಾರ, ಸಮೀಚೀನವ್ರತಧಾರಿಯಾದ, ನಿನ್ನ ತಂದೆಯಾದ ವ್ಯಾಸನು, ಭಾಗವತವೆಂಬ ಶಾಸ್ತ್ರವನ್ನು ಮಾಡುವನು; ನೀನು ಭೂಲೋಕಕ್ಕೆ ಹೋಗಿ ಅದನ್ನು ಅಧ್ಯಯನಮಾಡು.

ಸ ತಪ್ಯತಿ ತಪಸ್ತ್ವದ್ಯ ಪರ್ವತೇ ಗಂಧಮಾದನೇ ।
ತ್ವದ್ವಿಯೋಗೇನ ಖಿನ್ನಾತ್ಮಾ ತಂ ಪ್ರಸಾದಯ ಮತ್ಪ್ರಿಯಂ ॥ ೭೩ ॥

ಏವಮುಕ್ತಃ ಶುಕೋ ವಿಪ್ರಃ ನಮಸ್ಕೃತ್ಯ ಚತುರ್ಭುಜಂ ।
ಯಥಾಗತಂ ನಿವೃತ್ತೋಽಸೌ ಪಿತುರಂತಿಕಮಾಗಮತ್ ॥ ೭೪ ॥

ಅಥ ತಂ ಸ್ವಾಂತಿಕೇ ದೃಷ್ಟ್ವಾ ಪಾರಾಶರ್ಯಃ ಪ್ರತಾಪವಾನ್ ।
ಪುತ್ರಂ ಪ್ರಾಪ್ಯ ಪ್ರಹೃಷ್ಟಾತ್ಮಾ ತಪಸೋ ನಿವವರ್ತ ಹ ॥ ೭೫ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ಅರಣೇಯಃಸಮಾಯುಕ್ತಃ ಸ್ವಾಶ್ರಮಂ ಸಮುಪಾಗಮತ್ ॥ ೭೬ ॥

ನಾರಾಯಣನಿಯೋಗಾತ್ತು ತ್ವನ್ಮುಖೇನ ಮುನೀಶ್ವರಃ ।
ಚಕಾರ ಸಂಹಿತಾಂ ದಿವ್ಯಾಂ ನಾನಾಖ್ಯಾನಸಮನ್ವಿತಾಂ ॥ ೭೭ ॥

೭೩. ಆ ವ್ಯಾಸಮುನಿಯು ನಿನ್ನ ಅಗಲುವಿಕೆಯಿಂದ ದುಃಖಿತನಾಗಿ ಈ ಗಂಧಮಾದನಪರ್ವತದಲ್ಲಿ ತಪಸ್ಸುಮಾಡುತ್ತಿರುವನು. ನನಗೆ ಪ್ರಿಯನಾದ ಅವನನ್ನು ಸಂತೋಷಪಡಿಸಿ ಪ್ರಸನ್ನೀಕರಿಸಿಕೊಳ್ಳುವವನಾಗು.

೭೪. ಈರೀತಿಯಾಗಿ ಹೇಳಿದುದನ್ನು ಕೇಳಿ ಬ್ರಾಹ್ಮಣನಾದ ಶುಕನು ಚತುರ್ಭುಜನಾದ ನಾರಾಯಣನನ್ನು ನಮಸ್ಕರಿಸಿ ಬಂದ ಮಾರ್ಗದಲ್ಲಿಯೇ ಹಿಂತಿರುಗಿ ಹೊರಟು ತಂದೆಯ ಸಮೀಪಕ್ಕೆ ಬಂದನು.

೭೫. ಅನಂತರ ಪ್ರತಾಪಶಾಲಿಯು, ಪರಾಶರ ಪುತ್ರನೂ, ಆದ ವ್ಯಾಸನು ತನ್ನ ಸಮೀಪದಲ್ಲಿಯೇ ನಿಂತಿರುವ ಶುಕನನ್ನು ನೋಡಿ ಪುತ್ರನನ್ನು ಹೊಂದಿದುದರಿಂದ ಸಂತೋಷಚಿತ್ತನಾಗಿ ತಪಸ್ಸನ್ನು ನಿಲ್ಲಿಸಿದನು.

೭೬. ಕೂಡಲೇ ಅವನು ನರೋತ್ತಮನಾದ ನಾರಾಯಣನನ್ನೂ ಮತ್ತು ನರನನ್ನೂ ನಮಸ್ಕರಿಸಿ ಅರಣಿ ಪುತ್ರನಾದ ಶುಕನೊಡನೆ ತನ್ನ ಆಶ್ರಮಕ್ಕೆ ಬಂದನು.

೭೭-೭೮. ತಂದೆಯೇ! ನಿಮ್ಮಿಂದಲೇ ಭಾಗವತಸಂಹಿತೆಯನ್ನು ಶ್ರವಣ ಮಾಡಬೇಕೆಂದು ನಾರಾಯಣನ ಅಪ್ಪಣೆಯಾಗಿದೆ. ಆದುದರಿಂದ ನೀವು ಭಾಗವತವನ್ನು ರಚಿಸಿ ಉಪದೇಶಿಸಬೇಕೆಂದು ಶುಕನು ಪ್ರಾರ್ಥಿಸಲಾಗಿ ಯೋಗೀಶ್ವರನಾದ ವ್ಯಾಸನು ಬಹು ಉಪಾಖ್ಯಾನವನ್ನೊಳಗೊಂಡಿರುವ ವೇದ

**ವೇದತುಲ್ಯಾಂ ಭಾಗವತೀಂ ಹರಿಭಕ್ತಿವಿವರ್ಧಿನೀಂ ।**
**ನಿವೃತ್ತಿನಿರತಂ ಪುತ್ರಂ ಶುಕಮಧ್ಯಾಪಯಚ್ಚ ತಾಂ ॥ ೭೮ ॥**

**ಆತ್ಮಾರಾಮೋಽಪಿ ಭಗವಾನ್ಪಾರಾಶರ್ಯಾತ್ಮಜಃ ಶುಕಃ ।**
**ಅಧೀತವಾನ್ಸಂಹಿತಾಂ ವೈ ನಿತ್ಯಂ ವಿಷ್ಣುಜನಪ್ರಿಯಾಂ ॥ ೭೯ ॥**

**ಏವಮೇತೇ ಸಮಾಖ್ಯಾತಾ ಮೋಕ್ಷಧರ್ಮಾಸ್ತವಾನಘ ।**
**ಪಠತಾಂ ಶೃಣ್ವತಾಂ ಚಾಪಿ ಹರಿಭಕ್ತಿವಿವರ್ಧನಾಃ ॥ ೮೦ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ದ್ವಿತೀಯಪಾದೇ ಬೃಹದುಪಾಖ್ಯಾನೇ ಮೋಕ್ಷಧರ್ಮನಿರೂಪಣಂ ನಾಮ ದ್ವಿಷಷ್ಟಿತಮೋಽಧ್ಯಾಯಃ**

**ಇತಿ ದ್ವಿತೀಯಃ ಪಾದಃ**

---

ಗಳಿಗೆ ಸಮಾನವಾದ, ಹರಿಯಲ್ಲಿ ಭಕ್ತಿಯನ್ನು ಅಭಿವೃದ್ಧಿಗೊಳಿಸುವ, ದಿವ್ಯವಾದ ಭಾಗವತಸಂಹಿತೆಯನ್ನು ಮಾಡಿ ಅದನ್ನು ನಿವೃತ್ತಿಧರ್ಮದಲ್ಲಿ ಆಸಕ್ತನಾದ ಶುಕಕುಮಾರನಿಗೆ ಪಾಠವನ್ನೂ ಹೇಳಿದನು.

೭೯. ಪೂಜ್ಯನು, ವ್ಯಾಸಕುಮಾರನೂ ಆದ ಶುಕನು ಆತ್ಮಾರಾಮನಾದಾಗ್ಯೂ ಯಾವಾಗಲೂ ವಿಷ್ಣುಭಕ್ತರಿಗೆ ಪ್ರಿಯವಾದ ಆ ಭಾಗವತಸಂಹಿತೆಯನ್ನು ಅಧ್ಯಯನಮಾಡಿದನು.

೮೦. ನಿರ್ದೋಷಿಯಾದ ನಾರದನೇ! ಪಠನ ಶ್ರವಣಮಾಡುವವರಿಗೆ ಹರಿಭಕ್ತಿಯನ್ನು ಅಭಿವೃದ್ಧಿಗೊಳಿಸುವ, ಈ ಮೋಕ್ಷಧರ್ಮಗಳನ್ನು ನಿನಗೆ ತಿಳಿಸಿರುವೆನು.

**ಇಂತು ಶ್ರೀ ನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ದ್ವಿತೀಯಪಾದದಲ್ಲಿ ಮೋಕ್ಷಧರ್ಮ ನಿರೂಪಣೆಯೆಂಬ ಅರವತ್ತೆರಡನೆಯ ಅಧ್ಯಾಯವು ಮುಗಿದುದು.**

**ಇಲ್ಲಿಗೆ ಎರಡನೆಯ ಪಾದವು ಮುಗಿಯಿತು**

ಮಂಗಳಂ

## ಕಥಾಸಂಗ್ರಹ

ಮೋಕ್ಷಶಾಸ್ತ್ರನಿರತರಾದ ಜ್ಞಾನಿಗಳ ವಿಷಯವನ್ನು ಪುನಃ ನಾರದನು ಪ್ರಶ್ನೆಮಾಡಲು ಸನಂದನನು ಶುಕಮಹಾಮುನಿಯ ವೈಕುಂಠಗಮನವೃತ್ತಾಂತವನ್ನು ಹೇಳುವನು. ಯೋಗಾಭ್ಯಾಸಿಯಾದ ಶುಕನು ಪೂರ್ವಾಭಿಮುಖವಾಗಿ ಕುಳಿತು ನಾರಾಯಣನನ್ನು ಧ್ಯಾನಿಸುತ್ತಾ ಆಕಾಶಕ್ಕೆ ಹಾರಿ ಊರ್ಧ್ವಲೋಕಗಳಿಗೆ ಹೋದನು. ವ್ಯಾಸನು ಪುತ್ರವಿಯೋಗವನ್ನು ಸಹಿಸಲಾರದೆ ಅವನನ್ನು ಹಿಂಬಾಲಿಸಿದನು. ಶುಕನು ಅತಿವೇಗವಾಗಿ ಹೊರಟುದುದನ್ನು ನೋಡಿ ಶುಕಾ! ಎಂದು ಕೂಗಿದನು. ಶುಕನು ಉತ್ತರಕೊಟ್ಟು ಮುಂದಕ್ಕೆ ಹೊರಟು ಶ್ವೇತದ್ವೀಪದಲ್ಲಿ ಭಗವಂತನ ದರ್ಶನಪಡೆದು ವೈಕುಂಠಕ್ಕೆ ಹೋಗಿ ಅಲ್ಲಿದ್ದ ಭಗವಂತನನ್ನು ಸ್ತೋತ್ರಮಾಡಿ ಪ್ರಸನ್ನನಾದ ಆ ನಾರಾಯಣನಿಂದ ಆಜ್ಞಪ್ತನಾಗಿ ಗಂಧಮಾದನಪರ್ವತದಲ್ಲಿ ತಪಸ್ಸುಮಾಡುತ್ತಿದ್ದ ತಂದೆಯಬಳಿಗೆ ಬಂದು ಅವರನ್ನು ಸಂತೋಷಪಡಿಸಿ, ಅವರಿಂದ ರಚಿತವಾದ ಭಾಗವತಸಂಹಿತೆಯನ್ನು ತಂದೆಯಬಳಿಯಲ್ಲಿಯೇ ಅಧ್ಯಯನಮಾಡಿದನು.

---

Printed by Y. R. Ranga Rao, Proprietor,
Sri Chamundeswari Electric Press, Mysore.